# ಕರ್ನಾಟಕದ ಸಾಮಂತ ಅರಸುಮನೆತನಗಳು ಮತ್ತು ಅವರಾಳ್ವಿಕೆಯ ಪ್ರದೇಶಗಳಲ್ಲಿ ಅವರು ಕೈಕೊಂಡ ಸಾಂಸ್ಕೃತಿಕ ಅಭಿವೃದ್ಧಿ

(ಆರಂಭ ಕಾಲದಿಂದ ಕ್ರಿ.ಶ.೧೩೩೬ರವರೆಗೆ)

ಸಂಶೋಧಕರು

**ಶ್ರೀ ಮಹೇಶಕುಮಾರ ಹ. ಪಾಟೀಲ**

ಎಂ.ಎ., ಡಿಪ್.ಇನ್.ಎಪಿಗ್ರಫಿ, ಡಿಪ್.ಇನ್.ಗಾಂಧಿ.

ಮಾರ್ಗದರ್ಶಕರು

**ಡಾ. ಎಸ್. ರಾಜಶೇಖರ**

ಎಂ.ಎ., ಪಿಎಚ್.ಡಿ.ಡಿಪ್.ಇನ್.ಎಪಿಗ್ರಫಿ.

ಪ್ರಾಧ್ಯಾಪಕರು ಹಾಗೂ ಮುಖ್ಯಸ್ಥರು,
ಇತಿಹಾಸ ಮತ್ತು ಪ್ರಾಚ್ಯಶಾಸ್ತ್ರ ವಿಭಾಗ,
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೩.

**ಪಿಎಚ್.ಡಿ ಪದವಿಗಾಗಿ**

**ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ**

೨೦೦೨




ಸದಾ ನನ್ನ ಬಾಳಿಗೆ ದಾರಿದೀಪವಾಗಿರುವ ನನ್ನ

ಮಾತೋಶ್ರೀಯವರಾದ

ಶ್ರೀಮತಿ ನೀಲಮ್ಮ ಕೋಂ. ಹಂಪನಗೌಡ ಪಾಟೀಲ

ಅವರ ಪಾದ ಪದ್ಮಂಗಳಿಗೆ

ಈ ಮಹಾಪ್ರಬಂಧವನ್ನು ಅರ್ಪಿಸುವೆ



**ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ**

**ಇತಿಹಾಸ ಮತ್ತು ಪ್ರಾಚ್ಯಶಾಸ್ತ್ರ ವಿಭಾಗ.**

Certificate

# ಪ್ರಮಾಣ ಪತ್ರ

ಶ್ರೀ ಮಹೇಶಕುಮಾರ ಹ. ಪಾಟೀಲ ಇವರು ಬರೆದು ಸಾದರ ಪಡಿಸಿದ **"ಕರ್ನಾಟಕದ ಸಾಮಂತ ಅರಸುಮನೆತನಗಳು ಮತ್ತು ಅವರಾಳ್ವಿಕೆಯ ಪ್ರದೇಶಗಳಲ್ಲಿ ಅವರು ಕೈಕೊಂಡ ಸಾಂಸ್ಕೃತಿಕ ಅಭಿವೃದ್ಧಿ (ಆರಂಭ ಕಾಲದಿಂದ ಕ್ರಿ.ಶ. ೧೩೩೬ ರವರೆಗೆ)"**, ಎಂಬ ವಿಷಯ ಕುರಿತು ಸಿದ್ಧ ಪಡಿಸಿದ ಮಹಾಪ್ರಬಂಧ ಮೂಲ ಸಂಶೋಧನಾ ಕೃತಿಯಾಗಿದೆ. ಶ್ರೀ ಮಹೇಶಕುಮಾರ ಹ. ಪಾಟೀಲರವರು ನನ್ನ ಮಾರ್ಗದರ್ಶನದಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಇತಿಹಾಸ ಮತ್ತು ಪ್ರಾಚ್ಯಶಾಸ್ತ್ರ ವಿಭಾಗದಲ್ಲಿ ಸಂಶೋಧನೆ ಕೈಕೊಂಡಿದ್ದಾರೆ. ಈ ಮಹಾಪ್ರಬಂಧವು ಇಡಿಯಾಗಿ ಇಲ್ಲವೆ ಬಿಡಿಯಾಗಿ ಈ ಮೊದಲು ಎಲ್ಲಿಯೂ ಪ್ರಕಟವಾಗಿಲ್ಲವೆಂದು ಈ ಮೂಲಕ ಪ್ರಮಾಣ ಪತ್ರ ನೀಡುತ್ತೇನೆ.

ಸ್ಥಳ : ಧಾರವಾಡ

ದಿನಾಂಕ : ೨೮/೧೨/೨೦೦೨

S. Rajashekar

**ಡಾ. ಎಸ್. ರಾಜಶೇಖರ**

ಮಾರ್ಗದರ್ಶಕರು,
ಪ್ರಾಧ್ಯಾಪಕರು ಹಾಗೂ ಮುಖ್ಯಸ್ಥರು
ಇತಿಹಾಸ ಮತ್ತು ಪ್ರಾಚ್ಯಶಾಸ್ತ್ರ ವಿಭಾಗ,
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೩

**ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ**

**ಇತಿಹಾಸ ಮತ್ತು ಪ್ರಾಚ್ಯಶಾಸ್ತ್ರ ವಿಭಾಗ.**

Declaration

# ಘೋಷಣಾ ಪತ್ರ

"ಕರ್ನಾಟಕದ ಸಾಮಂತ ಅರಸುಮನೆತನಗಳು ಮತ್ತು ಅವರಾಳ್ವಿಕೆಯ ಪ್ರದೇಶಗಳಲ್ಲಿ ಅವರು ಕೈಕೊಂಡ ಸಾಂಸ್ಕೃತಿಕ ಅಭಿವೃದ್ಧಿ (ಆರಂಭ ಕಾಲದಿಂದ ಕ್ರಿ.ಶ. ೧೩೩೬ರವರೆಗೆ)", ಎಂಬ ಈ ಮಹಾಪ್ರಬಂಧವನ್ನು ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. ಇತಿಹಾಸ ಮತ್ತು ಪ್ರಾಚ್ಯಶಾಸ್ತ್ರ ವಿಭಾಗದಲ್ಲಿ ಪಿಎಚ್.ಡಿ. ಪದವಿಗಾಗಿ ಡಾ. ಎಸ್. ರಾಜಶೇಖರ ಅವರ ಮಾರ್ಗದರ್ಶನದಲ್ಲಿ ನಾನು ಸಿದ್ಧಪಡಿಸಿದ್ದೇನೆ. ಈ ಮಹಾಪ್ರಬಂಧವನ್ನು ನಾನು ಇಡಿಯಾಗಿಇಲ್ಲವೆಬಿಡಿಯಾಗಿ ಈ ಮೊದಲು ಎಲ್ಲಿಯೂ ಬಳಸಿಕೊಂಡಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

28/12/02

**ಮಹೇಶಕುಮಾರ ಹ. ಪಾಟೀಲ**

ಸಂಶೋಧಕರು,

ಇತಿಹಾಸ ಮತ್ತು ಪ್ರಾಚ್ಯಶಾಸ್ತ್ರ ವಿಭಾಗ,

ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಸ್ಥಳ: ಧಾರವಾಡ

ದಿನಾಂಕ: ೨೮/೧೨/೨೦೦೨

Acknowledgement

# ಅರಿಕೆ

ಸಂಶೋಧನಾ ವ್ಯಾಸಂಗವನ್ನು ಮಾಡಲು ಇಚ್ಛಿಸಿ ಡಾ.ಎಸ್.ರಾಜಶೇಖರ ಅವರನ್ನು ಸಂಪರ್ಕಿಸಿ ಮಾತನಾಡಿದಾಗ, ನಾನು ಅಂಗವಿಕಲನಾಗಿದ್ದರೂ ನನ್ನಿಂದ ಅಪಾರ ನಿರೀಕ್ಷೆಯನ್ನು ಹೊಂದಿ, ಅವರು ನನ್ನ ಸಂಶೋಧನಾ ವ್ಯಾಸಂಗಕ್ಕೆ ಮಾರ್ಗದರ್ಶಕರಾಗಲು ಸಂತೋಷದಿಂದ ಒಪ್ಪಿಕೊಂಡರು. ಅವರು ಪ್ರೀತಿ ತುಂಬಿದ ಚರ್ಚೆ, ಅವಲೋಕನ, ಮಂಥನಗಳನ್ನು ನನ್ನ ಜೊತೆ ನಡೆಸಿ, ಅತ್ಯಮೂಲ್ಯ ಸಲಹೆ, ಸೂಚನೆಗಳನ್ನು ನೀಡಿ, ತಮ್ಮ ಪ್ರತಿಭಾ ಪೂರ್ಣವಾದ ಮಾರ್ಗದರ್ಶನದಿಂದ ಮಹಾಪ್ರಬಂಧ ಮೌಲಿಕವಾಗುವಂತೆ ನೋಡಿಕೊಂಡರು. ಅಪಾರ ವಿದ್ವತ್ತಿನೊಂದಿಗೆ ಸರಳ, ಸೌಜನ್ಯ, ಸಂಯಮಗಳ ಅಪರೂಪ ವ್ಯಕ್ತಿಯಾದ ಡಾ.ಎಸ್.ರಾಜಶೇಖರ ಗುರುಗಳ ಸಹಾಯ, ಸಹಕಾರ ನನಗೆ ಎಂದೆದೂ ಪ್ರಾತಃಸ್ಮರಣೀಯ.

ಪ್ರಸ್ತುತ ಈ ಸಂಶೋಧನಾ ಪ್ರಬಂಧವನ್ನು ರಚಿಸುವಲ್ಲಿ ಅನೇಕ ವ್ಯಕ್ತಿಗಳ ಮತ್ತು ಸಂಸ್ಥೆಗಳ ನೆರವನ್ನು ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಪಡೆದಿರುತ್ತೇನೆ. ಅವರನ್ನೆಲ್ಲ ಸ್ಮರಿಸುವದು ನನ್ನ ಆದ್ಯಕರ್ತವ್ಯವಾಗಿದೆ.

ಇತಿಹಾಸ ಮತ್ತು ಪ್ರಾಚ್ಯಶಾಸ್ತ್ರ ವಿಭಾಗದ ಪ್ರಾಧ್ಯಾಪಕರುಗಳಾದ **ಡಾ.ರವಿ ಕೋರಿಶೆಟ್ಟರ, ಡಾ.ಈರಣ್ಣ ಪತ್ತಾರ, ಡಾ.ಎಂ.ಟಿ.ಕಾಂಬಳೆ, ಪ್ರೊ.ಎಚ್.ಬಿ.ಸುಂಕದ, ಪ್ರೊ.ಅಶೋಕ ಶೆಟ್ಟರ,** ಶ್ರೀಮತಿ **ಪ್ರೊ.ವಾರಿಜಾ ಬೋಳಾರ, ಪ್ರೊ.ಎಸ್.ವಾಯ್.ಮುಗಳಿ,** ಕನ್ನಡ ಸಂಶೋಧನ ಸಂಸ್ಥೆಯ ನಿರ್ದೇಶಕರಾದ **ಡಾ.ಎಚ್.ಆರ್.ರಘುನಾಥಭಟ್ಟ**, ಪ್ರಾಚಿನ ಭಾರತೀಯ ಇತಿಹಾಸ ವಿಭಾಗದ ಅಧ್ಯಕ್ಷರಾದ **ಡಾ.ಎಸ್.ವಿ.ಪಾಡಿಗಾರ** ಹಾಗೂ ಪ್ರಾಧ್ಯಾಪಕರಾದ **ಡಾ.ರು.ಮ.ಷಡಕ್ಷರಯ್ಯ** ಮತ್ತು ಕನ್ನಡ ಅಧ್ಯಯನ ಪೀಠದ ಪ್ರಾಧ್ಯಾಪಕರಾದ ಶ್ರೀಮತಿ **ಡಾ.ಚೆನ್ನಕ್ಕ ಪಾವಟೆ** ಇವರೆಲ್ಲರೂ ಸಂಶೋಧನಾ ಸಾಮಗ್ರಿ ಸಂಗ್ರಹಿಸುವಾಗ ತಮ್ಮಲ್ಲಿದ್ದ ಗ್ರಂಥಗಳನ್ನು, ಪತ್ರಿಕೆಗಳನ್ನು ಒದಗಿಸಿಕೊಟ್ಟು ಸಹಾಯ, ಸಹಕಾರ ನೀಡಿ ಸಂಶೋಧನಾ ಕಾರ್ಯದಲ್ಲಿ ನನಗೆ ಸಹಕರಿಸಿರುವದಕ್ಕೆ ವಂದನೆಗಳನ್ನು ಸಲ್ಲಿಸುತ್ತೇನೆ. ಇದೇ ವಿಭಾಗದ ಶಿಕ್ಷಕೇತರ ಸಿಬ್ಬಂದಿಗಳು ವರ್ಷದುದ್ದಕ್ಕೂ ನೀಡಿದ ಸಹಕಾರಕ್ಕೆ ಪ್ರತಿಯಾಗಿ ಧನ್ಯವಾದಗಳನ್ನು ಸಲ್ಲಿಸುತ್ತೇನೆ.

ಕರ್ನಾಟಕ ವಿಶ್ವವಿದ್ಯಾಲಯದ ಕೇಂದ್ರ ಗ್ರಂಥಾಲಯ ಹಾಗೂ ಕನ್ನಡ ಸಂಶೋಧನಾ ಸಂಸ್ಥೆಯ ಗ್ರಂಥಾಲಯಗಳ ಗ್ರಂಥಪಾಲಕರು ಹಾಗೂ ಸಿಬ್ಬಂದಿ ವರ್ಗದವರು ನನ್ನ ಸಂಶೋಧನೆಗೆ ಅವಶ್ಯವಿದ್ದ ಗ್ರಂಥಗಳನ್ನು, ಪತ್ರಿಕೆಗಳನ್ನು ಒದಗಿಸಿ ಸಹಕರಿಸಿದ್ದಾರೆ. ಅವರಿಗೂ ಹಾಗೂ ನನ್ನ ಸಂಶೋಧನೆಗೆ ಸಹಾಯ ಸಹಕಾರ ತೋರಿದ ವಿಶ್ವವಿದ್ಯಾಲಯದ ಅನೇಕ ಕಾರ್ಯಾಲಯಗಳ ಸಿಬ್ಬಂದಿವರ್ಗದವರಿಗೂ ನನ್ನ ಅನಂತ ನಮನಗಳು.



ನನ್ನಗೆ ಜನ್ಮನೀಡಿ ನನ್ನ ವಿದ್ಯಾಭ್ಯಾಸದ ಹೊಣೆ ಹೊತ್ತು, ಅನಂತ ಪ್ರೀತಿಯ ಧಾರೆಯೆರೆದ ನನ್ನ ಪೂಜ್ಯ ತಾಯಿಯವರಿಗೆ ಹಾಗೂ ನನಗೆ ಸದಾ ಸಹಕಾರವನ್ನು ನೀಡಿದ ಸಹೋದರ ಸಂತೋಷನಿಗೆ ಹೃತ್ಪೂರ್ವಕ ಕೃತಜ್ಞತೆಗಳು. ಜೊತೆಗೆ ನನ್ನ ಪೂಜ್ಯ ಅಜ್ಜ-ಅಜ್ಜಿ, ಅತ್ತೆ-ಮಾವಂದಿರುಗಳೆಲ್ಲರಿಗೂ ನನ್ನ ನಮನಗಳು.

ನಾನು ಸಂಶೋಧನಾ ಕಾರ್ಯವನ್ನು ಕೈಕೊಳ್ಳುವೆನೆಂದು ಅರಿಕೆಮಾಡಿಕೊಂಡಾಗ ನನ್ನನ್ನು ಹುರಿದುಂಬಿಸಿ, ಆ ಕಾರ್ಯದ ಕಡೆಗೆ ಯಶಸ್ವೀಯಾಗಿ ಮುನ್ನಡೆಯುವಂತೆ ಮಾಡಿದ ನನ್ನ ಸೋದರತ್ತೆ ಶ್ರೀಮತಿ **ಡಾ.ಶಾಂತಾ ಇಮ್ರಾಪೂರ** ಹಾಗೂ ಮಾವನವರಾದ **ಡಾ.ಸೋಮಶೇಖರ ಇಮ್ರಾಪೂರ** ಅವರುಗಳನ್ನು ನಾನು ಇಲ್ಲಿ ಕೃತಜ್ಞತೆಯಿಂದ ಸ್ಮರಿಸುತ್ತೇನೆ.

ಬಾಲ್ಯದಿಂದಲೂ ನನ್ನ ವ್ಯಾಸಂಗದ ಯಶಸ್ಸಿಗೆ ಕಾರಣರಾದಂಥ ತಂದೆ-ತಾಯಿ ಸಮಾನರಾದ **ಶ್ರೀ.ಬಿ.ಎ.ಕ್ಷೀರಸಾಗರ** ಹಾಗೂ **ಶ್ರೀಮತಿ.ಎ.ಬಿ.ಕ್ಷೀರಸಾಗರ**ರಿಗೂ ಮತ್ತು ಅವರ ಮನೆಯವರೆಲ್ಲರನ್ನೂ ಇಲ್ಲಿ ಸ್ಮರಿಸದೇ ಇರಲಾರೆ.

ಸಂಶೋಧನೆಯ ಸಮಯದಲ್ಲಿ ಗಣನೀಯವಾಗಿ ಸಹಾಯ-ಸಹಕಾರ ನೀಡಿದ **ಜಿ.ಎಂ.ದೊಡಮನಿ, ಜಗದೀಶ ಶಿವುಡಣ್ಣವರ, ಸುಭಾಸ ಡಿಂಚೊಳಿ, ಅಶೋಕ ಕಂದಗಲ್, ಶ್ರೀಶೈಲ್ ಮನಗುತ್ತಿ, ವಾಯ್.ಆರ್.ಬೇಲೇರಿ** ಹಾಗೂ ಉಳಿದೆಲ್ಲ ಸ್ನೇಹಿತರುಗಳಿಗೂ ನನ್ನ ಅನಂತ ನಮನಗಳು.

ಕೊನೆಯದಾಗಿ ಈ ಕಾರ್ಯಕ್ಕೆ ನನ್ನ ಹಿತಚಿಂತನೆಗಳನ್ನು ಬಯಸಿ ಪ್ರತ್ಯಕ್ಷವಾಗಿ, ಅಪ್ರತ್ಯಕ್ಷವಾಗಿ ಸಹಾಯ ಸಹಕಾರವನ್ನು ನೀಡಿದ ಎಲ್ಲ ಮಹನೀಯರಿಗೂ, ಸ್ನೇಹಿತರಿಗೂ ಮತ್ತು ಆತ್ಮೀಯರಿಗೂ ಹಾಗೂ ಈ ಮಹಾಪ್ರಬಂಧ ರಚನೆಗೆ ನಾನು ಗಮನಿಸಿದ ಆಧಾರ ಗ್ರಂಥ ಹಾಗೂ ಲೇಖನಗಳ ಲೇಖಕರಿಗೂ ನಾನು ಚಿರಋಣಿಯಾಗಿದ್ದೇನೆ.

ಸಂಶೋಧಕರು

**ಮಹೇಶಕುಮಾರ ಹ. ಪಾಟೀಲ**

Abbreviation

# ಸಂಕ್ಷೇಪಗಳು

| | |
|---|---|
| ಅನು. | : ಅನುವಾದ. |
| ಆ.ವಿ.ಶಾ.ಒಂ.ಅ. | : ಆರನೆಯ ವಿಕ್ರಮಾದಿತ್ಯನ ಶಾಸನಗಳು ಒಂದು ಅಧ್ಯಯನ. |
| ಕ.ಭಾ. | : ಕರ್ನಾಟಕ ಭಾರತಿ. |
| ಕ.ಸಾ.ಪ. | : ಕನ್ನಡ ಸಾಹಿತ್ಯ ಪರಿಷತ್‌ಪತ್ರಿಕೆ. |
| ಕ.ಶಾ.ಸಾಂ.ಅ. | : ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ. |
| ಧಾ.ಜಿ.ಶಾ.ಸೂ. | : ಧಾರವಾಡ ಜಿಲ್ಲೆಯ ಶಾಸನಸೂಚಿ. |
| ನಂ. | : ಸಂಖ್ಯೆ. |
| ಪು. | : ಪುಟ. |
| ಸಂ. | : ಸಂಪುಟ. |
| (ಸಂ) | : ಸಂಪಾದಕರು. |
| ತ.ನಾ.ಒಂ.ಅ. | : ತರ್ದವಾಡಿನಾಡು ಒಂದು ಅಧ್ಯಯನ. |
| ವಿ.ಜಿ.ಶಾ.ಸೂ. | : ವಿಜಾಪೂರ ಜಿಲ್ಲೆಯ ಶಾಸನಸೂಚಿ. |
| ARIE | : Annual Report of Indian Epigraphy. |
| ARSIE | : Annual Report of South Indian Epigraphy. |
| APGAS | : Andhrapradesh Archaeological Series. |
| BKI | : Bombay Karnataka Inscriptions. |
| CII | : Corpus Inscriptionum Indicaram. |
| D.L.S.C.P.I. | : Discriptive List of Stone and Copper Plate Inscriptions. |
| E.C. | : Epigraphia Carnatica. |
| Ep.Ind. | : Epigraphia Indica. |
| HAS | : Hyderabad Archaeological Series. |
| Ind.Ant. | : Indian Antiquary. |
| IHQ | : Indian Historical Quartarly |
| JKU | : Journal of Karnatak University. |
| JIH | : Journal of Indian History. |
| JASB | : Journal of Asiatic Society Bengal. |
| JBBRAS | : Journal of Bombay Branch of Royal Asiatic Society. |
| JRAS | : Journal of Royal Asiatic Society. |
| JORM | : Journal of Oriental Research. |
| KI | : Karnataka Inscriptions. |
| K.R.I. | : Kannada Research Institute |
| K.U.D. | : Karnataka University Dharwad. |
| MAR | : Annual Reports of Mysore Archaeological Department. |
| QJMS | : Quarterly Journal of Mythic Society. |
| SII | : South Indian Inscriptions. |

Content

# ಪರಿವಿಡಿ

# ಅಧ್ಯಾಯ-೧

# ಅಧ್ಯಯನದ ಉದ್ದೇಶ, ವ್ಯಾಪ್ತಿ ಹಾಗೂ ಮೂಲಾಧಾರಗಳು

## ಅಧ್ಯಯನದ ಉದ್ದೇಶ:

ಇತಿಹಾಸ ಸಂಶೋಧನೆಯು ಇತ್ತೀಚಿಗೆ ನವನವೀನ ಆಯಾಮಗಳನ್ನು ಮೈಗೂಡಿಸಿಕೊಂಡು ಬೆಳೆಯುತ್ತಲಿದೆ. ಅದರಲ್ಲಿಯೂ ಸೂಕ್ಷ್ಮ ಅಧ್ಯಯನವು ಹೆಚ್ಚು ಪ್ರಾಮುಖ್ಯತೆಯನ್ನು ಪಡೆದಿದೆ. ಇತಿಹಾಸ ಹೆಚ್ಚು ಸಮಗ್ರವಾಗಬೇಕಾದರೆ ಕೆಳಮಟ್ಟದಿಂದ ಅದು ಪುನರ್ರಚನೆಯಾಗಬೇಕಾದುದು ಇಂದಿನ ಅಗತ್ಯವಾಗಿದೆ. ಒಂದು ನಾಡಿನ ಇತಿಹಾಸದಲ್ಲಿ ಪ್ರಧಾನ ರಾಜವಂಶಗಳಿಗೆ ನೀಡುವ ಮಹತ್ವವನ್ನು ಆಯಾ ಕಾಲದ ಸಾಮಂತ ಮನೆತನಗಳಿಗೂ ಸಲ್ಲಿಸಬೇಕಾದುದು ಇತಿಹಾಸಕಾರರ ಕರ್ತವ್ಯವಾಗಿದೆ.

ಪ್ರಾಚೀನ ಕರ್ನಾಟಕದ ಆಡಳಿತ ಪದ್ಧತಿಯನ್ನು ಗಮನಿಸಿದಾಗ, ತಿಳಿದುಬರುವಂತಹ ಒಂದು ಪ್ರಮುಖವಾದ ಸಂಗತಿಯೆಂದರೆ ಅಲ್ಲಿ ಆಳಿರುವ ಪ್ರಮುಖ ರಾಜಮನೆತನಗಳಿಗೆ ಆಧೀನರಾಗಿ ಆಳ್ವಿಕೆ ಮಾಡಿರುವಂತಹ ಚಿಕ್ಕಪುಟ್ಟ ಅರಸುಮನೆತನಗಳು. ಇವರು ಪ್ರಮುಖ ಅರಸುಮನೆತನಗಳ ಕೈಕೆಳಗೆ ತಮಗೆ ನೀಡಲ್ಪಟ್ಟಿರುವಂತಹ ಕೆಲ ಪ್ರದೇಶಗಳನ್ನು ಸ್ವತಂತ್ರವಾಗಿ ಆಳ್ವಿಕೆ ಮಾಡುತ್ತಿದ್ದರೂ ಕೂಡ ಕೆಲವು ವಿಷಯಗಳಲ್ಲಿ ಅವರಿಗೆ ಆಧೀನರಾಗಿರುತ್ತಿದ್ದರು. ಇಂತಹ ಅರಸುಮನೆತನಗಳು ಅರೆ-ಸ್ವತಂತ್ರತೆಯನ್ನು ಹೊಂದಿ ತಮ್ಮ ಪ್ರದೇಶಗಳನ್ನಾಳುತ್ತಿದ್ದು, ಅವುಗಳನ್ನು ಸಾಮಂತ ಅರಸು ಮನೆತನಗಳೆಂದು ಕರೆಯಲಾಗಿದೆ. ಈ ಪದ್ಧತಿಯಲ್ಲಿ ರಾಜರುಗಳು ಮತ್ತು ಸಾಮಂತರುಗಳ ನಡುವೆ ಒಂದು ಸುಮಧುರವಾದ ರಾಜಕೀಯ ಸಂಬಂಧವಿರುತ್ತಿತ್ತು. ಅಲ್ಲದೇ ಚಕ್ರವರ್ತಿಗಳು ಅವರನ್ನು ಅಷ್ಟೇ ಗೌರವಾದರಗಳಿಂದ ಕಾಣುತ್ತಿದ್ದರು. ಈ ಸಾಮಂತ ಅರಸರುಗಳು ಚಕ್ರವರ್ತಿಗಳಿಗೆ ಆಧೀನರಾಗಿದ್ದರೂ ತಮ್ಮ ಆಳ್ವಿಕೆಯ ಪ್ರದೇಶಗಳಲ್ಲಿ ರಾಜರುಗಳಂತೆ ವರ್ತಿಸುತ್ತಿದ್ದರಲ್ಲದೇ, ಚಕ್ರವರ್ತಿಗಳ ಆಸ್ಥಾನದಲ್ಲಿ ಉನ್ನತ ಸ್ಥಾನವನ್ನು ಹೊಂದಿರುತ್ತಿದ್ದರು. ಕೆಲವೊಮ್ಮೆ ಇಂತಹ ಸಾಮಂತ ಅರಸರುಗಳು ತಮ್ಮ ಶೌರ್ಯ-ಸಾಹಸಗಳಿಂದಾಗಿ ಚಕ್ರವರ್ತಿಗಳನ್ನು ಮೆಚ್ಚಿಸಿ, ಅವರಿಗೆ ಅತ್ಯಂತ ಆಪ್ತರಾಗಿರುತ್ತಿದ್ದುದೂ ಉಂಟು. ಇವರು ಕೇವಲ ರಾಜ್ಯದ ಭದ್ರತೆ ಹಾಗೂ ಸುವ್ಯಸ್ಥೆಯನ್ನು ಮಾತ್ರ ನೋಡಿಕೊಳ್ಳದೇ, ಕೆಲವೇಳೆ ಸಾಮ್ರಾಜ್ಯದ ವಿಸ್ತಾರದ ಕಾರ್ಯದಲ್ಲಿಯೂ ಚಕ್ರವರ್ತಿಗಳಿಗೆ ಸಹಾಯಕರಾಗಿರುತ್ತಿದ್ದರು. ಅದಕ್ಕಾಗಿ ಪ್ರಮುಖ ರಾಜಮನೆತನಗಳ ಅಧ್ಯಯನದ ಜೊತೆ ಜೊತೆಗೆ ಈ ಸಾಮಂತ ಅರಸುಮನೆತನಗಳ ಅಧ್ಯಯನವೂ ಕೂಡ ಅಂದಿನ ರಾಜಕೀಯ, ಆಡಳಿತ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳ ಅಭಿವೃದ್ಧಿಯ ಕುರಿತು ಅಧ್ಯಯನ ಮಾಡುವವರಿಗೆ ಅತ್ಯವಶ್ಯಕವಾಗಿದೆ.

ಪ್ರಮುಖ ಅರಸು ಮನೆತನಗಳಂತೆಯೇ ಇವರಲ್ಲಿಯೂ ಕೂಡ ಆಡಳಿತ ವ್ಯವಸ್ಥೆ ಅದೇ ತೆರನಾಗಿ ನಡೆಯುತ್ತಿತ್ತಲ್ಲದೇ, ವಂಶಪಾರಂಪರ್ಯವಾಗಿ ಮುಂದುವರೆಯುತ್ತಿದ್ದುದು ಕಂಡುಬರುತ್ತದೆ. ಕೆಲವೊಮ್ಮೆ ಇದಕ್ಕೆ ಅಪವಾದವೂ ಇಲ್ಲದಿಲ್ಲ. ಸಾಮಂತರಸರುಗಳು ತಮ್ಮ ಆಳ್ವಿಕೆಯ ಪ್ರದೇಶದಲ್ಲಿ ತಮ್ಮದೇ ಆದ ಆಡಳಿತಯಂತ್ರವೊಂದನ್ನು ಹೊಂದಿದ್ದು, ಅದು ಪ್ರಮುಖ ಅರಸು ಮನೆತನಗಳು ಹೊಂದಿದ್ದಂತಹ ಎಲ್ಲಾ ಘಟಕಗಳನ್ನು ಒಳಗೊಂಡಿತ್ತು. ಉದಾಹರಣೆಗೆ ಅವರಲ್ಲಿಯೂ ಮಂತ್ರಿಮಂಡಳ, ದಂಡನಾಯಕರು, ಅಧಿಕಾರಿವರ್ಗ, ಸೈನ್ಯ ಮುಂತಾದ ಆಡಳಿತದ ಘಟಕಗಳೆಲ್ಲವೂ ಇರುತ್ತಿದ್ದವು. ಅಲ್ಲದೇ ಅವರು ತಮ್ಮದೇ ಆದ ಸೈನ್ಯವೊಂದನ್ನು ಹೊಂದಿದ್ದು, ತಮ್ಮ ಆಳ್ವಿಕೆಗೊಳಪಟ್ಟ ಪ್ರದೇಶದ ರಕ್ಷಣೆ ಹಾಗೂ ಕಷ್ಟಕಾಲದಲ್ಲಿ ಚಕ್ರವರ್ತಿಗಳಿಗೂ ಕೂಡ ಸೈನಿಕ ಸಹಾಯವನ್ನು ಅವರು ಸಲ್ಲಿಸುತ್ತಿದ್ದುದೂ ಕಂಡುಬರುತ್ತದೆ. ಅವರು ಪ್ರಮುಖ ಅರಸುಮನೆತನಗಳಂತೆಯೇ ಆರ್ಥಿಕ ವ್ಯವಸ್ಥೆಯನ್ನೂ ಕೂಡ ಹೊಂದಿದ್ದು, ತಮ್ಮ ಆಳ್ವಿಕೆಯ ಪ್ರದೇಶದ ಸರ್ವಾಂಗೀಣ ಅಭಿವೃದ್ಧಿಗಾಗಿ ಸದಾ ಶ್ರಮಿಸುತ್ತಿದ್ದರು. ಒಟ್ಟಿನಲ್ಲಿ ಸಾಮಂತ ಅರಸುಮನೆತನಗಳ ಆಳ್ವಿಕೆಗೊಳಪಟ್ಟ ಪ್ರದೇಶಗಳು ಈ ಎಲ್ಲಾ ಅಂಶಗಳನ್ನೊಳಗೊಂಡು ಒಂದೊಂದು ಚಿಕ್ಕ ಸಾಮ್ರಾಜ್ಯದಂತಿದ್ದವು. ಅಲ್ಲದೇ ಕೆಲವೊಮ್ಮೆ ಇಂತಹ ಅರಸುಮನೆತನಗಳು ತಮ್ಮ ಬಲವನ್ನು ವೃದ್ಧಿಸಿಕೊಂಡು ಚಕ್ರವರ್ತಿಗಳ ವಿರುದ್ಧ ಬಂಡೆದ್ದು, ಹೊಸ ಸಾಮ್ರಾಜ್ಯವನ್ನು ರಚಿಸಿಕೊಂಡಿದ್ದೂ ಉಂಟು. ಅಲ್ಲದೇ ಇನ್ನು ಕೆಲ ಮನೆತನಗಳು ಧೀರ್ಘಕಾಲದವರೆಗೆ ಅನೇಕ ಸಾಮ್ರಾಜ್ಯಗಳು ಅಳಿದುಹೋದರೂ, ತಮ್ಮ ಪಕ್ಷವನ್ನು ಬದಲಾಯಿಸುತ್ತಾ, ಅವರೆಲ್ಲರುಗಳಿಗೆ ಸಾಮಂತರಾಗಿಯೇ ಬಾಳಿ ಅಳಿದುಹೋದ ಉದಾಹರಣೆಗಳು ನಮ್ಮ ಕರ್ನಾಟಕ ಇತಿಹಾಸದಲ್ಲಿ ಸಾಕಷ್ಟಿವೆ.

ಹೀಗೆ ಈ ಸಾಮಂತ ಅರಸುಮನೆತನಗಳು ಕರ್ನಾಟಕ ಇತಿಹಾಸದ ಒಂದು ಭಾಗವಾಗಿ ಹೋಗಿರುವದರಿಂದ, ಈ ಮನೆತನಗಳ ಅಧ್ಯಯನವನ್ನು ಕೈಕೊಳ್ಳದೇ ಕರ್ನಾಟಕದ ಇತಿಹಾಸ ಅಥವಾ ಪ್ರಮುಖ ರಾಜಮನೆತನಗಳ ಇತಿಹಾಸವನ್ನು ರಚಿಸುವದು ಅರ್ಥಪೂರ್ಣವಾಗಲಾರದು. ಅಲ್ಲದೇ ಪ್ರಮುಖ ರಾಜಮನೆತನಗಳ ರಾಜಕೀಯ, ಆಡಳಿತ ಹಾಗೂ ಸಾಂಸ್ಕೃತಿಕ ಅಭಿವೃದ್ಧಿಯಲ್ಲಿ ಅವರ ಸಾಮಂತ ಅರಸುಮನೆತನಗಳೂ ಕೂಡ ತಮ್ಮ ಕೊಡುಗೆಯನ್ನು ನೀಡಿರುವದೂ ಅಷ್ಟೇ ಸತ್ಯ.

ಈ ಎಲ್ಲ ಮೇಲಿನ ವಿಷಯಗಳನ್ನು ಗಮನಿಸಿದಾಗ, ಇಂತಹ ಹಲವಾರು ಸಾಮಂತ ಅರಸುಮನೆತನಗಳು ಕರ್ನಾಟಕದ ಇತಿಹಾಸದುದ್ದಕ್ಕೂ ಕಂಡುಬರುತ್ತಿದ್ದು ಅವುಗಳಲ್ಲಿ ಕೆಲವು ಪ್ರಮುಖ ಮನೆತನಗಳು ಕರ್ನಾಟಕದ ರಾಜಕೀಯ, ಆಡಳಿತ ಹಾಗೂ ಸಾಂಸ್ಕೃತಿಕ ಅಭ್ಯುದಯಕ್ಕೆ ತಮ್ಮ ವಿಶಿಷ್ಟವಾದ ಸೇವೆಯನ್ನು ಸಲ್ಲಿಸುವದರ ಮೂಲಕ ಎದ್ದು ಕಾಣುತ್ತವೆ.

ಪ್ರಸ್ತುತ ಈ ಮಹಾಪ್ರಬಂಧದಲ್ಲಿ ಅಂತಹ ಕೆಲವು ಪ್ರಮುಖ ಅರಸುಮನೆತನಗಳಲ್ಲದೇ, ಕೆಲವು ಬೆಳಕಿಗೆ ಬಾರದೇ ಇದ್ದಂತಹ ಮನೆತನಗಳ ಜೊತೆಗೆ, ಬೆಳಕಿಗೆ ಬಂದತವುಗಳಲ್ಲಿ ಇನ್ನು ಹೆಚ್ಚಿನ ಅಧ್ಯಯನದ ಅಗತ್ಯವಿದ್ದಂತಹ ಸಾಮಂತ ಅರಸುಮನೆತನಗಳ ಕುರಿತು ಚರ್ಚಿಸಲಾಗಿದೆ. ಅಲ್ಲದೇ ಇಲ್ಲಿಯವರೆಗೆ ಇಡೀ ಕರ್ನಾಟಕದ ಆರಂಭಕಾಲದಿಂದ ಹಿಡಿದು ೧೩೩೬ರವರೆಗಿನ ಸಾಮಂತ ಅರಸುಮನೆತನಗಳೆಲ್ಲವೂ ಆಡಳಿತ, ಸಾಮಾಜಿಕ, ಧಾರ್ಮಿಕ, ಆರ್ಥಿಕ, ಶೈಕ್ಷಣಿಕ ಹಾಗೂ ದೇವಾಲಯ ನಿರ್ಮಾಣ ಚಟುವಟಿಕೆಗಳಂತಹ ಕಾರ್ಯದ ಅಭಿವೃದ್ಧಿಯಲ್ಲಿ ಸಾಧಿಸಿದಂತಹ ಸಾಧನೆಗಳನ್ನು ಒಟ್ಟಾಗಿಸಿ, ಈ ಮಹಾಪ್ರಬಂಧವನ್ನು ರಚಿಸಲಾಗಿದೆ.

## ಪೂರ್ವಪ್ರಯತ್ನಗಳು:

ಸಾಮಂತ ಅರಸರುಗಳ ಕುರಿತು ಮೊಟ್ಟಮೊದಲು ಫ್ಲೀಟರು ತಮ್ಮ "ಡೈನೆಸ್ಟೀಸ್ ಆಫ್ ಕೆನರೀಸ್ ಡಿಸ್ಟ್ರಿಕ್ಟ್ಸ್" ಎಂಬ ಹೊತ್ತಿಗೆಯಲ್ಲಿ, ಕೆಲ ಪ್ರಮುಖ ಸಾಮಂತ ಅರಸುಮನೆತನಗಳ ಕುರಿತು ಅಧ್ಯಯನ ಕೈಕೊಂಡಿದ್ದಾರೆ. ಇವರು ಹಾನಗಲ್ಲ ಮತ್ತು ಗೋವೆಯ ಕದಂಬರು, ಯಲಬುರ್ಗಿಯ ಸಿಂದರು ಹಾಗೂ ಗುತ್ತವೊಳಲಿನ ಗುತ್ತರ ವಂಶಾವಳಿ, ಕಾಲಾನುಕ್ರಮಣಿಕೆ, ಹಾಗೂ ರಾಜಕೀಯ ಸ್ಥಿತಿಗತಿಗಳನ್ನು ಕುರಿತು ಚರ್ಚಿಸಿದ್ದಾರೆ. ಮೊರೆಸ್‌ರು "ಕದಂಬಕುಲ"(ಬಾಂಬೆ-೧೯೩೧) ಎಂಬ ಬೃಹತ್ ಗ್ರಂಥವನ್ನು ರಚಿಸಿ, ಕದಂಬರ ಅನೇಕ ಶಾಖೆಗಳ ಅರಸರುಗಳನ್ನು ಕುರಿತು ಅದರಲ್ಲಿ ವಿಸ್ತಾರವಾದ ವಿವರಣೆಯನ್ನು ನೀಡಿದ್ದಾರೆ. ನಂತರದಲ್ಲಿ ದಿನಕರ ದೇಸಾಯಿಯವರು ತಮ್ಮ "ಮಹಾಮಂಡಳೇಶ್ವರಾಸ್ ಅಂಡರ ದ ಚಾಲುಕ್ಯಾಸ್ ಆಫ್ ಕಲ್ಯಾಣಿ"(ಬಾಂಬೆ-೧೯೫೧) ಎಂಬ ಗ್ರಂಥದಲ್ಲಿ, ಕಲ್ಯಾಣಿ ಚಾಲುಕ್ಯರ ಕಾಲದ ಇಂತಹ ಕೆಲವು ಸಾಮಂತ ಅರಸುಮನೆತನಗಳ ರಾಜಕೀಯ, ಆಡಳಿತ ಹಾಗೂ ಸಾಂಸ್ಕೃತಿಕ ಸ್ಥಿತಿಗತಿಗಳನ್ನು ಕುರಿತು ವಿವರವಾಗಿ ಅಧ್ಯಯನ ಮಾಡಿದ್ದಾರೆ. ಕೃಷ್ಣರಾವ್,ಎಂ.ವ್ಹಿ.,ರವರು "ದಿ ಗಂಗಾಸ್ ಆಫ್ ತಲಾಕಾಡು"(ಮದ್ರಾಸ್-೧೯೩೬) ಹಾಗೂ ಶೇಕಅಲಿ,ಬಿ.,ರವರು "ಹಿಸ್ಟರಿ ಆಫ್ ದಿ ವೆಸ್ಟರ್ನ ಗಂಗಾಸ್"(ಮೈಸೂರು-೧೯೭೨) ಎಂಬ ಗ್ರಂಥಗಳನ್ನು ರಚಿಸಿದ್ದು, ಇವು ಒಂದೇ ಸಾಮಂತ ಅರಸುಮನೆತನವನ್ನು ಕುರಿತ ಸುಧೀರ್ಘವಾದಂತಹ ಕೃತಿಗಳಾಗಿವೆ. ಅಲ್ಲದೇ ಇತ್ತೀಚಿಗೆ ಸಾಮಂತ ಅರಸುಮನೆತನಗಳನ್ನು ಕುರಿತು ಗೋಪಾಲ,ಬಿ.ಆರ್.,ರವರು "ಮೈನರ್ ಡೈನೆಸ್ಟಿಸ್ ಇನ್ ಸೌಥ ಇಂಡಿಯಾ(ಕರ್ನಾಟಕ), ಸಂಪುಟ-೧"(ಮದ್ರಾಸ್-೧೯೮೨) ಎನ್ನುವ ಸಾಮಂತ ಅರಸುಮನೆತನಗಳನ್ನು ಕುರಿತ ಅತ್ಯಪಯುಕ್ತ ಮಾದರಿಯ ಕೃತಿಯನ್ನು ರಚಿಸಿದ್ದಾರೆ. ಮತ್ತು ಶ್ರೀಮತಿ ಬಳಂಬಳ,ವ್ಹಿ.,ರವರು "ಫ್ಯುಡೇಟರೀಸ್ ಆಫ್ ಸೌಥ ಇಂಡಿಯಾ"(ಅಲಹಾಬಾದ-೧೯೭೮) ಎಂಬ ಕೃತಿಯನ್ನು ಕೂಡ ರಚಿಸಿದ್ದಾರೆ. ಆದರೆ ಇವುಗಳೂ ಕೂಡ ಅಂತಹ ಕೆಲವು ಸಾಮಂತ ಅರಸುಮನೆತನಗಳ ವಂಶಾವಳಿ, ಕಾಲಾನುಕ್ರಮಣಿಕೆ ಹಾಗೂ ರಾಜಕೀಯ ಸ್ಥಿತಿಗತಿಗಳ ವಿವರಣೆಗೆ ಮಾತ್ರ ಸೀಮಿತವಾಗಿದ್ದು ತಿಳಿದುಬರುತ್ತದೆ. ಶ್ರೀಮತಿ ಝಾಕೀಯಾ ಪಠಾಣರವರು "ಸಮ್ ಫ್ಯುಡೇಟರಿ ಫ್ಯಾಮಿಲಿಸ್(ಮೈನರ್

ಡೈನೆಸ್ಟೀಸ್) ಆಫ್ ಮಿಡೆವಲ್ ಕರ್ನಾಟಕ - ಎ ಸ್ಟಡೀ"(೧೯೮೩) ಎಂಬ ಪಿಎಚ್.ಡಿ. ಮಹಾಪ್ರಬಂಧವನ್ನು ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದು ಅದರಲ್ಲಿಯೂ ಕೂಡ ಮಧ್ಯಕಾಲೀನ ಕರ್ನಾಟಕದ ಕೆಲವು ಸಾಮಂತ ಅರಸುಮನೆತನಗಳ ವಂಶಾವಳಿ, ಕಾಲಾನುಕ್ರಮಣಿಕೆ ಮತ್ತು ರಾಜಕೀಯ ವಿಷಯಗಳ ಕುರಿತು ಸವಿಸ್ತಾರವಾಗಿ ಚರ್ಚಿಸಿದ್ದಾರೆ. ಅಲ್ಲದೇ ಗಣಪತಿಗೌಡ,ಎಸ್.,ರವರು "ಮೈನರ್ ಡೈನೆಸ್ಟೀಸ್ ಆಫ್ ಉತ್ತರಕನ್ನಡ ರೀಜನ್"(೧೯೯೩) ಎಂಬ ಪಿಎಚ್.ಡಿ. ಸಂಶೋಧನಾ ಮಹಾಪ್ರಬಂಧವನ್ನು ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದು, ಅದರಲ್ಲಿ ಅವರು ಉತ್ತರ ಕನ್ನಡ ಜಿಲ್ಲೆಗೆ ಸಂಬಂಧಿಸಿದಂತಹ ಪ್ರಾಚೀನ, ಮಧ್ಯಕಾಲೀನ ಹಾಗೂ ಇತ್ತೀಚಿನ ಐತಿಹಾಸಿಕ ಕಾಲದವರೆಗಿನ ಸಾಮಂತ ಅರಸುಮನೆತನಗಳ ರಾಜಕೀಯ, ಆಡಳಿತ ಹಾಗೂ ಸಾಂಸ್ಕೃತಿಕ ಅಧ್ಯಯನವನ್ನು ಕೈಕೊಂಡಿದ್ದಾರೆ.

ಈ ಮೇಲ್ಕಾಣಿಸಿದ ಗ್ರಂಥಗಳು ಸಾಮಂತ ಅರಸರುಮನೆತನಗಳ ಅಧ್ಯಯನಕ್ಕೆ ಸಂಬಂಧಿಸಿದ ಗ್ರಂಥಗಳಾಗಿದ್ದು, ಇವು ಕರ್ನಾಟಕದ ಸಮಗ್ರ ಸಾಮಂತ ಅರಸುಮನೆತನಗಳನ್ನು ಪರಿಚಯಿಸುವ ಗ್ರಂಥಗಳಾಗಿಲ್ಲ. ಅಲ್ಲದೆ ಇವುಗಳಲ್ಲಿ ಅವರು ಸಾಂಸ್ಕೃತಿಕವಾಗಿ ಕೈಕೊಂಡ ಅಭಿವೃದ್ಧಿಯನ್ನು ವಿವರಿಸುವ ಕಾರ್ಯ ನಡೆದಿಲ್ಲ. ಹೀಗಾಗಿ ಕರ್ನಾಟಕದ ಸಾಮಂತ ಅರಸುಮನೆತನಗಳ ರಾಜಕೀಯ, ಆಡಳಿತ ಹಾಗೂ ಸಾಂಸ್ಕೃತಿಕ ಇತಿಹಾಸವನ್ನು ಕುರಿತು ಒಂದೇ ಅಧ್ಯಯನದ ಅಡಿಯಲ್ಲಿ ತಂದು ನಿಲ್ಲಿಸುವ ಮುಖ್ಯ ಗುರಿಯೊಂದಿಗೆ ಈ ಪ್ರಯತ್ನವನ್ನಿಲ್ಲಿ ನಾವು ಮಾಡಿದ್ದೇವೆ.

## ಮೂಲಾಧಾರಗಳು:

ಒಂದು ನಾಡಿನ ಅಥವಾ ಒಂದು ಅರಸು ಮನೆತನದ ಚರಿತ್ರೆಯನ್ನರಿಯಲು ಸಾಧನ ಸಾಮಗ್ರಿಗಳ ಮೊರೆ ಹೋಗಬೇಕಾದುದು ಅನಿವಾರ್ಯ. ಹೀಗಾಗಿ ಚರಿತ್ರೆಯ ರಚನೆಗೆ ಸಂಬಂಧಪಟ್ಟ ಆಧಾರಗಳನ್ನು ಪ್ರಾಕ್ತನ ಹಾಗೂ ಸಾಹಿತ್ಯವೆಂಬೆರಡು ವಿಭಾಗಗಳಲ್ಲಿ ವಿಭಾಗಿಸಿ ನೋಡಲಾಗುತ್ತದೆ. ಪ್ರಾಕ್ತನ ಆಧಾರಗಳಲ್ಲಿ ಶಾಸನ, ನಾಣ್ಯ, ಭೂಉತ್ಖನನ ಹಾಗೂ ಸ್ಮಾರಕಗಳು ಸೇರ್ಪಡೆಯಾದರೆ, ಸಾಹಿತ್ಯಿಕ ಆಧಾರಗಳಲ್ಲಿ ದೇಶಿಯ ಹಾಗೂ ವಿದೇಶಿಯ ಬರಹಗಾರರ ಬರವಣಿಗೆಗಳು ಅಡಕವಾಗಿರುತ್ತವೆ. ಪ್ರಸ್ತುತ ನಮ್ಮ ಅಧ್ಯಯನವು ಈ ಎಲ್ಲ ಸಾಮಗ್ರಿಗಳ ನೆರವನ್ನು ಪಡೆದಿದೆಯಾದರೂ, ಶಾಸನಗಳನ್ನು ನಿಖರವಾದ ದಾಖಲೆಗಳೆಂದು ತಿಳಿದು ಅವುಗಳನ್ನೇ ಪ್ರಮುಖವಾಗಿ ಬಳಸಿಕೊಳ್ಳಲಾಗಿದೆ. ಜೊತೆಗೆ ಅಗತ್ಯವಿದ್ದೆಡೆಯಲ್ಲಿ ಸಮಕಾಲೀನ ಸಾಹಿತ್ಯಿಕ ಆಧಾರಗಳ ಮೊರೆ ಹೋಗಲಾಗಿದೆ.

ಸಾಮಂತ ಅರಸರುಗಳಿಗೆ ಸಂಬಂಧಿಸಿದ ಶಾಸನಗಳನ್ನು ಸೇರಿಸಿ ಪ್ರತ್ಯೇಕವಾದ ಸಂಪುಟಗಳನ್ನೇನೂ ಮಾಡಿಲ್ಲವಾದರೂ, ಪ್ರಮುಖ ಅರಸುಮನೆತನಗಳಿಗೆ ಸಂಬಂಧಿಸಿದ, ವಿವಿಧ ಪ್ರದೇಶಗಳಲ್ಲಿ ದೊರೆತ ಶಿಲಾ ಹಾಗೂ ತಾಮ್ರಶಾಸನಗಳನ್ನು ಅನೇಕ ಸಂಪುಟಗಳಲ್ಲಿ ಪ್ರಕಟಿಸಲಾಗಿದೆ. ಅವುಗಳಲ್ಲಿ ಪ್ರಮುಖವಾಗಿ ಸೌಥ್ ಇಂಡಿಯನ್ ಇನ್‌ಸ್ಕ್ರಿಪ್ಷನ್ಸ, ಎಫಿಗ್ರಾಫಿಯಾ ಇಂಡಿಕಾ, ಇಂಡಿಯನ್ ಆ್ಯಂಟಿಕ್ವರಿ, ಕರ್ನಾಟಕ ಇನ್‌ಸ್ಕ್ರಿಪ್ಷನ್ಸ್ ಮತ್ತು ಎಫಿಗ್ರಾಫಿಯಾ

ಕರ್ನಾಟಿಕಾ, ಹಂಪೆಯ ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟ ಮುಂತಾದವುಗಳ ಅನೇಕ ಸಂಪುಟಗಳಲ್ಲಿ, ಆ್ಯನ್ವಲ್ ರಿಪೋರ್ಟ ಇನ್ ಇಂಡಿಯನ್ ಎಪಿಗ್ರಾಫಿ, ಆ್ಯನ್ವಲ್ ರಿಪೋರ್ಟ ಆನ್ ಸೌಥ್ ಇಂಡಿಯನ್ ಎಪಿಗ್ರಾಫಿ ಮತ್ತು ಮೈಸೂರ್ ಆ್ಯರ್ಕಿಯಾಲಜಿಕಲ್ ರಿಪೋರ್ಟ್ಸ್‌ಗಳ ವರದಿಗಳಲ್ಲಿ ಮತ್ತು ಬಿ.ಆರ್.ಗೋಪಾಲರವರ ಕಾರ್ಪಸ್ ಆಫ್ ಕದಂಬಾ ಇನ್‌ಸ್ಕ್ರಿಪ್ಷನ್ಸ್, ಡಾ.ಎಮ್.ಎಮ್.ಕಲಬುರ್ಗಿಯವರು ಸಂಪಾದಿಸಿದ ಧಾರವಾಡ ಹಾಗೂ ಬಿಜಾಪೂರ ಜಿಲ್ಲಾ ಶಾಸನ ಸೂಚಿಗಳಲ್ಲಿ, ಅಣ್ಣಿಗೇರಿ,ಎ.ಎಮ್., ಮತ್ತು ಮೇವುಂಡಿ ಮಲ್ಲಾರಿಯವರ ಶಾಸನ ಸಾಹಿತ್ಯ ಸಂಚಯ ಹಾಗೂ ಕನ್ನಡ ಶಾಸನ ಸಂಗ್ರಹಗಳಲ್ಲಿ, ದೇಸಾಯಿ ಪಾಂಡುರಂಗರಾಯರ ಶಾಸನ ಪರಿಚಯ ಹಾಗೂ ಜೈನಿಸಮ್ ಇನ್ ಸೌಥ್ ಇಂಡಿಯಾ ಸಮ್ ಜೈನಾ ಎಪಿಗ್ರಾಫ್ಸ್‌ಗಳಲ್ಲಿ, ಹನುಮಾಕ್ಷಿ ಗೋಗಿಯವರ ಕಲ್ಬುರ್ಗಿ ಜಿಲ್ಲೆಯ ಶಾಸನಗಳು ಹಾಗೂ ಸುರಪುರ ತಾಲೂಕಿನ ಶಾಸನಗಳು ಎಂಬವುಗಳಲ್ಲಿ, ಹಂಪಾ ನಾಗರಾಜಯ್ಯನವರ ಕೊಪ್ಪಳ ಶಾಸನಗಳು ಅಲ್ಲದೇ ಇನ್ನು ಮುಂತಾದ ಶಾಸನ ಸಂಪುಟಗಳಲ್ಲಿ ಹಲವಾರು ಶಾಸನಗಳು ಪ್ರಕಟವಾಗಿವೆ. ಅವುಗಳಲ್ಲಿ ಸಾಮಂತ ಅರಸು ಮನೆತನಗಳಿಗೆ ಸಂಬಂಧಿಸಿದ ಹಲವಾರು ಶಾಸನಗಳು ನಮ್ಮ ಅಧ್ಯಯನಕ್ಕೆ ಅನುಕೂಲಕರ ಮೂಲಾಧಾರಗಳಾಗಿವೆ.

## ಅಧ್ಯಯನದ ರೀತಿ:

ಈ ಅಧ್ಯಯನಕ್ಕೆ ಶಾಸನಗಳೇ ಮೊದಲ ಪ್ರಮಾಣೀಭೂತ ಆಖರಗಳಾಗಿರುವದರಿಂದ ಪ್ರತಿಯೊಂದು ವಿಷಯದ ವಿವರಣೆಗಾಗಿ, ವಿಷಯ ಸಂಗ್ರಹಣೆಗಾಗಿ ಪಟ್ಟಿಕೆ ಮಾದರಿಯನ್ನು ಅನುಸರಿಸಲಾಗಿದೆ. ಪೋಸ್ಟಕಾರ್ಡಿನಕ್ಕಿಂತ ಸ್ವಲ್ಪ ದೊಡ್ಡದಾಗಿರುವ ಪ್ರತಿ ಪಟ್ಟಿಕೆ ಒಂದೊಂದು ವಿಷಯದೊಂದಿಗೂ ಶಾಸನ ದೊರೆತು ಪ್ರಕಟವಾದ ಗ್ರಂಥ, ಸಂಪುಟ, ಶಾಸನದೊರೆತ ಸ್ಥಳ, ತಾಲ್ಲೂಕು, ಜಿಲ್ಲೆ, ಅರಸುಮನೆತನ, ಅರಸ, ಸಾಮಂತರುಗಳು, ಅವರ ಮನೆತನ, ತೇದಿ( ಕಾಲಮಾನ) ಮುಂತಾದ ವಿವರಣೆಗಳನ್ನೊಳಗೊಂಡಿರುವಂತೆ ನೋಡಿಕೊಳ್ಳಲಾಗಿತ್ತು. ಅಲ್ಲದೇ ಈ ಪಟ್ಟಿಕೆಗಳ ಮರುವಿಂಗಡಣೆ ಮಾಡಿಕೊಳ್ಳಲು ಸಹಕಾರಿಯಾಗುವಂತೆ ರಾಜಕೀಯ, ಆಡಳಿತ, ಸಾಮಾಜಿಕ, ಧಾರ್ಮಿಕ, ಆರ್ಥಿಕ, ಶೈಕ್ಷಣಿಕ ಹಾಗೂ ದೇವಾಲಯನಿರ್ಮಾಣ ವಿಭಾಗಗಳ ಸೂಚನಾ ಬರವಣಿಗೆ ಅವುಗಳಲ್ಲಿ ಬರುವ ವಿವಿಧ ವಿಷಯಗಳ ಸೂಚನೆಗಳ ವಿವರಣೆಗಳನ್ನು ಈ ಪಟ್ಟಿಕೆಗಳು ಒಳಗೊಂಡಿರುವಂತೆ ನೋಡಿಕೊಳ್ಳಲಾಗಿದೆ. ಅದೇ ರೀತಿ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಗ್ರಂಥ, ಸಂಪಾದಕರು, ಲೇಖಕರು, ಪ್ರಕಾಶಕರು, ಅದು ಪ್ರಕಟವಾದ ವರ್ಷ, ವಿಷಯ ದೊರೆತ ಪುಟ ಹೀಗೆ ಪಟ್ಟಿಕೆಗಳನ್ನು ತಯಾರಿಸಿಕೊಂಡು ಅಧ್ಯಯನ ಕೈಕೊಳ್ಳಲಾಗಿದೆ. ಇದರಿಂದ ಸಾಮಂತ ಅರಸುಮನೆತನಗಳಿಗೆ ಸಂಬಂಧಿಸಿದಂತೆ ಅರಸ, ಕಾಲಮಾನ, ಪ್ರದೇಶಗಳ ವಿಷಯಕ್ಕನುಗುಣವಾಗಿ ಅವರ ಒಟ್ಟು ಸಾಂಸ್ಕೃತಿಕ ಅಧ್ಯಯನಕ್ಕೆ ಹೇಗೆ ಬೇಕೋ ಹಾಗೆ ಆ ಪಟ್ಟಿಕೆಗಳನ್ನು ಜೋಡಿಸಿಕೊಳ್ಳಲು ತುಂಬಾ ಸಹಾಯವಾಯಿತು.

**ವ್ಯಾಪ್ತಿ:**

ನಮ್ಮ ಅಧ್ಯಯನ ವಿಷಯವಾದ "ಕರ್ನಾಟಕದ ಸಾಮಂತ ಅರಸುಮನೆತನಗಳು ಮತ್ತು ಅವರಾಳ್ವಿಕೆಯ ಪ್ರದೇಶಗಳಲ್ಲಿ ಅವರು ಕೈಕೊಂಡ ಸಾಂಸ್ಕೃತಿಕ ಅಭಿವೃದ್ಧಿ"ಯ ಅವಧಿಯು ಕರ್ನಾಟಕದಲ್ಲಿ ಇತಿಹಾಸದ ಆರಂಭಕಾಲದಿಂದ ಹಿಡಿದು ಹೊಯ್ಸಳ ಮನೆತನದ ಪತನದವರೆಗಿನ ಕ್ರಿ.ಶ. ೧೩೩೬ರ ಮಧ್ಯದ ಅವಧಿಯಲ್ಲಿ ಬರುವ ಪ್ರಮುಖ ಅರಸುಮನೆತನಗಳಿಗೆ ಆಧೀನರಾದ ಸಾಮಂತ ಅರಸುಮನೆತನಗಳ ಇತಿಹಾಸ ಹಾಗೂ ಸಾಂಸ್ಕೃತಿಕ ವಿವರಗಳನ್ನೊಳಗೊಂಡಿದೆ.

ಪ್ರಸ್ತುತ ಸಂಶೋಧನಾ ಮಹಾಪ್ರಬಂಧವನ್ನು ಅಧ್ಯಯನದ ಅನುಕೂಲಕ್ಕಾಗಿ ಹತ್ತು ಅಧ್ಯಾಯಗಳನ್ನಾಗಿ ವಿಂಗಡಿಸಿಕೊಳ್ಳಲಾಗಿದೆ.

ಮೊದಲನೆಯ ಅಧ್ಯಾಯ ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಮೂಲಾಧಾರಗಳುದಲ್ಲಿ ಪ್ರಸ್ತುತ ಪ್ರಭಂದದ ಉದ್ದೇಶ, ಕಾಲಮಿತಿ ಹಾಗೂ ಇನ್ನಿತರ ವಿಷಯಗಳ ಸಂಕ್ಷೇಪ ವಿವರಣೆಗಳನ್ನು ನೀಡಲಾಗಿದೆಯಲ್ಲದೇ ಅಧ್ಯಯನಕ್ಕೆ ಸಂಬಂಧಿಸಿದ ಆಕರಗಳನ್ನು ಉಲ್ಲೇಖಿಸಲಾಗಿದೆ.

ಎರಡನೆಯ ಅಧ್ಯಾಯ ಕ್ರಿ.ಶ. ೧೩೩೬ರವರೆಗಿನ ಕರ್ನಾಟಕದ ರಾಜಕೀಯ ಸ್ಥಿತಿಗತಿಯಲ್ಲಿ ಕರ್ನಾಟಕದಲ್ಲಿ ಆರಂಭ ಕಾಲದಿಂದ ಕ್ರಿ.ಶ. ೧೩೩೬ರವರೆಗೆ ಆಳ್ವಿಕೆ ನಡೆಸಿದಂತಹ ಪ್ರಮುಖ ರಾಜಮನೆತನಗಳ ರಾಜಕೀಯ ಹಾಗೂ ಅವರ ಕಾಲದ ಸ್ಥಿತಿಗತಿಗಳ ಕುರಿತು ಸಂಕ್ಷಿಪ್ತವಾಗಿ ಹೇಳಲಾಗಿದೆ.

ಮೂರನೆಯ ಅಧ್ಯಾಯ ಬಾದಾಮಿ ಚಾಲುಕ್ಯ, ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯ ಮತ್ತು ಹೊಯ್ಸಳರ ಕಾಲದಲ್ಲಿ ಸಾಮಂತ ಅರಸುಮನೆತನಗಳ ಉದಯ ಮತ್ತು ಬೆಳವಣಿಗೆಯಲ್ಲಿ ಈ ಮನೆತನಗಳ ಕೆಳಗೆ ಸಾಮಂತರಾಗಿದ್ದವರು, ಅವರ ಉದಯ ಹಾಗೂ ಬೆಳವಣಿಗೆ ಮತ್ತು ಅವರ ಕಾಲದಲ್ಲಿನ ಪ್ರಮುಖ ರಾಜಕೀಯ ಘಟನೆಗಳನ್ನು ಚಿತ್ರಿಸಲಾಗಿದೆ.

ನಾಲ್ಕನೆಯ ಅಧ್ಯಾಯ ಕರ್ನಾಟಕದ ಪ್ರಮುಖ ಸಾಮಂತ ಅರಸುಮನೆತನಗಳು ಎಂಬುದರಲ್ಲಿ ಕರ್ನಾಟಕದಲ್ಲಿ ಹಲವಾರು ಮನೆತನಗಳ ಚಕ್ರವರ್ತಿಗಳಿಗೆ ಆಧೀನರಾಗಿದ್ದು, ಧೀರ್ಘಕಾಲದವರೆಗೆ ಸಾಮಂತರಾಗಿಯೇ ಆಳ್ವಿಕೆಯನ್ನು ನಡೆಸಿ, ಅಳಿದುಹೋದಂತಹ ಆರು ಪ್ರಮುಖ ಸಾಮಂತ ಮನೆತನಗಳಾದ ಗಂಗರು, ಸವದತ್ತಿಯ ರಟ್ಟರು, ಚೆಲ್ಲಕೇತನರು, ಶಿಲಹಾರರು, ಹಾನಗಲ್ಲ ಕದಂಬರು ಮತ್ತು ಸಿಂದರುಗಳ ಕಾಲದ ಪ್ರಮುಖ ರಾಜಕೀಯ, ಐತಿಹಾಸಿಕ ಘಟನೆಗಳನ್ನು ಪುನರ್ರಚಿಸಲಾಗಿದೆ.

ಐದನೆಯ ಅಧ್ಯಾಯ ಆಡಳಿತದಲ್ಲಿ ಸಾಮಂತ ಅರಸುಮನೆತನಗಳ ಪಾತ್ರದಲ್ಲಿ ಈ ಅರಸುಮನೆತನಗಳ ಕಾಲದಲ್ಲಿ ನಡೆಯುತ್ತಿದ್ದಂತಹ ಆಡಳಿತದ ಚಟುವಟಿಕೆಗಳನ್ನು, ಹಾಗೂ ಅವರ ಮಂತ್ರಿಗಳು, ದಂಡನಾಯಕರು, ಇತರೇ ಅಧಿಕಾರಿವರ್ಗ, ನಗರ, ಗ್ರಾಮ, ಅಗ್ರಹಾರಗಳ ಆಡಳಿತವ್ಯವಸ್ಥೆಯನ್ನು ಕುರಿತು ಸ್ಪಷ್ಟವಾದ ಚಿತ್ರಣವನ್ನು ಕೊಡಲಾಗಿದೆ.

ಆರನೆಯ ಅಧ್ಯಾಯ ಸಾಮಾಜಿಕ ಅಭಿವೃದ್ಧಿಯಲ್ಲಿ ಸಾಮಂತ ಅರಸುಮನೆತನಗಳ ಪಾತ್ರದಲ್ಲಿ ಸಾಮಂತ ಅರಸುಮನೆತನಗಳ ಆಳ್ವಿಕೆಯ ವ್ಯಾಪ್ತಿಯಲ್ಲಿ ಇದ್ದಂತಹ ಸಾಮಾಜಿಕ ಸ್ಥಿತಿಗತಿಗಳ ಕುರಿತು ಅಧ್ಯಯನ ಮಾಡಲಾಗಿದೆ.

ಏಳನೆಯ ಅಧ್ಯಾಯ ಧಾರ್ಮಿಕ ಹಾಗೂ ಶೈಕ್ಷಣಿಕ ಅಭಿವೃದ್ಧಿಯಲ್ಲಿ ಸಾಮಂತ ಅರಸುಮನೆತನಗಳ ಪಾತ್ರದಲ್ಲಿ ಅಂದಿನ ಕಾಲದಲ್ಲಿ ಸಾಮಂತ ಅರಸುಮನೆತನಗಳು ಕೈಕೊಂಡಂತಹ ಧಾರ್ಮಿಕ ಸುಧಾರಣೆಗಳು ಹಾಗೂ ಅವರು ಅವಲಂಬಿಸಿದ್ದಂತಹ ಧರ್ಮಗಳ ಕುರಿತು ಮತ್ತು ಅವರ ಕಾಲದಲ್ಲಿನ ಶಿಕ್ಷಣಕ್ಕೆ ಅವರು ಕೊಟ್ಟಂತಹ ಕೊಡುಗೆಗಳನ್ನು ಹಾಗೂ ಶೈಕ್ಷಣಿಕ ಆಯಾಮಗಳನ್ನು ಕುರಿತು ವಿವೇಚಿಸಲಾಗಿದೆ.

ಎಂಟನೆಯ ಅಧ್ಯಾಯ ಆರ್ಥಿಕ ಅಭಿವೃದ್ಧಿಗೆ ಸಾಮಂತ ಅರಸುಮನೆತನಗಳ ಕೊಡುಗೆಯಲ್ಲಿ ಸಮಾಜದ ಬೆನ್ನೆಲುಬಾದ ಆರ್ಥಿಕ ಕ್ಷೇತ್ರದಲ್ಲಿ ಅವರು ಸಾಧಿಸಿದ ಅಭಿವೃದ್ಧಿಯನ್ನು ಕುರಿತು, ವಿವಿಧ ಆರ್ಥಿಕ ಆಯಾಮಗಳನ್ನು ಇಲ್ಲಿ ಚರ್ಚಿಸಲಾಗಿದೆ.

ಒಂಭತ್ತನೆಯ ಅಧ್ಯಾಯ ಸಾಮಂತ ಅರಸು ಮನೆತನಗಳ ಕಾಲದಲ್ಲಿ ದೇವಾಲಯಗಳ ನಿರ್ಮಾಣ ಚಟುವಟಿಕೆಯಲ್ಲಿ ತಮ್ಮ ಆಳ್ವಿಕೆಯ ಪ್ರದೇಶ ಹಾಗೂ ಕಾಲದಲ್ಲಿ ಅವರು ನಿರ್ಮಿಸಿದಂತಹ ಶಾಸನೋಲ್ಲೇಖಿತ ದೇವಾಲಯಗಳ ಪರಿಚಯವನ್ನಿಲ್ಲಿ ಮಾಡಿಕೊಡಲಾಗಿದೆ.

ಹತ್ತನೆಯ ಅಧ್ಯಾಯ ಉಪಸಂಹಾರವಾಗಿದ್ದು, ಅದು ಒಟ್ಟಾರೆ ಪ್ರಬಂಧದ ತಿರುಳನ್ನು ಒಳಗೊಂಡಿದೆ.

ಕೊನೆಯದಾಗಿ ಅನುಬಂಧದಲ್ಲಿ ಗ್ರಂಥಋಣವನ್ನು ನೀಡಲಾಗಿದೆ.

ಹೀಗೆ ಈ ಮಹಾಪ್ರಬಂಧದಲ್ಲಿ ಕರ್ನಾಟಕದ ಸಾಮಂತ ಅರಸುಮನೆತನಗಳ ಕಾಲದ ಸಮಗ್ರ ರಾಜಕೀಯ ಹಾಗೂ ಸಾಂಸ್ಕೃತಿಕ ಇತಿಹಾಸವನ್ನು ಒಂದೆಡೆ ತರಲು ಇಲ್ಲಿ ಪ್ರಯತ್ನಿಸಲಾಗಿದೆ. ಈ ಪ್ರಯತ್ನಕ್ಕೆ ಶಾಸನಗಳು, ಸಮಕಾಲೀನ ಸಾಹಿತ್ಯ ಮತ್ತು ವಿದೇಶಿ ಬರಹಗಾರರ ಆಧಾರಗಳಿಂದ ಪುಷ್ಠಿ ನೀಡಲಾಗಿದೆ.

2chapter

## ಅಧ್ಯಾಯ-೨

# ಕ್ರಿ.ಶ.೧೩೩೬ ರವರೆಗಿನ ಕರ್ನಾಟಕದ ರಾಜಕೀಯ ಸ್ಥಿತಿಗತಿ.

### ನಂದರು ಮತ್ತು ಮೌರ್ಯರು:

ಕರ್ನಾಟಕದಲ್ಲಿ ಇತಿಹಾಸಯುಗ ಆರಂಭವಾಗುವದು ಕ್ರಿ.ಪೂ.೪-೩ ನೆಯ ಶತಮಾನಗಳಿಂದ. ಪುರಾಣ ಕಥೆಗಳ ಪ್ರಕಾರ, ನಂದರು ಕುಂತಳ ಪ್ರದೇಶದ ಮೇಲೆ ತಮ್ಮ ರಾಜ್ಯಭಾರವನ್ನು ಮಾಡುತ್ತಿದ್ದರೆಂದು ತಿಳಿಯುತ್ತದೆ.

ಉತ್ತರ ಭಾರತದಲ್ಲಿ ಕ್ರಿ.ಪೂ. ೪ ನೆಯ ಶತಮಾನದಲ್ಲಿ ಚಂದ್ರಗುಪ್ತ ಮೌರ್ಯನಿಂದ ಹುಟ್ಟಿದ ಮೌರ್ಯ ಸಾಮ್ರಾಜ್ಯ ಉತ್ತರದಿಂದ-ದಕ್ಷಿಣದವರೆಗೂ, ಅದರಲ್ಲಿಯೂ ಕರ್ನಾಟಕದ ಉತ್ತರ ಭಾಗದಲ್ಲಿ ತಮ್ಮ ರಾಜ್ಯ ವಿಸ್ತಾರ ಮಾಡಿದ್ದಕ್ಕೆ ಸಾಕ್ಷ್ಯಾಧಾರಗಳಿವೆ. ಅಶೋಕನ ತಾತನಾದ ಚಂದ್ರಗುಪ್ತನು ಜೈನಧರ್ಮ ಸ್ವೀಕರಿಸಿ ತನ್ನ ಅಂತಿಮ ದಿನಗಳನ್ನು ಕರ್ನಾಟಕದ ಜೈನ ಕ್ಷೇತ್ರವಾದ ಶ್ರವಣಬೆಳಗೊಳದಲ್ಲಿ ಕಳೆದನೆಂಬ ವಿಷಯವನ್ನು ಶ್ರವಣಬೆಳಗೊಳದ ದಿನಾಂಕವಿಲ್ಲದ ೬-೭ ನೆಯ ಶತಮಾನದ ಶಾಸನದಿಂದ ತಿಳಿದುಬರುತ್ತದೆ[೧]. ಕರ್ನಾಟಕದ ಈ ಭಾಗವು ಅವನ ಸಾಮ್ರಾಜ್ಯದ ಭಾಗವಾಗಿದ್ದರಿಂದಲೇ ಅವನು ಇಲ್ಲಿಗೆ ಬರುವದು ಸಾಧ್ಯವಾಯಿತು.

ಮೌರ್ಯರ ಶ್ರೇಷ್ಠ ದೊರೆ ಅಶೋಕನ ಕಾಲದಲ್ಲಿ ದಕ್ಷಿಣ ಭಾರತ ಅದರಲ್ಲೂ ಕರ್ನಾಟಕ ಅವನ ಸಾಮ್ರಾಜ್ಯದ ಭಾಗವಾಗಿತ್ತು[೨]. ಕರ್ನಾಟಕದಲ್ಲಿ ದೊರೆಯುವ ಅಶೋಕನ ಶಾಸನಗಳು ಅವರ ಸಾಮ್ರಾಜ್ಯ ಗುಲ್ಬರ್ಗ, ರಾಯಚೂರು, ಬಳ್ಳಾರಿ ಮತ್ತು ಚಿತ್ರದುರ್ಗ ಜಿಲ್ಲೆಗಳಲ್ಲಿ ವಿಸ್ತಾರವಾಗಿದ್ದಕ್ಕೆ ಪ್ರತ್ಯಕ್ಷ ಸಾಕ್ಷಿಗಳಾಗಿವೆ. ಅಶೋಕನ ನಂತರದ ಉತ್ತರಾಧಿಕಾರಿಗಳು ಅಸಮರ್ಥರಾಗಿದ್ದರಿಂದ ಅವರ ಮಾಂಡಲಿಕ ಅರಸರುಗಳು ಸ್ವತಂತ್ರರಾದರು. ಮೌರ್ಯರು ದಕ್ಷಿಣ ಭಾರತದ ಕುಂತಳ ಪ್ರದೇಶದಲ್ಲಿ ಕ್ರಿ.ಶ. ೭ ನೆಯ ಶತಮಾನದವರೆಗೂ ಆಡಳಿತ ನಡೆಸಿದರು[೩].

### ಶಾತವಾಹನರು:

ಮೌರ್ಯರ ಪತನಾನಂತರ ಅವರ ಸಾಮಂತರಾದ ದಕ್ಷಿಣದ ಕುಂತಳದ ಶಾತವಾಹನರು ಸ್ವತಂತ್ರರಾಗಿ ತಮ್ಮ ರಾಜ್ಯ ಕಟ್ಟಿದರು. ಇವರ ರಾಜ್ಯ ಕರ್ನಾಟಕದ ದಕ್ಷಿಣದವರೆಗೆ ವಿಸ್ತರಿಸಿತ್ತು. ದಕ್ಷಿಣದಲ್ಲಿ ಸ್ವತಂತ್ರ ರಾಜ್ಯ ಕಟ್ಟಿ ಸುಮಾರು ೪೦೦ ವರ್ಷಗಳ ಸುಧೀರ್ಘ ಆಳ್ವಿಕೆ ನಡೆಸಿದ ಇವರು ತಮ್ಮನ್ನು ಕುಂತಳ ಶಾತಕರ್ಣಿಗಳೆಂದು ಕರೆದುಕೊಂಡಿದ್ದಾರೆ[೪].

### ಬನವಾಸಿಯ ಕದಂಬರು:

ಕನ್ನಡ ನಾಡಿನ ಪ್ರಪಥಮ ಕನ್ನಡ ರಾಜಮನೆತನವೆಂದು ಕದಂಬ ಮನೆತನ ಪ್ರಸಿದ್ಧವಾಗಿದೆ. ಬನವಾಸಿಯಲ್ಲಿ ಈ ಮನೆತನ ಸುಮಾರು ೨೦೦ ವರ್ಷಗಳ ಕಾಲ ರಾಜ್ಯಭಾರಮಾಡಿತು.

ಇದರ ಮೂಲ ಸ್ಥಾಪಕ ಮಯೂರಶರ್ಮನೆಂಬುವನೆಂದು ತಾಳಗುಂದ ಶಾಸನವು ಉಲ್ಲೇಖಿಸಿದೆ[7]. ಶಾಸನದ ಪ್ರಕಾರ ವೀರಶರ್ಮನ ಮಗ ಬಂಧುಸೇನನು ಯುದ್ಧವಿದ್ಯೆಯಲ್ಲಿ ಪರಿಣಿತನಾಗಿದ್ದನು. ಅವನ ಮಗನೇ ಮಯೂರಶರ್ಮನು. ಇವನು ಪಲ್ಲವರ ರಾಜಧಾನಿಗೆ ತೆರಳಿದಾಗ ಅಲ್ಲಿನಡೆದ ಅವಮಾನಕರ ಘಟನೆಯಿಂದ ನೊಂದು ಪಲ್ಲವರನ್ನು ಸೋಲಿಸಿ ಕದಂಬ ಸಾಮ್ರಾಜ್ಯ ಕಟ್ಟಿ ಮಯೂರಶರ್ಮನಿಂದ ಮಯೂರವರ್ಮನಾಗುತ್ತಾನೆ. ಇಂದಿನ ಶ್ರೀಶೈಲವೆಂದು ತಿಳಿಯಲಾದ ಶ್ರೀಪರ್ವತದವರೆಗೂ ಹಬ್ಬಿರುವ ಪ್ರದೇಶಗಳನ್ನು ವಶಪಡಿಸಿಕೊಂಡು ಆಳತೊಡಗುತ್ತಾನೆ. ಅಲ್ಲದೇ ಬಾಣರಿಂದ ಕಪ್ಪ ಪಡೆದು ಅವರನ್ನು ತನ್ನ ಸಾಮಂತರನ್ನಾಗಿಸಿಕೊಳ್ಳುತ್ತಾನೆ. ಮಯೂರವರ್ಮನ ರಾಜ್ಯವು ಪಶ್ಚಿಮಸಮುದ್ರ (ಅಪರಾರ್ಣವ) ದಿಂದ ಪೂರ್ವಕ್ಕೆ ಪ್ರೇಹಾರ (ಮಲಾಪಹಾರಿ ಅಥವಾ ಮಲಪ್ರಭಾ ನದಿ) ದವರೆಗೆ ಹಬ್ಬಿತ್ತು ಎಂದು ತಿಳಿದುಬರುತ್ತದೆ. ಇವನ ಚಂದ್ರವಳ್ಳಿಯ ಶಾಸನದ[8] ಪ್ರಕಾರ ಮಯೂರವರ್ಮನು ತ್ರಿಕೂಟ, ಅಭೀರ, ಪಲ್ಲವ, ಶಕಸ್ಥಾನ, ಪುನ್ನಾಟ, ಪಾರಿಯಾತ್ರದ ರಾಜರುಗಳನ್ನು ಸೋಲಿಸಿದ್ದನಲ್ಲದೇ, ಮೌಖರಿಗಳನ್ನು ಸೋಲಿಸಿ ಚಂದ್ರವಳ್ಳಿಯ ಬಳಿ ಕೆರೆಯೊಂದನ್ನು ಕಟ್ಟಿಸಿದ ವಿವರಗಳಿವೆ. ಈತನು ಈ ಸಾರ್ವಭೌಮಾಧಿಕಾರ ಸ್ಥಾಪನೆಯ ದ್ಯೋತಕವಾಗಿ ಅಶ್ವಮೇಧಯಾಗವನ್ನು ನೆರವೇರಿಸಿದನು.

ಮಯೂರವರ್ಮನ ನಂತರ ಅವನ ಮಗ ಕಂಗವರ್ಮನು ಆಳ್ವಿಕೆಗೆ ಬಂದನು. ಈತನು ಅನೇಕ ಬುಡಕಟ್ಟು ಜನಾಂಗಗಳೊಂದಿಗೆ ಯುದ್ಧಗಳನ್ನು ಕೈಕೊಂಡನೆಂದು ತಿಳಿದುಬರುತ್ತದೆ[9]. ವಾಕಾಟಕ ವಿಂಧ್ಯಸೇನನು ಈತನೊಡನೆ ಯುದ್ಧಕ್ಕಿಳಿದು ಸೋತಿದ್ದನು. ಶಾಸನದಲ್ಲಿ ಈತನನ್ನು "ಉಗ್ರಸಮರಾಧ್ವರ ಪ್ರಾಂಶುಚೇಷ್ಟಿತನಾಗಿ" ಅಂದರೆ ಮಹಾಪ್ರತಾಪಿ ಎಂಬರ್ಥದಲ್ಲಿ ಕರೆಯಲಾಗಿದೆ[8].

ಕಂಗವರ್ಮನ ನಂತರ ಅವನ ಮಗ ಭಗೀರಥವರ್ಮನು ಪಟ್ಟಕ್ಕೆ ಬಂದನು. ತಾಳಗುಂದದ ಶಾಸನ್ ಹೇಳುವಂತೆ ಭಗೀರಥನು ಕದಂಬವಂಶದಲ್ಲಿ ರಾಜನೆಂದು ರಹಸ್ಯವಾಗಿ ಜನ್ಮವೆತ್ತಿದನು. ತಂದೆಯಂತೆ ಈತನೂ ಕೂಡ ಪ್ರತಾಪಿಯಾಗಿದ್ದನು. ತಂದೆಯ ಕಾಲದಲ್ಲಿ ನಷ್ಟವಾಗಿದ್ದ ಸಾಮ್ರಾಜ್ಯದ ಕೆಲಭಾಗಗಳನ್ನು ಈತನು ಪುನಃ ಗಳಿಸಿಕೊಂಡನೆಂದು ತಿಳಿದುಬರುತ್ತದೆ.

ತಂದೆಯ ಮರಣಾನಂತರ ರಘುಪತಿವರ್ಮನು ಆಳ್ವಿಕೆಗೆ ಬಂದನು. ತಾಳಗುಂದ ಶಾಸನದಲ್ಲಿ ಪೃಥುರಾಜನಂತೆ ರಘುರಾಜನೂ ಕೂಡ ತನ್ನ ಶೌರ್ಯಾದಿಗಳಿಂದ ಶತ್ರುಗಳನ್ನು ಸದೆಬಡಿದನೆಂದಿದೆ[10] ಗುಪ್ತರ ಎರಡನೆಯ ಚಂದ್ರಗುಪ್ತನು ಈತನ ಆಸ್ಥಾನಕ್ಕೆ ತನ್ನ ಆಸ್ಥಾನ ಕವಿಯಾದ ಕಾಳಿದಾಸನನ್ನು ನೀಯೋಗಿಯಾಗಿ ಕಳಿಸಿದ್ದನೆಂದು ತಿಳಿಯುತ್ತದೆ. ಇವನು ಶ್ರುತಿಪಥ ನಿಪುಣ, ಪ್ರದಾತ, ವಿವಿಧ ಕಲಾಕುಶಲನೆಂದು ತಾಳಗುಂದ ಶಾಸನ ಹೇಳಿದೆ.

ರಘುವರ್ಮನ ನಂತರ ಅವನಿಗೆ ಸಂತತಿಯಿಲ್ಲದ್ದರಿಂದ ಸಹೋದರ ಕಾಕುಸ್ಥವರ್ಮನು ಆಳ್ವಿಕೆಗೆ ಬಂದನು. ಶಾಸನದಲ್ಲಿ ಈತನನ್ನು ಭಗೀರಥಪುತ್ರ ಎಂದು ಉಲ್ಲೇಖಿಸಲಾಗಿದೆಯಲ್ಲದೇ, ಈತನು ರಘುವಿನ ಕಾಲದಲ್ಲಿ

ಯುವರಾಜನಾಗಿ ಆಳುತ್ತಿದ್ದಂತೆ ತಿಳಿದುಬರುತ್ತದೆ[೧೧]. ಈತನ ಸೇನಾಪತಿಯಾದ ಶ್ರುತಕೀರ್ತಿಯು ಪರಾಕ್ರಮಿಯಾಗಿದ್ದು, ಇವನ ಸಾಮ್ರಾಜ್ಯ ವಿಸ್ತಾರಕ್ಕೆ ಅತ್ಯಂತ ಮಹತ್ವದ ಪಾತ್ರವಹಿಸಿದನು. ಅಲ್ಲದೇ ಒಮ್ಮೆ ದೊರೆಯ ಜೀವವನ್ನು ಇವನು ಕಾಪಾಡಿದನೆಂದು ತಿಳಿಯುತ್ತದೆ[೧೨]. ಹಲ್ಮಿಡಿ ಶಾಸನದ[೧೩] ಪ್ರಕಾರ ಈತನ ಸಾಮಂತರಾಗಿ ಮೃಗೇಶ ಮತ್ತು ನಾಗರೆಂಬುವರು ನರಿದಾವಿಳೆ ನಾಡಿನಲ್ಲಿ ಆಳುತ್ತಿದ್ದರೆಂದು ತಿಳಿಯುತ್ತದೆಯಲ್ಲದೇ, ಆಗ ಪಲ್ಲವ ಮತ್ತು ಕೇಕೆಯರನ್ನು ವಿಜಯ ಅರಸನು ಸೋಲಿಸಿದ ವಿವರ ತಿಳಿದುಬರುತ್ತದೆ. ಶಾಸನದಲ್ಲಿ ಹೇಳಿದಂತೆ ಅಳುಪರು, ಸೇಂದ್ರಕರು, ಬಾಣರು ಕದಂಬರಿಗೆ ಈ ಯುದ್ಧದಲ್ಲಿ ಸಹಾಯ ನೀಡಿದ್ದರಿಂದ ಇವರು ಆವರ ಸಾಮಂತರಾಗಿ ಆಳುತ್ತಿದ್ದಿರಬಹುದು. ಶಾಸನದಲ್ಲಿ ಕಾಕುಸ್ಥವರ್ಮನು ಕಾಳಭ್ರರಿಗೂ ಕೂಡ ಶತೃವಾಗಿದ್ದನೆಂದು ವರ್ಣಿಸಲಾಗಿದೆ.

ಕಾಕುಸ್ಥವರ್ಮನ ತರುವಾಯ ಶಾಂತಿವರ್ಮನು ಪಟ್ಟಕ್ಕೆ ಬಂದನು. ಇವನಿಗೆ ಒಂದನೆಯ ಕೃಷ್ಣವರ್ಮನೆಂಬ ಮಲತಮ್ಮನಿದ್ದನು. ಈತನು ಸಿಂಹಾಸನಕ್ಕಾಗಿ ಇವನೊಡನೆ ಹೋರಾಡಿದನು. ಆಗ ಹೆಚ್ಚು ಶೌರ್ಯವಂತನಾದ ಕೃಷ್ಣವರ್ಮನು ತನ್ನದೇ ಆದ ಒಂದು ಸಾಮ್ರಾಜ್ಯವನ್ನು ಕಟ್ಟಿಕೊಂಡಂತೆ ತೋರುತ್ತದೆ[೧೪]. ನಂತರ ಒಂದನೆಯ ಕೃಷ್ಣವರ್ಮನ ಮಕ್ಕಳಾದ ವಿಷ್ಣುವರ್ಮ ಮತ್ತು ದೇವವರ್ಮರುಗಳಲ್ಲಿ ಸಿಂಹಾಸನಕ್ಕಾಗಿ ಕದನವೇರ್ಪಟ್ಟಿತು. ಆಗ ಅವರಿಬ್ಬರಲ್ಲಿ ಒಂದನೆಯ ಕೃಷ್ಣವರ್ಮನಿಂದ ಕಟ್ಟಿದ ರಾಜ್ಯವು ವಿಭಜಿತವಾಯಿತು. ಕೊನೆಗೆ ಕೆಲಕಾಲದ ನಂತರ ಶಾಂತಿವರ್ಮ ಮತ್ತು ಪಲ್ಲವರ ನೆರವಿನಿಂದ ವಿಷ್ಣುವರ್ಮನು ತನ್ನ ತಂದೆಯ ರಾಜ್ಯವನ್ನು ಆಳತೊಡಗಿದನು. ತಾಳಗುಂದ ಶಾಸನವು ಶಾಂತಿವರ್ಮನು ಕದಂಬರ ಎರಡನೆಯ ಸೂರ್ಯನೆಂದೂ, 'ಪಟ್ಟತ್ರಯಾರ್ಪಣ ಚಾರುಮೂರ್ತೇಃ' ಎಂದಿದೆ[೧೫].

ಶಾಂತಿವರ್ಮನ ನಂತರ ಅವನ ಮಗ ಮೃಗೇಶವರ್ಮನು ಪಟ್ಟಕ್ಕೆ ಬಂದನು. ಈತನು ಸ್ಥಿರಚಿತ್ತನಾದವನು, ಯುದ್ಧದಲ್ಲಿ ಅಸಮಾನವೀರನೂ, ಹಲವಾರು ಕಾಳಗಗಳನ್ನು ಗೆದ್ದವನು, ಅಶ್ವಮೇಧ ಯಜ್ಞವನ್ನು ನೆರವೇರಿಸಿದವನೆಂದು ಶಾಸನಗಳು ಹೇಳಿವೆ[೧೬]. ಮೃಗೇಶವರ್ಮನು ತನ್ನ ಸಮಕಾಲೀನ ಗಂಗರಾಜನಾದ ವಿಷ್ಣುಗೋಪನನ್ನು ಸೋಲಿಸಿ ಕೋಲಾರ ರಾಜಧಾನಿಯಿಂದ ಉಚ್ಚಾಟಿಸಿ ತಲಕಾಡಿಗೆ ಅಟ್ಟಿದನೆಂದೂ, ತುಂಗ ಮನೆತನದ ರಾಜನನ್ನು ಸೋಲಿಸಿದ ವಿಷಯ ಶಾಸನವೊಂದರಲ್ಲಿ ಬರುತ್ತದೆ[೧೭].

ಮೃಗೇಶವರ್ಮನ ನಂತರ ಕದಂಬರ ಇನ್ನೊಂದು ಶಾಖೆಯಾದ ಉಚ್ಚಂಗಿಯ ಕುಮಾರವರ್ಮನ ಮಗ ಶಿವಮಾಂಧಾಲ್ರಿ ಅಥವಾ ವಿಜಯಶಿವ ಮಂದಾರ್ಥಿವರ್ಮನೆಂಬುವನು ಐದುವರ್ಷಗಳ ಕಾಲ ಕದಂಬರ ರಾಜ್ಯವನ್ನಾಳಿದನು[೧೮]. ಆಗ ರವಿವರ್ಮನು ಕಾಂಚಿಯ ದೊರೆಯನ್ನು ಸೋಲಿಸಿದನು. ಈ ಯುದ್ಧದಲ್ಲಿ ಪಲ್ಲವದೊರೆ ವಿಷ್ಣುವರ್ಮ ಮತ್ತಿತರನ್ನು ಕೊಂದುಹಾಕಿ ತಾನು ಹಲಸಿ (ಪಲಾಸಿಕಾ)ಯಲ್ಲಿ ಸಿಂಹಾಸನಾರೂಢನಾಗಿ ಆಳತೊಡಗಿದನು[೧೯]. ಗಂಗರಾಜನಾದ ಅವನೀತನನ್ನು ಕೂಡ ಈತನು ಸೋಲಿಸಿದ್ದನೆಂದು ತಿಳಿದುಬರುತ್ತದೆ[೨೦]. ಮಂದಾರ್ತಿವರ್ಮನ ನಂತರ ಕದಂಬರ ಬನವಾಸಿ ಮತ್ತು ಉಚ್ಚಂಗಿ ಶಾಖೆಗಳೆರಡೂ ರವಿವರ್ಮನಿಗೆ ಸೇರಿದವು.

ರವಿವರ್ಮನ ತರುವಾಯ ಅವನ ಮಗನಾದ ಹರಿವರ್ಮನು ಬನವಾಸಿಯ ಪಟ್ಟಕ್ಕೇರಿದನು. ಈತನು ಶಾಂತಿಪ್ರಿಯ ಅರಸನಾಗಿದ್ದನೆಂದು ತಿಳಿದುಬರುತ್ತದೆ[೧೦]. ಕೆಲಕಾಲಗಳ ನಂತರ ಕದಂಬರ ಇನ್ನೊಂದು ಶಾಖೆಯಾದ ತ್ರಿಪರ್ವತದ ದೊರೆಯಾದ ಎರಡನೆಯ ಕೃಷ್ಣವರ್ಮನು ಹರಿವರ್ಮನನ್ನು ಕೊಂದು ಬನವಾಸಿಯ ಕದಂಬರ ಸಾಮ್ರಾಜ್ಯವನ್ನು ಅದರೊಂದಿಗೆ ಒಂದುಗೂಡಿಸಿ ಆಳತೊಡಗಿದನು[೧೧]. ಕ್ರಿ.ಶ. ೫೩೫-೩೬ರ ಬೆಣ್ಣೂರು ತಾಮ್ರಪಟಗಳನ್ನು ನೋಡಿದಾಗ ಎರಡನೆಯ ಕೃಷ್ಣವರ್ಮನು ವೈಜಯಂತಿಯ ಮೇಲೆ ದಂಡೆತ್ತಿ ಹೋದದ್ದು ತಿಳಿಯುತ್ತದೆ[೧೨].

ಕ್ರಿ.ಶ.೫೪೦ರಲ್ಲಿ ಚಾಲುಕ್ಯ ದೊರೆ ಒಂದನೆಯ ಪುಲಕೇಶಿಯು ಕದಂಬರನ್ನು ಪರಾಜಿತಗೊಳಿಸಿದನು[೧೩]. ಅಲ್ಲದೇ ಅದೇ ಮನೆತನದ ಒಂದನೆಯ ಕೀರ್ತಿವರ್ಮನು ಕೂಡ ಕೆಲ ಕದಂಬರನ್ನು ಸೋಲಿಸಿ ಅವರ ಸಾಮ್ರಾಜ್ಯದ ಅನೇಕ ಭಾಗಗಗಳನ್ನು ಹಿಡಿದುಕೊಂಡನೆಂದು ತಿಳಿದುಬರುತ್ತದೆ[೧೪]. ಆದರೆ ಕದಂಬರನ್ನು ಒಮ್ಮೆಲೇ ಪೂರ್ತಿಯಾಗಿ ತೆಗೆದುಹಾಕುವದು ಚಾಲುಕ್ಯರಿಂದ ಸಾಧ್ಯವಿರಲಿಲ್ಲವಾದ್ದರಿಂದ, ಅಜವರ್ಮ, ಭೋಗಿವರ್ಮ ಮುಂತಾದವರು ಇನ್ನೂ ಸ್ವತಂತ್ರರಾಗಿ ಆಳುತ್ತಿದ್ದ ಉಲ್ಲೇಖಗಳು ನಮಗೆ ಕಂಡು ಬರುತ್ತವೆ[೧೫].

## ಬಾದಾಮಿಯ ಚಾಲುಕ್ಯರು:

ಬನವಾಸಿ ಕದಂಬರನ್ನು ಸೋಲಿಸಿ ಬಾದಾಮಿಯಲ್ಲಿ ತಮ್ಮ ಸಾಮ್ರಾಜ್ಯವನ್ನು ಸ್ಥಾಪಿಸಿ ಚಾಲುಕ್ಯರು ಕರ್ನಾಟಕವನ್ನು ಆಳಿದರು. ಚಾಲುಕ್ಯರ ಇತಿಹಾಸವು ಕ್ರಿ.ಶ.ಸು. ೫೦೦ ರಿಂದ ಆರಂಭವಾಗುತ್ತದೆ. ಕ್ರಿ.ಶ.ಸು. ೫೦೦ ರಿಂದ ೫೨೦ ರ ವರೆಗೆ ಆಳಿದ ಜಯಸಿಂಹನನ್ನು ಮಹಾಕೂಟ ಸ್ತಂಭಶಾಸನವು[೧೬] ಕುಬೇರನಿಗೆ ಹೋಲಿಸಿದೆ. ಈತನ ಮಗನಾದ ರಣರಾಗನು ಕ್ರಿ.ಶ.ಸು. ೫೨೦ ರಿಂದ ೫೪೦ ವರೆಗೆ ಆಳಿದನು. ಅವನನ್ನು ಅದೇ ಶಾಸನವು ತಂದೆಯಂತೆ ಯೋಧನು ಸದ್ಗುಣಿಯೂ ಆಗಿದ್ದನೆಂದು ಹೇಳಿದೆ.

ಮೊದಲನೆಯ ಪುಲಕೇಶಿಯೇ ಚಾಲುಕ್ಯವಂಶದ ನಿಜವಾದ ಸಂಸ್ಥಾಪಕ ಅರಸನಾಗಿದ್ದಾನೆ. ಅಶ್ವಮೇಧಯಾಗ ಮೊದಲಾದ ಯಜ್ಞಗಳನ್ನು ನೆರವೇರಿಸಿದ, ಹಿರಣ್ಯಗರ್ಭದಾನ ಮಾಡಿದ ಹಿರಿಮೆ ಇವನದು. ಈತನು ಯುದ್ಧತಂತ್ರದಲ್ಲಿ ನಿಪುಣನಾಗಿದ್ದೆನೆಂಬುದಕ್ಕೆ ಆಯಕಟ್ಟಿನ ಸ್ಥಳವಾದ ಬಾದಾಮಿ ಕಲ್ಬೆಟ್ಟದಲ್ಲಿ ಕೋಟೆಯನ್ನು ನಿರ್ಮಿಸಿ ರಾಜಧಾನಿಯನ್ನಾಗಿ ಆಯ್ಕೆಮಾಡಿದುದೇ ಸಾಕ್ಷಿ. ಬಾದಾಮಿಯಲ್ಲಿ ಕ್ರಿ.ಶ.೫೪೩ ರಲ್ಲಿ ಕೋಟೆ ಕಟ್ಟಿಸಿದುದಲ್ಲದೇ ವಾತಾಪಿ ಹಾಗೂ ಅಲ್ಲಿನ ಪರಿಸರದಲ್ಲಿ ಕಲ್ಲಿನಲ್ಲಿ ಕೆತ್ತಿದ ಮತ್ತು ರಚನಾತ್ಮಕ ದೇವಾಲಯಗಳನ್ನು ನಿರ್ಮಿಸಿರಬಹುದಾಗಿದೆ [೧೭].

ಒಂದನೆಯ ಪುಲಕೇಶಿಯು ರಾಜ್ಯದ ಬುನಾದಿಯನ್ನು ಭದ್ರಗೊಳಿಸಿದರೆ ಅದನ್ನು ವಿಸ್ತರಿಸಿದ ಕೀರ್ತಿಯು ಒಂದನೆಯ ಕೀರ್ತಿವರ್ಮನಿಗೆ ಸಲ್ಲುತ್ತದೆ. ಕ್ರಿ.ಶ. ೫೬೬ ರಿಂದ ೫೯೬ ರ ವರೆಗೆ ಈತನು ಆಳ್ವಿಕೆ ಮಾಡಿದನು. ನಳ, ಮೌರ್ಯ ಮತ್ತು ಕದಂಬರಿಗೆ ಈತನು ಕಾಳರಾತ್ರಿಯಾಗಿದ್ದನು[೧೮]. ಕದಂಬರಿಂದ ಉತ್ತರ ಕರ್ನಾಟಕದ ಭಾಗವನ್ನೂ,

ಮೌರ್ಯರಿಂದ ಕೊಂಕಣ ರಾಜ್ಯವನ್ನು ಮತ್ತು ಪೂರ್ವದ ನೆಲವಡಿ (ಬಳ್ಳಾರಿ-ಕರ್ನೂಲ) ಪ್ರದೇಶವನ್ನು ನಳರಿಂದ ವಶಪಡಿಸಿಕೊಂಡು ರಾಜ್ಯವನ್ನು ಎಲ್ಲ ದಿಕ್ಕುಗಳಿಗೂ ವಿಸ್ತರಿಸಿದನು. ಇವನ ಕಾಲದಲ್ಲಿ ಕನ್ನಡನಾಡು ರಾಜ್ಯದಿಂದ ಸಾಮ್ರಾಜ್ಯದ ಸ್ಥಾನಕ್ಕೇರಿತು.

ಒಂದನೆಯ ಕೀರ್ತಿವರ್ಮನ ಮರಣದ ನಂತರ ಮಕ್ಕಳು ಚಿಕ್ಕವರಿದ್ದರಿಂದ ಅವನ ತಮ್ಮ ಮಂಗಲೇಶನು ರಾಜ್ಯಭಾರ ನೆಡೆಸತೊಡಗಿದನು. ಮಂಗಲೇಶನು ಶಕ್ತಿತ್ರಯ ಸಂಪನ್ನನಾಗಿದ್ದನು[೩೦]. ತನ್ನಾಳ್ವಿಕೆಯಾರಂಭದಲ್ಲಿಯೇ ಈತನು ಕಳಚೂರಿ ಬುದ್ಧರಾಜನನ್ನು ಸೋಲಿಸಿ ಅಪಾರ ದ್ರವ್ಯರಾಶಿಯನ್ನು ಅವನಿಂದ ವಶಪಡಿಸಿಕೊಂಡು ಮುಕುಟೇಶ್ವರ ದೇವರಿಗೆ ಅರ್ಪಿಸಿದನಲ್ಲದೇ ಮಹಾಕೂಟದಲ್ಲಿ ಧರ್ಮಸ್ಥಂಭವನ್ನು ಸ್ಥಾಪಿಸಿದನು. ಅಧಿಕಾರದ ದಾಹದಿಂದ ಉತ್ತರಾಧಿಕಾರಿಯಾದ ೨ನೇ ಪುಲಕೇಶಿಯು ಪ್ರಾಪ್ತನಾದರೂ ಅವನಿಗೆ ಅಧಿಕಾರವನ್ನು ನೀಡಲಿಲ್ಲ. ಪುಲಕೇಶಿಯು ಆಗ ಬಾಣರ ನೆರವಿನೊಂದಿಗೆ ಮಂಗಲೇಶನೊಂದಿಗೆ ನಾಡನೂರು ಗ್ರಾಮದ ಎಳ್ಪಟ್ಟು ಸಿಂಭಿಗೆ ಎಂಬ ರಣರಂಗದಲ್ಲಿ ಹೋರಾಡಿ ಆತನನ್ನು ಕೊಂದು ಸಿಂಹಾಸನವನ್ನು ಕ್ರಿ.ಶ. ೬೧೦ ರಲ್ಲಿ ಪಡೆದುಕೊಂಡನು[೩೧].

ಎರಡನೆಯ ಪುಲಕೇಶಿಯು ಪಟ್ಟಕ್ಕೆ ಬಂದಕೂಡಲೇ ಆನೇಕ ದಿಗ್ವಿಜಯಗಳಲ್ಲಿ ಭಾಗಿಯಾದನು. ಅವನು ಕದಂಬರು, ಗಂಗರು, ಅಳುಪರು, ಕೊಂಕಣದ ಮೌರ್ಯರುಗಳನ್ನು ಸದೆಬಡಿದನು. ಅಲ್ಲದೇ ಪಶ್ಚಿಮ ಸಮುದ್ರದ ಸಿರಿಯಾರದ ಘಾರಾಪುರಿಯನ್ನು ನೌಕಾದಳದಿಂದ ಧ್ವಂಸಮಾಡಿದನು. ಲಾಟ, ಮಾಳವ, ಗೂರ್ಜರು ಶರಣಾಗತರಾಗುವಂತೆ ಮಾಡಿದನು. ಕನೌಜದ ಹರ್ಷವರ್ಧನನು ನರ್ಮದೆಯ ತೀರದಲ್ಲಿ ಎರಡನೆಯ ಪುಲಕೇಶಿಯಿಂದ ಸೋತುಹೋದನು[೩೨]. ಈತನ ಸೈನ್ಯವನ್ನು ಕಂಡು ಕೋಸಲ, ಕಲಿಂಗದ ಅರಸರು ಭಯಭೀತರಾದರು. ವಿಷ್ಣುಕುಂಡಿನರನ್ನು ಸೋಲಿಸಿ ಪಿಷ್ಠಪುರ ದುರ್ಗವನ್ನು ಸೆರೆ ಹಿಡಿದನು. ಕುನಾಳ ಪ್ರದೇಶ ಇವನ ಕೈವಶವಾಯ್ತು. ಪಲ್ಲವದೊರೆ ಒಂದನೇ ಮಹೇಂದ್ರವರ್ಮ ಕಂಚಿ ಕೋಟೆಯ ಹಿಂದೆ ಅಡಗಿಕೊಂಡನು.

ಕ್ರಿ.ಶ.೬೪೨ ರಲ್ಲಿ ಪಲ್ಲವದೊರೆ ಮೊದಲನೆಯ ನರಸಿಂಹವರ್ಮನು ಚಾಲುಕ್ಯರ ರಾಜ್ಯವನ್ನು ಮುತ್ತಿದನು. ಆಗ ಮಣಿಮಂಗಲ, ಪಿರಿಯಾಲ, ಸೂರಮಾರಗಳಲ್ಲಿ ನಡೆದ ಯುದ್ಧಗಳಲ್ಲಿ ಪುಲಿಕೇಶಿಯು ಸೋತು ಹತನಾದನು. ಹದಿಮೂರು ವರ್ಷಗಳ ಕಾಲ ಚಾಲುಕ್ಯ ಸಾಮ್ರಾಜ್ಯ ಕತ್ತಲೆಯಲ್ಲಿ ಮುಳುಗಿ ಪಲ್ಲವರ ವಶದಲ್ಲಿತ್ತು.

ಮೊದಲನೆಯ ವಿಕ್ರಮಾದಿತ್ಯನು ಪಲ್ಲವರ ವಶದಲ್ಲಿದ್ದ ತನ್ನ ಸಾಮ್ರಾಜ್ಯವನ್ನು ಮರಳಿ ಪಡೆಯಲು ಕ್ರಿ.ಶ. ೬೫೫ ರಲ್ಲಿ ಯಶಸ್ವೀಯಾದನು[೩೩]. ಪಲ್ಲವ ನರಸಿಂಹವರ್ಮ, ಅವನ ಮಗ ಮಹೇಂದ್ರವರ್ಮ ಮತ್ತು ಆತನ ಮಗ ಮೊದಲನೆಯ ಪರಮೇಶ್ವರವರ್ಮ ಹೀಗೆ ಮೂರು ತಲೆಮಾರಿನ ಪಲ್ಲವ ಅರಸರುಗಳನ್ನು ವಿಕ್ರಮಾದಿತ್ಯನು ಸೋಲಿಸಿದ್ದನು[೩೪].

ಈತನ ನಂತರ ಈತನ ಮಗ ವಿನಯಾದಿತ್ಯನು ಪಟ್ಟವೇರಿದನು. ಈತನ ಆಳ್ವಿಕೆಯು ಶಾಂತವಾಗಿತ್ತು. ಇವನು ರಾಜ್ಯರಕ್ಷಣೆಯಲ್ಲಿ ತಂದೆಗೆ ನೆರವಾಗಿದ್ದನು. ಈತನು ಕಂಚಿ, ಕೇರಳ, ಚೋಳ ಮೊದಲಾದ ಅರಸರನ್ನು ಸೋಲಿಸಿದುದಾಗಿ ಶಾಸನಗಳಿಂದ ತಿಳಿಯುತ್ತದೆ. ವಿನಯಾದಿತ್ಯನು ಉತ್ತರದ ಅರಸನೊಬ್ಬನನ್ನು ಗೆದ್ದು ಗಂಗಾ, ಯಮುನಾ ಮತ್ತು ಪಾಲಿಧ್ವಜ ಚಿಹ್ನೆಗಳನ್ನು ಗೆಲುವಿನ ಪ್ರತೀಕವಾಗಿ ತಂದುದನ್ನು ಆತನ ಮಗನಾದ ವಿಜಯಾದಿತ್ಯನ ಶಾಸನಗಳು ಹೇಳುತ್ತವೆ.

ವಿಜಯಾದಿತ್ಯನು ಕ್ರಿ.ಶ. ೬೯೬ ರಲ್ಲಿ ಸಿಂಹಾಸನವೇರಿ ಕ್ರಿ.ಶ. ೭೩೩ ರ ವರೆಗೆ ಆಳ್ವಿಕೆ ಮಾಡಿದನು. ಈತನ ನಂತರ ಇವನ ಮಗ ಎರಡನೆಯ ವಿಕ್ರಮಾದಿತ್ಯನು ಕ್ರಿ.ಶ. ೭೩೩ ರಲ್ಲಿ ಪಟ್ಟಕ್ಕೆಬಂದು ಕ್ರಿ.ಶ.೭೪೪ ರ ವರೆಗೆ ರಾಜ್ಯವಾಳಿದನು. ಪಲ್ಲವರೊಂದಿಗೆ ಇದ್ದ ಹಗೆತನ ಮುಂದುವರೆಯಿಸಿ ಅವರನ್ನು ನಿರ್ಮೂಲನ ಮಾಡಲು ತುಂಡಾಕ ವಿಷಯ ಹೊಕ್ಕು ನಂದಿಪೋತವರ್ಮನನ್ನು ಹೊಡೆದೋಡಿಸಿದನು. ಅಲ್ಲದೇ ರಾಜ ಚಿಹ್ನೆಗಳಾದ ಕಟುಮುಖವಾದಿತ್ರ ಮತ್ತು ಸಮುದ್ರಘೋಷ ಎಂಬ ವಿಶೇಷ ವಾದ್ಯಗಳನ್ನು ಖಟ್ವಂಗ ಪತಾಕೆಯನ್ನು, ಆನೆ, ಚಿನ್ನ, ಮಾಣಿಕ್ಯಗಳನ್ನು ವಶಪಡಿಸಿಕೊಂಡನು. ಕಂಚಿಯನ್ನು ಕೈವಶಮಾಡಿಕೊಂಡು ಅದನ್ನು ಹಾಳುಗೆಡುವದೇ ರಾಜಸಿಂಹೇಶ್ವರ ದೇಗುಲಕ್ಕೆ ಅಲ್ಲಿ ಕೊಳ್ಳೆಹೊಡೆದ ಸಂಪತ್ತನ್ನು ಬಿಟ್ಟುಕೊಟ್ಟನು[೩೭]. ಪಾಂಡ್ಯ, ಚೋಳ, ಕೇರಳ, ಕಳಭ್ರರನ್ನು ಸೋಲಿಸಿ ದಕ್ಷಿಣ ಸಮುದ್ರ ತೀರದಲ್ಲಿ ಜಯಸ್ಥಂಭವನ್ನು ನೆಟ್ಟನು[೩೮].

ಇವನ ನಂತರ ಇವನ ಮಗ ಎರಡನೆಯ ಕೀರ್ತಿವರ್ಮನು ಕ್ರಿ.ಶ. ೭೪೪ ರಿಂದ ಕ್ರಿ.ಶ.೭೫೭ ವರೆಗೆ ಆಳ್ವಿಕೆ ನಡೆಸಿದನು. ಇವನ ಕಾಲದಲ್ಲಿ ಕೊನೆಗೆ ಇವನ ಸಾಮಂತನಾದ ರಾಷ್ಟ್ರಕೂಟರ ದಂತಿದುರ್ಗನು ಇವನನ್ನು ಸೋಲಿಸಿದನು[೩೯]. ಇವನೊಂದಿಗೆ ಎರಡು ಶತಮಾನಗಳಿಗಿಂತ ಹೆಚ್ಚು ಕಾಲ ವಿಜೃಂಭಿಸಿದ ಚಾಲುಕ್ಯ ರಾಜ್ಯವು ಕೊನೆಗೊಂಡಿತು. ಇವರು ಕರ್ನಾಟಕಕ್ಕೆ ಒಂದು ನಿಶ್ಚಿತ ಸ್ವರೂಪವನ್ನು ತಂದುಕೊಟ್ಟ ಕನ್ನಡಿಗ ಅರಸರಾಗಿದ್ದಾರೆ.

## ರಾಷ್ಟ್ರಕೂಟರು:

### ದಂತಿದುರ್ಗ:

ಎರಡನೆಯ ಇಂದ್ರನ ಮಗನಾದ ದಂತಿದುರ್ಗನು ಬಾದಾಮಿ ಚಾಲುಕ್ಯ ಕೀರ್ತಿವರ್ಮನನ್ನು ಸೋಲಿಸಿ ಕ್ರಿ.ಶ.೭೫೭ ರಲ್ಲಿ ರಾಷ್ಟ್ರಕೂಟರ ರಾಜ್ಯಕ್ಕೆ ಅಡಿಪಾಯ ಹಾಕಿದನು. ಇವನು ದಕ್ಷಿಣ ಗುಜರಾತಿನ ಚಾಲುಕ್ಯರನ್ನು, ನಂದಿಪುರದ ಗೂರ್ಜರರನ್ನು ಸೋಲಿಸಿದನಲ್ಲದೇ, ಮಾಳವ, ಕೋಸಲ ರಾಜ್ಯಗಳ ಮೇಲೆ ದಂಡಯಾತ್ರೆ ಮಾಡಿ ಗೆದ್ದನು. ಪಲ್ಲವರೊಡನೆ ಸ್ನೇಹಗಳಿಸಿ ಎರಡನೇ ಕೀರ್ತಿವರ್ಮನನ್ನು ಸೋಲಿಸಿದನು[೪೦].

### ಒಂದನೆಯ ಕೃಷ್ಣ:

ದಂತಿದುರ್ಗನಿಗೆ ಮಕ್ಕಳಿಲ್ಲದ ಕಾರಣ ಅವನ ಚಿಕ್ಕಪ್ಪನಾದ ಒಂದನೆಯ ಕೃಷ್ಣನು ಸಿಂಹಾಸನಕ್ಕೆ ಬಂದನು. ಇವನು ಬಾದಾಮಿ ಚಾಲುಕ್ಯರನ್ನು ಸಂಪೂರ್ಣವಾಗಿ ಸೋಲಿಸಿ ಸಾರ್ವಭೌಮತ್ವವನ್ನು ಸ್ಥಾಪಿಸಿದನು. ನಂತರ ಪಶ್ಚಿಮ ಕೊಂಕಣದ

ಮೇಲೆ ಧಾಳಿಮಾಡಿ ಶಿಲಹಾರರ ಸನಪುಲ್ಲನನ್ನು ಸೋಲಿಸಿದನು. ದಕ್ಷಿಣಕ್ಕೆ ನಡೆದು ಗಂಗರ ರಾಜಧಾನಿ ತಲಕಾಡಿನ ಮೇಲೆ ಧಾಳಿಯಿಟ್ಟು, ಗಂಗರ ಶ್ರೀಪುರುಷನನ್ನು ಎದುರಿಸಿ ಸೋಲಿಸಿದನು[೩೯]. ವೆಂಗಿಯ ಚಾಲುಕ್ಯರ ಮೇಲೆ ಧಾಳಿಯಿಡಲು ಗೋವಿಂದನನ್ನು ಕಳುಹಿಸಿದನು. ಅಲ್ಲಿನ ದೊರೆ ವಿಷ್ಣುವರ್ಧನನು ಹೋರಾಟ ಮಾಡಿದನಾದರೂ, ಕ್ರಿ.ಶ.೭೬೯ ರಲ್ಲಿ ಸೋತು ಶರಣಾಗತನಾದನು. ಇದರಿಂದ ಇವನು ವಿಶಾಲ ಸಾಮ್ರಾಜ್ಯದ ಅಧಿಪತಿಯಾದನು.

**ಎರಡನೆಯ ಗೋವಿಂದ:**

ಒಂದನೆಯ ಕೃಷ್ಣನ ನಂತರ ಅವನ ಮಗ ಎರಡನೆಯ ಗೋವಿಂದ ಸಿಂಹಾಸನಾರೂಢನಾದನು. ಗೋವಿಂದನು ಅಧಿಕಾರಕ್ಕೆ ಬಂದರೂ ಕೂಡಲೇ ವಿಲಾಸಪ್ರಿಯನಾಗಿ ಆಡಳಿತದಲ್ಲಿ ನಿರಾಸಕ್ತಿ ತಾಳಿದನು. ಆಗ ಇವನ ಸಹೋದರ ಧ್ರುವನು ಇವನಿಂದ ಅಧಿಕಾರವನ್ನು ಕಿತ್ತುಕೊಂಡನು. ಧ್ರುವನು ಸಿಂಹಾಸನಗ್ರಹಣಕ್ಕಾಗಿ ನಡೆಸಿದ ಕ್ಷಿಪ್ರಕ್ರಾಂತಿಯಿಂದ ಗೋವಿಂದನ ಆಳ್ವಿಕೆ ಕೊನೆಗೊಂಡಿತೆಂದು ಅಳ್ತೇಕರ ಮತ್ತು ಮದನ್‌ರವರು ಅಭಿಪ್ರಾಯ ಪಡುತ್ತಾರೆ[೪೦].

**ಧ್ರುವ :**

ಕ್ರಿ.ಶ.೭೮೦ ರಲ್ಲಿ ಪಟ್ಟಕ್ಕೆ ಬಂದ ಧ್ರುವನು ರಾಷ್ಟ್ರಕೂಟ ಅರಸರುಗಳಲ್ಲಿಯೇ ಬಲಿಷ್ಠ ಮತ್ತು ದಕ್ಷ ಆಡಳಿತಗಾರನಾಗಿದ್ದವನು. ಧ್ರುವನೂ ಕೂಡ ತನ್ನ ಪೂರ್ವಜರ ನೀತಿಯನ್ನು ಮುಂದುವರೆಯಿಸಿ ಉತ್ತರ ದಂಡಯಾತ್ರೆಗಾಗಿ ತನ್ನ ಮಕ್ಕಳಾದ ಗೋವಿಂದ ಮತ್ತು ಇಂದ್ರರನ್ನು ನೀಯೋಜಿಸಿದನು. ಧರ್ಮಪಾಲನತ್ತ ಮುನ್ನುಗ್ಗಿ ಅವನನ್ನು ಸೋಲಿಸಿದರು. ಇವನ ಸೈನ್ಯ ಗಂಗಾನದಿಯವರೆಗೆ ಮುನ್ನುಗ್ಗಿ ಹಿಂದಿರುಗಿತು. ನಂತರ ವೆಂಗಿಯ ಮೇಲೆ ಧಾಳಿಯಿಟ್ಟು ನಾಲ್ಕನೆಯ ವಿಷ್ಣುವರ್ಧನನ್ನು ಸೋಲಿಸಿತು[೪೧]. ನಂತರ ಗಂಗ ಪಲ್ಲವರ ಮೇಲೆ ದಂಡೆತ್ತಿ ಗಂಗರ ಶಿವಮಾರನನ್ನು ಸೋಲಿಸಿದನು[೪೨]. ಪಲ್ಲವ ಕಂಚಿಯ ಮೇಲೆ ಧಾಳಿಯಿಟ್ಟು ನಂದಿವರ್ಮನನ್ನು ಸೋಲಿಸಿದನು. ಇದರಿಂದಾಗಿ ರಾಷ್ಟ್ರಕೂಟರ ಸಾಮ್ರಾಜ್ಯವೀಗ ಭರತಖಂಡದ ಏಕೈಕ ಸಾಮ್ರಾಜ್ಯವಾಗಿ ಮೆರೆಯಿತು.

**ಮೂರನೆಯ ಗೋವಿಂದ :**

ಧ್ರುವನ ಅಣತಿಯಂತೆ ಅವನ ಉತ್ತರಾಧಿಕಾರಿಯಾಗಿ ಕ್ರಿ.ಶ.೭೯೩ ರಲ್ಲಿ ಪಟ್ಟಕ್ಕೆ ಬಂದನು. ಇವನ ಕಾಲದಲ್ಲಿ ರಾಷ್ಟ್ರಕೂಟರ ಸಾಮ್ರಾಜ್ಯ ಸಿಂಹಳದಿಂದ ಹಿಮಾಲಯದವರೆಗೂ, ಸೌರಾಷ್ಟ್ರದಿಂದ ಬಂಗಾಳದವರೆಗೂ ಹಬ್ಬಿತ್ತು. ಮೊದಲು ತನ್ನ ಸಹೋದರನಾದ ಸ್ತಂಭನಿಂದ ವ್ಯಕ್ತವಾದ ವಿರೋಧವನ್ನೂ, ಅವನಿಗೆ ಬೆಂಬಲಿಗರಾದ ಗಂಗ, ನೊಳಂಬ, ಪಲ್ಲವ ಮತ್ತು ರಾಜ್ಯದ ಸುತ್ತಮುತ್ತಲಿನ ಸಾಮಂತರಾಜರುಗಳನ್ನು ಸದೆಬಡಿದನು[೪೩]. ನಂತರ ಉತ್ತರಕ್ಕೆ ನಡೆದು ಗೂರ್ಜರ ಪ್ರತಿಹಾರ ಎರಡನೆಯ ನಾಗಭಟ್ಟ, ಕನೌಜದ ಚಕ್ರಾಯುಧ ಮತ್ತು ಬಂಗಾಳದ ಧರ್ಮಪಾಲರನ್ನು ಸೋಲಿಸಿ ಗಂಗಾನದಿಯವರೆಗೆ ತನ್ನ ಸೈನ್ಯವನ್ನು ಮುನ್ನಡೆಸಿ ಹಿಂದಿರುಗಿದನು. ಅದೇ ಸಮಯವನ್ನು ಸಾಧಿಸಿ ಮತ್ತೆ ಸ್ತಂಭ ಮತ್ತು

ಶಿವಮಾರರು ಗೋವಿಂದನ ವಿರುದ್ಧ ನಿಂತರು. ಅವರನ್ನು ಕ್ರಿ.ಶ.೮೦೨ ರ ವೇಳೆಗೆ ಸೋಲಿಸಿ ಹಿಮ್ಮೆಟ್ಟಿಸಿ ಮುಂದುವರೆದನು. ಪಲ್ಲವ, ಪಾಂಡ್ಯ, ಚೋಳ ಮತ್ತು ಚೇರರನ್ನು ಸೋಲಿಸಿದನು. ಇದೇ ವೇಳೆಗೆ ವೆಂಗಿಯ ಎರಡನೆಯ ವಿಜಯಾದಿತ್ಯ ಸ್ವತಂತ್ರನಾಗಲು ಹವಣಿಸಿದನು. ಆಗ ಅವನನ್ನು ಸಿಂಹಾಸನದಿಂದ ತಳ್ಳಿ ತನಗೆ ಸಹಕಾರಿಯಾದ ಭೀಮನನ್ನು ಗೋವಿಂದನು ಪಟ್ಟಕ್ಕೆ ತಂದನು.

ತನ್ನ ಕೊನೆಗಾಲದಲ್ಲಿ ಮಗ ಅಮೋಘವರ್ಷನು ಚಿಕ್ಕವನಾಗಿದ್ದರಿಂದ ಅವನ ರಕ್ಷಣೆ ಮತ್ತು ರಾಜ್ಯಭಾರದ ಹೊಣೆಗಾರಿಕೆಯನ್ನು ಗುಜರಾತಿನ ಕರ್ಕ ಸುವರ್ಣವರ್ಷನಿಗೆ ವಹಿಸಿದನು.

**ಅಮೋಘವರ್ಷ (ನೃಪತುಂಗ):**

ಕ್ರಿ.ಶ.೮೧೪ ರಲ್ಲಿ ಸಿಂಹಾಸನಕ್ಕೆ ಬಂದ ಅಮೋಘವರ್ಷನು ಸುಲಭವಾಗಿ ರಾಜ್ಯವಾಳುವಂತಿರಲಿಲ್ಲ. ಏಕೆಂದರೆ ಗೋವಿಂದನಿಂದ ಪೆಟ್ಟುತಿಂದ ಅನೇಕರು ಸೇಡು ತೀರಿಸಿಕೊಳ್ಳಲು ಹವಣಿಸುತ್ತಿದ್ದರು. ಆದರೆ ಕರ್ಕನು ದಂಗೆಕೋರ ರಾಜದ್ರೋಹಿಗಳನ್ನು ಹತ್ತಿಕ್ಕಿ ಆಪತ್ತನ್ನು ನಿವಾರಿಸಿದನು.

ಕ್ರಿ.ಶ.೮೬೦ ರಲ್ಲಿ ವೆಂಗಿಯ ಮೇಲೆ ಯುದ್ಧಮಾಡಿ ಗುಣಗ ವಿಜಯಾದಿತ್ಯನನ್ನು ಸೋಲಿಸಿದನು. ಇವನ ಮಗ ಎರಡನೇ ಕೃಷ್ಣನು ತಂದೆಯ ವಿರುದ್ಧ ದಂಗೆಯೆದ್ದನು. ಅವನನ್ನು ಸರಿದಾರಿಗೆ ತರಲು ಬಂಕೇಶನಿಗೆ ಒಪ್ಪಿಸಿದನು. ಅವನ ಕಾರ್ಯವನ್ನು ಮೆಚ್ಚಿದ ನೃಪತುಂಗನು ಅವನಿಗೆ ಬನವಾಸಿಯ ಜೊತೆ ಕುಂದರಿಗೆ-೭೦, ಕುಂದೂರ-೫೦೦, ಪುಲಿಗೆರೆ-೩೦೦ ಮೊದಲಾದ ಪ್ರದೇಶಗಳ ಮೇಲೆ ಮುಖ್ಯಾಧಿಕಾರಿಯನ್ನಾಗಿ ನೇಮಿಸಿದನು.

ದಕ್ಷಿಣದ ಅರಸರುಗಳ ಜೊತೆ ಉದಾರ ನೀತಿಯನ್ನು ಅನುಸರಿಸಿ ಯುದ್ಧ ಮಾಡದೇ ಶಾಂತಿಸ್ಥಾಪನೆಗೆ ಗಂಗ, ಪಲ್ಲವರೊಡನೆ ವೈವಾಹಿಕ ಸಂಬಂಧವನ್ನು ಬೆಳೆಸಿದನು[೪]. ಉತ್ತರದಲ್ಲಿ ಸಹ ದಂಡಯಾತ್ರೆ ಕೈಕೊಳ್ಳದಿದ್ದರೂ, ತನ್ನ ಪೂರ್ವಜರ ಸಾಮ್ರಾಜ್ಯವನ್ನು ಉಳಿಸಿಕೊಳ್ಳುವಲ್ಲಿ ಯಶಸ್ವೀಯಾದನು. ತನ್ನ ರಾಜಧಾನಿಯನ್ನು ಎಲಿಚಪುರದಿಂದ ಮಾನ್ಯಖೇಟಕ್ಕೆ ವರ್ಗಾಯಿಸಿದನು.

**ಎರಡನೆಯ ಕೃಷ್ಣ:**

ಕ್ರಿ.ಶ. ೮೭೮ ರಲ್ಲಿ ಸಿಂಹಾಸನಕ್ಕೆ ಬಂದ ಈತನು ತಂದೆಯ ಶಾಂತಿಯುತ ನೀತಿಯಿಂದ ಪ್ರಬಲರಾಗಿದ್ದ ಸಾಮಂತರು ಹಾಗೂ ಶತೃಗಳನ್ನು ಸದೆಬಡೆಯುವ ಕಾರ್ಯದಲ್ಲಿ ತೊಡಗಿದನು. ಅದಕ್ಕಾಗಿ ಅವನು ತಕ್ಷಣವೇ ಗಂಗರು, ನೊಳಂಬರು, ವೆಂಗಿಯ ಚಾಲುಕ್ಯರು, ಗುಜರಾತ ಪ್ರತಿಹಾರರು ಮೊದಲಾದ ಸಾಮಂತರಸರ ಜೊತೆ ಹೋರಾಡಬೇಕಾಯಿತು. ಉತ್ತರದ ಕಲಚೂರಿಗಳು ಮತ್ತು ದಕ್ಷಿಣದ ಚೋಳರೊಂದಿಗೆ ರಕ್ತ ಸಂಬಂಧ ಬೆಳೆಸಿದರೂ ಪ್ರಯೋಜನವಾಗಲಿಲ್ಲ. ತಂದೆಯಂತೆ ಶಾಂತಿಪ್ರೀಯನಾದ ಈತ ರಾಜ್ಯವಿಸ್ತಾರಕ್ಕೆ ಕೈಹಾಕದೇ ಇದ್ದ ರಾಜ್ಯವನ್ನು ಉಳಿಸಿಕೊಳ್ಳುವದರಲ್ಲಿ ಮಾತ್ರ ಯಶಸ್ವಿಯಾದನು.

**ಮೂರನೆಯ ಇಂದ್ರ:**

ಕೃಷ್ಣನ ತರುವಾಯ ಅವನ ಮಗ ಅಕಾಲಿಕ ಮರಣಕ್ಕೆ ತುತ್ತಾದ ಕಾರಣ, ಮೊಮ್ಮಗ ಮೂರನೆಯ ಇಂದ್ರನು ಕ್ರಿ.ಶ.೯೧೪ ರಲ್ಲಿ ಪಟ್ಟಕ್ಕೆ ಬಂದನು. ಪಟ್ಟಕ್ಕೆ ಬಂದಕೂಡಲೇ ಅನಿರೀಕ್ಷಿತವಾಗಿ ಉತ್ತರಗಡಿಯಲ್ಲಿರುವ ಪರಮಾರ ಉಪೇಂದ್ರನು ನಾಸಿಕದ ಹತ್ತಿರ ಗೋವರ್ಧನದ ಮೇಲೆ ಧಾಳಿಯಿಟ್ಟನು. ಅವನನ್ನು ಇಂದ್ರನು ಸೋಲಿಸಿ ಹಿಮ್ಮೆಟ್ಟಿಸಿದನು. ನಂತರ ಗೂರ್ಜರರ ಪ್ರತಿಹಾರರು ಮತ್ತು ಬಂಗಾಲದ ಪಾಲರ ನಡುವಿನ ವೈರತ್ವದ ಲಾಭಪಡೆಯಲು ಮುಂದಾಗಿ ಕನೌಜವನ್ನು ವಶಪಡಿಸಿಕೊಂಡು, ಪಲಾಯನದ ಹಾದಿಯಲ್ಲಿದ್ದ ಮಹಿಪಾಲನನ್ನು ಬೆನ್ನಟ್ಟಲು ವೇಮುಲವಾಡದ ಚಾಲುಕ್ಯ ಎರಡನೇ ನರಸಿಂಹನನ್ನು ಕಳಿಸಿದನು. ಇದನ್ನು ಪಂಪಭಾರತದಲ್ಲಿ ಪಂಪನು ವರ್ಣಿಸಿದ್ದಾನೆ[೧೫].

**ಎರಡನೆಯ ಅಮೋಘವರ್ಷ:**

ಇಂದ್ರನ ಉತ್ತರಾಧಿಕಾರಿಯಾಗಿ ಕ್ರಿ.ಶ.೯೨೯ ರಲ್ಲಿ ಎರಡನೆಯ ಅಮೋಘವರ್ಷನು ಪಟ್ಟಕ್ಕೆ ಬಂದನಾದರೂ ಅವನನ್ನು ತಮ್ಮನಾದ ನಾಲ್ಕನೆಯ ಗೋವಿಂದ ಒಂದೇ ವರ್ಷದಲ್ಲಿ ಸಿಂಹಾಸನದಿಂದ ತಳ್ಳಿಹಾಕಿದನು.

**ನಾಲ್ಕನೆಯ ಗೋವಿಂದ:**

ಕ್ರಿ.ಶ.೯೩೦ ರಲ್ಲಿ ಅಧಿಕಾರಕ್ಕೆ ಬಂದ ಇವನು ಜನರ ವಿಶ್ವಾಸವನ್ನು ಕಳೆದುಕೊಂಡನು. ಗೋವಿಂದನ ವಿರುದ್ಧ ಗಂಗ ಎರಡನೆಯ ಭೂತುಗ, ವೇಮುಲವಾಡದ ಅರಿಕೇಸರಿ ಪ್ರಮುಖ ಪಾತ್ರವಹಿಸಿ ಸಿಂಹಾಸನದಿಂದ ಕೆಳಗಿಳಿಯುವಂತೆ ಮಾಡಿದರು. ಹೀಗಾಗಿ ಸಾಮಂತರೆಲ್ಲಾ ಕೂಡಿ ಅವನನ್ನು ಕೆಳಗಿಳಿಸಿ ಅವನ ಚಿಕ್ಕಪ್ಪನಾದ ಮೂರನೆಯ ಅಮೋಘವರ್ಷನನ್ನು ಕ್ರಿ.ಶ.೯೩೬ ರಲ್ಲಿ ಅಧಿಕಾರಕ್ಕೆ ತಂದರು.

**ಮೂರನೆಯ ಅಮೋಘವರ್ಷ:**

ಇವನಿಗೆ ಹಲವಾರು ಸಾಮಂತ ಅರಸರುಗಳು ಸಹಾಯಮಾಡಿದರು. ವಯೋವೃದ್ಧನಾದ ಈತನು ತನ್ನ ಎಲ್ಲಾ ರಾಜ್ಯದ ಆಡಳಿತವನ್ನು ತನ್ನ ಮಗ ಯುವರಾಜನಾದ ಮೂರನೆಯ ಕೃಷ್ಣನಿಗೆ ವಹಿಸಿದ್ದನು, ಕ್ರಿ.ಶ.೯೩೯ ರಲ್ಲಿ ಈತನು ಕೊನೆಯುಸಿರೆಳೆದನು.

**ಮೂರನೆಯ ಕೃಷ್ಣ:**

ತಂದೆಯ ಕಾಲದಲ್ಲಿಯೇ ಆಡಳಿತ ನಿರ್ವಹಿಸಿದ ಕೃಷ್ಣನು ಅನೇಕ ಯುದ್ಧಗಳನ್ನು ಕೈಕೊಂಡು ಗಂಗಭೂತುಗನಿಗೆ ರಾಜ್ಯವನ್ನು ಮತ್ತೆ ಗಳಿಸಿಕೊಟ್ಟನು. ಚೇದಿಯ ರಾಜನನ್ನು ಸೋಲಿಸಿ ಕಾಳಂಜರದ ಚಿತ್ರಕೂಟ ಕೋಟೆಯನ್ನು ಗೂರ್ಜರ ಪ್ರತಿಹಾರರಿಂದ ವಶಪಡಿಸಿಕೊಂಡನು. ಬಾಣರ ಮೂರನೆಯ ವಿಕ್ರಮಾದಿತ್ಯನ ಮೇಲೆ ಏರಿಬಂದಿದ್ದ ಚೋಳ ಪರಾಂತಕನ

ಮೇಲೆ ದಂಡಯಾತ್ರೆ ಕೈಕೊಂಡನು. ಶಾಸನಗಳು ಕೃಷ್ಣನನ್ನು ಚೋಳ-ಪಲ್ಲವರ ಮೇಲೆ ನಿಶ್ಚಿತ ಜಯ ಸಾಧಿಸಿದ್ದನ್ನು ಉಲ್ಲೇಖಿಸಿವೆ[೪೬]. ತಕ್ಕೊಳಂ ಯುದ್ಧದಲ್ಲಿ ಚೋಳರನ್ನು ಜಯಿಸಿದ ಕೃಷ್ಣನು ಮುಂದುವರೆದು ಪಾಂಡ್ಯ ಕೇರಳರನ್ನು ಸೋಲಿಸಿ ಗೆದ್ದು ಸಿಲೋನದ ರಾಜನಿಂದ ಕಪ್ಪ-ಕಾಣಿಕೆಗಳನ್ನು ಪಡೆದುದನ್ನು ಸ್ಮರಿಸಲು ರಾಮೇಶ್ವರದಲ್ಲಿ ವಿಜಯಸ್ತಂಭ ನಿಲ್ಲಿಸಿದನು[೪೭].

ಕ್ರಿ.ಶ.೯೫೦ ರ ಸುಮಾರಿಗೆ ಗಂಗರ ಎರಡನೆಯ ಮಾರಸಿಂಹನ ಜೊತೆಗೂಡಿ ಉತ್ತರದ ದಂಡಯಾತ್ರೆಯನ್ನು ಕೈಕೊಂಡನು. ಕ್ರಿ.ಶ.೯೬೩ ರಲ್ಲಿ ಧಾಳಿಯಿಟ್ಟ ಕೃಷ್ಣನು ಚಂದೇಲರನ್ನು, ಮಾಳವದ ಪರಮಾರ ಸಿಮುಕ ಹರ್ಷನನ್ನು ಸೋಲಿಸಿದನು[೪೮]. ನಂತರ ಕೃಷ್ಣನು ವೆಂಗಿಯ ಸಿಂಹಾಸನಕ್ಕಾಗಿ ನಡೆಯುತ್ತಿದ್ದ ಅಂತಃಕಲಹದಲ್ಲಿ ಭಾಗವಹಿಸಿ ತನ್ನವನಾದ ರುದ್ಧಮಲ್ಲನ ಮಗ ಬಾಡಪ್ಪನಿಗೆ ಸಿಂಹಾಸನವನ್ನು ಕೊಡಿಸಿದನು.

**ಖೊಟ್ಟಿಗ:**

ಕೃಷ್ಣನ ನಂತರ ಅವನ ಸಹೋದರ ಖೊಟ್ಟಿಗನು ಸಿಂಹಾಸನಕ್ಕೆ ಬಂದನು. ಇವನ ಕಾಲದಲ್ಲಿ ರಾಷ್ಟ್ರಕೂಟರ ರಾಜಧಾನಿಯ ಮೇಲೆ ಪರಮಾರ ಸಿಯಕ ಹರ್ಷನು ಧಾಳಿಯಿಟ್ಟು ಅದನ್ನು ಕೊಳ್ಳೆಹೊಡೆದನು. ಇಲ್ಲಿಂದ ರಾಷ್ಟ್ರಕೂಟರ ಅವನತಿಯು ಪ್ರಾರಂಭವಾಯಿತು. ಖೊಟ್ಟಿಗನು ಕ್ರಿ.ಶ.೯೭೨ ರಲ್ಲಿ ಮರಣ ಹೊಂದಿದನು.

**ಎರಡನೆಯ ಕರ್ಕ:**

ಖೊಟ್ಟಿಗನ ನಂತರ ಕ್ರಿ.ಶ.೯೭೨ ರಲ್ಲಿ ಸಿಂಹಾಸನಕ್ಕೆ ಬಂದ ಈತನು ರಾಷ್ಟ್ರಕೂಟರ ಕೊನೆಯ ಅರಸನಾಗಿ ಕೇವಲ ಒಂದು ವರ್ಷಕಾಲ ರಾಜ್ಯವಾಳಿದನು. ಪರಮಾರ ಸಿಯಾಕ ಹರ್ಷನ ಧಾಳಿಯ ಸಂದರ್ಭ ಬಳಸಿಕೊಂಡು ಬಾದಾಮಿ ಚಾಲುಕ್ಯ ವಂಶೀಯರ ಕಲ್ಯಾಣದ ಚಾಲುಕ್ಯರ ಎರಡನೆಯ ತೈಲಪನು ಕರ್ಕನನ್ನು ಸೋಲಿಸಿ, ಕ್ರಿ.ಶ.೯೭೩ ರಲ್ಲಿ ರಾಷ್ಟ್ರಕೂಟ ಮನೆತನಕ್ಕೆ ಇತಿಶ್ರೀ ಹಾಡುವದರ ಜೊತೆಗೆ ಕಲ್ಯಾಣಿ ಚಾಲುಕ್ಯ ಮನೆತನಕ್ಕೆ ಅಡಿಪಾಯವನ್ನು ಹಾಕಿದನು.

## ಕಲ್ಯಾಣಿ ಚಾಲುಕ್ಯರು:

### ಎರಡನೆಯ ತೈಲ:

ರಾಷ್ಟ್ರಕೂಟರ ಮೂರನೆಯ ಕೃಷ್ಣನ ಮೇಲೆ ಪರಮಾರರ ಆಕ್ರಮಣವಾದಾಗ ತೈಲನು ಅದೇ ಸಂದರ್ಭವನ್ನು ಪಯೋಗಿಸಿಕೊಂಡು ರಾಷ್ಟ್ರಕೂಟರ ಸಾಮ್ರಾಜ್ಯವನ್ನು ಕೈವಶಮಾಡಿಕೊಂಡನು. ನೀಲಕಂಠ ಶಾಸ್ತ್ರಿಯವರು ಹೇಳುವಂತೆ "ತೈಲನು ರಾಷ್ಟ್ರಕೂಟ ಸಾಮ್ರಾಜ್ಯ ಅವರ ಗೆಳೆಯರು ಮತ್ತು ಅವರ ವೈರಿಗಳು ಎಲ್ಲಕ್ಕೂ ವಾರಸುದಾರನಾದನು"[೪೯]. ಮುಂದೆ ರಾಷ್ಟ್ರಕೂಟರ ಬೆಂಬಲಿಗರಾದ ಗಂಗರು ಅವರಿಗೆ ಸಾಮ್ರಾಜ್ಯ ದಕ್ಕಿಸಿಕೊಡಲು ಮಾರಸಿಂಹನ ಮುಖಾಂತರ ಸಹಾಯಮಾಡಲು ಪ್ರಯತ್ನಿಸಿದರು ಅವರನ್ನೂ ಕೂಡ ತೈಲನು ಸದೆಬಡಿದನು. ಅಲ್ಲದೇ

ಇದೇ ಸಂದರ್ಭವನ್ನುಪಯೋಗಿಸಿಕೊಂಡು ರಾಷ್ಟ್ರಕೂಟರ ಆಧೀನರಾದ ಗೋವಿಂದರಸ ಹಾಗೂ ಪಾಂಚಾಲರನ್ನೂ ಸಹ ತೈಲನು ಸೋಲಿಸಿದನು. ಕ್ರಿ.ಶ. ೯೭೨ ಮತ್ತು ೯೭೫ ರಲ್ಲಿ ಚೋಳ ರಾಜರಾಜನನ್ನು ಹಾಗೂ ಅವನ ಮಗನ್ನು ತೈಲನು ಸೋಲಿಸಿದನು.

### ಸತ್ಯಾಶ್ರಯ:

ತೈಲನ ನಂತರ ಪಟ್ಟಕ್ಕೆ ಬಂದ ಈತನು ತಂದೆಯ ರಾಜ್ಯ ವಿಸ್ತರಣಾ ನೀತಿಯನ್ನೇ ಮುಂದುವರೆಯಿಸಿದನು. ಗಂಗವಾಡಿ ಮತ್ತು ನೊಳಂಬವಾಡಿಗಳಿಗೆ ಮುನ್ನುಗ್ಗಿದ್ದ ಚೋಳರೊಂದಿಗೆ ಸತ್ಯಾಶ್ರಯ ಕಾದಾಡಕ್ಕಿಳಿಯಬೇಕಾಗಿತ್ತು. ಒಂದನೆಯ ರಾಜರಾಜ ಮತ್ತು ಯುವರಾಜ ರಾಜೇಂದ್ರನನ್ನು ಎದುರಿಸಿದ ಸತ್ಯಾಶ್ರಯನು ಅಪಾರ ನಷ್ಟಕ್ಕೀಡಾಗಬೇಕಾಯ್ತು[30] ಇದರಿಂದ ಮೊದಮೊದಲು ಸತ್ಯಾಶ್ರಯನು ಬನವಾಸಿ ಮತ್ತು ಮಾನ್ಯಖೇಟ ಮೊದಲಾದ ನಗರಗಳನ್ನು ಕಳೆದುಕೊಂಡದ್ದುದರ ಜೊತೆಗೆ ತನ್ನ ಸಹೋದರ ದಸವರ್ಮನನ್ನು ಕಳೆದುಕೊಂಡನು. ನಂತರ ಸತ್ಯಾಶ್ರಯನು ಶಿಲಹಾರ ಅಪರಾಜಿತ ಮತ್ತು ಮೂಲರಾಜರೊಂದಿಗೆ ಕಾದಾಡಿ ಅವರನ್ನು ಸೋಲಿಸಿದನು.

### ಐದನೆಯ ವಿಕ್ರಮಾದಿತ್ಯ:

ಸತ್ಯಾಶ್ರಯನಿಗೆ ಗಂಡುಮಕ್ಕಳಿದ್ದಂತೆ ತೋರುವದಿಲ್ಲ ಕಾರಣ ಅವನ ಸೋದರನ ಮಗ ಐದನೆಯ ವಿಕ್ರಮಾದಿತ್ಯ ಅವನ ನಂತರ ಆಳ್ವಿಕೆಗೆ ಬಂದನು. ಇವನು ದುರ್ಬಲನಾಗಿದ್ದನು. ಇದನ್ನು ಸದುಪಯೋಗ ಪಡಿಸಿಕೊಂಡು ಚೋಳರು ಮತ್ತು ಪರಮಾರರು ಕಲ್ಯಾಣ ಚಾಲುಕ್ಯರ ರಾಜ್ಯದ ಮೇಲೆ ಧಾಳಿಯಿಟ್ಟರು. ಇವನ ನಂತರ ಕ್ರಿ.ಶ.೧೦೧೫ ರಲ್ಲಿ ಇವನ ಸೋದರ ಅಯ್ಯಣ ಅಧಿಕಾರಕ್ಕೆ ಬಂದನು. ಆದರೆ ಕೆಲದಿನಗಳ ನಂತರ ಅವನನ್ನು ಬದಿಗೊತ್ತಿ ಅವನ ಇನ್ನೊಬ್ಬ ಸೋದರ ಎರಡನೆಯ ಜಯಸಿಂಹ ಸಿಂಹಾಸನವನ್ನೇರಿದನು.

### ಎರಡನೆಯ ಜಯಸಿಂಹ (ಜಗದೇಕಮಲ್ಲ):

ಇವನು ತನ್ನಾಳ್ವಿಕೆಯ ಕಾಲದಲ್ಲಿ ಹಲವು ಕಡೆ ಯುದ್ಧ ಮಾಡಬೇಕಾಗಿ ಬಂದಿತು. ಕ್ರಿ.ಶ.೧೦೧೮ ರ ಸುಮಾರಿಗೆ ಜಯಸಿಂಹನು ಪರಮಾರ ದೊರೆ ಭೋಜ, ಕಲಚೂರಿ ದೊರೆ ಗಾಂಗೇಯದೇವ ಮತ್ತು ಚೋಳರ ರಾಜೇಂದ್ರರ ಆಕ್ರಮಣವನ್ನೆದುರಿಸಬೇಕಾಯ್ತು. ಗೋದಾವರಿ ದಂಡೆಯ ಮೇಲೆ ನಡೆದ ಉಗ್ರ ಕಾಳಗದಲ್ಲಿ ಭೋಜನು ಕೊಂಕಣವನ್ನು ಹಿಡಿದುಕೊಂಡರೆ, ಚಾಲುಕ್ಯ ರಾಜಧಾನಿ ಮಳಖೇಡವನ್ನು ಸುಟ್ಟುಹಾಕಿದನು.

ನಂತರ ಕ್ರಿ.ಶ. ೧೦೨೪ ರ ವೇಳೆಗೆ ಜಯಸಿಂಹನು ತನ್ನ ದಂಡನಾಯಕ ಚಾವನರಸನ ನೆರವಿನೊಂದಿಗೆ ಕೊಂಕಣವನ್ನು ಮರಳಿಗಳಿಸಿದನು. ಇತ್ತ ಚೋಳರ ರಾಜೇಂದ್ರನು ಶಕ್ತಿವರ್ಮನ ಕೊನೆಗಾಲದ ನಂತರ ವೆಂಗಿಯ ರಾಜಕೀಯದಲ್ಲಿ ಸಿಂಹಾಸನಕ್ಕಾಗಿ ಇದ್ದ ಇಬ್ಬರು ಉತ್ತರಾಧಿಕಾರಿಗಳಲ್ಲಿ ಒಬ್ಬನಿಗೆ ಬೆಂಬಲಿಸಿ ನಿಂತನು. ಆಗ

ಜಯಸಿಂಹನು ಅವನನ್ನು ಸೋಲಿಸಿ ಹೊರಗಟ್ಟಿ ವೆಂಗಿಯ ಮನೆತನದ ಸಿಂಹಾಸನದ ಮೇಲೆ ವಿಜಯಾದಿತ್ಯನನ್ನು ಕುಳ್ಳಿರಿಸಿದನು. ಮತ್ತೊಮ್ಮೆ ಕ್ರಿ.ಶ.೧೦೩೧ ರಲ್ಲಿ ಜಯಸಿಂಹನು ಚೋಳರೊಂದಿಗೆ ಕಾದಾಟಕ್ಕಿಳಿಯಬೇಕಾಯ್ತು, ಈ ಸಾರಿ ಜಯ ಇವನದಾಗಿತ್ತು. ನಂತರ ಶಾಂತಿಯುತವಾಗಿ ಇವನ ಆಳ್ವಿಕೆ ಕೊನೆಗೊಂಡಿತು.

**ಒಂದನೆಯ ಸೋಮೇಶ್ವರ:**

ಜಯಸಿಂಹನ ನಂತರ ಉತ್ತರಾಧಿಕಾರಿಯಾಗಿ ಅವನ ಮಗ ಪಟ್ಟಕ್ಕೆ ಬಂದನು. ಕೂಡಲೇ ಸೋಮೇಶ್ವರನು ಅಮರಾವತಿಯಲ್ಲಿದ್ದ ಚೋಳರ ಸೈನ್ಯಕ್ಕೆದುರಾಗಿ ಯುದ್ಧ ಪ್ರಾರಂಭಿಸಿದನು. ಆದರೆ ಸೋಮೇಶ್ವರನು ಈ ಯುದ್ಧದಲ್ಲಿ ಸೋತನು. ನಂತರ ಮುಂದೆ ಚಾಲುಕ್ಯ-ಚೋಳ ಸೈನ್ಯಗಳು ಕೃಷ್ಣಾನದಿ ತೀರದ ಪುಂಡೂರಿನಲ್ಲಿ ಎದುರಾದವು. ಆದರೆ ಆಧಾರಗಳಿಲ್ಲದ ಕಾರಣ ಯುದ್ಧ ನಿರ್ಣಾಯಕವಾಗಿಲ್ಲವೆಂದು ಇತಿಹಾಸಕಾರರ ಅಭಿಪ್ರಾಯವಾಗಿದೆ. ಕ್ರಿ.ಶ.೧೦೫೪ ರಲ್ಲಿ ಮತ್ತೊಮ್ಮೆ ಚಾಲುಕ್ಯ-ಚೋಳರ ಕಾದಾಟ ಕೊಪ್ಪಂ ಎಂಬಲ್ಲಿ ನಡೆಯಿತು. ರಾಜಾಧಿರಾಜನು ಇದರಲ್ಲಿ ಮರಣಹೊಂದಿದನು. ರಾಜೇಂದ್ರನು ಆಗ ಸೈನ್ಯಮುಂದೆ ನಡೆಸಿ ಬಳ್ಳಾರಿ ಜಿಲ್ಲೆಯ ಕಾಮೆಟ್ಟಿದುರ್ಗಕ್ಕೆ ಮುತ್ತಿದನು. ಸೋಮೇಶ್ವರನು ಅವನನ್ನು ಬೆನ್ನಟ್ಟಿಕೊಂಡು ಚಾಲುಕ್ಯರಾಜ್ಯದ ಗಡಿಯನ್ನು ದಾಟಿಸಿದನು. ಕ್ರಿ.ಶ.೧೦೫೯ ರಲ್ಲಿ ಚೋಳರು-ಚಾಲುಕ್ಯರು ಧಾರವಾಡ ಜಿಲ್ಲೆಯ ಔಲಿಹಳ್ಳಿಯಲ್ಲಿ ಕಾದಾಡಿದಾಗ ಚೋಳರಿಗೆ ಸೋಲಾಯಿತು. ಕೊನೆಯದಾಗಿ ಕ್ರಿ.ಶ. ೧೦೬೪ ರಲ್ಲಿ ವೀರರಾಜೇಂದ್ರನು ಚಾಲುಕ್ಯರ ಮೇಲೆ ದಂಡೆತ್ತಿ ಬಂದಾಗ ಕೂಡಲ ಸಂಗಮದಲ್ಲಿ ಕಾದಾಡಿದರು ಆಗಲೂ ಕೂಡ ಕಾಳಗ ನಿರ್ಣಾಯಕವಾಗಲಿಲ್ಲ.

ಕೆಲಕಾಲ ವೆಂಗಿಯನ್ನು ನಿಯಂತ್ರಣದಲ್ಲಿಟ್ಟುಕೊಂಡಿದ್ದ ಸೋಮೇಶ್ವರನು ಪರಮಾರರೊಂದಿಗೆ ಯಶಸ್ವೀಯಾಗಿ ಕಾದಾಡಿದನು. ಕಲಚೂರಿ ಕರ್ಣ, ಚಂದ್ರಕೋಟೆಯ ಧಾರಾವರ್ಷ ಮತ್ತು ಇತರ ಸಣ್ಣಪುಟ್ಟ ಅರಸರುಗಳನ್ನು ಸದೆಬಡಿದನಲ್ಲದೇ ಅನೇಕ ಬಂಡೆದ್ದಂತಹ ಸಾಮಂತರುಗಳನ್ನು ಹತೋಟಿಯಲ್ಲಿಟ್ಟಿದ್ದನು.

**ಎರಡನೆಯ ಸೋಮೇಶ್ವರ:**

ಸಿಂಹಾಸನಕ್ಕೆ ಬಂದೊಡನೆಯೇ ಚೋಳರೊಡನೆ ಕಾದಾಡಲು ಸೈನ್ಯವನ್ನು ಕಳಿಸಿದನು. ಚೋಳರು ತಾವು ಆಕ್ರಮಿಸಿಕೊಂಡಿದ್ದ ಗುತ್ತಿಯಿಂದ ಪಲಾಯನರಾಗುವಂತೆ ಮಾಡಿದನು. ತನ್ನ ರಾಜ್ಯದ ದಕ್ಷಿಣದ ಗಡಿಯನ್ನು ಭದ್ರಗೊಳಿಸಿಕೊಂಡನು. ಕ್ರಿ.ಶ.೧೦೭೬ ರ ವೇಳೆಗೆ ಸೋಮೇಶ್ವರನು ಸಹೋದರ ವಿಕ್ರಮಾದಿತ್ಯನೊಂದಿಗೆ ಅಂತಿಮ ಹೋರಾಟ ಪ್ರಾರಂಭಿಸಿ ಪೂರ್ವ ಚಾಲುಕ್ಯ ರಾಜನೊಂದಿಗೆ ಕೂಡಿಕೊಂಡು ಮುನ್ನೆಡೆದನು. ಆದರೆ ಯುದ್ಧ ನಿರ್ಣಾಯಕವಾಗಿ ಪೂರ್ವ ಚಾಲುಕ್ಯ ರಾಜ ಓಡಿಹೋದರೆ, ಸೋಮೇಶ್ವರನು ಸೆರೆಯಾದನು.

**ಆರನೆಯ ವಿಕ್ರಮಾದಿತ್ಯ:**

ಇವನ ಪಟ್ಟಾಭಿಷೇಕದ ಸಮಯದಲ್ಲಿ ಚೋಳರ ಕುಲೋತ್ತುಂಗನು ಸಿಲೋನಿನ ವಿಜಯಬಾಹುವಿನೊಂದಿಗೆ ಯುದ್ಧದಲ್ಲಿ ತೊಡಗಿದ್ದನು. ಸಮಯದ ಸದವಕಾಶವನ್ನು ಉಪಯೋಗಿಸಿಕೊಂಡ ವಿಕ್ರಮಾದಿತ್ಯನು ಸಿಲೋನಿನ ರಾಜನನ್ನು ಮಿತ್ರನನ್ನಾಗಿ ಪರಿಗಣಿಸಿದನು. ಇದರಿಂದ ಎರಡು ಪಕ್ಷಗಳು ಅನೇಕ ಕಾಲದವರೆಗೆ ಶಾಂತಿಯಿಂದ ಉಳಿದರು. ಪರಮಾರ ಉದಯಾದಿತ್ಯನ ಮೇಲೆ ೩ ಸಾರಿ ದಂಡಯಾತ್ರೆ ಮಾಡಿ ಸೋಲಿಸಿದನು. ಧಾರಾನಗರವು ಸುಟ್ಟು ಬೂದಿಯಾಯ್ತು. ಗೊಗ್ಗಿ ಮತ್ತು ಪೈವೆಯ ನಾಗವರ್ಮ ಮೊದಲಾದ ಸಾಮಂತರುಗಳ ದಂಗೆಯನ್ನು ಅಡಗಿಸಿದನು. ಶಿಲಹಾರ ಒಂದನೆಯ ಭೋಜ, ಗೂರ್ಜರ ಸಿಂಧುರಾಜ, ಇಲಿಪುರಿಯ ರಾಜರೂ ಮತ್ತು ಕಲಚೂರಿ ರಾಜರುಗಳೂ ವಿಕ್ರಮಾದಿತ್ಯನಿಂದ ಸೋಲನ್ನನುಭವಿಸಿದರು.

ಆಳಿಕೆಯ ಕೊನೆಗಾಲದಲ್ಲಿ ಹೊಯ್ಸಳರ ವಿಷ್ಣುವರ್ಧನನು ಸ್ವತಂತ್ರನಾಗಲು ಹವಣಿಸಿ ಇವನ ವಿರುದ್ಧ ದಂಗೆಯೆದ್ದನು. ಆಗ ವಿಕ್ರಮಾದಿತ್ಯನು ಅವನನ್ನು ಸದೆಬಡೆಯಲು ಸೈನ್ಯವನ್ನು ಕಳಿಸಿದನು. ಆದರೆ ವಿಷ್ಣುವರ್ಧನನ ಸೇನಾಪತಿ ಗಂಗರಾಜನಿಂದ ಆ ಸೇನೆ ಸೋತು ಮರಳಿತು. ನಂತರ ಹಲಸೂರು ಮತ್ತು ಹೊಸವೀಡುಗಳಲ್ಲಿ ನಡೆದ ಘರ್ಷಣೆಯ ಫಲವಾಗಿ ಹೊಯ್ಸಳ ಸೇನೆ ಸೋತು. ವಿಷ್ಣುವರ್ಧನ ಚಾಲುಕ್ಯರ ಅಧೀನತೆಯನ್ನು ಒಪ್ಪಿಕೊಳ್ಳಬೇಕಾಯ್ತು.

**ಮೂರನೆಯ ಸೋಮೇಶ್ವರ:**

ಕ್ರಿ.ಶ. ೧೧೨೭ ರಲ್ಲಿ ತಂದೆಯ ಸ್ಥಾನಕ್ಕೆ ಪಟ್ಟಕ್ಕೆ ಬಂದ ಈತನು ವೆಂಗಿಯ ಮೇಲೆ ಯುದ್ಧವನ್ನು ಕೈಕೊಂಡನಾದರೂ ಅದು ಯಾವ ಫಲವನ್ನು ನೀಡಲಿಲ್ಲ. ನಂತರ ಉಚ್ಚಂಗಿಯ ಪಾಂಡ್ಯರು, ಹಾನಗಲ್ ಕದಂಬರು, ಹೊಯ್ಸಳರ ವಿಷ್ಣುವರ್ಧನನ ಮೇಲೇರಿ ಹೋದನು. ಅವರು ಈ ಕಾಲಕ್ಕೆ ಶಾಂತವಾಗಿದ್ದರಿಂದ ಇವನಾಳ್ವಿಕೆ ಶಾಂತಿಯಿಂದ ನಡೆಯಿತು.

**ಎರಡನೆಯ ಜಗದೇಕಮಲ್ಲ:**

ಸೋಮೇಶ್ವರನ ಮಗನಾದ ಈತನು ಪಟ್ಟಕ್ಕೆ ಬಂದಾಗ ಮುದಿವಯಸ್ಸಿನವನಾಗಿದ್ದನು. ಸಾಮಂತರೆಲ್ಲಾ ದಂಗೆಯೆದ್ದಿದ್ದರು. ಕಾಕತೀಯ ವಂಶದ ಎರಡನೆಯ ಪ್ರೋಲನು ಬಲವರ್ಧಿಸಿಕೊಂಡು ಅನೇಕ ಪ್ರದೇಶಗಳನ್ನು ಹಿಡಿದುಕೊಂಡನು. ಕಲಚೂರಿ ಬಿಜ್ಜಳನು ಶರಣಾಗಲು ಯತ್ನಿಸುತ್ತಿದ್ದನು, ಹೊಯ್ಸಳ ವಿಷ್ಣುವರ್ಧನನು ದಂಗೆಯೆದ್ದು ಬಂಕಾಪುರ, ಹಾನಗಲ್ಲು ಮತ್ತು ಬನವಾಸಿಗಳನ್ನು ಸ್ವತಂತ್ರಗೊಳಿಸಿಕೊಂಡನು.

**ಮೂರನೆಯ ತೈಲಪ :**

ಎರಡನೆಯ ಜಗದೇಕಮಲ್ಲನಿಗೆ ಮಕ್ಕಳಿಲ್ಲದ್ದರಿಂದ ಅವನ ಸೋದರ ತೈಲನು ಕ್ರಿ.ಶ. ೧೧೪೯ ರಲ್ಲಿ ಪಟ್ಟಕ್ಕೆ ಬಂದನು. ಇವನು ಮೊದಲು ಕಲಚೂರಿ ಬಿಜ್ಜಳನ ದಂಗೆಯನ್ನೆದುರಿಸಬೇಕಾಯ್ತು. ಕ್ರಿ.ಶ.೧೧೫೩ ರ ವೇಳೆಗೆ

ಹೊಯ್ಸಳರು, ಬಿಜ್ಜಳರು, ಕಾಕತೀಯರು ಮತ್ತು ಶಿಲಾಹಾರರು ಆದಷ್ಟು ಸ್ವತಂತ್ರರಾಗಿದ್ದರು. ಕೊನೆಗೆ ಕ್ರಿ.ಶ.೧೧೬೨ ರಲ್ಲಿ ಚಾಲುಕ್ಯರ ಮೂರನೆಯ ತೈಲನನ್ನು ಕಲಚೂರಿ ಬಿಜ್ಜಳನು ಸೋಲಿಸಿದನು.

**ನಾಲ್ಕನೆಯ ಸೋಮೇಶ್ವರ:**

ಕ್ರಿ.ಶ.೧೧೬೨ ರಿಂದ ೧೧೮೩ ರ ವರೆಗೆ ಚಾಲುಕ್ಯ-ಕಲಚೂರಿ ರಾಜ್ಯಗಳ ನಡುವೆ ತಿಕ್ಕಾಟವಿದ್ದರೂ ಆಗ ಚಾಲುಕ್ಯರು ನಾಮಮಾತ್ರ ಅರಸರಾಗಿದ್ದರು. ಕೆಲವರ ಬೆಂಬಲದಿಂದ ಕ್ರಿ.ಶ. ೧೧೮೩ ರಲ್ಲಿ ನಾಲ್ಕನೆಯ ಸೋಮೇಶ್ವರನು ಪಟ್ಟಕ್ಕೆ ಬಂದನಾದರೂ ನಾಮಮಾತ್ರ ದೊರೆಯಾಗಿದ್ದನು. ಮುಂದೆ ಹೊಯ್ಸಳರ ಎರಡನೆಯ ಬಲ್ಲಾಳನು ಚಾಲುಕ್ಯರ ಸೇನೆಗಳನ್ನು ಸೋಲಿಸಿ ಅವರ ಆಡಳಿತವನ್ನು ಕೊನೆಗಾಣಿಸಿದನು. ಇವನೊಂದಿಗೆ ಚಾಲುಕ್ಯರ ಆಳ್ವಿಕೆಯು ಕೊನೆಗೊಂಡಿತು. ನಂತರ ಕರ್ನಾಟಕವು ಎರಡು ಭಾಗಗಳಾಗಿ ಸೇವುಣ (ಯಾದವ)ರು ಮತ್ತು ಹೊಯ್ಸಳರ ಪಾಲಾಯ್ತು.

**ಕಲ್ಯಾಣದ ಕಲಚೂರಿಗಳು:**

ಮಧ್ಯಭಾರತದ ಕಲಚೂರಿಗಳ ಅನುವಂಶಿಕರಾದ ಕಲ್ಯಾಣದ ಕಲಚೂರಿಗಳು ಮೊದಲು ಮಹಾಮಂಡಳೇಶ್ವರರಾಗಿ ಆಳ್ವಿಕೆಯನ್ನು ಮಾಡಿ ನಂತರ ಪ್ರವರ್ಧಮಾನಕ್ಕೆ ಬಂದು ತಮ್ಮ ಚಿಕ್ಕದಾದ ರಾಜ್ಯವನ್ನು ಸಾಮ್ರಾಜ್ಯದ ಮಟ್ಟಕ್ಕೆರಿಸಿದವರಾಗಿದ್ದಾರೆ

**ಮೊದಲ ರಾಜರುಗಳು:**

ಕರ್ನಾಟಕಕ್ಕೆ ಆಗಮಿಸಿದ ಕಲಚೂರಿಗಳು ತರಿಕಾಡಿನಲ್ಲಿ ನೆಲೆಸಿದರು. ಅವರ ರಾಜಧಾನಿ ಮಂಗಳವೇಡೆ (ಮಹಾರಾಷ್ಟ್ರದ ಸೋಲಾಪೂರ ಜಿಲ್ಲೆ) ಎಂದು ಶಾಸನಗಳಿಂದ ತಿಳಿದುಬರುತ್ತದೆ[೫೧] ಕರ್ನಾಟಕದಲ್ಲಿ ಅವರ ಇತಿಹಾಸ ಆರಂಭವಾಗುವದು ಉಚ್ಚಿತನಿಂದ (ಕ್ರಿ.ಶ.೯೨೫), ನಂತರ ಅಸಗ (ಕ್ರಿ.ಶ.೯೫೦), ಕನ್ನಮ (ಕ್ರಿ.ಶ.೯೭೫), ಕಿರಿಯಸಗ ಅಥವಾ ಎರಡನೆಯ ಅಸಗ (ಕ್ರಿ.ಶ.೧೦೦೦) ಮತ್ತು ರಾಜ ಅಥವಾ ರಾಜಲ (ಕ್ರಿ.ಶ.೧೦೨೫) ಇವರುಗಳು ಆಳಿದರು. ಸ್ಪಷ್ಟವಾಗಿ ರಾಜಕೀಯ ಚಟುವಟಿಕೆಗಳು ಆರಂಭವಾದದ್ದು ಬಿಜ್ಜ ಅಥವಾ ಒಂದನೆಯ ಬಿಜ್ಜಳನಿಂದ. ಇವನು ಕಲ್ಯಾಣಿ ಚಾಲುಕ್ಯರ ಒಂದನೆಯ ಸೋಮೇಶ್ವರನ ಮಹಾಮಂಡಳೇಶ್ವರನಾಗಿದ್ದನು ಎಂದು ಚಡಚಣ ಗ್ರಾಮದ ಶಾಸನ ಹೇಳುತ್ತದೆ[೫೨] ಇವನ ನಂತರ ಇವನ ಮಗ ಕರ್ಣ್ಣ, ಕೃಷ್ಣ ಅಥವಾ ಕನ್ನರನೆಂಬುವವನು ಮಂಗಳವೇಡದಿಂದ ಆಳ್ವಿಕೆ ನಡೆಸಿದ ವಿವರಗಳು ದೊರೆಯುತ್ತವೆ. ಇವನು ಐವತ್ತು ಕಾಳಗಗಳನ್ನು ಗೆದ್ದವನು, ಹನ್ನೆರಡು ಜನ ನಾಯಕರನ್ನು ಕೊಂದು ಮಂಗಲವೇಡ ಪ್ರದೇಶವನ್ನು ವೈರಿಗಳಿಂದ ಸ್ವತಂತ್ರಗೊಳಿಸಿದನೆಂದು ತನ್ನ ಪ್ರಭುವಾದ ಚಾಲುಕ್ಯ ಸೋಮೇಶ್ವರ ಕೈಕೊಂಡ ವೆಂಗಿ, ಲಾಳ ಮತ್ತು ಚೋಳ ಎಂದರೆ ಆಂಧ್ರ, ದಕ್ಷಿಣ ಗುಜರಾತ ಮತ್ತು ತಮಿಳನಾಡುಗಳಲ್ಲಿ ಕೈಕೊಂಡ ವಿಜಯಯಾತ್ರೆಗಳಲ್ಲಿ ಯಶಸ್ವೀಯಾಗಿ ಭಾಗವಹಿಸಿ ಗಣ್ಯತೆ ಪದವಿಗಳಿಸಿದ್ದನೆಂಬುದು ಚಡಚಣದ ಇನ್ನೊಂದು ಶಾಸನದಿಂದ ವ್ಯಕ್ತವಾಗುತ್ತದೆ[೫೩].



**ಜೋಗಮ:**

ಕಲಚೂರಿಗಳ ಮನೆತನವನ್ನು ಪ್ರಾಮುಖ್ಯತೆಗೆ ತಂದು ಸಾಮಂತರಲ್ಲಿ ಅತ್ಯುಚ್ಚ ಪದವಿಗೇರಿಸಿದ ಕೀರ್ತಿ ಇವನಿಗೆ ಸಲ್ಲುತ್ತದೆ. ಹಿರೇಮುದ್ದನೂರಿನ ಶಾಸನ ಹೇಳುವಂತೆ ಬಿಜ್ಜರಸ ಮತ್ತು ಕನ್ನಮರಸರಿಂದ ನಡೆದು ಬಂದ, ಮಂಗಳವೇಡೆ ಪಟ್ಟಣ ಹಾಗೂ ತರಿಕೆರೆನಾಡಿನ ಮಂಡಲಾಧಿತ್ಯವನ್ನು ಇವನು ವಹಿಸಿ ಮುಂದುವರೆಸಿದನು[೫೪]. ಜೋಗಮನ ಜಯಶಾಲಿತ್ವವನ್ನು ಹರಸೂರು ಶಾಸನ[೫೫].

ಆಕರ್ಣಿತ ವಿಶದಖೀಕೀರ್ತಿ ಜೋಗಮ ರಾಣಂ।
ಭೂಕಾಂತನೆನಿಸಿ ನೆಗಳ್ದ
ನಾವಹ ವಿಜಯನಿಜ ಭುಜಾವಷ್ಟಂಭಂ॥

ಎಂದು ವರ್ಣಿಸಿದರೆ ಮೂಡಗಿಹಾಳ ಶಾಸನದಲ್ಲಿ[೫೬]

ಜಗದೀಶಂ ಚಲದಂಕರಾಮನದಟಂ ವೀರಾರಿಭೂಪಾಪಹಂ
ನೆಗಳ್ದಂ ವಿಶ್ರುತನಾದಿರಾಜ ಬಳವೆತ್ತೀ ಜೋಗಮಂ ಜೋಗಮಂ।

ಎಂದಿದೆ. ಹರಿಹರದ ಶಾಸನದಲ್ಲಿ ಆತನ ಶೌರ್ಯ, ಪ್ರತಾಪಗಳನ್ನು ಬಣ್ಣಿಸಿ ರಾಜನೀತಿ ಕುಶಲತೆಯನ್ನು ಹೀಗೆ ವಿವರಿಸಲಾಗಿದೆ[೫೭]-

ಅಂತರನಂತ ಕಾನನದೊಳಳ್ಗಿಸಿ ಮತ್ತುಳಿದೋಡಿದನ್ಯಭೂ
ಕಾಂತರನನ್ತ ಕಾನನದೊಳಳ್ಗಿರೆ ಶಾಸಿಸಿ ಲೀಲೆಯಿಂ ಪದಾ
ಕ್ರಾಂತರನಾದ್ಯ ವೃತ್ತಿಗೆ ಸಮನ್ತು ನೀಯೋಜಿಸಿ ಧಾತ್ರಿ ಬಣ್ಣಿಪ
ನ್ನಂತರಿಕಾಡ ಜೋಗಮನೃಪಂ ಮೆರೆದಂ ನಿಜರಾಜನೀತಿಯಂ॥

ಈ ರೀತಿಯಾಗಿ ಸಕಲ ಖ್ಯಾತಿವೆತ್ತ ಜೋಗಮನು ಮಂಗಳವೇಡ ಮತ್ತು ತಲಕಾಡು ಪ್ರದೇಶಗಳ ಆಡಳಿತಗಳ ಜೊತೆಗೆ ಅದರ ನೆರೆಯ ವಿಸ್ತಾರವಾದ ಕರಹಡದ ಪ್ರಾಂತದ ಮೇಲೆಯೂ ಆಡಳಿತವನ್ನು ವಿಸ್ತರಿಸಿದ್ದನು. ಅಲ್ಲದೇ ಜೋಗಮನ ಮಗಳನ್ನು ಆರನೆಯ ವಿಕ್ರಮಾದಿತ್ಯನು ಮದುವೆಯಾಗಿ ರಕ್ತ ಸಂಬಂಧವನ್ನು ಬೆಳೆಸಿದ್ದನು[೫೮] ಇವನಿಗೆ ಸಾವಳನೇಮಿ ಮತ್ತು ಪೆರ್ಮಾಡಿ ಎಂಬ ಇಬ್ಬರು ಮಕ್ಕಳಿದ್ದುದು ತಿಳಿಯುತ್ತದೆ.

**ಪೆರ್ಮಾಡಿ:**

ಜೋಗಮನ ನಂತರ ಅವನ ಮಗ ಪೆರ್ಮಾಡಿಯು ರಾಜ್ಯವಾಳತೊಡಗಿದನು. ಬಿಜಾಪೂರ ಜಿಲ್ಲೆಯ ಮುತ್ತಗಿ ಗ್ರಾಮದ ಸಂಗಮೇಶ್ವರ ದೇಗುಲದ ಶಾಸನದ ಪ್ರಕಾರ "ಅನೇಕ ರಾಜರುಗಳು ಈತನ ಚರಣಗಳನ್ನು ಪೂಜಿಸುತ್ತಿದ್ದರು" ಎಂಬುದಾಗಿ ಇವನ ಬಗ್ಗೆ ವರ್ಣಿಸಲಾಗಿದೆ[೫೯]. ಅಲ್ಲದೆ ಇವನು ಮಂಗಳವೇಡೆ ಮಂಡಲರಾಜ್ಯದ ಜೊತೆಗೆ ತರ್ದವಾಡಿ

ನಾಡಿನ ಆಡಳಿತವನ್ನು ನಿರ್ವಹಿಸುತ್ತಿದ್ದ ವಿಷಯವನ್ನು ವಿಜಾಪೂರ ಜಿಲ್ಲೆಯ ಇಂಗಳೇಶ್ವರ ಗ್ರಾಮದ ನಾರಾಯಣಗುಡಿಯ ಶಾಸನ "ಮಹಾಮಂಡಲೇಶ್ವರ ಹೆಮ್ಮಾಡಿಯರಸನು ಸುಖ-ಸಂಕಥಾ ವಿನೋದದಿಂದ ತರ್ದವಾಡಿನಾಡನ್ನು" ಆಳುತ್ತಿದ್ದ ವಿಷಯ ತಿಳಿಸುತ್ತದೆ[೬೦]. ಪೆರ್ಮಾಡಿಗೆ ಬಿಜ್ಜಳ ಮತ್ತು ಮೈಳುಗಿ ಎಂಬ ಎರಡು ಮಕ್ಕಳಿದ್ದರು.

**ಬಿಜ್ಜಳ:**

ಕಲ್ಯಾಣಿ ಚಾಲುಕ್ಯರ ಆಡಳಿತವನ್ನು ಕೆಲಕಾಲ ಬದಿಗೊತ್ತಿ ತನ್ನದೇ ಆದ ಸ್ವತಂತ್ರ ಸಾಮ್ರಾಜ್ಯವನ್ನು ಕಟ್ಟಿದ ಕೀರ್ತಿ, ಅಲ್ಲದೇ ಸಾಮಂತರಾಗಿದ್ದ ತನ್ನ ಮನೆತನಕ್ಕೆ ಚಕ್ರವರ್ತಿಗಳ ಸ್ಥಾನಮಾನವನ್ನು ಕೊಟ್ಟ ಕೀರ್ತಿ ಇವನಿಗೆ ಸಲ್ಲುತ್ತದೆ. ಮುತ್ತಗಿಯ ಸಂಗಮೇಶ್ವರ ದೇಗುಲದ, ಜಗದೇಕಮಲ್ಲನ ಆಳಿಕೆಯ ೧೧ನೆಯ ವರ್ಷದ ಕ್ರಿ.ಶ. ೧೧೪೭ ನೆಯ ವರ್ಷದ ಒಂದು ಶಾಸನದಲ್ಲಿ[೬೧] "ಮಹಾಮಂಡಳೇಶ್ವರಂ ಕುಮಾರ ಬಿಜ್ಜಳದೇವರಸ" ಎಂದು ಈತನನ್ನು ಕರೆಯಲಾಗಿದೆ. ಮೇಲಿನ ಇದೇ ಶಾಸನ ಮುಂದುವರೆದು ಬಿಜ್ಜಳನು ತರ್ದವಾಡಿ ಸಾಸಿರ ನಾಡಿನ ಅಂದರೆ ವಿಜಾಪೂರ ಪ್ರದೇಶದ ಮೇಲಾಧಿಕಾರಿಯಾಗಿದ್ದನೆಂದು ತೋರಿಸುತ್ತದೆ. ಅನಂತರ ಕ್ರಿ.ಶ.೧೧೫೧ ನೆಯ ವರ್ಷದಲ್ಲಿ ಬಿಜ್ಜಳನು ಇದೇ ತರ್ದವಾಡಿ ಸಾಸಿರ ಪ್ರದೇಶವನ್ನು ಆಳುತ್ತಿದ್ದನೆಂದು ಬಿಜಾಪೂರದ ಒಂದು ಶಾಸನದಿಂದ ತಿಳಿಯುತ್ತದೆ[೬೨].

ಕ್ರಿ.ಶ. ೧೧೫೦ ರಿಂದ ಚಾಲುಕ್ಯರ ಸಾಮ್ರಾಜ್ಯವನ್ನು ತೈಲಪನು ಆಳತೊಡಗಿದಾಗ ಚಾಲುಕ್ಯರ ಆಡಳಿದಲ್ಲಿ ಆದ ಬದಲಾವಣೆಯ ಲಾಭ ಪಡೆಯಲು ಬಿಜ್ಜಳನು ತೀರ್ಮಾನಿಸಿರಬೇಕು. ಅದಕ್ಕೆ ಉದಾಹರಣೆಯಾಗಿ ಕ್ರಿ.ಶ.೧೧೫೭ ರ ಜಮಖಂಡಿ ತಾಲೂಕಿನ ಚಿಕ್ಕಲಗಿ ಗ್ರಾಮದ ಶಾಸನದ ಪ್ರಕಾರ[೬೩] ಈ ಕಾಲದಲ್ಲಿ ಚಾಲುಕ್ಯ ತೈಲಪನು ಆಳ್ವಿಕೆಯನ್ನು ಮಾಡುತ್ತಿದ್ದರೂ ಶಾಸನವು "ಸಮಸ್ತ ಪ್ರಶಸ್ತಿ ಸಹಿತನಾದ ಮಹಾಭುಜಬಳ ಚಕ್ರವರ್ತಿ, ಬಿಜ್ಜಣದೇವರಸರು ಮತ್ತು ಮೈಳವಿದೇವಕುಮಾರರು ಸುಖಸಂಖತಾ ವಿನೋದದಿಂದ ರಾಜ್ಯಂಗೆಯ್ಯುತ್ತಿದ್ದರು" ಎಂದು ನಿವೇದಿಸುತ್ತದೆ. ಅದೇ ಶಾಸನದಲ್ಲಿ "ರಾಯಸಮುದ್ಧರಣ" ಎಂಬ ಬಿರುದಿನಿಂದ ತೈಲಪನಿಗೆ ಬಿಜ್ಜಳನು ಯಾವುದೇ ಒಂದು ರೀತಿಯಿಂದ ವಿಪತ್ತಿನಲ್ಲಿ ಸಹಾಯ ನೀಡಿರಬಹುದೆಂದು ಊಹಿಸಲು ಅವಕಾಶವಿದೆ. ಕ್ರಿ.ಶ.೧೧೫೬ ರಿಂದ ೧೧೬೨ ರ ವರೆಗಿನ ವರ್ಷಗಳಲ್ಲಿ ಬಿಜ್ಜಳನು ಚಾಲುಕ್ಯರ ಸಾಮ್ರಾಜ್ಯವನ್ನು ಆಕ್ರಮಿಸುತ್ತಾ, ಕ್ರಿ.ಶ. ೧೧೬೨-೬೩ ರಲ್ಲಿ ಸಂಪೂರ್ಣವಾಗಿ ಅಪಹರಿಸಿದ ವಿಷಯವನ್ನು ಗೋವಿಂದ ಪೈ ಮತ್ತು ಫ್ಲೀಟರು ಉಲ್ಲೇಖಿಸಿದ್ದಾರೆ[೬೪].

ಆತನ ಈ ರಾಜ್ಯಾಪಹರಣದ ವಿಷಯವನ್ನು ಒಂದು ಶಾಸನವು ಹೀಗೆ ವಿವರಿಸಿದೆ-[೬೫]

ಪುಸಿಯಲ್ತು ವೀರಭೋಜ್ಯಾ
ವಸುಂಧರಾ ಯೆಂಬ ವಾಕ್ಯವನೆ ಧರೆಯಂ ಸಾ
ಧಿಸಿದಂ ತೆಂಕಬ್ದಿಯೆ ಬಡ
ಗ ಸೀಮೆ ಚಾಳುಕ್ಯಕಟಕವೆನೆ ಬಿಜ್ಜನೃಪಂ॥

ಬಿಜ್ಜಳನು ಈ ಕಾರ್ಯವನ್ನು ಯಾವ ವಿಧದಿಂದ ಸಾಧಿಸಿದನೆಂದು ಕ್ರಿ.ಶ. ೧೧೬೨ ನೆಯ ಒಂದು ಶಾಸನವು[೬೬] ಹೀಗೆ ವಿವರಿಸಿದೆ- ಆತನು ಮೊದಲು ಚಿಕ್ಕ ಚಿಕ್ಕ ಸಾಮಂತರುಗಳನ್ನು ಸದೆಬಡಿದನು; ಅನಂತರ ಮಂಡಲಾಧಿಕಾರಿಗಳನ್ನು ಹತ್ತಿಕ್ಕಿದನು; ಬಳಿಕ ಅಧಿರಾಜರುಗಳ ಬೇರನ್ನು ಕತ್ತರಿಸಿದನು ಇಂತು ಚಕ್ರಾಧಿಪತಿಯಾದನು. ಇದಕ್ಕೆ ಕಾರಣ 'ನೊಸಲೊಳ್ ಸಾಮ್ರಾಜ್ಯಪಟ್ಟಂ' ಆತನ ಹಣೆಯಲ್ಲಿ ಸಾಮ್ರಾಜ್ಯ ಪಟ್ಟವು ಬರೆಯಲ್ಪಟ್ಟಿತ್ತು ಎಂದಿದೆ.

ಗುಲಬರ್ಗಾ ಜಿಲ್ಲೆಯ ಹರಸೂರು ಶಾಸನದಲ್ಲಿ ಬಿಜ್ಜಳನ ರಾಜ್ಯ ಸಂಪಾದನೆಯನ್ನು ಹೀಗೆ ವಿವರಿಸುತ್ತದೆ.

ಆ ಪೆರ್ಮಾಡಿ ನೃಪಾಳಂ
ಗಾಪಾದ್ಧಿ ಸಕಳ ಕುಂತಳೋರ್ವೀರಾಜ್ಯಂ
ವ್ಯಾಪಾದಿತ ಚಾಳುಕ್ಯಮ
ಹೀಪಾಳ ಕನಿಕರನಾದನಾ ಬಿಜ್ಜನೃಪಂ॥

ಇದರಲ್ಲಿ ಬಿಜ್ಜಳನು ಚಾಲುಕ್ಯ ಮನೆತನದ ಅನೇಕ ರಾಜಪುತ್ರರನ್ನು ಕೊಲೆ ಮಾಡಿದನು ಎಂದು ಸ್ಪಷ್ಟವಾಗಿ ಹೇಳಿದೆ. ಇವನ ಕೈಯಲ್ಲಿ ಸ್ವತಃ ಮುಮ್ಮಡಿ ತೈಲಪನೂ ಆತನ ಅನುಯಾಯಿಗಳೂ ಆಹುತಿಯಾಗಿರಬೇಕು. ಜೊತೆಗೆ ಚಾಲುಕ್ಯರ ಸಾಮಂತನಾದ ಗಂಡರಾದಿತ್ಯ, ಹಾನಗಲ್ಲಿನ ಕದಂಬರು ಮೊದಲಾದವರನ್ನು ಸೋಲಿಸಿ ತನ್ನ ಅಧೀನ ಮಾಡಿಕೊಂಡನು. ಚಾಲುಕ್ಯರ ಸಿಂಹಾಸನವನ್ನು ವಶಪಡಿಸಿಕೊಳ್ಳಲು ಅವನು ಅನೇಕ ಜನ ಚಾಲುಕ್ಯ ಸಾಮಂತರ ಸಹಾಯವನ್ನು ಪಡೆದನು. ಜೊತೆಗೆ ಕಾಕತೀಯರೊಂದಿಗೆ ಅವನು ಒಳಸಂಚನ್ನು ಕೂಡ ಮಾಡಿದನು[೬೭]. ಬಿಜ್ಜಳನು ಚಾಲುಕ್ಯರ ಸಮಸ್ತ ಸಾಮ್ರಾಜ್ಯವನ್ನು ವಶಪಡಿಸಿಕೊಂಡುದುದಾಗಿ ಹೇಳಿದರೂ ಸಾಮ್ರಾಜ್ಯದ ದಕ್ಷಿಣ ಭಾಗವು ಮಾತ್ರ ಅವನ ಹಿಡಿತದಿಂದ ಹೊರಗಿತ್ತು.

ಚಾಲುಕ್ಯ ಸಿಂಹಾಸನವನ್ನು ಆಕ್ರಮಿಸಿದ ನಂತರ ಬಿಜ್ಜಳನು ೫-೬ ವರ್ಷಗಳ ವರೆಗೆ ಆಳ್ವಿಕೆ ಮಾಡಿದನು. ಆದರೆ ಅದು ಕ್ಷಣಿಕವಾದುದಾಗಿತ್ತು. ಬೇಗನೇ ಅದು ಮುರಿದು ಬೀಳುವಂತಾಯ್ತು. ಬಿಜ್ಜಳನ ಆಳ್ವಿಕೆಯ ಮೊದಲ ಕಾಲದಲ್ಲಿ ಅಂದರೆ ಅವನು ಮಹಾಮಂಡಳೇಶ್ವರನಾಗಿರುವ ಕಾಲದಲ್ಲಿ ಆತನ ಸ್ಥಿರ ರಾಜಧಾನಿ ಮಂಗಳವಾಡವಾಗಿತ್ತೆಂದು ವ್ಹಾಸವಡ ಶಾಸನದಿಂದಲೂ[೬೮] ಬಸವರಾಜದೇವರ ರಗಳೆ[೬೯]ಯಿಂದಲೂ ಇನ್ನೂ ಅನೇಕ ಅವನ ಶಾಸನಗಳಿಂದಲೂ ತಿಳಿದುಬರುತ್ತದೆ. ಅನಂತರದ ಕಾಲದಲ್ಲಿ ಅವನು ಕಲ್ಯಾಣವನ್ನು ರಾಜಧಾನಿಯನ್ನಾಗಿ ಹೊಂದಿದ್ದ ವಿಷಯ ತಿಳಿಯುತ್ತದೆ. ಕ್ರಿ.ಶ.೧೧೬೭ರ ಶಿಖಾರಿಪುರದ ಶಾಸನದಲ್ಲಿ ಬಿಜ್ಜಳನು ಕಲಚೂರಿ ರಾಜ್ಯವನ್ನು ರಾಯಮುರಾರಿ ಸೋವಿದೇವನ ಕೈಯಲ್ಲಿ ಒಪ್ಪಿಸಿ ನಿವೃತ್ತನಾದ ವಿಷಯ ತಿಳಿಯುತ್ತದೆ[೭೦].

**ರಾಯಮುರಾರಿ ಸೋವಿದೇವ:**

ತಂದೆಯ ತರುವಾಯ ರಾಜ್ಯಭಾರ ನಿರ್ವಹಿಸತೊಡಗಿದ ಇವನಿಗೆ ಕಂಟಕಗಳೇ ತುಂಬಿದ್ದವು. ಇವನ ಆಳ್ವಿಕೆಯಲ್ಲಿ ಸಾಮ್ರಾಜ್ಯದಲ್ಲಿ ಗೊಂದಲವೂ ಅನಾಯಕ ಸ್ಥಿತಿಯೂ ಉಂಟಾಯಿತು. ಮೈಲುಗಿ ಮತ್ತು ಕರ್ಣರು ತಮ್ಮ ದೇ

ವಿಧಾನದಿಂದ ಅಧಿಕಾರವನ್ನು ಸೋವಿದೇವನಿಂದ ಕಿತ್ತುಕೊಳ್ಳಲು ಹವಣಿಸಿದರು. ಈ ಇಬ್ಬರೂ ಸ್ವತಂತ್ರವಾದ ಆಳ್ವಿಕೆಯನ್ನು ದೇಶದ ಬೇರೆ ಬೇರೆ ಸ್ಥಳಗಳಲ್ಲಿ ಆಳುತ್ತಿದ್ದಂತೆ ಕಂಡುಬರುತ್ತದೆ. ಸೋವಿದೇವನ ತಮ್ಮ ಮೈಳುಗಿ (ಮಲ್ಲಿಕಾರ್ಜುನ)ಯು ತನ್ನ ಸ್ವತಂತ್ರ ಆಡಳಿತವನ್ನು ಘೋಷಿಸಿಕೊಂಡನು. ಆದರೆ ಸೋವಿದೇವನು ತನ್ನ ವಿಶ್ವಾಸಾರ್ಹ ಸೇನಾಪತಿಗಳಾದ ಮಾಧವ, ಕೇಶಿಮಯ್ಯದಂಡನಾಯಕ, ಮಹೇಶ್ವರ ಮೊದಲಾದವರ ಬೆಂಬಲದಿಂದ ಇವರನ್ನು ಸದೆಬಡಿದು ರಾಜ್ಯವಾಳತೊಡಗಿದನು. ಕೆಲ ಕಾಲ ಮಾತ್ರ ಆಳಿದ ಇವನ ಆಳ್ವಿಕೆಯು ಗೊಂದಲದಲ್ಲಿಯೇ ಪ್ರಾರಂಭವಾಗಿ ಅದರಲ್ಲಿಯೇ ಮುಕ್ತಾಯಗೊಂಡಿತು.

**ಮೈಳುಗಿ (ಮಲ್ಲಿಕಾರ್ಜುನ):**

ಶಿಖಾರಿಪುರದ ೧೯೭ ನೆಯ ಶಾಸನ ಸೋವಿದೇವನು ಆಳಿದ ನಂತರ

ಆತನತಮ್ಮ ನೂರ್ಜಿತಗುಣಂ ವಿಭು ಮೈಲುಗಿ ದೇವನಾಳ್ದಿದಂ
ಭೂತಳಮಂ ಬಳಿಕ್ಕಾಮವನಿಂ ಕಿರಿಯಾತನೆನಿಪ್ಪನಾದೊಡಂ॥

ಎಂದು ಹೇಳಿ ಮುಂದೆ ಸಂಕಮನಾಳಿದ ಎಂದು ಹೇಳಿದೆ.[೭೧]

ದಾವಣಗೆರೆಯ ೪೪ ನೆಯ ಶಾಸನ ಸೋವಿದೇವನ ರಾಜ್ಯಕ್ರಮವನ್ನು ವರ್ಣಿಸಿಯಾದ ನಂತರ

ಕದನ ಕ್ರೀಡಾ ಲಂಪಟ
ನುದಾತ್ತ ವಿಭವಾಮರೇಂದ್ರನುದ್ ವೃತ್ತಭುಜಂ
ಸದಮಳಗುಣನೀ ಧರೆಯೊಳು
ತದನುಜನೆನೆ ನೆಗಳ್ದನೆಸೆಯೆ ಮಲ್ಲುಗಿದೇವಂ॥

ಎಂಬುದಾಗಿ ಮಲ್ಲುಗಿಯನ್ನು ಪ್ರಶಂಸಿಸಿ ಆನಂತರ ಸಂಕಮನ ಆಳ್ವಿಕೆಯನ್ನು ವಿವರಿಸಿದೆ[೭೨]. ಅಲ್ಲದೇ ಸೋಲಾಪೂರ ಜಿಲ್ಲೆಯ ಮಾರ್ಡಿ ಎಂಬ ಗ್ರಾಮದ ಸಂಸ್ಕೃತ ಶಾಸನದಲ್ಲಿಯೂ ಇದೆ ತೆರನಾದ ವರ್ಣನೆ ಇಂತಿದೆ[೭೩]

ತತ ಆಕ್ರಂತ ದಿಕ್‌ಚಕ್ರಃ ಚಕ್ರವರ್ತಿ ಸ ಮಲ್ಲುಗಿಃ।
ಸಮಾಚಕ್ರಮ ಸರ್ವೋರ್ವೀಂ ಪ್ರವಿದಗ್ಧಾ ಮಣಾವಿವ॥

ಅಂದರೆ ಅತ್ಯಲ್ಪ ಕಾಲದಲ್ಲಿ ಅಖಿಲ ರಾಜ್ಯವನ್ನು ಆಕ್ರಮಿಸಿ ಚಕ್ರವರ್ತಿಯಾದನು ಎಂಬುದಾಗಿ ಈ ಶ್ಲೋಕದಲ್ಲಿ ಸ್ತುತಿಯಿದೆ.

ವಿಜಾಪೂರದ ಮ್ಯೂಸಿಯಂನಲ್ಲಿರುವ ಒಂದು ಶಾಸನ[೪೪]

ಕಳಚೂರ್ಯ ಪ್ರತಾಪ ಚಕ್ರವರ್ತಿ ಮಲ್ಲಿಕಾರ್ಜುನ ದೇವರ ವಿಜಯರಾಜ್ಯಂ
. . . . . . . . . . . ಸಲ್ಲುತ್ತಮಿರೆ। ಮಾಸನೂರ ನೆಲೆವೀಡಿನೊಳ್ ಸುಖ ಸಂಕಥಾ
ವಿನೋದದಿಂ ರಾಜ್ಯಂಗೆಯ್ಯುತ್ತಮಿರೆ।

ಎಂದು ಹೇಳಿದ್ದನ್ನು ನೋಡಿದರೆ ಅವನು ಮಾಸನೂರು ಗ್ರಾಮವನ್ನು ತನ್ನ ರಾಜಧಾನಿಯನ್ನಾಗಿ ಹೊಂದಿದ್ದನೆಂಬುದು ಸ್ಪಷ್ಟವಾಗುತ್ತದೆ.

**ಸಂಕಮದೇವ:**

ಇವನು ಕೂಡ ಸೋವಿದೇವನ ಸಮಕಾಲದಲ್ಲಿಯೇ ರಾಜ್ಯಭಾರ ಮಾಡಿದನು. ಇವನಿಗೆ ಲಕ್ಷ್ಮೀದೇವ, ಬಾಹತ್ತರ ನಿಯೋಗಾಧಿಸ್ಥಾಯಕ ಚಂಡುಗಿದೇವ, ಬಾಚನಾಯಕ ದಂಡನಾಯಕ, ಸರ್ವಾಧಿಕಾರಿ ಸೋವಣ್ಣಯ್ಯ ದಂಡನಾಯಕ ಮೊದಲಾದ ದಳಪತಿಗಳ ನೆರವಿತ್ತು[೪೫]. ಇವನ ಕಾಲದಲ್ಲಿ ಹೊಯ್ಸಳರ ಸಾಮ್ರಾಜ್ಯ ವಿಸ್ತಾರಗೊಂಡಿತು ಮತ್ತು ನಾಲ್ಕನೆಯ ಸೋಮೇಶ್ವರನ ನೇತೃತ್ವದಲ್ಲಿ ಕಲ್ಯಾಣಿ ಚಾಲುಕ್ಯರ ಸಾಮ್ರಾಜ್ಯ ಪುನರುಜ್ಜೀವನಗೊಂಡಿತು. ಆಗ ನಡೆದ ಕಾಳಗದಲ್ಲಿ ಕಲಚೂರಿ ಸಂಕಮನನ್ನು ನಾಲ್ಕನೆಯ ಸೋಮೇಶ್ವರನ ಸೇನಾಧಿಕಾರಿ ನರಸಿಂಹನೆಂಬುವನು ಕೊಂದನು ಎಂದು ಕ್ರಿ.ಶ. ೧೧೮೪ ರ ಶಾಸನದಿಂದ ತಿಳಿಯುತ್ತದೆ.

**ಅಹಾವಮಲ್ಲ:**

ಈ ಕಾಲಕ್ಕೆ ಕಲಚೂರಿಗಳ ಪ್ರಭಾವ ದಿನದಿಂದ ದಿನಕ್ಕೆ ಕುಗ್ಗತೊಡಗಿತ್ತು. ಚಾಲುಕ್ಯ ಪಕ್ಷದವರ ಬೆಂಬಲ ಮತ್ತು ಸಂಘಟನೆಯಿಂದಾಗಿ ಸಾಮ್ರಾಜ್ಯಕ್ಕೆ ಧಕ್ಕೆ ಬರತೊಡಗಿತು. ಇವನ ಆಳ್ವಿಕೆಯ ಕಾಲದಲ್ಲಿ ಚಾಲುಕ್ಯ ಪಕ್ಷವು ಅದರ ಸಾಮಂತರು ಕಲಚೂರಿಗಳ ಮೇಲೆ ಹೋರಾಟ ಪ್ರಾರಂಭಿಸಿ ಜಯಶೀಲರಾಗುತ್ತ ನಡೆದರು.

**ಸಿಂಘಣದೇವ :**

ಸಿಂಘಣನು ಕಲಚೂರಿ ರಾಜ್ಯವನ್ನು ಸ್ವತಂತ್ರವಾಗಿ ಆಳಿದ ಕೊನೆಯ ರಾಜನಾಗಿದ್ದಾನೆ. ಇಪ್ಪತ್ತು ವರ್ಷಗಳ ಕಾಲ ಸ್ವತಂತ್ರ ಸಾಮ್ರಾಜ್ಯವಾಗಿದ್ದ ಕಲಚೂರಿ ಸಾಮ್ರಾಜ್ಯ ಇವನ ಕಾಲಕ್ಕೆ ಕೈ ಬಿಟ್ಟು ಹೋಯಿತು. ಮೂರನೇ ತೈಲಪನ ಮಗ ನಾಲ್ಕನೆಯ ಸೋಮೇಶ್ವರನು ಮತ್ತೆ ಚಾಲುಕ್ಯ ಸಾಮ್ರಾಜ್ಯವನ್ನು ಪ್ರತಿಷ್ಠೆಗೆ ತಂದು ರಾಜ್ಯಭಾರ ಮಾಡತೊಡಗಿದನು.

ವಿಜಾಪೂರ ಜಿಲ್ಲೆಯ ಮುದ್ದೇಬಿಹಾಳ ತಾಲೂಕಿನ ಮಿಣಜಗಿ ಗ್ರಾಮದ ಕ್ರಿ.ಶ.೧೧೮೪ ರ ಶಾಸನದಲ್ಲಿ[೪೬] ಚಾಲುಕ್ಯ ನಾಲ್ಕನೆಯ ಸೋಮೇಶ್ವರನ ಆಳ್ವಿಕೆಯನ್ನು ನಿರೂಪಿಸಿ ಆತನ ಅಂಕಿತನಾದ ಕಲಚೂರ್ಯ ಸಿಂಹ ಭೂಪಾಲನ

ಪ್ರಸ್ತಾಪಬರುತ್ತದೆ. ಆತನೇ ಸಿಂಘಣನಾಗಿದ್ದು, ಅವನು ಪುನಃ ಚಾಲುಕ್ಯ ಪ್ರಭುತ್ವವನ್ನು ಅಂಗೀಕರಿಸಿ ಅವನ ಸಾಮಂತನಾಗಿ ಆಳಿರಬಹುದೆಂದು ತೋರುತ್ತದೆ.

ಇದಲ್ಲದೆ ಮುಂದೆ ವೀರಬಲ್ಲಾಳನು ಕ್ರಿ.ಶ.೧೧೮೪-೯೪ ರ ವರೆಗೆ ಚಾಲುಕ್ಯರಿಗೆ ಅಧೀನನಾಗಿ ಆಳ್ವಿಕೆಮಾಡಿದನು. ಇಲ್ಲಿಗೆ ಕರ್ನಾಟಕ ಚರಿತ್ರೆಯಲ್ಲಿ ಕಲಚೂರಿಗಳ ವಂಶದ ಚರಿತ್ರೆ ಮುಗಿದಂತಾಗುತ್ತದೆ.

## ಹೊಯ್ಸಳರು:

ಇವರು ಕ್ರಿ.ಶ. ೧೧ ನೆಯ ಶತಮಾನದ ಹೊತ್ತಿಗೆ ಕಲ್ಯಾಣಿ ಚಾಲುಕ್ಯರ ಸಾಮಂತರಾಗಿ ತಮ್ಮ ಆಳ್ವಿಕೆಯನ್ನು ಆರಂಭಿಸಿದರು. ನಂತರ ಅವರನ್ನು ಹಿಂದಕ್ಕಟ್ಟಿ ತಮ್ಮ ಸ್ವಾತಂತ್ರ್ಯತೆ ಘೋಷಿಸಿಕೊಂಡರು.

### ಸಳ :

ಈ ಸಾಮ್ರಾಜ್ಯದ ಸ್ಥಾಪಕ ಸಳನಾಗಿದ್ದು ಇವನಿಂದಲೇ ಈ ಮನೆತನಕ್ಕೆ ಹೊಯ್ಸಳನೆಂಬ ಹೆಸರು ಬಂದಿತೆಂದು ಶಾಸನಗಳು ತಿಳಿಸುತ್ತವೆ[೬೭]. ಸಳನು ಕ್ರಿ.ಶ.೯೮೪ ರಿಂದ ೧೦೪೩ ರ ವರೆಗೆ ಆಳಿದನೆಂದು ರೈಸರು ಅಭಿಪ್ರಾಯಪಡುತ್ತಾರೆ[೬೮]. ಹುಲ್ಲೂರು, ಶ್ರೀನಿವಾಸ ಜೋಯಿಸರು ಸಳನು ಐತಿಹಾಸಿಕ ವ್ಯಕ್ತಿಯೆಂದು ತಿಳಿಸಿರುವರು. ಇತನ ಆಳ್ವಿಕೆ ಕ್ರಿ.ಶ.೧೦೦೬ ರ ವೇಳೆಗೆ ಕೊನೆಗೊಂಡು ಇತನ ನಂತರ ಇತನ ಮಗ ಒಂದನೆಯ ವಿನಯಾದಿತ್ಯ ಸಿಂಹಾಸನವೇರಿದನು[೬೯]. ಸೊಸೆವೂರು ಇವನ ರಾಜಧಾನಿಯಾಗಿತ್ತು.

### ಒಂದನೆಯ ವಿನಯಾದಿತ್ಯ:

ಸಳನ ತರುವಾಯ ಆತನ ಮಗನಾದ ಒಂದನೆಯ ವಿನಯಾದಿತ್ಯನು ಕ್ರಿ.ಶ.೧೦೨೨ ರ ವರೆಗೂ ಆಳ್ವಿಕೆ ನಡೆಸಿದನು. ಈತನ ಆಳ್ವಿಕೆಯ ಪ್ರಾರಂಭದಲ್ಲಿಯೇ ಹೊಯ್ಸಳರಿಗೂ ಮತ್ತು ಚೋಳರಿಗೂ ಘರ್ಷಣೆಗಳು ಸಂಭವಿಸಿದವು ಎಂದು ತಿಳಿದುಬರುತ್ತದೆ[೭೦].

### ನೃಪ ಕಾಮ:

ನೃಪಕಾಮನು ಈ ಮನೆತನದ ಪ್ರಥಮ ಐತಿಹಾಸಿಕ ವ್ಯಕ್ತಿಯಾಗಿ ಕಾಣಿಸಿಕೊಳ್ಳುತ್ತಾನೆ. ಶಾಸನಗಳಿಂದ ಇವನು ಕ್ರಿ.ಶ.೧೦೨೨ ರಿಂದ ೧೦೨೭ ರ ವರೆಗೆ ಆಳಿದನೆಂದು ತಿಳಿದುಬರುತ್ತದೆ. ನೃಪಕಾಮನ ಮೊತ್ತಮೊದಲ ಶಾಸನ ಕ್ರಿ.ಶ.೧೦೨೨ ನೆಯ ಇಸ್ವಿಯದಾಗಿದ್ದು, ರಾಜೇಂದ್ರಪುರದಲ್ಲಿ ದೊರಕಿದೆ. ಇದು ಚೋಳ ಮತ್ತು ಹೊಯ್ಸಳರ ನಡುವೆ ಮುಂದುವರೆದ ಯುದ್ಧಗಳಿಗೆ ಸಾಕ್ಷಿಯಂತಿದೆ[೭೧]. ಗಂಗವಾಡಿಯ ಪ್ರದೇಶಕ್ಕಾಗಿ ಕಲ್ಯಾಣಿ ಚಾಲುಕ್ಯರಿಗೂ, ಚೋಳರಿಗೂ ಸಂಭವಿಸಿದ ಕದನಗಳಲ್ಲಿ ಈತ ಚಾಲುಕ್ಯರ ಪರವಹಿಸಿ ಕದನದಲ್ಲಿ ಮಹತ್ವದ ಪಾತ್ರವಹಿಸಿದನು. ಆರಂಭದಲ್ಲಿ ಚೋಳರ

ಸಾಮಂತರಾದ ಚೆಂಗಾಳ್ವ, ಕೊಂಗಾಳ್ವರನ್ನು ಸೋಲಿಸಿದ ನಂತರ ಚೋಳರಿಂದ ಪರಾಭವ ಹೊಂದಿದರೂ ಕೂಡಾ ಕದಂಬ ಮತ್ತು ಚೋಳರ ನಡುವೆ ನಡೆದ ಯುದ್ಧದಲ್ಲಿ ಕದಂಬರ ಪರವಹಿಸಿ ಜಯಶಾಲಿಯಾದನು. ಮುಂದೆ ಕ್ರಿ.ಶ. ೧೦೨೬ ರಲ್ಲಿ ಕೊಂಗಾಳ್ವರಾಜನು ಮಣ್ಣೆಯಲ್ಲಿ ಹೊಯ್ಸಳರ ನೃಪಕಾಮನ ಮೇಲೆ ಧಾಳಿಯಿಟ್ಟು ಅವನನ್ನು ಸೋಲಿಸಿದನು[೧೨]. ಈತನ ಬಿರುದುಗಳನ್ನು ಗಮನಿಸಿದರೆ ಈತನು ಗಂಗರೊಂದಿಗೆ ರಕ್ತ ಸಂಬಂಧ ಹೊಂದಿದ್ದನೆಂದು ತಿಳಿದು ಬರುವುದು[೧೩]. ವಿಷ್ಣುವರ್ಧನನ ಪ್ರಸಿದ್ಧ ದಂಡನಾಯಕ ಹಾಗೂ ಅಮಾತ್ಯನಾದ ಗಂಗರಾಜನ ತಾತನಾದ ಈಚಿಮಯ್ಯನು ನೃಪಕಾಮನ ಆಸ್ಥಾನದಲ್ಲಿದ್ದನೆಂದು ತಿಳಿದುಬರುತ್ತದೆ[೧೪].

**ಎರಡನೆಯ ವಿನಯಾದಿತ್ಯ:**

ನೃಪಕಾಮನ ನಂತರ ಕ್ರಿ.ಶ. ೧೦೪೭ ರಲ್ಲಿ ಪಟ್ಟಕ್ಕೆ ಬಂದನು. ಕೊಪ್ಪಂ ಬಳಿ ನಡೆದ ಚಾಲುಕ್ಯ ಮತ್ತು ಚೋಳರ ನಡುವೆ ನಡೆದ ಯುದ್ಧದಲ್ಲಿ ಕಲ್ಯಾಣಿ ಚಾಲುಕ್ಯರ ಪರವಹಿಸಿ, ಚೋಳರ ಸಾಮಂತರನ್ನು ಸೋಲಿಸುವಲ್ಲಿ ಮಹತ್ವದ ಪಾತ್ರ ನಿರ್ವಹಿಸಿದನು. ನಂತರ ಹೊಯ್ಸಳರ ರಾಜಕುಮಾರಿಯಾದ ಹೊಯ್ಸಳಾದೇವಿಯನ್ನು ತನ್ನ ಒಡೆಯ ಚಾಲುಕ್ಯ ದೊರೆ ಎರಡನೆಯ ಸೋಮೇಶ್ವರನಿಗೆ ವಿವಾಹಮಾಡಿಕೊಟ್ಟು ಆತನೊಂದಿಗೆ ರಕ್ತ ಸಂಬಂಧ ಬೆಳೆಸಿದನು[೧೫]. ತದನಂತರ ವಿನಯಾದಿತ್ಯನು ಸಾಂತರರ ಮೇಲೆ ಯುದ್ಧ ಕೈಗೊಂಡು ಸಾಂತರರ ದೊರೆ ವೀರಸಾಂತರನನ್ನು ಪರಾಭವಗೊಳಿಸಿದನು. ಆತನ ಮಗನಾದ ಅಮ್ಮಣದೇವನಿಗೆ ತನ್ನ ಮಗಳಾದ ಹೊಯ್ಸಳದೇವಿಯನ್ನು ಧಾರೆ ಎರೆದು ಕೊಟ್ಟು ಅವರೊಂದಿಗೆ ವೈವಾಹಿಕ ಸಂಬಂಧ ಬೆಳೆಸಿದನು[೧೬]. ಈತನ ಕಾಲದ ಇನ್ನೊಂದು ಪ್ರಮುಖ ಘಟನೆಯಂದರೆ ರಾಜಧಾನಿಯನ್ನು ಸೊಸೆಯೂರಿನಿಂದ ಹಳೇಬೀಡಿಗೆ ಕ್ರಿ.ಶ. ೧೦೬೨ರಲ್ಲಿ ವರ್ಗಾಯಿಸಿ ಅದಕ್ಕೆ 'ದ್ವಾರಾವತೀಪುರ' ಎಂದು ನಾಮಕರಣ ಮಾಡಿದ್ದು. ಬೇಲೂರು ಹೊಯ್ಸಳರ ರಾಜ್ಯಾಡಳಿತದ ಮತ್ತೊಂದು ಕೇಂದ್ರವಾಗಿತ್ತು.

**ಎರೆಯಂಗ:**

ಎರೆಯಂಗನು ತನ್ನ ತಂದೆ ಇಮ್ಮಡಿ ವಿನಯಾದಿತ್ಯನ ತರುವಾಯ ಪಟ್ಟಕ್ಕೆ ಬಂದನು ಈತ ಕೇವಲ ಎರಡು ವರ್ಷಗಳ ವರೆಗೆ ಮಾತ್ರ ರಾಜ್ಯಭಾರ ಮಾಡಿದನು. ಆದರೆ ಬಿ.ಎಲ್.ರೈಸ್ ಹಾಗೂ ಕೃಷ್ಣಸ್ವಾಮಿ ಅಯ್ಯಂಗಾರರು ಎರೆಯಂಗನು ತನ್ನ ತಂದೆಗಿಂತ ಮೊದಲೇ ಮರಣಹೊಂದಿದ್ದನೆಂದು ತಿಳಿಸಿರುವರು. ಈತ ಎಚಲದೇವಿ ಹಾಗೂ ಮಹಾದೇವಿಯರೆಂಬ ರಾಣಿಯರನ್ನು ಹಾಗೂ ಒಂದನೆಯ ಬಲ್ಲಾಳ, ಬಿಟ್ಟಿದೇವ (ವಿಷ್ಣುವರ್ಧನ) ಮತ್ತು ವಿನಯಾದಿತ್ಯರೆಂಬ ಮೂವರು ಮಕ್ಕಳನ್ನು ಹೊಂದಿದ್ದನು[೧೭].

**ಒಂದನೆಯ ಬಲ್ಲಾಳ :**

ಎರೆಯಂಗನ ತರುವಾಯ ಆತನ ಜೇಷ್ಠ ಪುತ್ರನಾದ ಒಂದನೆಯ ಬಲ್ಲಾಳನು ಸಿಂಹಾಸನ ವೇರಿದನು. ಕ್ರಿ.ಶ. ೧೧೦೪ರಲ್ಲಿ ಚೆಂಗಾಳ್ವರ ಮೇಲೆ ಯಶಸ್ವಿಯಾಗಿ ದಾಳಿಮಾಡಿ ವಿಜಯಿಯಾದನು. ತಮ್ಮನಾದ ವಿಷ್ಣುವರ್ಧನನ

ಜೊತೆಗೂಡಿ ನೊಳಂಬವಾಡಿಯ ಆಕ್ರಮಣವನ್ನು ಕೈಗೊಂಡನು[೮೮]. ಈತನ ದಂಡನಾಯಕ ಮರಿಯಾನೆದಂಡನಾಯಕನು ತನ್ನ ಮೂರುಜನ ಮಕ್ಕಳಾದ ಪದುಮಲದೇವಿ, ಚಾಮಲದೇವಿ, ಮತ್ತು ಬೊಪ್ಪಾದೇವಿಯರನ್ನು ಎರೆಯಂಗನ ಮಗ ಒಂದನೆಯ ಬಲ್ಲಾಳನಿಗೆ ಧಾರೆ ಎರೆದು ಕೊಟ್ಟನು. ಇದರಿಂದ ಸಂತುಷ್ಟಗೊಂಡ ಬಲ್ಲಾಳನು ಮರಿಯಾನೆ ದಂಡನಾಯಕ ದಂಪತಿಗಳಿಗೆ ಸಿಂದಗೆರೆ ಪ್ರಾಂತವನ್ನು ಬಿಟ್ಟುಕೊಟ್ಟನೆಂದು ಕ್ರಿ.ಶ. ೧೧೦೩ ಅಳೇಸಂದ್ರ ಶಾಸನವು ತಿಳಸುತ್ತದೆ[೮೯]. ಈತನಿಗೆ ಪುತ್ರಸಂತಾನ ವಿರದಿದ್ದರಿಂದ ಹೊಯ್ಸಳ ಸಿಂಹಾಸನವನ್ನು ಈತನ ಸಹೋದರ ವಿಷ್ಣುವರ್ಧನನೇ ವಹಿಸಿಕೊಂಡನು.

**ವಿಷ್ಣುವರ್ಧನ :**

ಸಹೋದರನ ನಂತರ ಕ್ರಿ.ಶ. ೧೧೦೮ ರಲ್ಲಿ ಪಟ್ಟಕ್ಕೆ ಬಂದ ಈತನ ಸಿಂಹಾಸನಾರೋಹಣದ ಬಗ್ಗೆ ಇತಿಹಾಸಕಾರರಲ್ಲಿ, ಭಿನ್ನಾಭಿಪ್ರಾಯವಿದೆ. ಡಾ. ವಿಲಿಯಂ ಕೊಯ್ಲ್ಹೋರವರು ಕ್ರಿ.ಶ. ೧೧೦೪ ಎಂದರೆ, ಜೆ.ಡಿ.ಎಮ್. ಡೆರೆಟ್‌ರು ಕ್ರಿ.ಶ. ೧೧೦೯ ವಿಷ್ಣುವರ್ಧನನ ಸಿಂಹಾಸನರೋಹಣದ ಕಾಲಾವಧಿಯಾಗಿತ್ತೆಂದು ತಿಳಿಸಿರುವರು. ಅದೇ ರೀತಿ ಕೃಷ್ಣಶಾಸ್ತ್ರಿಯವರು ಕ್ರಿ.ಶ. ೧೧೦೬ ರಿಂದ ೧೧೩೯ ರವರೆಗೆ ಈತನ ಆಳ್ವಿಕೆಯ ಕಾಲ ಎಂದಿರುವರು. ಒಟ್ಟಿನಲ್ಲಿ ಕ್ರಿ.ಶ. ೧೧೦೮ ರಲ್ಲಿ ಸಿಂಹಾಸನಕ್ಕೆ ಬಂದನೆಂಬುದು ಸಾಮಾನ್ಯ ವಾದವಾಗಿದೆ. ಕಲ್ಯಾಣಿ ಚಾಲುಕ್ಯರ ಆಧೀನದಿಂದ ಬಿಡುಗಡೆಗೊಂಡು ಸ್ವತಂತ್ರ ರಾಜ್ಯವನ್ನು ಕಟ್ಟುವುದು ಹಾಗೂ ಸಾಮ್ರಾಜ್ಯವನ್ನು ವಿಸ್ತರಿಸುವದು ಈತನ ರಾಜಕೀಯ ಬೆಳವಣಿಗೆಯ ಪ್ರಮುಖ ಉದ್ದೇಶಗಳಾಗಿದ್ದವು[೯೦]. ವಿಷ್ಣುವರ್ಧನನು ಉತ್ತರದಲ್ಲಿ ಕಲ್ಯಾಣಿ ಚಾಲುಕ್ಯರ ಸಾಮಂತರ ಪ್ರದೇಶಗಳಾದ ಬನವಾಸಿ, ಹಾನಗಲ್ ಹಾಗೂ ಉಚ್ಚಂಗಿಗಳನ್ನು ವಶಪಡಿಸಿಕೊಂಡು ಬೆಳುವಲ ಪ್ರದೇಶಕ್ಕೆ ಬಂದಿಳಿದನು. ಎರಡೂ ಪ್ರಬಲ ಸೈನ್ಯಗಳು ಕನ್ನೆಗಾಲದಲ್ಲಿ ಪರಸ್ಪರ ಯುದ್ಧನಿರತವಾದವು. ಹೊಯ್ಸಳ ಸೈನ್ಯದ ನೇತೃತ್ವವಹಿಸಿ ಗಂಗರಾಜನು ಹನ್ನೆರಡು ಸಾಮಂತರನ್ನು ಸೋಲಿಸಿದನು. ಆದರೆ ಕ್ರಿ.ಶ. ೧೧೨೨ ರಲ್ಲಿ ಆರನೆಯ ವಿಕ್ರಮಾದಿತ್ಯನು ಪ್ರಬಲ ಸಾಮಂತನಾದ ಯಲಬುರ್ಗಿಸಿಂಧರ ಅಚುಗಿಯಿಂದ ವಿಷ್ಣುವರ್ಧನನು ಪರಾಭವ ಹೊಂದಿದನೆಂದು ತಿಳಿದುಬರುವುದು[೯೧]. ಕ್ರಿ.ಶ. ೧೧೧೬ರಲ್ಲಿ ಈತ ಹಾಗೂ ಈತನ ದಂಡನಾಯಕ ಗಂಗರಾಜರು ತಲಕಾಡನ್ನು ಮುತ್ತಿ ಚೋಳರ ಸಾಮಂತನಾಗಿದ್ದ ಆದಿಯಮನನ್ನು ಯುದ್ಧದಲ್ಲಿ ಪರಾಭವಗೊಳಿಸಿ ತಲಕಾಡಿನಿಂದ ಕಾಲ್ತೆಗೆಯುವಂತೆ ಮಾಡಿದರು[೯೨]. ತಲಕಾಡನ್ನು ವಶಪಡಿಸಿಕೊಂಡ ನಂತರ ಗಂಗರಾಜನ ಮಗ ಪುಣಿಸಮಯ್ಯನ ನೇತೃತ್ವದಲ್ಲಿ ರಾಜ್ಯದ ನೈರುತ್ಯಕ್ಕೆ ದಾಳಿಯಿಟ್ಟು ಚೆಂಗಾಳ್ವ, ಕೊಂಗಾಳ್ವರನ್ನು ಸೋಲಿಸಿದನು[೯೩]. ಮುಂದೆ ಕೇರಳವನ್ನು ವಶಪಡಿಸಿಕೊಂಡನು. ಚೋಳರ ವಶದಲ್ಲಿದ್ದ ಕೋಲಾರವನ್ನು ಸ್ವಾಧೀನಪಡಿಸಿಕೊಂಡು, ಕಾಂಚಿಗೆ ಮುತ್ತಿಗೆ ಹಾಕಿ ಅದನ್ನೂ ತನ್ನದಾಗಿಸಿಕೊಂಡನು[೯೪]. ಈ ವಿಜಯದ ನೆನಪಿಗಾಗಿ "ಕಾಂಚಿಕೊಂಡ " ಎಂಬ ಬಿರುದನ್ನು ಧರಿಸಿದನು[೯೫]. ಈತ ಕ್ರಿ.ಶ. ೧೧೪೨ ರಲ್ಲಿ ಮರಣಹೊಂದಿದನು.

**ಒಂದನೆಯ ನರಸಿಂಹ :**

ವಿಷ್ಣುವರ್ಧನನ ಮಗನಾದ ಈತ ಕ್ರಿ.ಶ. ೧೧೪೨ ರಲ್ಲಿ ಹೊಯ್ಸಳರ ರಾಜ್ಯಭಾರವನ್ನು ವಹಿಸಿಕೊಂಡನು. ಈತ ಒಬ್ಬ ಭೋಗ ಜೀವಿಯೂ, ವಿಲಾಸಿ ಪ್ರವೃತ್ತಿಯವನೂ ಆಗಿದ್ದನು. ಇದರಿಂದಾಗಿ ಈತನ ಕಾಲದ ಆಡಳಿತವು ನಿರಾಶಾದಾಯಕವಾಗಿತ್ತೆಂದು ತಜ್ಞರು ಅಭಿಪ್ರಾಯಪಟ್ಟಿದ್ದಾರೆ[೯೬]. ಕಲಚೂರಿ ಬಿಜ್ಜಳನು ಕ್ರಿ.ಶ. ೧೧೫೪ರಲ್ಲಿ ಕಲ್ಯಾಣವನ್ನು ವಶಪಡಿಸಿಕೊಂಡು ಕ್ರಿ.ಶ. ೧೧೬೨ ರಲ್ಲಿ ಬೆಳ್ಳಿಗಾವಿಯ ಮೇಲೆ ದಾಳಿ ಮಾಡಿದನು. ಪರಿಣಾಮವಾಗಿ ಬನವಾಸಿ, ಬೆಳ್ವಲ, ನೊಳಂಬವಾಡಿ, ಹೊಯ್ಸಳರ ಕೈಬಿಟ್ಟವು[೯೭]. ತಂದೆಯ ಈ ಎಲ್ಲ ಚಟುವಟಿಕೆಗಳನ್ನು ವೀಕ್ಷಿಸುತ್ತಿದ್ದ ಎರಡನೆಯ ಬಲ್ಲಾಳನು ಅಸಮಾಧಾನಗೊಂಡು ಆತನನ್ನು ಸಿಂಹಾಸನದಿಂದ ಪದಚ್ಯುತಗೊಳಿಸಿ ಅಧಿಕಾರವನ್ನು ತಾನೇ ವಹಿಸಿಕೊಂಡನು.

**ಎರಡನೆಯ ಬಲ್ಲಾಳ :**

ಹೊಯ್ಸಳರ ಸ್ವತಂತ್ರ ಸಾಮ್ರಾಜ್ಯ ಕಟ್ಟುವ ಸಾಧನೆಯಲ್ಲಿ ವಿಷ್ಣುವರ್ಧನ ಮೊದಲಿಗನಾದರೆ, ಬಲ್ಲಾಳನು ಎರಡನೇಯ ವ್ಯಕ್ತಿಯಾಗಿದ್ದಾನೆ. ಈತನ ಆಡಳಿತಾವಧಿಯಲ್ಲಿ ಹೊಯ್ಸಳ ಸಾಮ್ರಾಜ್ಯ ಮಹತ್ವದ ತಿರುವನ್ನು ಪಡೆದು ಶ್ರೇಷ್ಠತೆಯ ಪರಾಕಾಷ್ಠತೆಯನ್ನು ತಲುಪಿತು. ಕ್ರಿ.ಶ. ೧೧೭೪ ರಲ್ಲಿ ಉಚ್ಚಂಗಿಯ ಪಾಂಡ್ಯರನ್ನು ಸೋಲಿಸಿದನು. ಪಾಂಡ್ಯರ ಕಾಮದೇವನಿಗೆ ರಾಜ್ಯ ಹಿಂತಿರುಗಿಸಿ ಬಲ್ಲಾಳನು "ಪಾಂಡ್ಯರಾಜ್ಯ ಪ್ರತಿಷ್ಠಾಪನಾಚಾರ್ಯ"[೯೮] ಎಂಬ ಬಿರುದನ್ನು ಧರಿಸಿದನು. ಮುಂದೆ ಬಲ್ಲಾಳನು ತುಳುವರನ್ನು, ಸಿಬಿಯರನ್ನು, ಬನವಾಸಿ ಕದಂಬರನ್ನು ಸೋಲಿಸಿದನು. ಇದೇ ರೀತಿ ಕಲಚೂರಿಗಳನ್ನು ಸೋಲಿಸಿ ಚಾಲುಕ್ಯ ದೊರೆ ನಾಲ್ಕನೆಯ ಸೋಮೇಶ್ವರನನ್ನು ಪರಾಭವಗೊಳಿಸಿ ಆತನ ಮೇಲೆ ತನ್ನ ಸಾರ್ವಭೌಮತ್ವವನ್ನು ಸ್ಥಾಪಿಸಿದನು[೯೯]. ನಂತರ ಕ್ರಿ.ಶ. ೧೧೯೦-೯೨ ರಲ್ಲಿ ಸೊರಟೂರಿನಲ್ಲಿ ನಡೆದ ಕಾಳಗದಲ್ಲಿ ಯಾದವರ ಐದನೆಯ ಭಿಲ್ಲಮನನ್ನು ಸೋಲಿಸಿದನು. ಕ್ರಿ.ಶ. ೧೧೯೩, ಕ್ರಿ.ಶ. ೧೨೧೨ ರಲ್ಲಿ ಕ್ರಮವಾಗಿ ಜೈತುಗಿ ಮತ್ತು ಸಿಂಘಣನನ್ನು ಪರಾಭವಗೊಳಿಸಿದನು. ಚೋಳರ ದೊರೆ ರಾಜರಾಜನು ಈತನ ಸಹಾಯವನ್ನು ಯಾಚಿಸಿದಾಗ ಆತನನ್ನು ಸಂತೈಸಿಸಿ, ಆತನಿಗೆ ಪುನಃ ರಾಜ್ಯವನ್ನು ದೊರಕಿಸಿಕೊಟ್ಟು "ಚೋಳಮಂಡಳ ಪ್ರತಿಷ್ಠಾಪನಾಚಾರ್ಯ" ಎಂಬ ಬಿರುದನ್ನು, ಪಾಂಡ್ಯರಾಜ್ಯವನ್ನು ರಕ್ಷಿಸಿದ್ದಕ್ಕಾಗಿ "ಪಾಂಡ್ಯಗಜಕೇಸರಿ" ಎಂಬ ಬಿರುದನ್ನು ತಳೆದನು[೧೦೦]. ಕ್ರಿ.ಶ.೧೨೨೦ ರಲ್ಲಿ ರಾಜಧಾನಿ ದೋರಸಮುದ್ರದಲ್ಲಿ ಕೊನೆಯುಸಿರೆಳೆದನು[೧೦೧].

**ಎರಡನೆಯ ನರಸಿಂಹ :**

ಎರಡನೆಯ ಬಲ್ಲಾಳನ ನಂತರ ಆತನ ಪುತ್ರನಾದ ಎರಡನೆಯ ನರಸಿಂಹನು ಸಿಂಹಾಸನವನ್ನೇರಿದನು[೧೦೨]. ಎರಡನೆಯ ನರಸಿಂಹನು ತಂದೆಯಂತೆ ಪ್ರಬಲನಾಗಿದ್ದನು. ಈತನ ಕಾಲದಲ್ಲಿ ಸೇವುಣರ ದೊರೆ ಕೃಷ್ಣನು ಹೊಯ್ಸಳರ ಪ್ರದೇಶಗಳ ಮೇಲೆ ಧಾಳಿಯಿಟ್ಟಾಗ ಎರಡನೆಯ ನರಸಿಂಹನು ಯಶಸ್ವಿಯಾಗಿ ಆತನನ್ನು ಹಿಮ್ಮೆಟ್ಟಿಸಿದನು. ಇದೇ

ಸಂದರ್ಭದಲ್ಲಿ ಚೋಳ ದೊರೆ ಮೂರನೆಯ ರಾಜರಾಜನ ಮೇಲೆ ಕೊಡವನಾಯಕ ಕೊಪ್ಪರುಂಜಿಗನು ಬಾಣರಾಜನ ನೆರವಿನಿಂದ ಧಾಳಿಮಾಡಿ ಮೂರನೆಯ ರಾಜರಾಜನನ್ನು ಸೇಂಡಮಂಗಲಕೋಟೆಯಲ್ಲಿ ಬಂಧಿಸಿಟ್ಟಿದ್ದನು[೧೦೩]. ಆಗ ಎರಡನೆಯ ನರಸಿಂಹನು ಬಾಣರನ್ನು ಸೋಲಿಸಿ ರಾಜರಾಜನನ್ನು ಪುನಃ ಸಿಂಹಾಸನದ ಮೇಲೆ ಕುಳ್ಳಿರಿಸಿದ ಈತನು "ಚೋಳಮಂಡಲ ಪ್ರತಿಷ್ಠಾಪನಾಚಾರ್ಯ"[೧೦೪] ಹಾಗೂ 'ಚೋಳಕುಲ ರಕ್ಷಕ' ಎಂಬ ಬಿರುದು ಪಡೆದನು[೧೦೫]. ಮತ್ತೊಂದು ಯುದ್ಧದಲ್ಲಿ ನರಸಿಂಹನು ಪಾಂಡ್ಯರಾಜ ಮಾರವರ್ಮ ಸುಂದರಪಾಂಡ್ಯನನ್ನು ಸೋಲಿಸಿದನು. ಈ ವಿಜಯದಿಂದ ಹೊಯ್ಸಳರು ದಕ್ಷಿಣದಲ್ಲಿ ಪ್ರಬಲರಾದರು[೧೦೬].

**ಸೋಮೇಶ್ವರ:**

ಸೋಮೇಶ್ವರನು ನರಸಿಂಹನ ತರುವಾಯ ಕ್ರಿ.ಶ. ೧೨೩೫ರಲ್ಲಿ ಸಿಂಹಾಸನವೇರಿದನು. ನಂತರ ಸೇವುಣರು ಹೊಯ್ಸಳರ ಉತ್ತರದ ಕೆಲವು ಭಾಗಗಳನ್ನು ವಶಪಡಿಸಿಕೊಂಡರು. ಇದೇ ಸಂದರ್ಭದಲ್ಲಿ ಚೋಳ ದೊರೆ ಮೂರನೆಯ ರಾಜೇಂದ್ರನನ್ನು ಸೋಲಿಸಿ ಜಾತವರ್ಮ ಸುಂದರಪಾಂಡ್ಯನು, ಚೋಳರಾಜ್ಯವನ್ನು ವಶಪಡಿಸಿಕೊಂಡನು ಸೋಮೇಶ್ವರನು ಚೋಳರ ಈ ಅವನತಿಯನ್ನು ತಪ್ಪಿಸುವಲ್ಲಿ ವಿಫಲನಾದನು[೧೦೭]. ಆಡಳಿತದ ಅನುಕೂಲಕ್ಕಾಗಿ ಸಾಮ್ರಾಜ್ಯವನ್ನು ಸೋಮೇಶ್ವರನು ಎರಡು ಭಾಗಗಳಾಗಿ ಮಾಡಿದನೆಂದು ಇತಿಹಾಸಕಾರರು ಅಭಿಪ್ರಾಯಪಟ್ಟಿರುವರು[೧೦೮]. ದೋರಸಮುದ್ರ ಸೇರಿದಂತೆ ರಾಜ್ಯದ ಉತ್ತರ ಭಾಗವನ್ನು ತನ್ನ ಹಿರಿಯ ಮಗ ಮೂರನೆಯ ನರಸಿಂಹನಿಗೂ, ಕಣ್ಣಾನೂರು ಒಳಗೊಂಡಂತೆ ದಕ್ಷಿಣದ ಭಾಗವನ್ನು ತನ್ನ ಎರಡನೆಯ ಮಗನಾದ ರಾಮನಾಥನಿಗೆ ಒಪ್ಪಿಸಿದನು. ಆದರೆ ಇಬ್ಬರು ಸಹೋದರರಲ್ಲಿ ಆಂತರಿಕ ಹೋರಾಟ ಪ್ರಾರಂಭವಾಯಿತು. ಇದರಿಂದ ಹೊಯ್ಸಳ ಸಾಮ್ರಾಜ್ಯಕ್ಕೆ ಧಕ್ಕೆ ಉಂಟಾಗತೊಡಗಿತು[೧೦೯].

**ಮೂರನೆಯ ನರಸಿಂಹ:**

ದೋರಸಮುದ್ರದಲ್ಲಿ ಮೂರನೆಯ ನರಸಿಂಹನು ತನ್ನ ಆಳ್ವಿಕೆಯನ್ನು ಪ್ರಾರಂಭಿಸಿದನು. ಈತ ಪಟ್ಟಕ್ಕೆ ಬಂದಾಗ ರಾಜ್ಯದ ಆರ್ಥಿಕ ಸ್ಥಿತಿ ಹದಗೆಟ್ಟಿತ್ತು ಮಾತ್ರವಲ್ಲದೇ ಸೇವುಣರ ಆಕ್ರಮಣ ಮತ್ತು ಈತನ ಬಲಸಹೋದರ ರಾಮನಾಥನ ಒಳಸಂಚುಗಳನ್ನು ಎದುರಿಸಬೇಕಾಗಿ ಬಂತು. ಕ್ರಿ.ಶ.೧೨೬೮ರ ವೇಳೆಗೆ ಸೇವುಣರ ದಳಪತಿಯಾದ ತಿಕ್ಕಮನು ದೋರಸಮುದ್ರದ ಮೇಲೆ ದಾಳಿಮಾಡಿದಾಗ ಮೂರನೆಯ ನರಸಿಂಹನು ಸ್ವತಃ ತಾನೇ ನಾಯಕತ್ವವಹಿಸಿ ಈ ಆಕ್ರಮಣವನ್ನು ಹತ್ತಿಕ್ಕಿ ಸೇವುಣರ ಸೈನ್ಯವನ್ನು ದುಮ್ಮೆಯ ತನಕ ಬೆನ್ನಟ್ಟಿಕೊಂಡು ಹೋದನು[೧೧೦]. ಇತ್ತ ತಮಿಳು ಪ್ರದೇಶಗಳನ್ನು ಕಳೆದುಕೊಂಡ ರಾಮನಾಥನು ಈತನ ವಿರುದ್ಧ ಕ್ರಿ.ಶ.೧೨೯೦ ರಲ್ಲಿ ದೋರಸಮುದ್ರದ ಸಮೀಪ ಯುದ್ಧ ಆರಂಭಿಸಿದನು. ಯುದ್ಧ ನಿರ್ಣಾಯಕವಾಗದಿದ್ದರೂ ರಾಮನಾಥನು ರಾಜ್ಯದ ಪೂರ್ವಭಾಗದ ಪ್ರದೇಶಗಳಾದ ಬೆಂಗಳೂರು, ತುಮಕೂರು, ತಿಪಟೂರುಗಳನ್ನು ವಶಪಡಿಸಿಕೊಂಡು ಸೇಲಂ ಜಿಲ್ಲೆಯ ಪುನ್ನಿಯೂರು ನದಿಯ ದಂಡೆಯ ಮೇಲಿರುವ ಕುಂದಣಿಯನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡನು[೧೧೧].

**ರಾಮನಾಥ :**

ಈತ ಮೂರನೆಯ ನರಸಿಂಹನ ಹಿರಿಯ ಸಹೋದರನಾಗಿದ್ದು ಕಣ್ಣಾನೂರನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆಯನ್ನು ನಡೆಸುತ್ತಿದ್ದನು. ಈತ ತನ್ನ ಆಡಳಿತದುದ್ದಕ್ಕೂ ಮೂರನೆಯ ನರಸಿಂಹನಿಗೆ ಕಿರುಕುಳಕೊಟ್ಟನು. ಪಾಂಡ್ಯರಿಂದ ಆಕ್ರಮಣಗೊಂಡ ಸಂದರ್ಭದಲ್ಲಿ ಕಣ್ಣಾನೂರನ್ನು ಕಳೆದುಕೊಳ್ಳಬೇಕಾಯಿತು. ತದನಂತರ ತನ್ನ ರಾಜಧಾನಿಯನ್ನು ಬೆಂಗಳೂರ ಸಮೀಪಕ್ಕೆ ವರ್ಗಾಯಿಸಿದನು. ಈತ ಮೂರನೆಯ ಬಲ್ಲಾಳನ ಕಾಲದಲ್ಲಿಯೂ ದಾಳಿಯನ್ನು ಮುಂದುವರೆಸಿ ಕೊನೆಗೆ ಕ್ರಿ.ಶ.೧೨೯೪ರಲ್ಲಿ ಮರಣಹೊಂದಿದನು[೧೧೨].

**ಮೂರನೆಯ ಬಲ್ಲಾಳ :**

ಮೂರನೆಯ ಬಲ್ಲಾಳನು ತನ್ನ ತಂದೆಯ ನಂತರ ಕ್ರಿ.ಶ.೧೨೯೨ ರಲ್ಲಿ ಸಿಂಹಾಸನವೇರಿದನು[೧೧೩]. ಈತನ ಆಳ್ವಿಕೆ ಹೊಯ್ಸಳರ ಇತಿಹಾಸದಲ್ಲಿ ಅದೃಷ್ಟ ಮತ್ತು ದುರಾದೃಷ್ಟದ ಸಮ್ಮಿಶ್ರಣದ ಕಾಲವಾಗಿತ್ತು. ಸಿಂಹಾಸನವೇರಿದ ನಂತರ ಅನೇಕ ದಂಡಯಾತ್ರೆಗಳನ್ನು ಕೈಕೊಂಡನು. ಚಿಕ್ಕಪ್ಪನಾದ ರಾಮನಾಥನನ್ನು, ಹೊಸಗುಂದದ ಸಾಂತಾರರನ್ನು, ಬನವಾಸಿ ಮತ್ತು ಗೋವೆಯ ಕದಂಬರನ್ನು ಸದೆಬಡಿದು ಅವರೆಲ್ಲರೂ ತನಗೆ ವಿಧೇಯರಾಗಿರುವಂತೆ ಮಾಡಿದನು[೧೧೪]. ಅಲ್ಲಾವುದ್ದೀನ ಖಿಲ್ಜಿಯ ದಂಡನಾಯಕನಾಗಿದ್ದ ಮಲ್ಲಿಕಾಫರನು ಕ್ರಿ.ಶ.೧೩೦೭ ರಲ್ಲಿ ದೇವಗಿರಿ ಹಾಗೂ ಕ್ರಿ.ಶ.೧೩೦೯ ರಲ್ಲಿ ವಾರಂಗಲ್ಲನ್ನು ವಶಪಡಿಸಿಕೊಂಡನು. ಇದಾದ ಮೇಲೆ ಕ್ರಿ.ಶ. ೧೩೧೧-೧೨ ರಲ್ಲಿ ದೋರಸಮುದ್ರದ ಮೇಲೆ ಆಕ್ರಮಣ ಹೂಡಿದನು. ಯಾವುದೇ ಸೈನಿಕ ಸಿದ್ಧತೆಯಲ್ಲಿಲ್ಲದ ಬಲ್ಲಾಳನು ಆತನೊಂದಿಗೆ ಶಾಂತಿ ಒಪ್ಪಂದ ಮಾಡಿಕೊಂಡರೂ ಕೂಡಾ ದೋರಸಮುದ್ರವನ್ನು ಶತ್ರುಗಳು ಲೂಟಿಮಾಡಿದರು. ಆದರೆ ತನ್ನ ಮೆರುಗನ್ನು ಕಳೆದುಕೊಂಡಿದ್ದ ದೋರಸಮುದ್ರಕ್ಕೆ ಕ್ರಿ.ಶ.೧೩೧೬ ರಲ್ಲಿ ಬಲ್ಲಾಳನು ಮತ್ತೆ ಪುನರುಜ್ಜೀವನಗೊಳಿಸಿ, ಅದಕ್ಕೆ ಮೊದಲಿನ ಸೌಂದರ್ಯತೆಯನ್ನು ಒದಗಿಸಿಕೊಟ್ಟನು[೧೧೫]. ಕೊಪ್ಪಂ ಎಂಬಲ್ಲಿ ಬಲ್ಲಾಳನಿಗೂ ಮಧುರೆಯ ಸುಲ್ತಾನನಿಗೂ ಕ್ರಿ.ಶ.೧೩೪೨ ರಲ್ಲಿ ಯುದ್ಧ ನಡೆಯಿತು. ಈ ಯುದ್ಧದಲ್ಲಿ ಬಲ್ಲಾಳನು ವಿಜಯಿಯಾಗುವದರಲ್ಲಿದ್ದವನು ಮೃತನಾಗಬೇಕಾಯಿತು. ಈ ಯುದ್ಧವನ್ನು ಕುರಿತು ಮೊರಕ್ಕೋದ ಪ್ರವಾಸಿಯಾದ ಇಬ್ನಬಟೂಟನು, ಬಲ್ಲಾಳನು ಯುದ್ಧವಿರಾಮವನ್ನು ಸೂಚಿಸಿದರೂ, ಮಧುರೈ ಸುಲ್ತಾನರು ಬಲ್ಲಾಳನ ಮೇಲೆ ಮತ್ತು ಆತನ ಸೈನ್ಯದ ಮೇಲೆ ಹಠಾತ್ತನೇ ದಾಳಿಮಾಡಿ ಮೋಸದಿಂದ ಬಲ್ಲಾಳನನ್ನು ಸೆರೆಯಾಗಿಸಿ ಕೊಂದು ಹಾಕಿದರು. ನಂತರ ಬಲ್ಲಾಳನ ಚರ್ಮವನ್ನು ಹುಲ್ಲಿನಿಂದ ತುಂಬುವಂತೆಮಾಡಿ ಮಧುರೈಕೋಟೆಯ ಮೇಲೆ ನೇತು ಹಾಕಿದರು. ಆ ಶರೀರ ಭಂಗಿಯನ್ನು ನಾನು ಕಂಡೆನೆಂದು ತಿಳಿಸಿರುವನು[೧೧೬].

ಈತನ ನಂತರ ಇವನ ಮಗನಾದ ವಿರುಪಾಕ್ಷ ಬಲ್ಲಾಳನು ಕೆಲವು ವರ್ಷಗಳವರೆಗೆ ಆಳ್ವಿಕೆಯನ್ನು ನಡೆಸಿದನೆಂದು ತಿಳಿದುಬರುವದು. ಇವನ ಮರಣಾನಂತರ ಪರಕೀಯರ ದಾಳಿಯನ್ನೆದುರಿಸಲು ಹೊಯ್ಸಳರ ದಂಡನಾಯಕರುಗಳಾದ ಸಂಗಮ ಸಹೋದರರು ಕರ್ನಾಟಕದ ನಾಯಕತ್ವವನ್ನು ವಹಿಸಿಕೊಂಡು ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸಿದರು[೧೧೭].

**ಅಡಿ ಟಿಪ್ಪಣಿಗಳು**

೧. E.C., Vol-II, No-1, 600 A.D.

೨. Desai,P.B., A History of Karnataka, p-47.

೩. Ind.Ant., Vol-VIII, p-237.

೪. Desai,P.B., A History of Karnataka, p-47.

೫. Gopal,B.R., Corpas of Kadamba Inscriptions, Vol-I, P-15.

೬. Ibid.

೭. Ep.Ind., Vol-VIII, P-35; E.C., Vol-VII, Sk, No-176.

೮. Ibid.

೯. Ibid.

೧೦. Ibid.

೧೧. Ind.Ant., Vol-VI, p-23.

೧೨. Ibid.

೧೩. MAR., 1936, p-73.

೧೪. E.C., Vol-VI, Kd, No-162.

೧೫. Ibid.

೧೬. Ind.Ant., Vol-VII, p-34-36; Ibid., Vol-VI, p-25.

೧೭. E.C., Vol-III, Nj, No-122.

೧೮. Ep.Ind., Vol-VI, p-18; E.C., Vol-VII, Sk, No-29; MAR., 1910-11, pp-31-35.

೧೯. Ind.Ant., Vol-VI, p-30.

೨೦. Ep.Ind., Vol-VIII, p-147.

೨೧. Ind.Ant., Vol-VI, p-31.

೨೨. E.C., Vol-V, Bl, No-121; Ep.Ind., Vol-XVI, p-271.

೨೩. Ibid., Vol-V, Bl, No-245.

೨೪. Ep.Ind., Vol-VI, p-8.

೨೫. Ind.Ant., Vol-XI, p-68.

೨೬. MAR., 1918, pp-40.

೨೭. Ind.Ant., Vol-XIX, p-185.

೨೮. Ramesh,K.V., Chalukyas of Vatapi, p-46.

೨೯. Ind.Ant., Vol-VIII, p-237.

೩೦. Ibid., Vol-X, No-82, p-57.

೩೧. Ramesh,K.V., Pulikeshi-II, His Career and Personality, Chalukyas of Badami, Pp-55-56.

೩೨. Ep.Ind., Vol-VI, p-4.

೩೩. Ibid.., Vol-IX, p-99.

೩೪. Ramesh,K.V., Chalukyas of Vatapi, p-111-12.

೩೫. Ep.Ind., Vol-XXVII, No-23.

೩೬. Ibid.., Vol-V, No-22.

೩೭. Ind.Ant., Vol-XVIII, p-38.

೩೮. Desai,P.B., A History of Karnataka, p-118.

೩೯. Ep.Ind., Vol-XIII, No-25, p-275, 768A.D.

೪೦. ಷೇಕ್ ಅಲಿ,ಬಿ., (ಸಂ) ಕರ್ನಾಟಕ ಚರಿತ್ರೆ, ಭಾಗ-೨, ಪು-೩೯.

೪೧. Ep.Ind., Vol-XXII, No-17, p-98, 786A.D.

೪೨. Ibid., Vol-XXIII, p-71, 802A.D.

೪೩. Ibid., Vol-XVIII, No-26, p-235, 871A.D.

೪೪. SII., Vol-XI, Pt-I, No-7, p-4, 832 A.D.

೪೫. Desai,P.B., A History of Karnataka, p-118.

೪೬. Ind.Ant., Vol-IV, p-81-83.

೪೭. SII., Vol-IX, Pt-I, No-68, p-39; Ep.Ind., Vol-XXXVI, p-57.

೪೮. Ibid., Vol-IX, Pt-I, No-68, p-39.

೪೯. Yazdani,G., (Ed), Early History of the Deccan, Vol-I, p-322.

೫೦. Ep.Ind., Vol-XV, p-73.

೫೧. Bombay Gazettear, Vol-I, Pt-II, p-448; B.K., No-131 of 1940-41.

೫೨. B.K., No-17 of 1937-38.

೫೩. Ibid., No-21 of 1937-38.

೫೪. Bombay Gazettear, Vol-I, Pt-II, p-448 & N3.

೫೫. Ibid.

೫೬. Ep.Ind., Vol-XV, p-315.

೫೭. E.C., Vol-11.

೫೮. Bombay Gazettear, Vol-I, Pt-II, p-448 & N3.

೫೯. B.K., No-3 of 1929-30; Inscription in Northorn Karnataka, etc., No-12.

೬೦. Bombay Gazettear, Vol-I, p-470; Inscription in Northorn Karnataka, etc., No-7.

೬೧. Inscription in Northorn Karnataka, etc., No-7.

೬೨. Bombay Gazettear, Vol-I, Pt-II, p-472.

೬೩. B.K., No-50 of 1938-39.

೬೪. Bombay Gazettear, Vol-I, Pt-II, Pp-474-75; ಮೂರು ಉಪನ್ಯಾಸಗಳು, ಪು-೬೪-೬೬.

೬೫. E.C., Vol-VII, Sk, No-123.

೬೬. Ibid., Vol-XI, Dg, No-42.

೬೭. Desai, P.B., & others (Ed), A History of Karnataka from Pre History to Unification, p-193.

೬೮. Sources of Med. history of Deccan, Vol-II, p-73.

೬೯. ಬಸವರಾಜದೇವರ ರಗಳೆ, ಪು-೨೧, ೨೯.

೭೦. E.C., Vol-VII, Sk, No-197.

೭೧. Ibid.

೭೨. Ibid.

೭೩. Sources of Med. history of Deccan, Vol-II, p-50.

೭೪. B.K., No-96 of 1936-37.

೭೫. Rice, E. P., A History of Canaries Litarature, p-52.

೭೬. B.K., No-45 of 1929-30; Arch Survey of India, Anl. Report, 1929-30, p-175.

೭೭. Rice, Mysore Inscriptions, p-260.

೭೮. Ibid., p-LXXV.

೭೯. ಷೇಕಅಲಿ,ಬಿ., ದಕ್ಷಿಣ ಭಾರತದ ಇತಿಹಾಸ, ಪು-೩೦೭.

೮೦. ಷೇಕಅಲಿ,ಬಿ., ಕರ್ನಾಟಕ ಚರಿತ್ರೆ, ಸಂ-೨, ಪು-೧೧೦.

೮೧. E.C., Vol-V, Bl, p-43.

೮೨. Ibid., p-76.

೮೩. ಷೇಕಅಲಿ,ಬಿ., ದಕ್ಷಿಣ ಭಾರತದ ಇತಿಹಾಸ, ಪು-೩೦೮.

೮೪. ಷೇಕಅಲಿ,ಬಿ., ಕರ್ನಾಟಕ ಚರಿತ್ರೆ, ಸಂ-೨, ಪು-೧೧೧.

೮೫. E.C., Vol-7 , No-1, ಹೊನ್ನಾಳಿ, ಕ್ರಿ.ಶ.೧೧೫೫.

೮೬. ಷೇಕಅಲಿ,ಬಿ., ಕರ್ನಾಟಕ ಚರಿತ್ರೆ, ಸಂ-೨, ಪು-೧೧೨.

೮೭. E.C., Vol-VI, No-32, 1184.

೮೮. ಷೇಕಅಲಿ,ಬಿ., ಕರ್ನಾಟಕ ಚರಿತ್ರೆ, ಸಂ-೨, ಪು-೧೧೫.

೮೯. E.C., Vol-V, Bl, No-191.

೯೦. Ibid., Sb, No-73.

೯೧. Ibid., Vol-II, Sb, No-73, 82, 240.

೯೨. Ibid., Vol- , Mangal, No-83.

೯೩. Ibid., Vol-V, Bl, No-106.

೯೪. Ibid.

೯೫. Ibid., Vol-VIII, No-51.

೯೬. William Coelho, The Hoysala Vamsa, p-131.

೯೭. E.C., Vol-II, Sb, No-327.

೯೮. Ibid.

೯೯. ಷೇಕಅಲಿ,ಬಿ., ಕರ್ನಾಟಕ ಚರಿತ್ರೆ, ಸಂ-೨, ಪು-೧೨೩ ಮತ್ತು ಚೆನ್ನಕ್ಕ ಎಲಿಗಾರ., ಪ್ರಾಚೀನ ಕರ್ನಾಟಕದ ರಾಣಿಯರು, ಪು-೯೯.

೧೦೦. E.C., Vol-VI, Tr, No-10.

೧೦೧. Ibid., Vol-VIII, Sb, No-319.

೧೦೨. ಷೇಕಅಲಿ,ಬಿ., ಕರ್ನಾಟಕ ಚರಿತ್ರೆ, ಸಂ-೨, ಪು-೧೨೩.

೧೦೩. Ep.Ind., Vol-VII, p-162.

೧೦೪. E.C., Vol-V, Cn, No-203.

೧೦೫. ಷೇಕಅಲಿ,ಬಿ., ಕರ್ನಾಟಕ ಚರಿತ್ರೆ, ಸಂ-೨, ಪು-೧೨೪.

೧೦೬. E.C., Vol-XI, Ck, No-42.

೧೦೭. I.A., Vol-XL, p-137.

೧೦೮. E.C., Vol-II, Chikkamagalur, No-56.

೧೦೯. Ibid., Vol-V, Bl, No-125.

೧೧೦. Ibid., No-164-65.

೧೧೧. Ibid., Vol-XIV, Channarayapattana, No-232.

೧೧೨. Ibid., Vol-XVI, Tumkur, No-27.

೧೧೩. Ibid., Vol-VI, Cm, No-36.

೧೧೪. Desai,P.B., A History of Karnataka, p-283.

೧೧೫. Ibid., Vol-VI, Mudi, No-180.

೧೧೬. Kohilo Willim., Hoysala Vamsha, p-250.

೧೧೭. Rice,B.L., M.C.I., P-110.

# ಅಧ್ಯಾಯ-೩

## ಬಾದಾಮಿ ಚಾಲುಕ್ಯ, ರಾಷ್ಟ್ರಕೂಟ, ಕಲ್ಯಾಣಿ ಚಾಲುಕ್ಯ ಮತ್ತು ಹೊಯ್ಸಳರ ಕಾಲದಲ್ಲಿ ಸಾಮಂತ ಅರಸುಮನೆತನಗಳ ಉದಯ ಮತ್ತು ಬೆಳವಣಿಗೆ

ಕರ್ನಾಟಕದ ಇತಿಹಾಸದಲ್ಲಿ ಚಾಲುಕ್ಯರ ಸಾಮ್ರಾಜ್ಯ ಸ್ಥಾಪನೆಯಾಗುವದರೊಂದಿಗೆ ಒಂದು ಹೊಸ ಅಧ್ಯಾಯ ಪ್ರಾರಂಭವಾಯಿತು. ಸುಮಾರು ೨೫೦ ವರ್ಷಗಳ ಕಾಲ ಕರ್ನಾಟಕದ ಕೀರ್ತಿಯನ್ನು ಮೆರೆಸಿ ದಕ್ಷಿಣ ಭಾರತದಲ್ಲಿ ಮೊಟ್ಟಮೊದಲ ಬಾರಿಗೆ ಏಕಚಕ್ರಾಧಿಪತ್ಯವನ್ನು ಮೆರೆದು ವಿಶಾಲವಾದ ಸಾಮ್ರಾಜ್ಯವನ್ನು ಸ್ಥಾಪಿಸಿದ ಕೀರ್ತಿ ಇವರಿಗೆ ಸಲ್ಲುತ್ತದೆ.

ವಿಸ್ತಾರವಾದ ಸಾಮ್ರಾಜ್ಯದ ಆಡಳಿತವನ್ನು ಅದರ ಗಡಿಗಳ ರಕ್ಷಣೆಯನ್ನು ನೋಡಿಕೊಳ್ಳುವದು ಚಕ್ರವರ್ತಿಯೊಬ್ಬನಿಂದಲೇ ಸಾಧ್ಯವಿಲ್ಲದ ಕಾರಣ ಸಾಮ್ರಾಜ್ಯವನ್ನು ಅನೇಕ ವಿಭಾಗಗಳನ್ನಾಗಿ ಮಾಡಲಾಗಿತ್ತು. ಆಡಳಿತ ವಿಭಾಗವಾದ ಮಂಡಲದ ಕಲ್ಪನೆಯು ನಮಗೆ ಋಗ್ವೇದದ ಕಾಲದಲ್ಲಿಯೇ ದೊರೆಯುತ್ತದೆ. ಈ ಮಂಡಲದ ಅರ್ಥವನ್ನು ಪ್ರಾಂತ, ಪ್ರದೇಶ ಎಂದು ಕಿಟೆಲ್ ಕೋಶದಲ್ಲಿ ಕಾಣಬಹುದು[೧] ಈ ಮಂಡಲಗಳ ಅಧಿಕಾರಗಳನ್ನೇ ಮಂಡಳೇಶ್ವರ, ಮಹಾಸಾಮಂತ, ಮಂಡಲಾಧಿಪತಿ ಮತ್ತು ಮಹಾಮಂಡಳೇಶ್ವರ ಎಂದು ಕರೆಯಲಾಗುತ್ತಿತ್ತು. ಮಹಾಮಂಡಳೇಶ್ವರ ಎಂದರೆ ವಿಸ್ತಾರವಾದ ಭೂಮಿಗೆ ಅಥವಾ ವಿಭಾಗಕ್ಕೆ ಒಡೆಯ ಎಂದಾಗುತ್ತದೆ[೨].

ಹೀಗೆ ವಿಭಾಗಿಸಲಾದ ಮಂಡಲಗಳಿಗೆ ವಂಶಪಾರಂಪರ್ಯವಾಗಿ ಬಂದ ಮಂಡಳೇಶ್ವರರಿಗೆ ಸಾಮಂತರಿಗೆ ಅಥವಾ ಯುದ್ಧದಲ್ಲಿ ಸೋತು ರಾಜರ ಅಧಿಕಾರವನ್ನು ಒಪ್ಪಿಕೊಂಡವರಿಗೆ ವಹಿಸಿಕೊಡಲಾಗುತ್ತಿತ್ತು. ಅವರು ತಮ್ಮ ರಾಜ್ಯಗಳೊಂದಿಗೆ ವಂಶಪಾರಂಪರ್ಯವಾಗಿ ಅವರ ಸಾಮ್ರಾಜ್ಯಗಳು ಅಳಿಯುವವರೆಗೂ ಮುಂದುವರೆದರು. ಉದಾ: ಸೇಂದ್ರಕರು, ಆಳುಪರು, ಗಂಗರು, ಚಲ್ಲಕೇತನರು ಮುಂತಾದವರು ಅನೇಕ ವರ್ಷಗಳ ಕಾಲ ತಮ್ಮ ಸಾಮಂತತ್ವವನ್ನು ಉಳಿಸಿಕೊಂಡು ಬಂದರು. ಅನೇಕ ಸಲ ಚಕ್ರವರ್ತಿಗಳು ತಾವು ಯುದ್ಧದಲ್ಲಿ ಜಯಗಳಿಸಿದಾಗ ಅಲ್ಲಿ ಸೋತ ರಾಜರುಗಳನ್ನೇ ಅಲ್ಲಿ ಸಾಮಂತರುಗಳನ್ನಾಗಿ ನೇಮಿಸುತ್ತಿದ್ದರು. ಉದಾ: ಕೀರ್ತಿವರ್ಮನು ಕದಂಬರು ಮತ್ತು ಆಳುಪರನ್ನು ಸೋಲಿಸಿ ಅವರನ್ನು ತನ್ನ ಮಾಂಡಳಿಕರನ್ನಾಗಿ ಮಾಡಿಕೊಂಡನು[೩]. ಕೆಲವೊಮ್ಮೆ ತಾವು ಗೆದ್ದುಕೊಂಡ ಪ್ರದೇಶಗಳಿಗೆ ಬೇರೆಯವರನ್ನೂ ನೇಮಿಸುತ್ತಿದ್ದರು. ಉದಾ: ಪುಲಕೇಶಿಯು ಕಲಚೂರಿಗಳನ್ನು ಸೋಲಿಸಿ ಅವರಾಳುತ್ತಿದ್ದ ಪ್ರದೇಶಕ್ಕೆ ಸೇಂದ್ರಕರ ಭಾನುಶಕ್ತಿಯನ್ನು ಪ್ರಾಂತಾಧಿಕಾರಿಯನ್ನಾಗಿ ನೇಮಿಸಿದ್ದನು[೪].

ಹೀಗೆ ಮಹಾಮಂಡಳೇಶ್ವರರು ಚಕ್ರವರ್ತಿಗಳಿಗೆ ಆಧೀನರಾಗಿ ಆಳುತ್ತಿದ್ದರೂ ಸಹ ಸಾಕಷ್ಟು ಅಧಿಕಾರ ಮತ್ತು ಸ್ವಾತಂತ್ರ್ಯವನ್ನು ಪಡೆದಿರುತ್ತಿದ್ದರು. ಆಡಳಿತದ ಅನುಕೂಲಕ್ಕಾಗಿ ಚಕ್ರವರ್ತಿಯಂತೆ ಅವರೂ ಕೂಡ ಸ್ವತಂತ್ರ

ಮಂತ್ರಿಮಂಡಳ, ಅಧಿಕಾರಿವರ್ಗ, ಸಾಮಂತರುಗಳು ಮತ್ತು ಸೈನಿಕರನ್ನು ಹೊಂದಿರುತ್ತಿದ್ದರು. ಅಲ್ಲದೆ ಅವರು ತಮ್ಮದೇ ಆದ ಧರ್ಮವನ್ನು ಆಚರಿಸಲು ಅವಕಾಶಗಳಿದ್ದವು. ಅಲ್ಲದೆ ಅವರು ತಮ್ಮದೇ ಆದ ಧ್ವಜ, ರಾಜಚಿನ್ಹೆ ಮುಂತಾದವುಗಳನ್ನು ಹೊಂದಬಹುದಿತ್ತು. ಕೆಲವು ಸಲ ತಮ್ಮ ಆಧೀನ ರಾಜರುಗಳೊಂದಿಗೆ ವೈವಾಹಿಕ ಸಂಬಂಧವನ್ನೂ ಕೂಡಾ ಹೊಂದಬಹುದಾಗಿತ್ತು. ಅಲ್ಲದೆ ರಾಜನಿಗೆ ವಿಪತ್ತು ಬಂದಾಗ ಜೀವದ ಹಂಗುತೊರೆದು ಹೋರಾಡಿ ಸಾಮ್ರಾಜ್ಯವನ್ನು ಉಳಿಸಿದ ಉದಾಹರಣೆಗಳಿವೆ. ಕೆಲವೊಮ್ಮೆ ತಮ್ಮ ಆಧೀನತ್ವದ ಚಕ್ರವರ್ತಿಗಳ ಸಾಮ್ರಾಜ್ಯವನ್ನು ಕಸಿದುಕೊಂಡು ತಾವೇ ಚಕ್ರವರ್ತಿಗಳಾದ ಉದಾಹರಣೆಗಳೂ ಉಂಟು.

ಹೀಗೆ ಕರ್ನಾಟಕದಲ್ಲಿ ಪ್ರಸಿದ್ಧಿಯಾದ ನಮ್ಮ ಅಧ್ಯಯನದ ಅವಧಿಯಲ್ಲಿನ ಬಾದಾಮಿ ಚಾಲುಕ್ಯ, ರಾಷ್ಟ್ರಕೂಟ, ಕಲ್ಯಾಣಿ ಚಾಲುಕ್ಯ ಮತ್ತು ಹೊಯ್ಸಳ ಅರಸು ಮನೆತನಗಳ ಆಧೀನತ್ವವನ್ನು ಒಪ್ಪಿಕೊಂಡು ಉದಯವಾದ ಮತ್ತು ಬೆಳವಣಿಗೆ ಹೊಂದಿದ ಸಾಮಂತ, ಮಹಾಮಂಡಳೇಶ್ವರರ ಬಗೆಗೆ ಈ ಮುಂದೆ ನಾವು ತಿಳಿದುಕೊಳ್ಳೋಣ.

## ಸೇಂದ್ರಕರು:

ಕರ್ನಾಟಕದ ಪ್ರಾಚೀನ ಅರಸುಮನೆತನಗಳಲ್ಲಿ ಸೇಂದ್ರಕರೂ ಒಬ್ಬರಾಗಿದ್ದಾರೆ. ಇವರು ಕ್ರಿ.ಶ. ೪ನೆಯ ಶತಮಾನದಿಂದ ಕರ್ನಾಟಕದ ರಾಜಕೀಯದಲ್ಲಿ ಕಾಣಿಸಿಕೊಂಡು ಬದಾಮಿ ಚಾಲುಕ್ಯರ ಕಾಲದವರೆಗೂ ಆಳ್ವಿಕೆಯನ್ನು ಮಾಡಿದರು.

ಈ ಮನೆತನವು ಪ್ರಪ್ರಥಮವಾಗಿ ಕದಂಬ ಮಯೂರಶರ್ಮನ ಚಂದ್ರವಳ್ಳಿ ಶಾಸನದಲ್ಲಿ ನಮಗೆ ಕಂಡುಬರುತ್ತದೆ. ಅಲ್ಲಿ ಕದಂಬ ಮಯೂರಶರ್ಮನು ಉಳಿದ ರಾಜರುಗಳ ಜೊತೆ ಸೈಂದಕ (ಸೇಂದ್ರಕ)ರನ್ನೂ ಕೂಡಾ ಸೋಲಿಸಿದ ವಿಷಯವಿದೆ[೬]. ಆ ಶಾಸನದ ಕಾಲ ಕ್ರಿ.ಶ. ೪ನೆಯ ಶತಮಾನವಾದ್ದರಿಂದ ಅದಕ್ಕೂ ಸ್ವಲ್ಪ ಮುಂಚೆ ಅಂದರೆ ಕ್ರಿ.ಶ. ೩ನೆಯ ಶತಮಾನದಲ್ಲಿ ಸೇಂದ್ರಕ ಮನೆತನ ಉದಯವಾಗಿದ್ದಿರಬಹುದು. ಕಾರಣವೆಂದರೆ ಸೇಂದ್ರಕರು ಆ ವೇಳೆಗಾಗಲೇ ಒಂದು ದೊಡ್ಡ ಶಕ್ತಿಯಾಗಿ ಬೆಳೆದಿದ್ದಂತೆ ತೋರುತ್ತದೆ. ಅಲ್ಲದೇ ಅಶೋಕನ ಹಾಗೂ ಶಾತವಾಹನರ ಶಾಸನಗಳಲ್ಲಿ ಈ ಮನೆತನದ ಉಲ್ಲೇಖ ನಮಗೆ ಕಂಡುಬರುವದಿಲ್ಲ. ಚಂದ್ರವಳ್ಳಿಯ ಶಾಸನವನ್ನು ಮೊದಲಿಗೆ ಗುರುತಿಸಿದ ಡಾ. ಎಮ್. ಎಚ್.ಕೃಷ್ಣರವರು ಈ ಸೇಂದ್ರಕರು ಖಾನ್‌ದೇಶದ ಪ್ರದೇಶದವರು ಎಂದಿದ್ದಾರೆ. ಆದರೆ ಕ್ರಿ.ಶ.೫ನೆಯ ಶತಮಾನಕ್ಕೆ ಸೇರಿದ ಪಲ್ಲವ ಸಿಂಹವರ್ಮನ ಸಕ್ಕರೆಪಟ್ಟಣದ ತಾಮ್ರಶಾಸನವೊಂದು ಸೇಂದ್ರಕ ರಾಜ್ಯವನ್ನು ಉಲ್ಲೇಖಿಸುವದರ ಜೊತೆಗೆ ಶಿವಮೊಗ್ಗ ಪ್ರದೇಶದಲ್ಲಿ ಅದು ಇದ್ದುದ್ದನ್ನು ಖಚಿತಪಡಿಸುತ್ತದೆ[೭]. ಮತ್ತು ಕದಂಬ ಎರಡನೆಯ ಕೃಷ್ಣವರ್ಮನ ಬೆಣ್ಣೂರು ಶಾಸನವು ಪಲ್ಮಿಡಿ (ಹಲ್ಮಿಡಿ) ಗ್ರಾಮವನ್ನು ಉಲ್ಲೇಖಿಸುತ್ತಿದ್ದು, ಅದು ಸೇಂದ್ರಕ ವಿಷಯದಲ್ಲಿತ್ತು ಎಂದಿದೆ[೮]. ಅಂದರೆ ಸೇಂದ್ರಕ ವಿಷಯವು ದಕ್ಷಿಣ ಕರ್ನಾಟಕದ ಅದರಲ್ಲಿಯೂ ಶಿವಮೊಗ್ಗ ಜಿಲ್ಲೆ ಮತ್ತು ಅದರ ಸುತ್ತಮುತ್ತಲಿನ ಪ್ರದೇಶವಾಗಿತ್ತೆಂಬುದು ತಿಳಿದುಬರುತ್ತದೆ.

ಸೇಂದ್ರಕ ಮನೆತನದ ಮೊದಲ ಐತಿಹಾಸಿಕ ವ್ಯಕ್ತಿಯಾಗಿ ಭಾನುಶಕ್ತಿಯು ಕಾಣಿಸಿಕೊಳ್ಳುತ್ತಾನೆ. ಕದಂಬ ಹರಿವರ್ಮನ ಆರನೆಯ ಶತಮಾನದ ಮಧ್ಯಭಾಗಕ್ಕೆ ಸೇರಿದ ಹಲಸಿ ಶಾಸನ ಇವನನ್ನು ಉಲ್ಲೇಖಿಸುತ್ತದೆ. ಆದರೆ ಇವನು ಯಾವ ಪ್ರದೇಶವನ್ನಾಳುತ್ತಿದ್ದನೆಂದು ತಿಳಿದುಬರುವದಿಲ್ಲ. ಈತನು ಕದಂಬರ ಸಾಮಂತನಾಗಿ ಬೆಳಗಾವಿಯ ಪ್ರದೇಶದಲ್ಲಿ ಆಳುತ್ತಿದ್ದಿರಬೇಕೆಂದು ಶಾಸನಾಧಾರದ ಮೇಲೆ ಊಹಿಸಬಹುದು.

ಭಾನುಶಕ್ತಿಯ ನಂತರ ಸಮಿಯರನು ನಮಗೆ ಕಂಡುಬರುವ ಸೇಂದ್ರಕರ ದೊರೆಯಾಗಿದ್ದಾನೆ. ಒಂದನೆಯ ಪುಲಕೇಶಿಯ ಶಾಸನವೊಂದು ತಿಳಿಸುವಂತೆ ಈತನು ಬಾದಾಮಿ ಚಾಲುಕ್ಯರ ಸಾಮಂತನಾಗಿ ಕೂಹುಂಡಿ-೭೦೦ ಪ್ರದೇಶ ಮತ್ತು ಅದಕ್ಕೆ ಹೊಂದಿಕೊಂಡಿದ್ದ ಮಹಾರಾಷ್ಟ್ರದ ಪ್ರದೇಶಗಳನ್ನಾಳುತ್ತಿದ್ದಂತೆ ತೋರುತ್ತದೆ. ಶಾಸನದಿಂದ ತಿಳಿದುಬರುವ ವಂಶಾವಳಿಯ ಪ್ರಕಾರ ಇವನ ಅಜ್ಜ ಗೊಂಡ, ತಂದೆ ಶಿವರರಾಗಿದ್ದರು. ಸೇಂದ್ರಕ ವಂಶದವರ ಹೆಸರುಗಳ ಹಿಂದೆ ಶಕ್ತಿಯೆಂಬುವದನ್ನು ಕಂಡಾಗ, ಈ ಗೊಂಡ, ಶಿವರ ಮತ್ತು ಸಮಿಯರರು ಸೇಂದ್ರಕ ವಂಶದ ಮತ್ತೊಂದು ಶಾಖೆಯವರಿರಬಹುದು ಎಂದು ವಿದ್ವಾಂಸರ ಅಭಿಮತವಾಗಿದೆ[೧೦].

ನಂತರ ಕಂಡುಬರುವ ಸೇಂದ್ರಕ ಅರಸರುಗಳು ಕಣ್ಣಶಕ್ತಿ ಮತ್ತು ರವಿಶಕ್ತಿಯರಾಗಿದ್ದಾರೆ. ಮಂಗಳೇಶನ ಹೂಲಿ ತಾಮ್ರ ಶಾಸನದ ಪ್ರಕಾರ ಈ ರವಿಶಕ್ತಿಯು ಮಂಗಲರಸನ ಆಧೀನರಾಜನಾಗಿದ್ದನೆಂದು ತಿಳಿಯುತ್ತದೆಯಲ್ಲದೇ ಇವನ ತಂದೆ ಕಣ್ಣಶಕ್ತಿಯನ್ನು ಶಾಸನ ಉಲ್ಲೇಖಿಸಿದೆ[೧೧].

ಎರಡನೆಯ ಪುಲಕೇಶಿಯ ಚಿಪ್ಲೂನ್ ತಾಮ್ರಪಟಗಳ ಪ್ರಕಾರ ಶ್ರೀವಲ್ಲಭ ಸೇನಾನಂದನ ಸಹೋದರಿಯನ್ನು ಕೀರ್ತಿವರ್ಮನು ಮದುವೆಯಾಗಿದ್ದ ವಿಷಯ ತಿಳಿದುಬರುತ್ತದೆ[೧೨].

ಕ್ರಿ.ಶ. ೫೩೨-೩೩ರ ಗೋಕಾಕ ತಾಮ್ರಪಟಗಳಿಂದ ತಿಳಿಯುವಂತೆ ಬಾದಾಮಿ ಚಾಲುಕ್ಯರ ಸಾಮಂತ ಮನೆತನವಾದ ರಾಷ್ಟ್ರಕೂಟರ ದೆಜ್ಜ ಮಹಾರಾಜನ ಕಾಲದಲ್ಲಿ ಅವನ ಆಧೀನರಾಗಿ ಸೇಂದ್ರಕ ಮನೆತನದ ಅಧಿರಾಜರಾದ ಇಂದ್ರಾನಂದ ಮತ್ತು ಅವನ ಮಗ ವಿಜಯಾನಂದರು ಕಾಣಿಸಿಕೊಳ್ಳುತ್ತಾರೆ[೧೩]. ಹೀಗೆ ಆನಂದ ಎಂಬ ಶಬ್ದದೊಂದಿಗೆ ಕೊನೆಗೊಳ್ಳುವ ಹೆಸರಿನ ಸೇಂದ್ರಕ ಅರಸರುಗಳು ಸೇಂದ್ರಕ ಮನೆತನದ ಮತ್ತೊಂದು ಶಾಖೆಯವರಿರಬಹುದೆಂದು ವಿದ್ವಾಂಸರ ಅಭಿಪ್ರಾಯವಾಗಿದೆ[೧೪].

ವಿಜಯಶಕ್ತಿ ಮತ್ತು ಕುಂದಶಕ್ತಿ ಎಂಬ ಸೇಂದ್ರಕ ಮನೆತನದ ಅರಸರುಗಳಿಬ್ಬರೂ ಪರಾಕ್ರಮಿಗಳೂ, ಶ್ರೇಷ್ಠ ಸೇನಾನಿಗಳೆಂದು ಶಾಸನದಲ್ಲಿ ಬಣ್ಣಿಸಲಾಗಿದ್ದು, ಇವರು ಒಂದನೆಯ ಕೀರ್ತಿವರ್ಮ ಮತ್ತು ಒಂದನೆಯ ಪುಲಕೇಶಿಯ ಆಧೀನರಾಜರಾಗಿದ್ದರೆಂದು ಕಂಡುಬರುತ್ತದೆ[೧೫]. ಎರಡನೆಯ ಪುಲಕೇಶಿಯ ಶಾಸನವೊಂದು ತಿಳಿಸುವಂತೆ ಸೇಂದ್ರಕ ವಂಶದ ದುರ್ಗಶಕ್ತಿಯು ಅವನ ಸಾಮಂತನಾಗಿದ್ದನೆಂದು ತಿಳಿದುಬರುತ್ತದೆ[೧೬].

ಬದಾಮಿ ಗುಹಾಲಯದ ಬಂಡೆಗಲ್ಲಿನ ಮೇಲೆ ಕೊರೆಯಲಾದ ಒಂದು ಸಾಲಿನ ಶಾಸನವೊಂದರಲ್ಲಿ ಸತ್ಯಾಶ್ರಯ (ಎರಡನೆಯ ಪುಲಕೇಶಿ)ನ ಪಾದಪದ್ಮೋಪಜೀವಿಯಾದ ಭೀಮಶಕ್ತಿ ಎಂಬುವವನ ಉಲ್ಲೇಖವಿದೆ[೭]. ಆದರೆ ಈತನು ಸೇಂದ್ರಕ ವಂಶದವನೆಂದು ಹೇಳಲು ಯಾವುದೇ ಆಧಾರವಿಲ್ಲ.

ಮುಂದೆ ನಮಗೆ ಕಂಡುಬರುವ ಸೇಂದ್ರಕ ಅರಸನೆಂದರೆ ಪೊಗಿಲ್ಲಿ ಸೇಂದ್ರಕನಾಗಿದ್ದಾನೆ. ಇವನು ಬಾದಾಮಿ ಚಾಲುಕ್ಯ ವಿಜಯಾದಿತ್ಯನ ಕ್ರಿ.ಶ. ೭ನೆಯ ಶತಮಾನದ ಶಿವಮೊಗ್ಗ ಜಿಲ್ಲೆಯ ಬಳ್ಳಿಗಾವೆ ಶಾಸನದಲ್ಲಿ ಉಲ್ಲೇಖಗೊಂಡಿದ್ದು, ಬನವಾಸಿಯ ಸುತ್ತಲಿನ ಪ್ರದೇಶಗಳಾದ ನಾಗರಖಂಡ ಮತ್ತು ಜಿಡುಗೂರುಗಳ ಆಡಳಿತವನ್ನು ನೋಡಿಕೊಳ್ಳುತ್ತಿದ್ದುದಾಗಿ ತಿಳಿಯುತ್ತದೆ[೮].

ಬಾದಾಮಿ ಚಾಲುಕ್ಯರ ಎರಡನೆಯ ಕೀರ್ತಿವರ್ಮನ ಕಾಲದ ಕ್ರಿ.ಶ. ೮ನೆಯ ಶತಮಾನದ ಕಾಲದ ಶಾಸನಗಳಾದ ಹಾನಗಲ್ ತಾಲೂಕಿನ ಐನೂಲ್[೯] ಮತ್ತು ಆಡೂರು[೨೦] ಶಾಸನಗಳಲ್ಲಿ ಕೀರ್ತಿವರ್ಮನ ಸಾಮಂತರುಗಳಾದ ಸೇಂದ್ರಕ ಮನೆತನದ ನಾಗಶಕ್ತಿ ಮತ್ತು ಮಧವತ್ತಿಯರಸರುಗಳು ಕಂಡುಬರುತ್ತಾರೆ. ಅಲ್ಲಿ ಇವರ ಬಗ್ಗೆ ಹೆಚ್ಚಿನ ವಿವರ ತಿಳಿದುಬರುವದಿಲ್ಲ.

ಈ ಮೇಲೆ ಹೇಳಿದ ಅರಸರುಗಳಲ್ಲದೇ ಕರ್ನಾಟಕದ ಹೊರಗೆ ಕೂಡಾ ಚಾಲುಕ್ಯರ ಕಾಲದಲ್ಲಿ ಇನ್ನು ಎರಡು ಮನೆತನಗಳನ್ನು ವಿದ್ವಾಂಸರು ಗುರುತಿಸಿದ್ದಾರೆ[೨೧]. ಅವುಗಳೆಂದರೆ ಸೇಂದ್ರಕರ ಎರಡು ನಿಕುಂಭ ಶಾಖೆಗಳು

ಹೀಗೆ ಸೇಂದ್ರಕ ಮನೆತನವು ಬಾದಾಮಿ ಚಾಲುಕ್ಯರ ಕಾಲದಲ್ಲಿ ಅವರ ಅತ್ಯಂತ ನಿಷ್ಠಾವಂತ ಸಾಮಂತರಾಗಿದ್ದು, ಅವರ ನಂತರ ಅದು ಕೂಡಾ ಕಣ್ಮರೆಯಾಯಿತು. ಮುಂದೆ ಎಲ್ಲಿಯೂ ಸೇಂದ್ರಕ ಮನೆತನದ ಉಲ್ಲೇಖ ಕಂಡುಬರುವದಿಲ್ಲ.

**ಆಳುಪರು:**

ದಕ್ಷಿಣ ಕನ್ನಡ ಜಿಲ್ಲೆಯ ಆಳುವನಾಡು ಎಂಬ ಹೆಸರಿನ ಪ್ರದೇಶದಲ್ಲಿ ಆಳುಪರು ಆಡಳಿತ ನಡೆಸುತ್ತಿದ್ದರು. ನಂತರದ ಕಾಲದಲ್ಲಿ ಈ ಪ್ರದೇಶಕ್ಕೆ ಆಳುವಖೇಡ-೬೦೦೦ ಎಂದು ಕರೆಯಲಾಗಿತ್ತು[೨೨].

ಕ್ರಿ.ಶ. ೫ನೆಯ ಶತಮಾನದ ಮಧ್ಯಭಾಗದಲ್ಲಿ ತುಳುನಾಡು ಕದಂಬರ ಆಧಿಪತ್ಯಕ್ಕೊಳಪಟ್ಟಿತ್ತೆಂದು ಹಲ್ಮಿಡಿ ಶಿಲಾಶಾಸನದಿಂದ[೨೩] ತಿಳಿದುಬರುತ್ತದೆಯಲ್ಲದೆ ಆಗ ತುಳುನಾಡನ್ನಾಳುತ್ತಿದ್ದ ಆಳುಪರಾಜ ಪಶುಪತಿಯು ಕದಂಬ ಕಾಕುಸ್ಥವರ್ಮನ ಸಾಮಂತನಾಗಿದ್ದನೆಂದು ಅದರಿಂದ ಧೃಡಪಡುತ್ತದೆ. ತಾಳಗುಂದದ ಶಾಸನದ ಪ್ರಕಾರ ಈ ಪಶುಪತಿಗೆ ಲಕ್ಷ್ಮೀಯೆಂಬ ರಾಣಿ ಮತ್ತು ಕಾಕುಸ್ಥಭಟಾರಿಯೆಂಬ ಮಗನಿದ್ದುದಾಗಿ ತಿಳಿದುಬರುತ್ತದೆ[೨೪].

ಪಶುಪತಿಯ ಮಗ ತಂದೆಯ ನಂತರ ಸಿಂಹಾಸನವನ್ನೇರಿರಬಹುದು ಆದರೆ ಇವನಾಳ್ವಿಕೆಗೆ ಸೇರಿದ ಶಾಸನಗಳು ದೊರೆತಿಲ್ಲ. ಕಾಕುಸ್ಥಭಟಾರಿಯು ಹತ್ತು ಮಂಡಲೀಕರ ನಾಯಕನಾಗಿಯೂ ಸುಂಕಾಧಿಕಾರಿಯಾಗಿಯೂ ಸೇವೆಸಲ್ಲಿಸಿ ಕದಂಬರಾಜರ ಪ್ರೀತಿ ವಾತ್ಸಲ್ಯಗಳಿಗೆ ಪಾತ್ರನಾಗಿದ್ದನು.

ಬಾದಾಮಿ ಚಾಲುಕ್ಯ ಚಕ್ರವರ್ತಿ ಒಂದನೆಯ ಕೀರ್ತಿವರ್ಮನು ಆಕ್ರಮಿಸಿಕೊಂಡ ರಾಜ್ಯಗಳಲ್ಲಿ ಅಳುಕ ಮತ್ತು ವೈಜಯಂತಿಗಳೂ ಸೇರಿದ್ದವೆಂದು ಅವನ ತಮ್ಮನ ಮಂಗಳೇಶನ ಮಹಾಕೂಟ ಶಾಸನ ಹೇಳಿದೆ[೩೫]. ಇದರಲ್ಲಿ ಬರುವ ಅಳುಕ ಶಬ್ದವು ಅಳುಪರಾಜ್ಯವನ್ನು ಹೆಸರಿಸುತ್ತದೆ. ಆದರೆ ಅಲ್ಲಿ ಸೋಲನ್ನನುಭವಿಸಿದ ಅಳುಪರಾಜನ ಹೆಸರು ತಿಳಿದುಬರುವದಿಲ್ಲ.

ಚಾಲುಕ್ಯ ಚಕ್ರವರ್ತಿ ಎರಡನೆಯ ಪುಲಕೇಶಿಯ ಐಹೊಳೆ ಶಿಲಾಶಾಸನದಲ್ಲಿ ಅಳುಪೇಂದ್ರನು ಸದಾ ಕಾಲವೂ ಪುಲಕೇಶಿಯ ಸನ್ನಿಧಾನದಲ್ಲಿಯೇ ನಿಂತು ಅವನಿಗೆ ಸೇವೆಸಲ್ಲಿಸುವದರಲ್ಲಿಯೇ ಕೃತಾರ್ಥನಾದನೆಂದು ಹೇಳಲಾಗಿದೆ[೩೬]. ಅಲ್ಲದೇ ವಿನಯಾದಿತ್ಯ ಸತ್ಯಾಶ್ರಯನ ಹರಿಹರ ತಾಮ್ರಶಾಸನದಲ್ಲಿ ಅಳುಪರನ್ನು ಚಳುಕ್ಯರ ಭೃತ್ಯರೆಂದು ವರ್ಣಿಸಲಾಗಿದೆ[೩೭].

ಒಂದನೆಯ ಅಳುವರಸ ಈ ವಂಶದ ಮೊದಲ ಅರಸನಾಗಿದ್ದುದು ನಮಗೆ ತಿಳಿಯುತ್ತದೆ. ಚಾಲುಕ್ಯದೊರೆ ಒಂದನೆಯ ವಿಕ್ರಮಾದಿತ್ಯನ ಅಧಿಕಾರದ ಕಾಲದ ಸತ್ಯಾಶ್ರಯ ಪೃಥ್ವೀವಲ್ಲಭನ ಮರಟೂರು ಶಾಸನ[೩೮]ದ ಆಧಾರದಿಂದ ಕೆ.ವಿ.ರಮೇಶ್‌ರವರು ಅಳುಪರು ಗಂಗರೊಡಗೂಡಿ ಬಾದಾಮಿ ಚಾಲುಕ್ಯ ಮನೆತನದ ಗೌರವ ಪ್ರತಿಷ್ಠೆ ಕಾಪಾಡಲು ಸಹಾಯ ನೀಡಿದ್ದು ಕಾಣುತ್ತದೆ ಎಂದಿದ್ದಾರೆ. ಅದೇ ಶಾಸನವು ಅಳುವರಸ ಮಹಾರಾಜನು ತುಳುದೇಶವನ್ನು ಮತ್ತು ಪಂಬುಜಾ ಎಂಬ ಪ್ರದೇಶವನ್ನು ಕ್ರಿ.ಶ.೬೫೦ ರಲ್ಲಿ ಮತ್ತು ಕದಂಬ ಮಂಡಲವನ್ನು ಕ್ರಿ.ಶ. ೬೫೫ ರಿಂದ ಕ್ರಿ.ಶ.೬೮೦ ರ ಅವಧಿಯಲ್ಲಿ ಆಳುತ್ತಿದ್ದ ಎಂಬ ಅಂಶ ತಿಳಿಸುತ್ತದೆ. ಶಾಸನ ಮುಂದುವರೆದು ಅಳುವರಸ ಮಹಾರಾಜನು ಚಾಲುಕ್ಯದೊರೆ ವಿಕ್ರಮಾದಿತ್ಯನ ಆಧೀನತೆಯನ್ನು ಒಪ್ಪಿಕೊಳ್ಳಲು ಕಲ್ಲೂರಿಗೆ ಹೋಗಿದ್ದ ಎಂದು ಹೇಳಿದೆ. ಚಿಕ್ಕಮಗಳೂರು ಜಿಲ್ಲೆಯ ಕೊಪ್ಪ ತಾಲೂಕಿನ ಕಿಗ್ಗ ಗ್ರಾಮದ ಶಾಸನ[೩೯]ವೊಂದು ಅಳುವರಸನಿಗೆ ಗುಣಸಾಗರ ಎಂಬ ಹೆಸರು ಇದ್ದ ಬಗ್ಗೆ ತಿಳಿಸುತ್ತಾ, ಅವನು ಕದಂಬಮಂಡಳ ಆಳುತ್ತಿದ್ದ ಎಂದು ಉಲ್ಲೇಖಿಸಿದೆ. ಚಾಲುಕ್ಯ ವಿನಯಾದಿತ್ಯನ ಕಾಲದ ಸೊರಬ ಶಾಸನದಲ್ಲಿಯೂ ಕೂಡಾ ಅಳುಪೇಂದ್ರನ ಬಗ್ಗೆ ಮಾಹಿತಿ ದೊರೆಯುತ್ತದೆ[೪೦].

ಅಳುವರಸನ ಮಗ ಚಿತ್ರವಾಹನ ಕ್ರಿ.ಶ. ೬೮೦ ರಲ್ಲಿ ಅಧಿಕಾರಕ್ಕೆ ಬಂದನು. ಅವನು ತುಳುನಾಡು ಮತ್ತು ಶಿವಮೊಗ್ಗ ಜಿಲ್ಲೆಯ ಹುಮಚಾ ಅಂದರೆ ಹಿಂದಿನ ಪಂಬುಚಾ ಪ್ರದೇಶಗಳನ್ನು ಆಳಿದನು. ಕಿಗ್ಗ ಶಾಸನದಲ್ಲಿ ಚಿತ್ರವಾಹನ ಮತ್ತು ಅಳುಪ ಮನೆತನವನ್ನು ಚಾಲುಕ್ಯ ಮನೆತನದ ಕಣ್ಣುಗಳೆಂದು ಕರೆಯಲಾಗಿದೆ. ತಂದೆಯ ಕಾಲದಲ್ಲಿಯೇ ಚಿತ್ರವಾಹನನು ಹಂಬುಚಾ ಪ್ರದೇಶದ ಮೇಲೆ ಆಳ್ವಿಕೆ ನಡೆಸುತ್ತಿದ್ದನಲ್ಲದೇ ಚಿತ್ರವಾಹನನ ಶಾಸನಗಳೆಲ್ಲ ಚಾಲುಕ್ಯ

ದೊರೆಯಿಂದ ಹೊರಡಿಸಲಟ್ಟವು ಎಂಬ ವಿಷಯ ಅವನ ಶಾಸನಗಳಿಂದ ತಿಳಿದುಬರುತ್ತದೆ[೩೧]. ವಿನಯಾದಿತ್ಯನ ಕಾಲದ ಸೊರಬ ಶಾಸನದಲ್ಲಿ ಚಿತ್ರವಾಹನನಿಗೆ ಮಹಾರಾಜ ಎಂದು ಸಂಬೋಧಿಸಲಾಗಿದೆ[೩೨]. ಇದರಿಂದ ಅಳುಪರು ಚಾಲುಕ್ಯರೊಡನೆ ನಿಕಟ ಸಂಬಂಧ ಹೊಂದಿದ್ದ ವಿಷಯ ತಿಳಿಯುತ್ತದೆ. ಅಲ್ಲದೆ ಶಿಗ್ಗಾಂವ್ ಶಾಸನದ ಆಧಾರದಿಂದಲೂ ಇದು ಧೃಡಪಡುತ್ತದೆ. ಚಾಲುಕ್ಯ ದೊರೆ ವಿಜಯಾದಿತ್ಯನು ಬನವಾಸಿಗೆ ಬೇಟಿ ನೀಡಿದ ವಿಷಯ ಆ ಶಾಸನ ಹೇಳಿದೆಯಲ್ಲದೇ ಈ ಭೇಟಿಯು ಸಾಮಾನ್ಯ ಭೇಟಿಯಾಗಿರದೇ ಚಿತ್ರವಾಹನನ ಆಹ್ವಾನದ ಮೇರೆಗೆ ನೀಡಿದ ಭೇಟಿ ನೀಡಿದ್ದ ವಿಷಯವನ್ನು ಅದು ಹೇಳುತ್ತದೆ[೩೩]. ವಿಜಯಾದಿತ್ಯನ ಕಾಲದಲ್ಲಿ ಪಾಂಡ್ಯದೊರೆ ಕೊಚದಡಿಯನನು ತುಳು ಮತ್ತು ಚಾಲುಕ್ಯ ಪ್ರದೇಶದ ಮೇಲೆ ಧಾಳಿ ನಡೆಸಿದ್ದು, ಚಿತ್ರವಾಹನನು ಅವನ ಧಾಳಿಯನ್ನು ಧೈರ್ಯದಿಂದ ಎದುರಿಸಿ ತಡೆದದ್ದು, ವಿಜಯಾದಿತ್ಯನ ಜೊತೆ ಅವನು ಯುದ್ಧಗಳಲ್ಲಿ ಭಾಗವಹಿಸಿದ್ದು ತಿಳಿಯುತ್ತದೆ. ಅಲ್ಲದೇ ಚಿತ್ರವಾಹನನು ಈ ತೆರನಾದ ಸಾಮರ್ಥ್ಯ ಮತ್ತು ಪರಾಕ್ರಮದಿಂದ ಚಾಲುಕ್ಯ ಮನೆತನದೊಡನೆ ಒಳ್ಳೆಯ ಸಂಬಂಧ ಹೊಂದಿ ವಿಜಯಾದಿತ್ಯನ ಸಹೋದರಿ ಕುಂಕುಮ ಮಹಾದೇವಿಯನ್ನು ಮದುವೆಯಾಗಿದ್ದನೆಂದು ಕ್ರಿ.ಶ. ೧೧ನೆಯ ಶತಮಾನದ ಧಾರವಾಡ ಜಿಲ್ಲೆಯ ಗುಡಿಗೆರೆ ಶಾಸನದ ಆಧಾರದಿಂದ ತಿಳಿಯುತ್ತದೆ[೩೪].

ಎರಡನೆಯ ಆಳುವರಸನು ಪಟ್ಟಕ್ಕೆ ಬಂದ ವೇಳೆಯಲ್ಲಿ ಚಾಲುಕ್ಯರನ್ನು ಬದಿಗೊತ್ತಿ ತಾನೇ ಸಾಮ್ರಾಟನಾಗಲು ರಾಷ್ಟ್ರಕೂಟರ ದಂತಿದುರ್ಗನು ಬಯಸಿದ್ದನು. ಚಾಲುಕ್ಯರ ಬಲ ಕ್ಷೀಣಿಸಲು ಆಳುಪರು ತಮ್ಮ ಪಕ್ಷವನ್ನು ಬದಲಾಯಿಸಿ ಪಲ್ಲವರ ಸಾಮಂತರಾದರು[೩೫].

ಎರಡನೆಯ ಆಳುವರಸನ ನಂತರ ಅವನ ಇಬ್ಬರು ಮಕ್ಕಳು ಒಂದೊಂದು ಪ್ರದೇಶಕ್ಕೆ ಅಧಿಪತಿಗಳಾದರು. ಅವರಲ್ಲಿ ಎರಡನೆಯ ಚಿತ್ರವಾಹನ ಪೊಂಬುಚ್ಚ ಪ್ರದೇಶಕ್ಕೆ ಮತ್ತು ರಣಸಾಗರನು ತುಳುನಾಡಿನ ಪ್ರದೇಶಕ್ಕೆ ಅಧಿಪತಿಗಳಾದರು. ತುಳುನಾಡನ್ನು ರಾಜಧಾನಿ ಉದಯಪುರದಿಂದ ರಣಸಾಗರನು ಆಳುತ್ತಿದ್ದುದಕ್ಕೆ ಅವನ ಉದ್ಯಾವರದ ಶಾಸನ ಸಾಕ್ಷಿಯಾಗಿದೆ[೩೬]. ಆದರೆ ಇವರು ರಾಷ್ಟ್ರಕೂಟರ ಅಧೀನತ್ವವನ್ನು ಒಪ್ಪದಿರದ ವಿಷಯ ನಮಗೆ ಶಿವಮೊಗ್ಗಾ ಜಿಲ್ಲೆಯ ಸೊರಬ ತಾಲೂಕಿನ ಮಾವಳಿ ಶಾಸನದಿಂದ ತಿಳಿದುಬರುತ್ತದೆ[೩೭].

ಎರಡನೆಯ ಚಿತ್ರವಾಹನ ಮತ್ತು ರಣಸಾಗರರ ನಡುವಿನ ಅಂತಃಕಲಹ ಹಾಗೆಯೇ ಮುಂದುವರೆದು ಅವರು ಮರಣಿಸಿದ ನಂತರ ಕೂಡ ಅವರ ಮಕ್ಕಳಾದ ಶ್ವೇತವಾಹನ ಮತತ್ತು ಪೃಥ್ವೀಸಾಗರರ ಕಾಲದಲ್ಲಿಯೂ ಮುಂದುವರೆಯಿತು. ಕೊನೆಗೆ ಪೃಥ್ವೀಸಾಗರನ ಕೈಮೇಲಾಯ್ತು. ಅವನು ಕ್ರಿ.ಶ.೮೧೦ ರಿಂದ ೮೪೦ ರ ವರೆಗೆ ರಾಜ್ಯವಾಳಿದನು. ಅವನಾಳ್ವಿಕೆಯ ಶಾಸನವೊಂದು ಉದ್ಯಾವರದಲ್ಲಿ ದೊರೆತಿದ್ದು, ಅಳುಪರು ಸೋಮವಂಶದವರೆಂದೂ, ಪೃಥ್ವೀಸಾಗರನನ್ನು ಉದಯಾದಿತ್ಯ, ಉತ್ತಮಪಾಂಡ್ಯ ಮತ್ತು ಆಳುವರಸನೆಂದು ಕರೆದಿದೆ[೩೮].

ಪೃಥ್ವೀಸಾಗರನ ಮಗನಾದ ವಿಜಯಾದಿತ್ಯ ಮಾರಮ್ಮನು ಕೆಲಕಾಲ ಸ್ವತಂತ್ರನಾಗಿ ಆಳ್ವಿಕೆ ನಡೆಸಿರುವ ಸಾಧ್ಯತೆಯಿದೆ. ಕಾರಣ ಇವನ ಶಾಸನಗಳು ಇವನನ್ನು ಪರಮೇಶ್ವರ, ಅಧಿರಾಜರಾಜ ಎಂಬ ಚಕ್ರೇಶ್ವರರಿಗೆ ಮೀಸಲಾದ ಬಿರುದುಗಳನ್ನು ಹೇಳಿವೆ ಅಲ್ಲದೆ ಇವನಿಗೆ ವಿಜಯಾದಿತ್ಯ, ಉತ್ತಮಪಾಂಡ್ಯ ಮತ್ತು ಆಳುವರಸ ಎಂಬ ಹೆಸರುಗಳನ್ನು ಸೂಚಿಸಿವೆ[೩೯]. ಅಲ್ಲದೆ ಗಂಗರೊಡನೆ ಈತನು ಸಖ್ಯ ಬೆಳಸಿದ್ದ ವಿಷಯವೂ ತಿಳಿದುಬರುತ್ತದೆ.

ಮಾರಮ್ಮನ ನಂತರ ಅವನ ಮಗ ವಿಮಲಾದಿತ್ಯನು ಪಟ್ಟಕ್ಕೆ ಬಂದನು. ರಾಷ್ಟ್ರಕೂಟರ ವೈರಿಗಳಾದ ಗಂಗರೊಡನೆ ಸ್ನೇಹದಿಂದಿದ್ದ ಇವರ ಮೇಲೆ ರಾಷ್ಟ್ರಕೂಟರಿಗೆ ಸಿಟ್ಟುಬಂದಿರಬೇಕು. ಆದರೆ ಶಾಂತಿಪ್ರಿಯನಾದ ಅಮೋಘವರ್ಷನು ಇವರ ಮೇಲೆ ಯಾವುದೇ ಕ್ರಮ ಕೈಗೊಳ್ಳಲಿಲ್ಲ. ಮುಂದೆ ಬಂದ ಎರಡನೆಯ ಕೃಷ್ಣನು ತುಳುವರ ಮೇಲೆ ಸೈನ್ಯವನ್ನು ಕಳಿಸಿ ಯುದ್ಧ ಸಾರಿದನು. ಆಗ ವಿಮಳಾದಿತ್ಯ ರಣರಂಗದಲ್ಲಿಯೇ ಸಾವನ್ನಪ್ಪಿದನೆಂದು ಕ್ರಿ.ಶ. ೯ನೆಯ ಶತಮಾನದ ಕೊನೆಯ ಕಾಲಕ್ಕೆ ಸೇರಿದ ಉಡುಪಿಯ ಅನಂತೇಶ್ವರ ದೇಗುಲದ ಶಾಸನದಿಂದ ತಿಳಿದುಬರುತ್ತದೆ[೪೦].

ಹೀಗೆ ಎರಡನೆಯ ಆಳುವರಸನ ಕಾಲದಿಂದ ಕೆಲಕಾಲ ಪಲ್ಲವರ ಸಾಮಂತರಾಗಿಯೂ, ಕೆಲಕಾಲ ಸ್ವತಂತ್ರರಾಗಿಯೂ ಆಳ್ವಿಕೆ ನಡೆಸಿದ ಅಳುಪರು ಮತ್ತೆ ರಾಷ್ಟ್ರಕೂಟರ ಆಧೀನತ್ವವನ್ನು ಒಪ್ಪಿಕೊಳ್ಳಬೇಕಾಯಿತು.

ವಿಮಳಾದಿತ್ಯನ ಮಗನಾದ ರಣಂಜಯನನ್ನು ರಾಷ್ಟ್ರಕೂಟರ ಎರಡನೆಯ ಕೃಷ್ಣನು ಅಳುಪರ ಸಿಂಹಾಸನಕ್ಕೆ ಉತ್ತರಾಧಿಕಾರಿಯನ್ನಾಗಿ ನೇಮಿಸಿ ತನ್ನ ಕೈಕೆಳಗಿನ ಅಧಿಕಾರಿಯಾದ ಸಾಮಂತಾಧಿಪತಿ ಇಂದಪಯ್ಯನನ್ನು ಅಳುವಖೇಡ-೬೦೦೦ ದ ಆಡಳಿತಾಧಿಕಾರಿಯನ್ನಾಗಿ ನೇಮಿಸಿದನು[೪೧].

ರಣಂಜಯನ ನಂತರ ಅವನ ಮಗನಾದ ಕುಂದವರ್ಮನು ಅಪ್ರಾಪ್ತವಯಸ್ಕನಾಗಿದ್ದರಿಂದ ಅವನ ಚಿಕ್ಕಪ್ಪ ದತ್ತಾಳುಪನು ಆಳ್ವಿಕೆಗೆ ಬಂದನು. ಕೆಲಕಾಲ ನಂತರ ವಯಸ್ಕನಾದ ಕುಂದವರ್ಮನಿಗೆ ದತ್ತಾಳುಪನು ರಾಜ್ಯಭಾರವನ್ನು ವಹಿಸದೇ ಹೋದಾಗ ಬಲಪ್ರಯೋಗದಿಂದ ಅದನ್ನು ಅವನು ಪಡೆದ ವಿಷಯ ಕ್ರಿ.ಶ. ೯೬೮ಕ್ಕೆ ಸೇರಿದ ಅವನ ಕದಿರಿ ಪ್ರತಿಮಾ ಶಾಸನದಿಂದ ತಿಳಿಯುತ್ತದೆ[೪೨].

ಕುಂದವರ್ಮನ ತರುವಾಯ ಅವನ ಮಗನಾದ ಒಂದನೆಯ ಜಯಸಿಂಹ ಪಟ್ಟಕ್ಕೆ ಬಂದನು. ಇದಕ್ಕೆ ಕ್ರಿ.ಶ. ೧೦ ನೆಯ ಶತಮಾನದ ಕೊನೆಯ ಭಾಗಕ್ಕೆ ಸೇರಿದ ಕಾಸರಗೋಡು ತಾಲೂಕಿನ ತಳಂಗೆರೆ ಶಾಸನ ಸಾಕ್ಷಿಯಾಗಿದೆ[೪೩]. ಇವನಾಳ್ವಿಕೆಯ ಕೊನೆಯಲ್ಲಿ ತುಳುನಾಡಿನ ಮೇಲೆ ಚೋಳರ ಧಾಳಿಯಿಂದಾಗಿ ತುಳುನಾಡು ಚೋಳರ ವಶವಾಯ್ತು[೪೪].

ಸುಮಾರು ೧೦ ವರ್ಷಗಳ ಕಾಲ ಚೋಳರ ಆಧೀನವಾದ ತುಳುನಾಡನ್ನು ಒಂದನೆಯ ಜಯಸಿಂಹನ ಮಗ ಒಂದನೆಯ ಬಂಕಿದೇವನು ಸ್ವತಂತ್ರಗೊಳಿಸಿದ ವಿಷಯವನ್ನು ಅವನಾಳ್ವಿಕೆಯ ಬಾರಕೂರಿನ ಶಾಸನದಿಂದ ನಮಗೆ ತಿಳಿದುಬರುತ್ತದೆ[೪೫]. ಅಲ್ಲದೇ ಶಾಸನವು ಮುಂದುವರೆದು ಬಂಕಿದೇವನು ಚೋಳರನ್ನು ಹೊಡೆದೋಡಿಸಿ

"ತುಳುವಿಷಯದೊಳ್ ನಿಜಾಜ್ಞೆಯಂ ನಿಲಿ"ಸುವಲ್ಲಿ ಅವನಿಗೆ ಸಾಂತಳಿಗೆ ನಾಡನ್ನಾಳುತ್ತಿದ್ದ ಶಾಂತರರಾಜನೂ ಮತ್ತು ೧೨೦ ಮಾಂಡಲಿಕರು ಸಹಾಯ ನೀಡಿದರೆಂದು ಹೇಳುತ್ತದೆ. ಹೀಗೆ ಮತ್ತೆ ರಾಷ್ಟ್ರಕೂಟರ ಆಧಿನತ್ವಕ್ಕೆ ಅಳುಪರ ರಾಜ್ಯವು ಸೇರಿತು.

ಬಿಲ್ಹಣನ 'ವಿಕ್ರಮಾಂಕದೇವ ಚರಿತೆ'ದ ಪ್ರಕಾರ ಒಂದನೆಯ ಬಂಕಿದೇವನ ನಂತರ ಬಂದ ಅಳುಪ ರಾಜರಾದ ಪಟ್ಟಿಯೊಡೆಯ, ಪಾಂಡ್ಯಪಟ್ಟಿಯೊಡೆಯ ಮತ್ತು ಕವಿ ಅಳುಪೇಂದ್ರರನ್ನು ಆರನೆಯ ವಿಕ್ರಮಾದಿತ್ಯನು ಸೋಲಿಸಿ ಸಾಮಂತರನ್ನಾಗಿಸಿಕೊಂಡಿದ್ದ[೪೬].

ಪಟ್ಟಿಯೊಡೆಯನಿಗೆ ಆಳ್ವರ್ ಅಥವಾ ಅಳುವರಸನೆಂಬ ಹೆಸರು ಇತ್ತು. ಇವನ ಕಾಲಕ್ಕೆ ಕಲ್ಯಾಣ ಚಾಲುಕ್ಯ ವಿಕ್ರಮಾದಿತ್ಯನ ಸಾಮಂತ ಗೋವೆಯ ಕದಂಬರಾಜ ಒಂದನೆಯ ಜಯಕೇಶಿಯು ತುಳುವನಾಡನ್ನು ಗೆದ್ದು ಚಾಲುಕ್ಯ ಸಾಮ್ರಾಜ್ಯಕ್ಕೆ ಸೇರಿಸಿ ಅವರನ್ನು ಕಲ್ಯಾಣಿ ಚಾಲುಕ್ಯರ ಸಾಮಂತರನ್ನಾಗಿಸಿದನು[೪೭].

ಪಟ್ಟಿಯೊಡೆಯನ ನಂತರ ಆತನ ಮಗ ಪಾಂಡ್ಯಪಟ್ಟಿಯೊಡೆಯ ಪಟ್ಟಕ್ಕೆ ಬಂದನು. ಇವನಿಗೆ ಪಾಂಡ್ಯಪಟ್ಟಿಗದೇವ, ಕುಮಾರಪಾಂಡ್ಯ ಜಯಸಿಂಗರಸ, ಅಳುವರಸ ಎಂಬ ಹೆಸರುಗಳಿದ್ದಂತೆ ತಿಳಿಯುತ್ತದೆ[೪೮]. ಚಾಲುಕ್ಯರ ಆಧಿಪತ್ಯವನ್ನು ತಿರಸ್ಕರಿಸಲೆತ್ನಿಸಿದ ಈತನನ್ನು ಶಿಕ್ಷಿಸಲು ಆರನೆಯ ವಿಕ್ರಮಾದಿತ್ಯನು ತನ್ನ ಸಾಮಂತನಾದ ಹೊಯ್ಸಳ ವಿಷ್ಣುವರ್ಧನನನ್ನು ಇವನ ಮೇಲೆ ಧಾಳಿಯಿಡಲು ಕಳಿಸಿದನು. ಕ್ರಿ.ಶ.೧೧೧೦ ರಲ್ಲಿ ನಡೆದ ಯುದ್ಧದಲ್ಲಿ ಈತನು ಸೋತು ಮರಣಿಸಿದನು[೪೯].

ಪಾಂಡ್ಯಪಟ್ಟಿಯೊಡೆಯನ ನಂತರ ಕವಿ ಅಳುಪೇಂದ್ರನು ಅಧಿಕಾರಕ್ಕೆ ಬಂದು ಸುಮಾರು ೫೦ ವರ್ಷಗಳವರೆಗೆ ಆಳ್ವಿಕೆ ಮಾಡಿದನೆಂದು ಅವನ ಶಾಸನಗಳಿಂದ ತಿಳಿದುಬರುತ್ತದೆ. ಮುಂದೆ ಕೆಲಸಮಯದ ನಂತರ ಹೊಯ್ಸಳ ವಿಷ್ಣುವರ್ಧನ ಮತ್ತೆ ದಂಡೆತ್ತಿ ಬಂದು ಅಳುಪರನ್ನು ಸೋಲಿಸಿದನು. ಈ ಧಾಳಿಯಲ್ಲಿ ಹೊಯ್ಸಳ ಸೇನೆಯ ನೇತೃತ್ವವನ್ನು ವಿಷ್ಣುವರ್ಧನನ ಅನುಯಾಯಿಯಾದ ಹಿರಿಯಹಡವಳ ಬೋಕಿಮಯ್ಯನು ವಹಿಸಿದ್ದನು[೫೦].

ಕವಿಯಾಳುಪನ ಮಗನಾದ ಒಂದನೆಯ ಕುಲಶೇಖರನು ಅವನ ನಂತರ ಪಟ್ಟಕ್ಕೆ ಬಂದನು. ಕ್ರಿ.ಶ.೧೧೬೩-೬೪ ರಲ್ಲಿ ಆಗತಾನೆ ಪ್ರಬಲನಾಗುತ್ತಿದ್ದ ಕಲಚೂರಿ ಬಿಜ್ಜಳನು ಸಾಂತಳಿಗೆಯನ್ನು ವಶಪಡಿಸಿಕೊಳ್ಳಲು ಸೈನ್ಯ ಕಳಿಸಿದನು. ಈ ಸಮಯದಲ್ಲಿ ಸಂಭಂದಿಗಳಾದ ಅವರನ್ನು ರಕ್ಷಿಸಲು ಕುಲಶೇಖರನು ಶಾಂತರರೊಂದಿಗೆ ಕೈಜೋಡಿಸಿ ಅವನನ್ನು ಹಿಮ್ಮೆಟ್ಟಿಸಿದನು[೫೧].

ಕುಲಶೇಖರನ ನಂತರ ಅವನ ಮಗ ವಲ್ಲಭದೇವನು ಅಪ್ರಾಪ್ತವಯಸ್ಕನಾಗಿದ್ದರಿಂದ ಶಾಂತರರ ಮನೆತನದ ಕುಂಡಣನು ಆಳ್ವಿಕೆಗೆ ಬಂದನು.

ಮುಂದೆ ಆಳಿದ ವಲ್ಲಭದೇವ ಎರಡನೆಯ ದತ್ತಾಳುಪ (ಕ್ರಿ.ಶ.೧೨೩೦-೫೦), ವೀರಪಾಂಡ್ಯ ಆಳುಪೇಂದ್ರದೇವ (ಕ್ರಿ.ಶ.೧೨೫೦-೭೫), ಆತನ ರಾಣಿ ಬಲ್ಲಮಹಾದೇವಿ (ಕ್ರಿ.ಶ.೧೨೭೫-೯೨), ಆಳಿಯ ಎರಡನೆಯ ಬಂಕಿದೇವ (ಕ್ರಿ.ಶ.೧೨೮೫-೧೩೧೫) ಮತ್ತು ಆಕೆಯ ಮಗ ನಾಗದೇವರಸ (ಕ್ರಿ.ಶ.೧೨೯೨-೧೩೦೦)ರ ಕಾಲದಲ್ಲಿ ಅಳುಪರು ಸ್ವತಂತ್ರರಾಗಿದ್ದಂತೆ ತೋರುವದು. ಅಲ್ಲದೇ ಸಾಮ್ರಾಜ್ಯದಲ್ಲಿನ ಒಳಜಗಳಗಳಿಂದಾಗಿ ಅಳುಪ ಸಾಮ್ರಾಜ್ಯಕ್ಕೆ ಎರಡು ಸಿಂಹಾಸನಗಳಾದವು.

ಅಳಿಯ ಎರಡನೆಯ ಬಂಕಿದೇವನ ಮಗನಾದ ಸೋಯಿದೇವ ಅಳುಪೇಂದ್ರನು ಅವನ ನಂತರ ಉತ್ತರಾಧಿಕಾರಿಯಾದನು[೫೨]. ಮೂರನೆಯ ವೀರಬಲ್ಲಾಳನು ತನ್ನ ದಂಡನಾಯಕ ಸಂಕಿಯ ಸಾಹಣಿಯ ನೇತೃತ್ವದಲ್ಲಿ ಸೈನ್ಯವನ್ನು ಕಳುಹಿಸಿ ಚಂದಾವರವನ್ನು ಮುತ್ತಿ ತುಳುವರ ಬಲವನ್ನು ಕೆಡಿಸಿದ ವಿಷಯ ಕ್ರಿ.ಶ.೧೩೧೯ ಕ್ಕೆ ಸೇರಿದ ಶಿವಮೊಗ್ಗ ಜಿಲ್ಲೆಯ ಹೊನ್ನಳ್ಳಿ ತಾಲೂಕಿನ ಹನಗವಾಡಿ ಶಾಸನ ಉಲ್ಲೇಖಿಸಿದೆ[೫೩]. ಆದರೆ ಕ್ರಿ.ಶ. ೧೩೩೩ ರಲ್ಲಿ ತುಳುನಾಡಿನ ಮೇಲೆ ಹೊಯ್ಸಳರು ನಡೆಸಿದ ಅತಿಕ್ರಮಣವನ್ನು ಹಿಮ್ಮೆಟ್ಟಿಸುವದು ಅಸಾಧ್ಯವೆಂದು ಮನಗಂಡ ಸೋಯಿದೇವನು ರಾಜಕುಮಾರಿ ಚಿಕ್ಕಾಯಿ ತಾಯಿಯನ್ನು ಮೂರನೆಯ ಬಲ್ಲಾಳನಿಗೆ ಮದುವೆ ಮಾಡಿಕೊಟ್ಟನು. ಆದರೆ ಹೊಯ್ಸಳ ಬಲ್ಲಾಳನು ಇದರಿಂದ ತೃಪ್ತನಾಗದೇ ಹೊಯ್ಸಳರು ಆ ನಾಡಿನ ಅಧಿಪತಿಗಳಾಗಿ, ಅಳುಪರು ಪ್ರಭುಗಳಾಗಿ ಮುಂದುವರೆಯುವಂತೆ ನಿರ್ಧರಿಸಿದನು[೫೪].

ಸೋಯಿದೇವನ ನಂತರ ಆಳ್ವಿಕೆಗೆ ಬಂದ ಎರಡನೆಯ ಕುಲಶೇಖರನೂ ಕೂಡ ಹೊಯ್ಸಳ ಮೂರನೆಯ ಬಲ್ಲಾಳನ ಸಾಮಂತನಾಗಿ ಮುಂದುವರೆದನು. ಮುಂದೆ ಕ್ರಿ.ಶ. ೧೩೩೬ ರಲ್ಲಿ ಹೊಯ್ಸಳರ ಅವನತಿಯಾಗಿ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯೊಡನೆ ತುಳುನಾಡು ವಿಜಯನಗರದ ಅಧಿನತ್ವವನ್ನು ಒಪ್ಪಿಕೊಂಡಿತು.

## ಉಚ್ಚಂಗಿಯ ಪಾಂಡ್ಯರು:

ಪಾಂಡ್ಯರು ಇಂದಿನ ಬಳ್ಳಾರಿ ಜಿಲ್ಲೆಯ ಹರಪನಹಳ್ಳಿ ತಾಲೂಕಿನ ಉಚ್ಚಂಗಿ ದುರ್ಗವನ್ನು ತಮ್ಮ ರಾಜಧಾನಿಯನ್ನಾಗಿಸಿಕೊಂಡು ನೊಳಂಬವಾಡಿ-೩೨,೦೦೦ ಮತ್ತಿತರ ವಿಭಾಗಗಳನ್ನು ಆಳುತ್ತಿದ್ದರು. ಅಲ್ಲದೆ ಕಲ್ಯಾಣಿ ಚಾಲುಕ್ಯರಿಗೆ ನಿಷ್ಠರಾಗಿ ಚಾಲುಕ್ಯ-ಚೋಳರ ನಡುವಿನ ಸಂಘರ್ಷಗಳಲ್ಲಿ ಪ್ರಮುಖ ಪಾತ್ರ ವಹಿಸಿದವರಾಗಿದ್ದಾರೆ. ಇವರು ಧರಿಸಿದ ತ್ರಿಭುವನಮಲ್ಲ ಎಂಬ ಬಿರುದಿನಿಂದ ಚಾಲುಕ್ಯರು ಇವರಿಗೆ ನೀಡಿದ ಸ್ಥಾನಮಾನವನ್ನು ಗಮನಿಸಬಹುದು.

ಮಂಗಯ್ಯ ಅಥವಾ ಆದಿತ್ಯದೇವರು ಪಾಂಡ್ಯಕುಲದ ಸ್ಥಾಪಕ. ಇವನು ತನ್ನನ್ನು ಯಾದವ ಕುಲದವನೆಂದು ಕರೆದುಕೊಂಡಿದ್ದಾನೆ[೫೫]. ಆದಿತ್ಯದೇವನ ನಂತರ ಅವನ ಮಗ ಪಾಂಡ್ಯನು ಅಧಿಕಾರಕ್ಕೆ ಬಂದನು. ಇವನು ತೇಜರಾಜನೆಂಬ ಬಿರುದನ್ನು ಹೊಂದಿದ್ದನು[೫೬]. ಇವನ ನಂತರ ಚೇದಿ ಅರಸರನ್ನು ಸದೆ ಬಡಿದವನೂ, ತೇಜರಾಜನ ಮಗನೂ ಆದ ಚೇದಿರಾಜ ಪಾಂಡ್ಯನು ಅಧಿಕಾರಕ್ಕೆ ಬಂದನು[೫೭]. ಪಾಂಡ್ಯರ ನಿಜವಾದ ಸ್ಥಾಪಕನು ಈ ಚೇದಿರಾಜನೆಂದೇ ಹೇಳಬೇಕು.

ಇವನ ಕಾಲದಲ್ಲಿ ಪಾಂಡ್ಯರು ಚಾಲುಕ್ಯರ ಅತ್ಯಂತ ಪ್ರಮುಖ ಸಾಮಂತ ಮನೆತನಗಳಲ್ಲಿ ಒಂದಾಗಿದ್ದರು. ಚೇದಿರಾಜನು ಚಾಲುಕ್ಯ ಒಂದನೆಯ ಸೋಮೇಶ್ವರನ ನಿಷ್ಠಾವಂತ ಸಾಮಂತನಾಗಿದ್ದನು. ಬಿಲ್ಹಣನ ವಿಕ್ರಮಾಂಕದೇವ ಚರಿತದ ಪ್ರಕಾರ "ಸೋಮೇಶ್ವರನು ಚೇದಿ ಅಥವಾ ದಹಲ ರಾಜ್ಯದ ರಾಜಧಾನಿ ತ್ರಿಪುರಾವನ್ನು ವಶಪಡಿಸಿಕೊಳ್ಳುವಲ್ಲಿ ಹಾಗೂ ಅದರ ರಾಜನಾದ ಕರಣನನ್ನು ಸೋಲಿಸುವಲ್ಲಿ ಈ ಚೇದಿರಾಜನು ಪ್ರಮುಖ ಪಾತ್ರ ವಹಿಸಿದ್ದನು"[೫೮].

ಚೇದಿರಾಜನ ಸಹೋದರನಾದ ಇರುಕ್ಕಪಾಲನು ಅವನ ನಂತರ ಆಳ್ವಿಕೆ ನಡೆಸಿದನು[೫೯]. ಇವನ ಕಾಲದಲ್ಲಿ ಅಂತಹ ಮಹತ್ವದ ಘಟನೆಗಳೇನೂ ನಡೆಯದಿದ್ದರೂ, ಇವನು ಚಾಲುಕ್ಯ ಸಾಮಂತನಾಗಿರಲಿಲ್ಲ. ಆದರೆ ಇವನು ಚೋಳರ ರಾಜಕುಮಾರಿಯನ್ನು ಮದುವೆಯಾದನು. ಜೊತೆಗೆ ಚಾಲುಕ್ಯರ ಸಾಮಂತನಾದ ಹೊಯ್ಸಳ ಎರೆಯಂಗನಿಗೆ ತನ್ನ ಮಗಳಾದ ಮಹಾದೇವಿಯನ್ನು ನೀಡಿ ಮದುವೆ ಮಾಡಿದ್ದನು[೬೦].

ಚೇದಿರಾಜನ ಮಗನಾದ ಪಾಲಂತ ಅಥವಾ ಪಾಲಮಾಂಡ್ಯ ಪಾಂಡ್ಯನು ಅವನ ನಂತರ ಚಾಲುಕ್ಯರ ಸಾಮಂತನಾಗಿದ್ದನು[೬೧]. ಇವನು ಚಾಲುಕ್ಯ ಆರನೆಯ ವಿಕ್ರಮಾದಿತ್ಯನ ಸಾಮಂತನಾಗಿದ್ದನು. ಇವನು ನೊಳಂಬವಾಡಿ-೩೨,೦೦೦ದ ಆಡಳಿತಗಾರನಾಗಿದ್ದನು[೬೨]. ಕ್ರಿ.ಶ. ೧೦೭೯-೮೦ ನೆಯ, ನಾಲ್ಕನೆಯ ಚಾಲುಕ್ಯ ವಿಕ್ರಮ ವರ್ಷದ ಶಾಸನದಲ್ಲಿ ಇವನನ್ನು ನಿಗಲಂಕಮಲ್ಲ ಪಾಂಡ್ಯನೆಂದು ಕರೆಯಲಾಗಿದೆ. ಇವನು ಚಾಲುಕ್ಯರಿಗೂ ಚೋಳರಿಗೂ ಅವರವರ ರಾಜ್ಯಗಳನ್ನು ಪಡೆಯಲು ನೆರವಾದನೆಂದು ತಿಳಿಯುತ್ತದೆ[೬೩]. ಚಾಲುಕ್ಯ ಚೋಳರ ನಡುವೆ ನಡೆದ ಸಂಘರ್ಷಗಳಲ್ಲಿ ಇವನ ಪಾತ್ರ ಮಹತ್ವದ್ದಾಗಿತ್ತು.

ಮೊದಲನೆಯ ತ್ರಿಭುವನಮಲ್ಲರಾಯ ಪಾಂಡ್ಯನ ಉಲ್ಲೇಖ ಕ್ರಿ.ಶ. ೧೦೭೯ ರ ನೀಲಗುಂದ ಶಾಸನದಿಂದ ತಿಳಿಯುತ್ತದೆ[೬೪]. ಈತನು ನೊಳಂಬವಾಡಿ-೩೨,೦೦೦, ಕುಣಿಯಕಲ್ಲು-೩೦೦ ಅನ್ನು ಆಳುತ್ತಿದ್ದ ವಿಷಯ ಅದರಲ್ಲಿದೆ. ಕ್ರಿ.ಶ. ೧೦೭೯ ರ ಬಾಗಳಿಯ ಶಾಸನದಲ್ಲಿಯೂ ಕೂಡ ಇವನು ನೊಳಂಬವಾಡಿಯಿಂದ ಆಳುತ್ತಿದ್ದ ವಿಷಯ ತಿಳಿಯುತ್ತದೆ[೬೫]. ವಿಕ್ರಮಾದಿತ್ಯನ ಸಾಮಂತನಾದ ಇವನ ಪರಾಕ್ರಮವನ್ನು ತಿಳಿಯಲು ಕಾಂಚಿಪುರವರಾಧೀಶ್ವರ, ಯದುವಂಶಾಂಬಿರದ್ಯುಮಣಿ, ಸುಭಟಚೂಡಾಮಣಿ, ನಿಜಕುಳಕಮಳ ಮಾರ್ತ್ತಂಡ, ಪರಿಚ್ಛೇದಿಗಂಡ, ರಾಜಿಗಚೋಳಮನೋಭಂಗ ಮುಂತಾದ ಪ್ರಶಸ್ತಿಗಳಿಂದ ಅರಿಯಬಹುದು. ರಾಜಿಗಚೋಳ ಮನೋಭಂಗ ಬಿರುದಿನಿಂದ ವಿಕ್ರಮಾದಿತ್ಯನೊಡನೆ ಈತನು ರಾಜಿಗಚೋಳ (ಚೋಳ ಅರಸ) ನನ್ನು ಯುದ್ಧದಲ್ಲಿ ಸೋಲಿಸಿದ್ದು ನಮಗೆ ತಿಳಿದುಬರುತ್ತದೆ.

ಇರುಕ್ಕವೇಲನೆಂದು ಹೆಸರುಳ್ಳ ತ್ರಿಭುವನಮಲ್ಲ ಪಾಂಡ್ಯನು ಚಾಲುಕ್ಯ ಆರನೆಯ ವಿಕ್ರಮಾದಿತ್ಯನ ಸಾಮಂತನಾಗಿ ಆಳುತ್ತಿದ್ದ ಉಲ್ಲೇಖ ಕ್ರಿ.ಶ. ೧೦೮೩ ರ ಅಂಬಳಿಯ ಶಾಸನದಲ್ಲಿ ಬರುತ್ತದೆ. ಶಾಸನದಲ್ಲಿ ಇವನನ್ನು 'ತ್ರಿಭುವನಮಲ್ಲದೇವ ಪಾದಾಬ್ಜಬ್ರಿಂಗಂ' ಎಂದು ಕರೆಯಲಾಗಿದೆ[೬೬]. ಇವನು ನೊಣಂಬವಾಡಿ-೩೨,೦೦೦ ವನ್ನು

ಕೇಸವೂರದ ನೆಲೆವೀಡಿನಿಂದ ಆಳುತ್ತಿದ್ದನೆಂದು ಮೇಲಿನ ಶಾಸನ ಮತ್ತು ಹಿರೇಉಡಿ ಶಾಸನ[೭೭]ಗಳಲ್ಲಿ ವಿವರಿಸಿದೆ. ರಾಗಿಮಸಲವಾಡ ಶಾಸನ[೭೮] ನೊಳಂಬವಾಡಿ-೩೨,೦೦೦ ಮತ್ತು ಗಂಗವಾಡಿ-೯೬,೦೦೦ ನ್ನು ಆಳುತ್ತಿದ್ದನೆಂದೂ, ಹೂವಿನಹಡಗಲಿ ಶಾಸನ[೭೯] ನೊಳಂಬವಾಡಿ ಜೊತೆಗೆ ಮಾಸವಾಡಿ-೧೪೦ನ್ನೂ ಆಳುತ್ತಿದ್ದನೆಂದು ಉಲ್ಲೇಖಿಸಿವೆ. ಇವನು ಚಕ್ರವರ್ತಿಯ ಪರವಾಗಿ ಚಾಲುಕ್ಯ-ಚೋಳ ಸಂಘರ್ಷದಲ್ಲಿ ಹೋರಾಡಿರುವದರಿಂದ, ಇವನಿಗೆ 'ರಾಜಿಗ ಚೋಳದ್ವಿಪ ಮೃಗರಾಜಂ' ಎಂಬ ಬಿರುದು ದೊರೆತಿದೆ[೮೦]. "ಪತಿಬೆಸಸೆರತ್ನಪುರದುದ್ಧತನಂ ಬೆಂಕೊಣ್ಡು ಸೂರೆಗೊಂಡಾ ಪುರಮ . . . ವತನಿತ್ತು ಪತಿಗೆ ಬಾರ್ಪೆನಲು ಪಾಂಡ್ಯನ್ರಿಪೆ' ಎಂಬ ಉಲ್ಲೇಖದಿಂದ ತ್ರಿಭುವನಮಲ್ಲ ಪಾಂಡ್ಯನು ಚಕ್ರವರ್ತಿಯ ಅಪ್ಪಣೆಯ ಮೇರೆಗೆ ರತ್ನಪುರದವರೆಗೆ ಧಾಳಿಯಿಟ್ಟು ಅದನ್ನು ಸೂರೆಗೊಂಡನೆಂದು ತಿಳಿದುಬರುತ್ತದೆ[೮೧].

ನಂತರ ಪಟ್ಟಕ್ಕೆ ಬಂದ ರಾಯಪಾಂಡ್ಯ ಅತವಾ ಎರಡನೆಯ ತ್ರಿಭುವನಮಲ್ಲ ರಾಯಪಾಂಡ್ಯನು ಪ್ರಥಮವಾಗಿ ರಾಮಘಟ್ಟ ಶಾಸನದಲ್ಲಿ ಕಂಡುಬರುತ್ತಾನೆ[೮೨]. ಇವನು ನೊಳಂಬವಾಡಿ-೩೨,೦೦೦ ಆಳುತ್ತಿದ್ದನು. ಜೊತೆಗೆ ಸಾಂತಳಿಗೆ-೧೦೦೦ ನ್ನೂ ಕೂಡ ಆಳುತ್ತಿದ್ದನೆಂದು ದಾವಣಗೆರೆ ಶಾಸನ ಹೇಳುತ್ತದೆ[೮೩]. ಇವನ ಅಧಿಕಾರಿಯನ್ನು ಆನೆಯ ಸಾಹಣಿಪಸಾಯ್ತನೆಂದು ಕರೆಯಲಾಗಿದೆ ಆದ್ದರಿಂದ ಇವನು ಆನೆಯ ಬಲವನ್ನು ಹೊಂದಿರಬೇಕೆಂದು ಊಹಿಸಬಹುದು[೮೪]. ಕ್ರಿ.ಶ. ೧೧೬೫ ರ ವಿಜಯಪಾಂಡ್ಯನ ಶಾಸನವೊಂದು ಹೇಳುವಂತೆ ರಾಯಪಾಂಡ್ಯನು ಚೋಳ, ನೇಪಾಳ, ಕಳಿಂಗ, ಸಿಂಹಳ, ಸೇಂದ್ರಕ, ಸಿಂಗ, ಕುಂತಳ ರಾಜರನ್ನು ಸೋಲಿಸಿದನೆಂದು ಉಲ್ಲೇಖಿಸಿದೆ[೮೫].

ತರುವಾಯ ಪಟ್ಟಕ್ಕೆ ವೀರಪಾಂಡ್ಯನು ಬಂದನು. ಈತನು ರಾಯಪಾಂಡ್ಯನ ಮಗನಾಗಿದ್ದನು. ಕ್ರಿ.ಶ.೧೧೪೫ ರ ಶಾಸನವೊಂದು ಹೇಳುವಂತೆ, ವೀರಪಾಂಡ್ಯನು ಮಲೆಯನ್ನು ಜಯಿಸಿ ಚಾಲುಕ್ಯ ಚಕ್ರವರ್ತಿಗೆ ಒಪ್ಪಿಸಿದನು[೮೬]. ಚಾಲುಕ್ಯ ಜಗದೇಕಮಲ್ಲನ ಸಾಮಂತನಾಗಿ ಹೊಯ್ಸಳ ನರಸಿಂಹನ ವಿರುದ್ಧ ಹೋರಾಡಿ ಜಯಗಳಿಸಿದ ವಿಷಯ ಈ ಶಾಸನದಲ್ಲಿ ನಮಗೆ ದೊರೆಯುತ್ತದೆ. ಈ ಶಾಸನದಲ್ಲಿ ಬರುವ ಮಲೆಯನ್ನು ವಿದ್ವಾಂಸರು ಹೈವೆ-೫೦೦ ಎಂದು ಗುರುತಿಸಿದ್ದಾರೆ. ಅದು ಪಶ್ಚಿಮ ಘಟ್ಟಗಳ (ಮಲೆನಾಡು) ಇಳಿಜಾರಿನಲ್ಲಿರುವ ಪ್ರದೇಶವಾಗಿದೆ. ಕ್ರಿ.ಶ. ೧೧೪೩ ರ ಶಾಸನವೊಂದರಿಂದ ತಿಳಿಯುವಂತೆ ಈತನು ಚೋಳರನ್ನು ಸದೆಬಡಿಯುವಲ್ಲಿ ಎರಡನೆಯ ಜಗದೇಕಮಲ್ಲನಿಗೆ ತುಂಬಾ ಸಹಾಯ ನೀಡಿದನು[೮೭]. ಇವನ ಕಾಲದಲ್ಲಿ ಉಚ್ಚಂಗಿಯು ರಾಜಧಾನಿ ಎಂದು ಕರೆಯಲ್ಪಟ್ಟಿತು. ಅದು ಕ್ರಿ.ಶ. ೧೧೪೯ ರಲ್ಲಿ ರಾಜಧಾನಿಯಾಯ್ತು[೮೮].

ವಿಜಯ ಪಾಂಡ್ಯನು ಆರಂಭದಲ್ಲಿ ಸಹೋದರನೊಂದಿಗೆ ಸಿಂಹಾಸನಕ್ಕಾಗಿ ನಡೆದ ಹೋರಾಟದಲ್ಲಿ ಯಶಸ್ವಿಯಾಗಿ ಗೆದ್ದು ಸಿಂಹಾಸನಾರೂಢನಾದ[೮೯]. ಈತನು ತನ್ನ ಪೂರ್ವಜರಂತೆ ಸುಮಾರು ಒಂಭತ್ತು ವರ್ಷಗಳ ಕಾಲ ಚಾಲುಕ್ಯರ ಸಾಮಂತನಾಗಿ ಮುಂದುವರೆದನು. ನಂತರ ಚಾಲುಕ್ಯ-ಕಲಚೂರಿಗಳ ಕಲಹದ ಲಾಭಪಡೆದು ಸ್ವತಂತ್ರ ಆಳ್ವಿಕೆ ನಡೆಸಿದನು. ಸ್ವತಂತ್ರತೆಯ ಕಾಲದಲ್ಲಿ, ದಾವಣಗೆರೆಯ ಶಾಸನದಲ್ಲಿ[೯೦] ಇವನ ಕಿರೀಟಾಗ್ರಗಳು ಅನೇಕ ಇಂದ್ರನೀಲಮಣಿ

ಖಚಿತವಾಗಿದ್ದವೆಂದೂ, ಬಾಹುಗಳು ಕಟಕಾಲಂಕೃತವಾಗಿದ್ದವೆಂದೂ ಹೇಳಿಕೊಂಡಿದ್ದಾನೆ. ಅಲ್ಲದೇ ಇನ್ನೊಂದು ಶಾಸನದಲ್ಲಿ ಸಪ್ತಕೊಂಕಣಗಳನ್ನು ಲೀಲಾಜಾಲವಾಗಿ ಜಯಿಸಿ, ಕನಕಪರ್ವತದಲ್ಲಿ ಮತ್ಸ್ಯ ಲಾಂಛನದ ಜಯಸ್ತಂಭವನ್ನು ನಡೆಸಿದ್ದನಂತೆ; ಅವನ ರಾಜ್ಯಕೋಶದಲ್ಲಿ ತಾಮ್ರಪರ್ಣಿಯಿಂದ ತಂದ ಮುತ್ತುಗಳು ತುಂಬಿದ್ದವಂತೆ; ಅವನ ಭೋಗಮಂದಿರವು ಮಲಯ ಪರ್ವತದ ತಪ್ಪಲಿನಲ್ಲಿ ಶ್ರೀಗಂಧ ವೃಕ್ಷರಾಶಿಗಳ ನಡುವೆ ವಿರಾಜಿಸುತ್ತಿತ್ತೆಂದು ವರ್ಣಿಸಲಾಗಿದೆ[೫೧]. ಇವನ ಕಾಲದಲ್ಲಿ ಚೋಳರು ೧೨ ವರ್ಷ ಉಚ್ಚಂಗಿ ದುರ್ಗಕ್ಕೆ ಮುತ್ತಿಗೆ ಹಾಕಿದರೂ ಅದನ್ನು ಹಿಡಿಯಲಾಗಲಿಲ್ಲ. ಆದರೆ ಹೊಯ್ಸಳ ರಾಜನಾದ ಇಮ್ಮಡಿ ಬಲ್ಲಾಳನು ಉಚ್ಚಂಗಿ ದುರ್ಗಕ್ಕೆ ಮುತ್ತಿಗೆ ಹಾಕಿ ಅದನ್ನು ವಶಪಡಿಸಿಕೊಂಡು ಪಾಂಡ್ಯರ ಬಲವನ್ನು ಮುರಿದನು. ಅಲ್ಲಿನ ಎಲ್ಲಾ ಸಂಪತ್ತನ್ನು ಕೊಳ್ಳೆಹೊಡೆದನು[೫೨]. ವಿಜಯ ಪಾಂಡ್ಯನು ಇಲ್ಲಿ ಸೆರೆಸಿಕ್ಕು ಹೊಯ್ಸಳರ ಆಧೀನತೆಯನ್ನು ಒಪ್ಪಿಕೊಂಡು ನಂತರ ಅವನ ರಾಜ್ಯವನ್ನು ಮರಳಿ ಪಡೆದನು[೫೩].

ವಿಜಯಪಾಂಡ್ಯನು ಬಲ್ಲಾಳನಿಂದ ಸೋಲುಂಡಿದ್ದರೂ ಅವನ ಮಗನಾಗಿದ್ದ ಉದಯಾದಿತ್ಯ ಹೊಯ್ಸಳರ ಆಧೀನತೆಯನ್ನು ಒಪ್ಪಿಕೊಂಡಂತೆ ಕಾಣುವದಿಲ್ಲ. ಕಾರಣ ಒಂದು ಶಾಸನವು ಇವನನ್ನು ಚಾಲುಕ್ಯ ನಾಲ್ಕನೆಯ ಸೋಮೇಶ್ವರನ ಪಾದಪದ್ಮೋಪಜೀವಿ ಎಂದು ಕರೆಯುತ್ತದೆ[೫೪]. ಅಲ್ಲದೇ ಇವನು ನೊಳಂಬವಾಡಿಯ ಅರ್ಧಭಾಗಕ್ಕೆ ಮಾತ್ರ ಒಡೆಯನಾಗಿ ಆಳುತ್ತಿದ್ದನೆಂದು ತಿಳಿದುಬರುತ್ತದೆ. ಕಾರಣ ಬಲ್ಲಾಳನು ಈಗಾಗಲೆ ನೊಳಂಬವಾಡಿಯ ಉತ್ತರಕ್ಕಿದ್ದ ಪ್ರದೇಶಗಳ ಮೇಲೆ ಆಳುತ್ತಿದ್ದನೆಂದು ಮೂಡಿಗೆರೆಯ ಕ್ರಿ.ಶ. ೧೧೯೪ ರ ಶಾಸನ ಹೇಳುತ್ತದೆ[೫೫]. ನಂತರದಲ್ಲಿ ಇಮ್ಮಡಿ ಬಲ್ಲಾಳನು ಉಚ್ಚಂಗಿಯ ಪಾಂಡ್ಯರನ್ನು ಸಂಪೂರ್ಣವಾಗಿ ಸೋಲಿಸಿ ಹೊಯ್ಸಳ ಸಾಮ್ರಾಜ್ಯಕ್ಕೆ ಸೇರಿಸಿದನು.

## ನೊಳಂಬವಾಡಿ ಪಾಂಡ್ಯರು:

ಚಿತ್ರದುರ್ಗ ಜಿಲ್ಲೆಯ ಹೊಳಲ್ಕೆರೆ ಶಾಸನದ ಪ್ರಕಾರ ನಾವು ಈ ಪಾಂಡ್ಯರ ನೊಳಂಬವಾಡಿಯ ಇನ್ನೊಂದು ಶಾಖೆಯನ್ನು ಗುರುತಿಸಬಹುದು. ಉಚ್ಚಂಗಿ ಪಾಂಡ್ಯ ಮನೆತನದ ವಿಜಯ ಪಾಂಡ್ಯನ ಆಳ್ವಿಕೆಯ ಕಾಲಕ್ಕೆ ಸಾಮ್ರಾಜ್ಯಕ್ಕಾಗಿ ನಡೆದ ಅಂತಃಕಲಹದಲ್ಲಿ ನೊಳಂಬವಾಡಿಯ ಕೆಲಭಾಗ ಈ ಮನೆತನಕ್ಕೆ ಸೇರಿತು[೫೬].

ಶಾಸನವೊಂದು ಹೇಳುವಂತೆ ಚಾಲುಕ್ಯ-ಕಲಚೂರಿಗಳ ಮಧ್ಯೆ ನಡೆದ ಕಲಹದ ಸಮಯದಲ್ಲಿ ಕಲಚೂರಿಯರು ಬೆಂಬಲಿಸಿದ ಪಾಂಡ್ಯರಾಜನೇ ಈ ಮನೆತನದ ಪಲಟ್ಟ ಪಾಂಡ್ಯನಾಗಿದ್ದಾನೆ[೫೭]. ಇವನೇ ಈ ಮನೆತನದ ಮೊದಲ ರಾಜನಾಗಿ ಕಲಚೂರಿ ಬಿಜ್ಜಳನ ಆಧೀನನಾಗಿ ಆಳ್ವಿಕೆ ಮಾಡಿದನು.

ಇವನ ನಂತರ ಐದುಜನ ಈ ಮನೆತನದಲ್ಲಿ ಆಳ್ವಿಕೆ ನಡೆಸಿದರು. ಇವರಲ್ಲಿ ಪೊಂಡಿ ಪಾಂಡ್ಯನು ಪ್ರಸಿದ್ಧನಾದ ಅರಸನಾಗಿದ್ದನು[೫೮]. ಇವನ ನಂತರ ರಾಯಪಾಂಡ್ಯ, ನೊಲೆಯಪಾಂಡ್ಯ, ಅವನ ಮಗ ಕಾಮದೇವ ಉತ್ತರಾಧಿಕಾರಿಗಳಾದರು. ನಂತರ ಕಾಮದೇವನ ಮಗ (ಅವನ ಹೆಸರು ಅಳಿಸಿಹೋಗಿದೆ) ಆಳ್ವಿಕೆ ನಡೆಸಿದನು[೫೯]. ಕಾಮದೇವನ ಮಗನ ನಂತರ ಶಾಸನವು ಹೇಳುವಂತೆ ಇವರ ವಂಶದ ಆಳ್ವಿಕೆಯನ್ನು ಕೊನೆಗೊಳಿಸಿ ಹೊಯ್ಸಳ ವೀರಬಲ್ಲಾಳನು ನೊಳಂಬವಾಡಿಯ ಮೇಲೆ ತನ್ನ ಪ್ರಭುತ್ವ ಸ್ಥಾಪಿಸಿದನು[೬೦].

ಹೀಗೆ ಪಲಟ್ಟ ಪಾಂಡ್ಯನಿಂದ ಪ್ರಾರಂಭವಾದ ಪಾಂಡ್ಯರ ಈ ಶಾಖೆಯು ಸುಮಾರು ೬೦ ವರ್ಷಗಳ ಆಳ್ವಿಕೆಯ ನಂತರ ಕ್ರಿ.ಶ.ಸು ೧೧೫೫ ರಲ್ಲಿ ಕೊನೆಗೊಂಡಿತು.

## ಹೈವೆಯ ಪಾಂಡ್ಯರು:

ಈ ಮನೆತನದ ಇತಿಹಾಸವನ್ನರಿಯಲು ಒಂದೇ ಒಂದು ಶಾಸನ ಆಧಾರವಿದೆ. ಆದ್ದರಿಂದ ಇವರ ಸಂಪೂರ್ಣ ಇತಿಹಾಸವನ್ನು ರಚಿಸುವದು ಕಷ್ಟಸಾಧ್ಯವಾಗಿದೆ. ಆ ಶಾಸನದಿಂದ ತಿಳಿಯುವಂತೆ ಪಾಂಡ್ಯಕುಲದ ಅರಸರು ಸಪ್ತಕೊಂಕಣಗಳಲ್ಲೊಂದಾದ ಹೈವೆ-೫೦೦ ಪ್ರದೇಶವನ್ನಾಳುತ್ತಿದ್ದರೆಂದು ತಿಳಿದುಬರುತ್ತದೆ[೧]. ಆ ಪ್ರದೇಶವು ಉತ್ತರ ಕನ್ನಡ ಜಿಲ್ಲೆಯಲ್ಲಿ ಬರುತ್ತದೆ. ಈ ಪಾಂಡ್ಯಕುಲದ ಅರಸರ ರಾಜಧಾನಿ 'ಸಿಸುಗಲ್' ಅಂದರೆ ಕಲಿತನದ ಶಿಶುವೊಂದು ಹುಟ್ಟಿದ ಪ್ರದೇಶವೆಂದು ಶಾಸನ ಹೇಳುತ್ತದೆ. ಅಲ್ಲದೇ ಈ ಮನೆತನದ ರಾಜರು ಗೋಕರ್ಣಪುರವರಾಧೀಶ್ವರರು ಮತ್ತು ಕೊಂಕಣರಾಷ್ಟ್ರ ಪಾಲಕರು ಎಂದು ಹೇಳಿಕೊಂಡಿದ್ದಾರೆ[೨]. ಇವರು ಶಾಸನಗಳಿಂದ ತಿಳಿದುಬರುವಂತೆ ಕಲ್ಯಾಣಿ ಚಾಲುಕ್ಯರ ಪ್ರಮುಖ ಸಾಮಂತರುಗಳಲ್ಲಿ ಒಬ್ಬರಾಗಿದ್ದಲ್ಲದೇ ಪಂಚಮಹಾಶಬ್ದಗಳನ್ನು ಹೊಂದಿ ಮಹಾಮಂಡಲೇಶ್ವರರೆಂಬ ಬಿರುದನ್ನು ಕೂಡಾ ಪಡೆದಿದ್ದರು.

ಮೂಲತಃ ಕೆಲವು ರಾಜರುಗಳ ಆಳ್ವಿಕೆಯ ನಂತರ ಹೈವೆಯ ಆಳ್ವಿಕೆಯನ್ನು ಮೊಟ್ಟಮೊದಲು ಚಂದ್ರನೆಂಬ ಹೆಸರಿನ ಉಲ್ಲೇಖದ ರಾಜನಾಳುತ್ತಿದ್ದುದಾಗಿ, ಇವನು ತನ್ನ ಪ್ರಜೆಗಳ ಕಣ್ಮಣಿಯಾಗಿ ಆಳುತ್ತಿದ್ದನೆಂದು ಶಾಸನದಿಂದ ತಿಳಿಯುತ್ತದೆ. ಅಲ್ಲದೇ ಹೆಚ್ಚಿನ ವಿವರಗಳು ತಿಳಿಯುವದಿಲ್ಲ[೩].

ಚಂದ್ರನ ನಂತರ ಇವನ ಮಗ ಒಂದನೆಯ ಕಾಮನು ಆಳ್ವಿಕೆಗೆ ಬಂದನು. ನಂತರ ಇವನ ಮಗ ಎರಡನೆಯ ಚಂದ್ರನು ಆಡಳಿತಕ್ಕೆ ಬಂದನು. ಶಾಸನ ಹೇಳುವಂತೆ ಇವನು ಅತ್ಯಂತ ಪರಾಕ್ರಮಿಯಾಗಿದ್ದು, ತನ್ನ ಸಂಪತ್ತಿನಲ್ಲಿ ಇಂದ್ರನನ್ನು ಮೀರಿಸಿದ್ದನೆಂದು ತಿಳಿದುಬರುತ್ತದೆ[೪]. ಎರಡನೆಯ ಚಂದ್ರನ ಮಗನಾದ ಎರಡನೆಯ ಕಾಮದೇವನು ಹೈವೆ-೫೦೦ ನ್ನು ಕ್ರಿ.ಶ. ೧೧೧೩ ರಲ್ಲಿ ಚಾಲುಕ್ಯ ಆರನೆಯ ವಿಕ್ರಮಾದಿತ್ಯನ ಸಾಮಂತನಾಗಿ ಆಳುತ್ತಿದ್ದನು. ಇವನನ್ನು ಶಾಸನವು ಸಮಧಿಗತ ಪಂಚಮಹಾಶಬ್ದ, ಮಹಾಮಂತಲೇಶ್ವರ, ಗೋಕರ್ಣಪುರವರಾಧೀಶ್ವರ, ಗಣ್ಡರದಾವುಣಿ, ಕೊಂಕಣರಾಷ್ಟ್ರಪಾಲ, ನಿಗಲಂಕಮಲ್ಲ ಮತ್ತು ಪಾಂಡ್ಯಚೂಡಾಮಣಿ ಎಂದು ಸಂಭೋಧಿಸಿದೆ[೫]. ಶಾಸನವು ಮುಂದುವರೆದು ಇವನು ಸಾಹಿತ್ಯಪ್ರೇಮಿಯಾಗಿದ್ದ ಬಗ್ಗೆ ತಿಳಿಸುತ್ತದೆ. ಇದನ್ನು ಅವನು ಕನ್ನಡದ ಪ್ರಖ್ಯಾತ ಕವಿ ಮಲ್ಲಿಕಾರ್ಜುನಭಟ್ಟನಿಗೆ ಅವನ ಆಸ್ಥಾನದಲ್ಲಿ ಆಶ್ರಯ ನೀಡಿದ್ದರಿಂದ ತಿಳಿಯಬಹುದು.

ಕ್ರಿ.ಶ. ೧೧೨೫ ರಲ್ಲಿ ಆರನೆಯ ವಿಕ್ರಮಾದಿತ್ಯನ ಸಾಮಂತನಾದ ಗೋವೆಯ ಕದಂಬ ಜಯಕೇಶಿಯು ಹೈವೆ-೫೦೦ನ್ನು ತನ್ನ ಪ್ರದೇಶಗಳೊಂದಿಗೆ ಆಳುತ್ತಿದ್ದ ಉಲ್ಲೇಖವನ್ನು ಶಾಸನವೊಂದು ಮಾಡುತ್ತದೆ[೬]. ಇದರಿಂದ ಈ

ಹೊತ್ತಿಗೆ ಕದಂಬ ಜಯಕೇಶಿಯು ಪಾಂಡ್ಯರ ಮೇಲೆ ಧಾಳಿಯೆಸಗಿ ಅವರ ಸಾಮ್ರಾಜ್ಯವನ್ನು ಕಿತ್ತುಕೊಂಡಿರಬಹುದೆಂಬುದು ತಿಳಿದುಬರುತ್ತದೆ.

ಎರಡನೆಯ ಕಾಮದೇವನ ನಂತರ ಹೈವೆ-೫೦೦ ರ ಪಾಂಡ್ಯರ ಉಲ್ಲೇಖ ಎಲ್ಲಿಯೂ ನಮಗೆ ಕಂಡುಬರುವದಿಲ್ಲವಾದರೂ, ಕ್ರಿ.ಶ. ೧೧೮೦ ರ ಶಿಖಾರಿಪುರ ಶಾಸನವೊಂದರಲ್ಲಿ ಪಾಂಡ್ಯದೇವನೆಂಬುವನು ಉದ್ದರೆ ಎಂಬ ಪಟ್ಟಣದಲ್ಲಿ ಹಲವಾರು ಆಕಳುಗಳು ಮತ್ತು ಉದೆಯಬ್ಬೆ ಎಂಬ ನೃತ್ಯಗಾರ್ತಿಯನ್ನು ಬಲವಂತದಿಂದ ಅಪಹರಿಸಿದ ಉಲ್ಲೇಖ ಬರುತ್ತದೆ[೯]. ಆದರೆ ಈ ಪಾಂಡ್ಯದೇವನಿಗೂ ಮತ್ತು ಹೈವೆ-೫೦೦ರ ಪಾಂಡ್ಯಕುಲಕ್ಕೂ ಇದ್ದ ಸಂಬಂಧದ ಬಗ್ಗೆ ತಿಳಿದುಬರುವದಿಲ್ಲ.

## ಗುತ್ತವೊಳಲಿನ ಗುತ್ತರು:

ಗುತ್ತರು ಗುತ್ತವೊಳಲು ಎಂಬ ಚಿಕ್ಕ ಪ್ರದೇಶದ ಮೇಲೆ ತಮ್ಮ ಆಳ್ವಿಕೆಯನ್ನು ಪ್ರಾರಂಭಿಸಿದರು. ಅದು ಇಂದಿನ ಹಾವೇರಿ ಜಿಲ್ಲೆಯ ಹಾವೇರಿ ತಾಲೂಕಿನ ಗುತ್ತಲ ಎಂಬ ಗ್ರಾಮವಾಗಿತ್ತು. ಇವರು ಚಾಲುಕ್ಯರ ಅಧೀನರಾಗಿ ಆಳ್ವಿಕೆಯನ್ನು ಆರಂಭಿಸಿ ನಂತರ ಕಲಚೂರಿಗಳು ಮತ್ತು ಸೇವುಣರ ಕೈಕೆಳಗೆ ಸಾಮಂತರಾಗಿ ಆಳಿದರು. ಮೊದಲು ಗುತ್ತಲದಿಂದ ಆಳ್ವಿಕೆಯನ್ನು ಆರಂಭಿಸಿದ ಇವರು ಕ್ರಮೇಣ ತಮ್ಮ ಆಳ್ವಿಕೆಯನ್ನು ಧಾರವಾಡ, ಶಿವಮೊಗ್ಗ, ಉತ್ತರ ಕನ್ನಡ ಹಾಗೂ ಬಳ್ಳಾರಿ ಜಿಲ್ಲೆಗಳಿಗೂ ಹಬ್ಬಿಸಿದರು. ಚಾಲುಕ್ಯರ ಸಾಮ್ರಾಜ್ಯ ಅವನತಿಗೀಡಾದಾಗ ಕೆಲಕಾಲ ಇವರೂ ಸ್ವತಂತ್ರರಾಗಿ ಆಳ್ವಿಕೆ ನಡೆಸಿದ್ದು ಕಂಡುಬರುತ್ತದೆ.

ಗುತ್ತರ ಪ್ರಥಮ ದೊರೆಯ ಉಲ್ಲೇಖ ಚೌಡದಾನಪುರ ಶಾಸನದಲ್ಲಿ ಬರುತ್ತದೆ. ಅದರ ಪ್ರಕಾರ ಮಾಗುತ್ತನು ಈ ವಂಶದ ಪ್ರಥಮ ವ್ಯಕ್ತಿ[೧೦]. ಶಾಸನವು ವಂಶಾವಳಿಯನ್ನು ಹೇಳುತ್ತಾ, ಮೊದಲಿಗೆ ಈತನ ಹೆಸರನ್ನು ಉಲ್ಲೇಖಿಸುವದರಿಂದ ಇವನು ಆ ವಂಶದ ಪ್ರಥಮ ದೊರೆಯೆನ್ನಬಹುದು. ಮಾಗುತ್ತನು ಶ್ರೇಷ್ಠ ಸೇನಾನಿಯಾಗಿ, ತನ್ನ ಸೈನಿಕ ಸಾಧನೆಗಳಿಂದ ವಿಕ್ರಮಾದಿತ್ಯನ ಆಧೀನದಲ್ಲಿ ಮಹಾಮಂಡಳೇಶ್ವರನೆಂದು ಗುರುತಿಸಿಕೊಂಡಿದ್ದಾನೆ. ಶಾಸನವು ಇವನನ್ನು 'ಅಪ್ರತಿಮಲ್ಲಂ' ಎಂದು ಕರೆದಿದೆ.

ತಂದೆ ಮಾಗುತ್ತನ ನಂತರ ಒಂದನೆಯ ಗುತ್ತನು ಅಧಿಕಾರಕ್ಕೆ ಬಂದನು. ಇವನು ಪೂರ್ವಜರಿಂದ ದೊರೆತ ಸಾಮ್ರಾಜ್ಯಕ್ಕಷ್ಟೇ ತೃಪ್ತನಾಗದೇ ತನ ಭುಜಬಲದಿಂದ ಅನೇಕ ವೈರಿಗಳನ್ನು ಸದೆಬಡಿದು ಸುತ್ತಲಿನ ಪ್ರದೇಶಗಳನ್ನು ತನ್ನ ಸಾಮ್ರಾಜ್ಯಕ್ಕೆ ಸೇರಿಸಿದವನು ಎಂದು ಶಾಸನ ಇವನನ್ನು ಹೊಗಳಿದೆಯಲ್ಲದೇ 'ಗುತ್ತಾನ್ವಯ-ವಂಶಾಗ್ರಣಿ' ಮತ್ತು 'ಗುತ್ತಾನ್ವಯ-ತಿಲಕಂ' ಎಂದು ಕರೆದಿದ್ದನ್ನು ನೋಡಿದಾಗ ಇವನು ತಂದೆಯಿಂದ ದೊರೆತ ಅಧಿಕಾರವನ್ನು ಚೆನ್ನಾಗಿ ಉಪಯೋಗಿಸಿಕೊಂಡಿದ್ದು ತಿಳಿಯುತ್ತದೆ[೧೧]. ಚೋಳರನ್ನು ನೊಳಂಬವಾಡಿಯಿಂದ ಸಂಪೂರ್ಣವಾಗಿ ತೊಡೆದುಹಾಕುವಲ್ಲಿ ಪ್ರಮುಖ ಪಾತ್ರವಹಿಸಿದವರಲ್ಲಿ ಇವನೂ ಒಬ್ಬನಾಗಿದ್ದನು.

ಮಲ್ಲಿದೇವನು ಒಂದನೆಯ ಗುತ್ತನ ಮಗನಾಗಿದ್ದು, ಅವನ ನಂತರ ಅಧಿಕಾರಕ್ಕೆ ಬಂದನು. ಇವನಿಗಿಂತ ಮೊದಲು ಆಳಿದ ಗುತ್ತರ ಆಳ್ವಿಕೆಯ ದಿನಾಂಕಗಳು ನಮಗೆ ಖಚಿತವಾಗಿ ದೊರೆಯುವದಿಲ್ಲ. ಆದರೆ ಇವನನ್ನು ಚೌಡದಾನಪುರ ಶಾಸನವು ಆರನೆಯ ವಿಕ್ರಮಾದಿತ್ಯನ ದಂಡನಾಯಕನಾದ ಗೋವಿಂದರಸನ ಆಧೀನ ಅಧಿಕಾರಿಯೆಂದು ಹೇಳಿದೆ[೧೦೦]. ಆದ್ದರಿಂದ ಅದರ ಆಧಾರದ ಮೇಲೆ ,ಫ್ಲೀಟರು ಕ್ರಿ.ಶ.೧೧೧೫ ರಲ್ಲಿ ಈತನು ಆಳ್ವಿಕೆಯನ್ನು ಆರಂಭಿಸಿರಬಹುದೆಂದು ಅಭಿಪ್ರಾಯಪಟ್ಟಿದ್ದಾರೆ[೧೦೧]. ಕ್ರಿ.ಶ.೧೧೨೪ ರ ಹೊನ್ನತ್ತಿ ಶಾಸನವು ಈತನನ್ನು ಪಾಟಳೀಪುರವರಾಧೀಶ್ವರ, ಕೀರ್ತ್ಯಂಗನಾಧೀಶ್ವರ, ಉಜ್ಜೇನಿಮಹಾಕಳದೇವ- ಲಬ್ಧವರಪ್ರಸಾದ, ರಣಕೇಳಿವಿನೋದ, ವಟಕಳ್ಪತರು ಶೋಭಿತ, ವಿಜಯಕೀರ್ತಿಧ್ವಜ, ರೂಪಮಕರಧ್ವಜ, ಚಂದ್ರಗುಪ್ತಾನ್ವಯ, ದಶಸಿಂಹಾಸನ ಪವಿತ್ರ ಸದ(ಬ?)ಳ ತ್ರಿಣೇತ್ರ, ಭೂಚಕ್ರಕ್ಷಕ್ರನಯ್ಯನ ಚಕ್ರ ಎಂದು ಕರೆದಿದೆ[೧೦೨].

ಈತನ ನಂತರದ ಕಾಲದ ಒಂದು ಶಾಸನದಲ್ಲಿ ಇವನನ್ನು 'ಗುಪ್ತವಂಶ ತ್ರಿನೇತ್ರ' ಮತ್ತು 'ಗುಪ್ತಾನ್ವಯ ಭೂಕಾನ್ತ' ಎಂದು ಕರೆಯಲಾಗಿದೆ[೧೦೩].

ಅರಿನರಪಾಳರಳುಗರುಳುಗಳ ಬಂಬಲೆ ಬಾಸಿಗಮೆಚ್ಚು ಪಾವ್ವನೆ  
ತ್ತರೆ ಹೊಸಂಕುಮಂ ಮುರಿದು ಸುಸುದ ಪಲ್ಲಳೆ ಸೇಷೆ ವೈರಿಕಿಂ  
ಕರಶಿರಃ ಕರೋಧಿಗಳೆ ಸೊಂನಲಿಯಾಗಿರೆ ಮಲ್ಲಿದೇವನು  
ದ್ದುರ ಜಯಕನ್ಯಕಾ ಪರಿಣಯೋತ್ಸವಮಂ ಮೆರೆದಂ ಮಹಾಜಿಯೋಳ್॥

ಎಂಬ ಸಾಲುಗಳನ್ನು ನೋಡಿದಾಗ ಈತ ಆರನೆಯ ವಿಕ್ರಮಾದಿತ್ಯನ ಸಾಮಂತರುಗಳಲ್ಲಿ ಪರಾಕ್ರಮಿಯಾಗಿದ್ದನೆಂಬುದು ತಿಳಿದುಬರುತ್ತದೆ.

ಮಲ್ಲಿದೇವರಸನ ಸಹೋದರನಾದ ಜೋಮದೇವ ಅಥವಾ ಒಂದನೆಯ ಜೋಯಿದೇವನು ಹೊನ್ನವರ್ತಿ-೧೨, ಬೆಳುಹುಗೆ-೭೦, ಬೆಣ್ಣೆವೂರು-೧೨ ಇವುಗಳಿಗೆ ಮನ್ನೆಯ ಆಧಿಪತ್ಯವನ್ನು ಹೊಂದಿ ದುಷ್ಟ ಶಿಕ್ಷಕ ಶಿಷ್ಟ ರಕ್ಷಕನಾಗಿ ಗುತ್ತವೊಳಲಿನಿಂದ ರಾಜ್ಯಭಾರ ಮಾಡುತ್ತಿದ್ದನು. ಇವನ ಸಭೆಯ ಕಣ್ಣುಗಳಿದ್ದಂತೆ ದೇಕಣ್ಣ ಮತ್ತು ನಾಕಣ್ಣರೆಂಬ ಪ್ರಧಾನರಿದ್ದ ವಿಷಯ ನಮಗೆ ತಿಳಿದುಬರುತ್ತದೆ[೧೦೪]. ಶಾಸನಗಳು ಈತನನ್ನು ಮಹಾಮಂಡಳೇಶ್ವರನೆಂದು ಕರೆದಿವೆ.

ಒಂದನೆಯ ಜೋಯಿದೇವನ ನಂತರ ಮಲ್ಲಿದೇವನ ಮಗನಾದ ಒಂದನೆಯ ವಿಕ್ರಮಾದಿತ್ಯನು ಆಳ್ವಿಕೆಗೆ ಬಂದನು. ಇವನಿಗೆ ವಿಕ್ರಮ ಅಥವಾ ವಿಕ್ರಮಾಂಕನೆಂಬ ಹೆಸರೂ ಕೂಡ ಇತ್ತು. ಇವನಾಳ್ವಿಕೆಯ ದಿನಾಂಕವು ಕ್ರಿ.ಶ.೧೧೬೨ ಎಂದು ಇವನ ಗುತ್ತಲ ಶಾಸನದ ಪ್ರಕಾರ ತಿಳಿದುಬರುತ್ತದೆ[೧೦೫]. ಇವನ ಕಾಲದಲ್ಲಿ ಗುತ್ತರು ತಮ್ಮ ಪ್ರಾಬಲ್ಯವನ್ನು

ವೃದ್ಧಿಸಿಕೊಂಡು ತಮ್ಮ ಸಾಮ್ರಾಜ್ಯವನ್ನು ವಿಸ್ತರಿಸಿಕೊಂಡಿದ್ದು ನಮಗೆ ತಿಳಿಯುತ್ತದೆ. ಈ ಕಾಲದ ಇನ್ನೊಂದು ಮಹತ್ವದ ಘಟನೆಯೆಂದರೆ ಚಾಲುಕ್ಯರ ಬಲವನ್ನು ಮುರಿದ ಬಿಜ್ಜಳನು ಕಲಚೂರಿಗಳ ರಾಜ್ಯ ಸ್ಥಾಪಿಸಿದ್ದು. ಆಗ ಚಾಲುಕ್ಯರ ಆಡಳಿತದಲ್ಲಿದ್ದ ಭಾಗಗಳೆಲ್ಲ ತಾನಾಗಿಯೇ ಕಲಚೂರಿಗಳ ಆಳ್ವಿಕೆಗೆ ಒಳಪಟ್ಟವು[೧೦೬]. ಆದರೆ ಈ ಸಮಯದಲ್ಲಿ ಗುತ್ತರು ಸ್ವತಂತ್ರರಾಗಿದ್ದಂತೆ ತೋರುತ್ತದೆ. ಅದಕ್ಕೆ ಸಾಕ್ಷಿಯಾಗಿ ಮೇಲಿನ ಗುತ್ತಲ ಶಾಸನವು ಯಾವುದೇ ರಾಜನ ಹೆಸರನ್ನು ಉಲ್ಲೇಖಿಸದೇ ನೇರವಾಗಿ ವಿಕ್ರಮಾದಿತ್ಯನ ಪ್ರಶಸ್ತಿಗಳಿಂದ ಆರಂಭವಾಗುತ್ತದೆ[೧೦೭]. ಈ ಸಮಯದಲ್ಲಿ ಗುತ್ತವೊಳಲ ನಾಡು ಅದರ ದಕ್ಷಿಣದ ಗಡಿಯ ಕಡೆಗೆ ವಿಸ್ತಾರಗೊಂಡು ಬನವಾಸೆನಾಡು ಕೂಡಾ ಇದರ ಆಳ್ವಿಕೆಗೊಳಪಟ್ಟಿರಬೇಕು. ವಿಕ್ರಮಾಂಕನ ಮೊಮ್ಮಗನ ಹರಳಹಳ್ಳಿ ಶಾಸನವು ಅವನನ್ನು ಬನವಾಸೆ ನಾಡಿನ ದೊರೆಯೆಂದು ಕರೆದಿದೆ[೧೦೮]. ಕ್ರಿ.ಶ. ೧೧೪೧ ರಲ್ಲಿ ಹೊಯ್ಸಳ ವಿಷ್ಣುವರ್ಧನನ ಮರಣದ ನಂತರ ಅವನ ಮಗ ನಾರಸಿಂಹ ಚಿಕ್ಕವನಾಗಿದ್ದರಿಂದ ಮತ್ತು ವಿಷ್ಣುವರ್ಧನನ ಕಾಳಗಗಳಿಂದ ಹಾನಗಲ್ಲಿನ ಕದಂಬರು ಅಶಕ್ತರಾಗಿದ್ದರಿಂದ ಈ ಪರಿಸ್ಥಿತಿಯ ಲಾಭವನ್ನು ಪಡೆದ ಒಂದನೆಯ ವೀರ ವಿಕ್ರಮಾದಿತ್ಯ ಈ ಬನವಾಸೆನಾಡನ್ನು ಹಿಡಿದುಕೊಂಡಿರಬಹುದು[೧೦೯].

ಒಂದನೆಯ ವೀರ ವಿಕ್ರಮಾದಿತ್ಯನ ನಂತರ ಅವನ ಮಗ ಎರಡನೆಯ ಜೋಯಿದೇವ ಆಳ್ವಿಕೆಗೆ ಬಂದನು. ಇವನ ಕಾಲದಲ್ಲಿಯೂ ಕೂಡ ಗುತ್ತರ ಸಾಮ್ರಾಜ್ಯವು ಹೆಚ್ಚು ವಿಸ್ತಾರಗೊಂಡಿತು. ಶಾಸನವೊಂದು ತಿಳಿಸುವಂತೆ ಈತನ ಸಾಮ್ರಾಜ್ಯವು ಬೆಣ್ಣೆವೂರು-೧೨, ಸತ್ತಳಿಗೆ-೧೨, ಮತ್ತು ಬಿದಿರಹಳ್ಳಿ-೧೨ ಗಳನ್ನೊಳಗೊಂಡಿತ್ತು[೧೧೦]. ಕ್ರಿ.ಶ. ೧೧೭೭ ರ ಶಾಸನವೊಂದರ ಪ್ರಕಾರ ಈತನು ಬನವಾಸಿ-೧೨,೦೦೦ ವನ್ನಾಳುತ್ತಿದ್ದ ವಿಷಯ ತಿಳಿಯುತ್ತದೆ[೧೧೧]. ಅಲ್ಲದೆ ಈ ಶಾಸನವು ಚಾಲುಕ್ಯವಿಕ್ರಮ ವರ್ಷವನ್ನು ಹೇಳಿರುವದರಿಂದ ಈತನು ಕಲಚೂರಿಗಳ ಆಧೀನತ್ವವನ್ನು ಒಪ್ಪಿಕೊಳ್ಳದೇ ಚಾಲುಕ್ಯರ ಸಾಮಂತರಾಗಿಯೇ ಮುಂದುವರೆದಿದ್ದನೆಂದು ಊಹಿಸಬಹುದು. ಬಳ್ಳಿಗಾಮೆ ಶಾಸನದಲ್ಲಿ ಇವನನ್ನು 'ಗುಪ್ತವಂಶ ವಾರಧಿವರ್ಧನ ಸುಧಾಕರ' ಮತ್ತು 'ಮಹಾಮಂಡಲೇಶ್ವರ' ಎಂದು ಕರೆಯಲಾಗಿದೆ[೧೧೨]. ಇದರಿಂದ ಈತ ಗುತ್ತರ ಕಾಲದಲ್ಲಿಯೇ ಅತ್ಯಂತ ಶ್ರೇಷ್ಠ ದೊರೆಗಳಲ್ಲೊಬ್ಬ ಎಂಬುದು ನಮಗೆ ತಿಳಿದುಬರುತ್ತದೆಯಲ್ಲದೇ ಇವನಿಗೆ ವಾಸುದೇವನಾಯಕನೆಂಬ ಮಂತ್ರಿಯಿದ್ದ ವಿಷಯ ಕೂಡಾ ತಿಳಿಯುತ್ತದೆ.

ಜೋಯಿದೇವನಿಗೆ ಮಕ್ಕಳಿಲ್ಲದ್ದರಿಂದ ಆತನ ನಂತರ ಅವನ ಸಹೋದರ ಎರಡನೆಯ ಗುತ್ತನ ಮಗ ಎರಡನೆಯ ವೀರ ವಿಕ್ರಮಾದಿತ್ಯನು ಆಳ್ವಿಕೆಗೆ ಬಂದನು[೧೧೩]. ತನ್ನ ಪೂರ್ವಜರ ನೀತಿಯನ್ನು ಮುಂದುವರೆಯಿಸಿದ ಈತನು ತನ್ನ ಸಾಮ್ರಾಜ್ಯಕ್ಕೆ ನೊಳಂಬವಾಡಿ ಮತ್ತು ಪೆರ್ಬ್ಬಾಳು-೭೦ ಗಳನ್ನು ಸೇರಿಸುವದರೊಂದಿಗೆ ವಿಸ್ತರಿಸಿದನು[೧೧೪]. ಬಳ್ಳಾರಿ ಜಿಲ್ಲೆಯ ಕ್ರಿ.ಶ. ೧೧೮೧ರ ಶಾಸನವೊಂದು ತಿಳಿಸುವಂತೆ ಗುತ್ತರ ದೊರೆ ವಿಕ್ರಮಾದಿತ್ಯನು ಈ ಜಿಲ್ಲೆಯ ಭಾಗಗಳನ್ನಾಳುತ್ತಿದ್ದನೆಂಬುದು ಕಂಡುಬರುತ್ತದೆ[೧೧೫]. ಇದರಿಂದ ಎರಡನೆಯ ವೀರ ವಿಕ್ರಮಾದಿತ್ಯನು ತನ್ನ ವೀರ ಪರಾಕ್ರಮಗಳಿಂದ ಗುತ್ತವೊಳಲಿನಿಂದಾಚೆಗೂ ತನ್ನ ರಾಜ್ಯವಿಸ್ತಾರ ಮಾಡಿರಬೇಕೆಂಬುದು ಸ್ಪಷ್ಟವಾಗುತ್ತದೆ. ಇವನಿಗೆ

ಅಹಾವಾದಿತ್ಯ ಎಂಬ ಬಿರುದಿತ್ತು. ಹರಳಹಳ್ಳಿಯ ಕ್ರಿ.ಶ.೧೧೮೮ ರ ಫೆಬ್ರುವರಿ ತಿಂಗಳ ಈತನ ಶಾಸನದಲ್ಲಿ ಇವನು ಸ್ವತಂತ್ರವಾಗಿ ಆಳುತ್ತಿರುವಂತೆ ಚಿತ್ರಿಸಲಾಗಿದೆ[೧೧೬]. ಬನವಾಸಿ-೧೨,೦೦೦ ಈತನ ನಿಜೈಶ್ವರ್ಯವಾಗಿತ್ತೆಂದು ಈತನು ಕಲಚೂರಿದೊರೆ ಅಹಾಮಲ್ಲನ ಮಹಾಮಂಡಳೇಶ್ವರನಾಗಿದ್ದನೆಂದು ಹರಳಹಳ್ಳಿಯ ಕ್ರಿ.ಶ.೧೧೮೮ ಡಿಸೆಂಬರ್ ತಿಂಗಳ ಶಾಸನವು ಹೇಳಿದೆ[೧೧೭]. ಇದೇ ಸಮಯಕ್ಕೆ ಚಾಲುಕ್ಯ ನಾಲ್ಕನೆಯ ಸೋಮೇಶ್ವರನು ಕಲ್ಯಾಣಿಯ ಕಲಚೂರಿಗಳನ್ನು ಬದಿಗೊತ್ತಿ ಆಳ್ವಿಕೆಗೆ ಬಂದಾಗ ಮತ್ತೆ ಗುತ್ತರು ಚಾಲುಕ್ಯರ ಆಧೀನತ್ವವನ್ನು ಒಪ್ಪಿಕೊಂಡರು. ಇದಕ್ಕೆ ಉದಾಹರಣೆಯಾಗಿ ಚಾಲುಕ್ಯರ ಸಾಮ್ರಾಜ್ಯದ ಮೇಲೆ ಧಾಳಿಯಿಡಲು ಬಂದತಹ ಹೊಯ್ಸಳ ದೊರೆಯ ವಿರುದ್ಧ ಸೋಮೇಶ್ವರನ ಪರವಾಗಿ ಹೋರಾಡಿ ಅದನ್ನು ಎರಡನೆಯ ವಿಕ್ರಮಾದಿತ್ಯನು ಹಿಮ್ಮೆಟ್ಟಿಸುವ ವಿವಿರ ಶಾಸನವೊಂದರಲ್ಲಿದೆ[೧೧೮].

ಮೂರನೆಯ ಜೋಯಿದೇವನು ಎರಡನೆಯ ವೀರ ವಿಕ್ರಮಾದಿತ್ಯನ ಮಗನಾಗಿದ್ದು ಅವನ ನಂತರ ಕ್ರಿ.ಶ.೧೨೩೮ ರಲ್ಲಿ ಆಳ್ವಿಕೆಗೆ ಬಂದನು. ಆದರೆ ಇವನು ಯಾದವ-ಹೊಯ್ಸಳರ ಕಾಳಗದಲ್ಲಿ ತೊಂದರೆಗೀಡಾಗಿ ತನ್ನ ಸ್ವತಂತ್ರತೆಯನ್ನು ಕಳೆದುಕೊಳ್ಳಬೇಕಾಯ್ತು[೧೧೯]. ಕ್ರಿ.ಶ. ೧೨೩೫ರ ಸುಮಾರಿಗೆ ಜೋಯಿದೇವನು ಯಾದವ ಸಿಂಘಣನ ಕೈಯಲ್ಲಿ ದಯನೀಯ ಸೋಲನ್ನನುಭವಿಸಬೇಕಾಯ್ತು. ಕ್ರಿ.ಶ.೧೨೩೮ ರ ಹರಳಹಳ್ಳಿಯ ತಾಮ್ರಪಟ ಶಾಸನವೊಂದು ಹೇಳುವಂತೆ ಜೋಯಿದೇವನು ಯಾದವ ಸಿಂಘಣನ ಸಾಮಂತನಾಗಿದ್ದನು[೧೨೦]. ಈತನ ಕಾಲದಿಂದ ಗುತ್ತರ ಅವನತಿ ಆರಂಭವಾಯಿತೆನ್ನಬಹುದು.

ಮೂರನೆಯ ಜೋಯಿದೇವನ ನಂತರ ಅವನಿಗೆ ಮಕ್ಕಳಿಲ್ಲದ ಕಾರಣ ಅವನ ಸಹೋದರ ಮೂರನೆಯ ವಿಕ್ರಮಾದಿತ್ಯನು ಸಿಂಹಾಸನಕ್ಕೇರಿದನು. ಧಾರವಾಡ ಜಿಲ್ಲೆಯ ಹೊಸಹಳ್ಳಿ ಶಾಸನ ಹೇಳುವಂತೆ ಈತನು ಸೇವುಣ ಕನ್ನರ (ಕೃಷ್ಣ)ನ ಆಧೀನನಾಗಿ ಹೆಬ್ಬಳ್ಳಿಗ್ರಾಮವನ್ನು ಕುಮಾರವೃತ್ತಿಯಿಂದ ಆಳುತ್ತಿದ್ದನು[೧೨೧]. ಆದರೆ ಇವನ ಆಳ್ವಿಕೆಯ ವಿವರಣೆಯನ್ನರಿಯಲು ನಮಗೆ ಯಾವುದೇ ಶಾಸನಾಧಾರಗಳು ದೊರೆತಿಲ್ಲ.

ನಂತರದಲ್ಲಿ ಆಳ್ವಿಕೆ ನಡೆಸಿದ ಅರಸು ಮೂರನೆಯ ಗುತ್ತನಾಗಿದ್ದಾನೆ. ಈತನು ಯಾದವ ಕನ್ನರ (ಕೃಷ್ಣ) ಮತ್ತು ಮಹಾದೇವರ ಮಹಾಮಂಡಲೇಶ್ವರನಾಗಿದ್ದನೆಂದು ತಿಳಿಯುತ್ತದೆ. ಶಾಸನಗಳಲ್ಲಿ ಬರುವ ಶೌರ್ಯ ಪರಾಕ್ರಮದ ಹೊಗಳಿಕೆಗಳಿಂದ ಇವನೊಬ್ಬ ಅಪ್ರತಿಮ ವೀರನಾಗಿದ್ದನೆಂಬುದು ಕಂಡುಬರುವದಲ್ಲದೇ ಇವನನ್ನು ಶಾಸನವೊಂದು 'ಮಾಣ್ಡಲೀಕಗಣ್ಡ' ಎಂದು ಕರೆದಿದೆ[೧೨೨]. ಯಾದವ-ಹೊಯ್ಸಳ ಕದನದಲ್ಲಿ ಯಾದವಸೇನೆ ಕೆಲಕಾಲದವರೆಗೆ ಗುತ್ತವೊಳಲನಾಡಿನ ಬಳಿಯ ಹರಿಹರದಲ್ಲಿ ಬೀಡುಬಿಟ್ಟು, ಕೆಲಕಾಲದ ನಂತರ ಅಲ್ಲಿ ಹೊಸ ಸೈನ್ಯ ಸೇರಿಸಿಕೊಂಡು, ಸಾಳುವ ತಿಕ್ಕಮನ ನೇತೃತ್ವದಲ್ಲಿ ಮುನ್ನಡೆದು ವಿಜಯ ಸಾಧಿಸಿತು[೧೨೩]. ಇದರಿಂದ ಗುತ್ತವೊಳಲನಾಡಿನಲ್ಲಿ ಯಾದವಸೇನೆ ಬೀಡುಬಿಟ್ಟು ಹೊಸ ಸೈನ್ಯ ಅದಕ್ಕೆ ಸೇರಿಕೊಂಡಾಗ ಅಲ್ಲಿನ ಆಡಳಿತಾಧಿಕಾರಿಯಾದ ಮೂರನೆಯ ಗುತ್ತನೂ ಕೂಡಾ ಅದರಲ್ಲಿ ಭಾಗವಹಿಸರಲೇಬೇಕು ಎಂಬುದು ಇಲ್ಲಿ ಸ್ಪಷ್ಟವಾಗುತ್ತದೆ.

ಮೂರನೆಯ ಗುತ್ತನ ನಂತರ ಯಾವ ಅರಸು ಆಡಳಿತಕ್ಕೆ ಬಂದನೆಂಬುದು ಸ್ಪಷ್ಟವಾಗಿ ತಿಳಿದುಬರುವದಿಲ್ಲ. ಆದರೆ ಕ್ರಿ.ಶ.೧೨೬೫ ರ ಚೌಡದಾನಪುರ ಶಾಸನವೊಂದು ಮೂರನೆಯ ಗುತ್ತನ ಸಹೋದರರಾದ ಹಿರಿಯದೇವ ಮತ್ತು ನಾಲ್ಕನೆಯ ಜೋಯಿದೇವರು ಮಹಾಮಂಡಲೇಶ್ವರರಾಗಿದ್ದರೆಂದು ಉಲ್ಲೇಖಿಸುತ್ತದೆ[೨೪]. ಹಿರಿಯದೇವನ ಕಾಲದಲ್ಲಿ ಹೊಯ್ಸಳ-ಯಾದವ ಕದನ ನಡೆದಿದ್ದನ್ನು ಬಿಟ್ಟರೆ ಮಹತ್ವದ ಘಟನೆಗಳಾವವೂ ಕಂಡುಬರುವದಿಲ್ಲ.

ನಂತರ ಆಳ್ವಿಕೆಗೆ ಬಂದ ಅರಸು ನಾಲ್ಕನೆಯ ಜೋಯಿದೇವನ ಮಗನಾದ ಐದನೆಯ ವಿಕ್ರಮಾದಿತ್ಯನಾಗಿದ್ದಾನೆ. ಈತನು ಯಾದವ ರಾಮಚಂದ್ರನ ಆಧೀನನಾಗಿ ಆಳುತ್ತಿದ್ದ ಉಲ್ಲೇಖ ನಮಗೆ ಕ್ರಿ.ಶ. ೧೨೮೩ರ ಹಿರೇಬಿದರಿಯ ಶಾಸನದಿಂದ ತಿಳಿದುಬರುತ್ತದೆ[೨೫]. ಈತನೆ ನಮಗೆ ತಿಳಿದುಬರುವ ಗುತ್ತರ ಕೊನೆಯ ದೊರೆಯಾಗಿದ್ದಾನೆ. ಮುಂದೆ ಸೇವುಣರು ಅಲ್ಲಾವುದ್ದೀನ್ ಖಿಲ್ಜಿಯ ದಂಡನಾಯಕ ಮಲ್ಲಿಕಾಫುರನ ಧಾಳಿಗೆ ತುತ್ತಾಗಿ ಅವನತಿಯಾದಾಗ ಗುತ್ತರೂ ಕೂಡ ಕಣ್ಮರೆಯಾಗಿರುವ ಸಾಧ್ಯತೆಯಿದೆ.

## ಬಾಣರು:

ಪುರಾಣ ಪ್ರಸಿದ್ಧ ಬಾಣಾಸುರನ ವಂಶಸ್ಥರೆಂದೂ, ಪರಿವಿಪುರಾಧೀಶ್ವರ, ನಂದಗಿರಿನಾಥರೆಂದು ಕರೆದುಕೊಂಡ ಬಾಣರು ಮೊಟ್ಟಮೊದಲಿಗೆ ಇತಿಹಾಸದಲ್ಲಿ ಕಾಣಿಸಿಕೊಳ್ಳುವದು ಕದಂಬ ಕಾಕುಸ್ಥವರ್ಮನ ತಾಳಗುಂದ ಶಿಲಾಶಾಸನದಲ್ಲಿ[೨೬]. ಈ ಶಾಸನವು ನಾಲ್ಕನೆಯ ಶತಮಾನದ ಅವಧಿಯ ವೇಳೆಗೆ, ಮಯೂರಶರ್ಮನು ಪಲ್ಲವರೊಡನೆ ಕಾದಾಡಿ ಕದಂಬ ಸಾಮ್ರಾಜ್ಯ ಸ್ಥಾಪಿಸಿದ ವಿಷಯವನ್ನು ಹೇಳುತ್ತಾ, ಬೃಹದ್ ಬಾಣರಿಂದ ಕಪ್ಪ-ಕಾಣಿಕೆ ತೆಗೆದುಕೊಂಡನೆಂದು ಹೇಳಿದೆ. ಇದರಿಂದ ಬಾಣರು ಕದಂಬರ ಸಾಮಂತರಾಗಿದ್ದು ತಿಳಿಯುತ್ತದೆ. ಇದಾದ ನಂತರ ನಮಗೆ ಕೆಲವು ಕಾಲದವರೆಗೆ ಬಾಣರ ಬಗೆಗೆ ಮಾಹಿತಿ ದೊರೆಯುವದಿಲ್ಲ. ಆದರೆ ಕೂಡಲೂರು ಶಾಸನ ತಿಳಿಸುವಂತೆ ಗಂಗರು ಬಾಣರ ಮೇಲೆ ಅಧಿಕಾರ ಸ್ಥಾಪಿಸಿದ್ದನ್ನು, ಅವರ ಕುವಲಾಲಪುರವರಾಧೀಶ್ವರ (Confounder of Bana Kula) ಬಿರುದಿನಿಂದ ತಿಳಿದುಬರುತ್ತದೆ.

ಎರಡನೆಯ ಪುಲಕೇಶಿಯ ಕಾಲಕ್ಕೆ ಬಾಣರಾಜ ವಿಷಯವನ್ನು ಅವನು ಗೆದ್ದುಕೊಂಡಿದ್ದು ಮತ್ತು ಅಲ್ಲಿಯ ಎಲ್ಲ ಹಳ್ಳಿಗಳಿಂದ ಬಂಗಾರ ರೂಪದಲ್ಲಿ ತೆರಿಗೆ ವಸೂಲಿಮಾಡುತ್ತಿದ್ದ ವಿಷಯ ತಿಳಿಯುತ್ತದೆ[೨೭]. ಪೆದ್ದವದೂಗುರು ಶಾಸನದ ಪ್ರಕಾರ ಬಾಣರು ದೊರೆಯೊಡಗೂಡಿ ನಾದನೂರು ಗ್ರಾಮವನ್ನು ದಾನಬಿಟ್ಟ ವಿಷಯ ತಿಳಿಯುತ್ತದೆ[೨೮]. ಇದರಿಂದ ಬಾಣರು ಪುಲಕೇಶಿಯ ಸಾಮಂತರಾಗಿದ್ದರೆಂಬುದು ಸ್ಪಷ್ಟವಾಗುತ್ತದೆ. ಚಾಲುಕ್ಯ ಶ್ರೀವಲ್ಲಭ ಮಹಾರಾಜಾಧಿರಾಜನ ಶಾಸನವೊಂದರಲ್ಲಿ ಪೆರ್ಬಾಣ ವಂಶದ ಉಲ್ಲೇಖ ಬರುತ್ತದೆ. ಈ ಚಾಲುಕ್ಯ ಶ್ರೀವಲ್ಲಭ ಎಂಬುದು ಒಂದನೆಯ ವಿಕ್ರಮಾದಿತ್ಯನ ಬಿರುದಾಗಿತ್ತು[೨೯]. ಹೀಗಾಗಿ ಇವನಕಾಲಕ್ಕೂ ಕೂಡಾ ಬಾಣರು ಚಾಲುಕ್ಯರ ಸಾಮಂತರಾಗಿ ಮುಂದುವರೆದಿದ್ದು ಕಂಡುಬರುತ್ತದೆ. ಈ ಪೆರ್ಬಾಣ ಎಂಬುದು ಬೃಹದ್‌ಬಾಣ ಪದದ ತಮಿಳು ರೂಪವಾಗಿದೆ.

ಬೇತಪಲ್ಲಿಯ ವಿಜಯಾದಿತ್ಯ ಸತ್ಯಾಶ್ರಯ ಪೃಥ್ವೀವಲ್ಲಭ ಮಹಾರಾಜನ ಶಾಸನವೊಂದರಲ್ಲಿ ಬಾಣರಾಜನೆಂಬುವವನು ತುರಮಾರವಿಷಯವನ್ನು ರಾಜನ ಸಾಮಂತನಾಗಿ ಆಳುತ್ತಿರುವಾಗ ಅವನ ಚಿಕ್ಕಪ್ಪನಾದ ಬಾಣರಸ ವಿಕ್ರಮಾದಿತ್ಯನು ದಾನ ನೀಡಿದ ವಿಷಯ ತಿಳಿಯುತ್ತದೆ[೫೦]. ಹೀಗೆ ವಿಜಯಾದಿತ್ಯನ ಕಾಲಕ್ಕೂ ಕೂಡ ಇವರು ಅವರ ಸಾಮಂತರಾಗಿ ಮುಂದುವರೆದಿದ್ದಾರೆ. ವಿಜಯಾದಿತ್ಯ ಸತ್ಯಾಶ್ರಯ ಶ್ರೀ ಪೃಥ್ವೀವಲ್ಲಭನ ಆಳ್ವಿಕೆಯ ೨೩ನೆಯ ವರ್ಷದ ಕೊಂಡಪಲ್ಲಿ ಶಾಸನದ ಪ್ರಕಾರ ಪಲಗಿಚ್ಚೇರುವು ದೊರೆಗಳು ಮತ್ತು ತೊರಮಾರ ವಿಷಯವನ್ನಾಳುತ್ತಿದ್ದ ಬಲಿಕುಲತಿಲಕ ನರಸಿಂಹ ಬಾಣಾಧಿರಾಜನ ಮಗನಾದ ವಿಕ್ರಮಾದಿತ್ಯ ಬಲಿಇಂದ್ರ ಬಾಣರಾಜರ ನಡುವೆ ಯುದ್ಧನಡೆಯಿತು[೫೧]. ಈ ಶಾಸನದ ಪ್ರಕಾರ ಬಾಣರ ಎರಡು ತಲೆಮಾರಿನ ವಿಷಯ ನಮಗೆ ತಿಳಿದುಬರುತ್ತದೆಯಲ್ಲದೇ, ಈ ವಿಕ್ರಮಾದಿತ್ಯ ಬಲಿ ಇಂದ್ರ ಬಾಣರಾಜನೇ ನಾವು ಮೇಲೆ ನೋಡಿದ ಬೇತಪಲ್ಲಿ ಶಾಸನದಲ್ಲಿ ಬರುವ ವಿಕ್ರಮಾದಿತ್ಯನಾಗಿರಬಹುದು. ಇವನೇ ನಂತರ ವಿನಯಾದಿತ್ಯ ಮತ್ತು ವಿಜಯಾದಿತ್ಯರ ಸಾಮಂತನಾಗಿ ಮುಂದುವರೆದಿದ್ದಾನೆ.

ಹೀಗೆ ಚಾಲುಕ್ಯ-ಪಲ್ಲವರ ಜಗಳಗಳ ನಡುವೆ ತಮ್ಮ ಅಸ್ತಿತ್ವವನ್ನು ಒಮ್ಮೊಮ್ಮೆ ಬದಲಾಯಿಸುತ್ತಾ, ಚಾಲುಕ್ಯರಿಗೂ ಹಾಗೂ ಪಲ್ಲವರಿಗೂ ಕೆಲಕಾಲದವರೆಗೆ ಸಾಮಂತರಾಗಿ ಬಾಣರು ಮುಂದುವರೆದರು.

ನಂತರ ಬಾಣರ ಸಿಂಹಾಸನಕ್ಕೆ ಜಯನಂದಿವರ್ಮನ್‌ನು ಉತ್ತರಾಧಿಕಾರಿಯಾದನು. ಎರಡನೆಯ ವಿಕ್ರಮಾದಿತ್ಯನ ಗುಡಿಮಲ್ಲಮ್ ತಾಮ್ರಪಟಗಳ ಪ್ರಕಾರ[೫೨] ನಂದನೆಂಬುವವನು ವಿಪ್ರಪೀಠ ಎಂಬ ಗ್ರಾಮವನ್ನು ಒಬ್ಬ ಬ್ರಾಹ್ಮಣನಿಗೆ ದತ್ತಿ ನೀಡಿದನು[೫೩]. ಆ ನಂದನೆಂಬುವವನೆ ಬಾಣರ ದೊರೆ ಜಯನಂದಿವರ್ಮನೆಂಬ ಅಭಿಪ್ರಾಯವಿದೆ. ಮುಂದೆ ಪಲ್ಲವರು ಗಂಗರೊಡನೆ ಹೋರಾಟಕ್ಕಿಳಿದಾಗ ಪಲ್ಲವರಿಗೆ ಜಯವಾಗಿ ಬಾಣರು ಪಲ್ಲವರ ಸಾಮಂತತ್ವವನ್ನು ಪಡೆದರು.

ಜಯನಂದಿವರ್ಮನ್‌ನ ನಂತರ ಅವನ ಮಗನಾದ ಒಂದನೆಯ ವಿಜಯಾದಿತ್ಯ ಅಥವಾ ಬಾಣ ವಿದ್ಯಾಧರನು ಆಳ್ವಿಕೆಗೆ ಬಂದನು. ಪಲ್ಲವ ದಂತಿವರ್ಮನನ್ನು ಸೋಲಿಸಿದ ಮೂರನೆಯ ಗೋವಿಂದನು ಈ ಬಾಣರನ್ನು ಸಾಮಂತರನ್ನಾಗಿಸಿಕೊಂಡನು[೫೪]. ನಂದಿ ತಾಮ್ರಪಟಗಳ ಆಧಾರದಂತೆ ಕ್ರಿ.ಶ.೮೦೬ ರಲ್ಲಿ ಮೂರನೆಯ ಗೋವಿಂದನು ಕ್ಷತ್ರಿಯ ಮಹಾಬಲಿ ಬಾಣರಾಜನಾದ ಶ್ರೀ ಪೆರುಮಾರನ ಬೇಡಿಕೆಯ ಮೇರೆಗೆ ಕಂಡಮಂಗಲ ಗ್ರಾಮವನ್ನು ನಂದಿಬೆಟ್ಟದ ದೇಗುಲದ ಆಚಾರ್ಯನಾದ ಈಶ್ವರದಾಸನಿಗೆ ನೀಡಿದನು[೫೫]. ಇವನು ಬಾಣರ ವಿಜಯಾದಿತ್ಯನಾಗಿದ್ದಾನೆ. ಕೃಷ್ಣಪಳ್ಳಿ ಶಾಸನದ ಪ್ರಕಾರ ಬಾಣರಸನು ಗಂಗ-೬೦೦೦ ದ ಆಡಳಿತಾಧಿಕಾರಿಯಾಗಿದ್ದಾಗ, ಬಲ್ಲಾಳರಾಜನು ಕಾಡುವೆಟ್ಟಿಯ ವಿರುದ್ಧ ಆತನು ಕಪ್ಪಕೊಡಲು ನಿರಾಕರಿಸಿದುದಕ್ಕೆ ದಂಡಯಾತ್ರೆ ಕೈಕೊಂಡನು[೫೬]. ಈ ಬಾಣರಸನೇ ಒಂದನೆಯ ವಿಜಯಾದಿತ್ಯ ಮತ್ತು ಆ ಬಲ್ಲಾಳರಸನೇ ಮೂರನೆಯ ಗೋವಿಂದ. ಅಮೋಘವರ್ಷನು ಆರಂಭದಲ್ಲಿ ಹಲವಾರು ವೈರಿಗಳನ್ನು ಎದುರಿಸುವದಕ್ಕೋಸ್ಕರ ಗಂಗವಾಡಿ-೬೦೦೦ ದಿಂದ ತನ್ನ ಸೈನ್ಯವನ್ನು ಮರಳಿ ಕರೆಯಿಸಿಕೊಂಡನು. ಆಗ ಗಂಗರ ದೊರೆ ಒಂದನೆಯ ರಾಚಮಲ್ಲನು ಪಲ್ಲವ ರಾಜ್ಯಕ್ಕೆ ನುಗ್ಗಿದನು. ಈ ಧಾಳಿಯಲ್ಲಿ ಗಂಗ ಒಂದನೆಯ ರಾಚಮಲ್ಲನು ಬಾಣರನ್ನು ಸೋಲಿಸಿ ಗಂಗ-೬೦೦೦ ವನ್ನು ಹಿಡಿದುಕೊಂಡನು.

ನಂತರ ಬಂದ ಮಲ್ಲದೇವ, ಒಂದನೆಯ ವಿಕ್ರಮಾದಿತ್ಯ, ಎರಡನೆಯ ವಿಜಯಾದಿತ್ಯ, ಎರಡನೆಯ ವಿಕ್ರಮಾದಿತ್ಯ ಮತ್ತು ಮೂರನೆಯ ವಿಜಯಾದಿತ್ಯರುಗಳು ಪಲ್ಲವ ಮತ್ತು ಚೋಳರ ಸಾಮಂತರುಗಳಾಗಿ ಮುಂದುವರೆದರು.

ನಂತರ ಮೂರನೆಯ ವಿಕ್ರಮಾದಿತ್ಯನು ಪಟ್ಟಕ್ಕೆ ಬಂದನು. ಆಗ ಚೋಳರ ಒಂದನೆಯ ಪರಾಂತಕನೊಂದಿಗೆ ರಾಷ್ಟ್ರಕೂಟ ಮೂರನೆಯ ಕೃಷ್ಣನು ದಂಡಯಾತ್ರೆ ಆರಂಭಿಸಿದ್ದನು. ಈ ಸಮಯ ಸಾಧಿಸಿ ಮೂರನೆಯ ವಿಕ್ರಮಾದಿತ್ಯನು ರಾಷ್ಟ್ರಕೂಟರ ಕಡೆಗೆ ವಾಲುವದರ ಮೂಲಕ ಅವರ ಸಾಮಂತತ್ವವನ್ನು ಒಪ್ಪಿಕೊಂಡು ಚೋಳರಿಂದ ತನ್ನ ಸಾಮ್ರಾಜ್ಯವನ್ನು ರಕ್ಷಿಸಿಕೊಂಡನು. ಮೂರನೆಯ ಕೃಷ್ಣನ ಮರಣದ ನಂತರ ರಾಷ್ಟ್ರಕೂಟರ ಶಕ್ತಿ ಕ್ಷೀಣಿಸಿ ಚೋಳರು ಮತ್ತೆ ಅವರ ಪ್ರದೇಶಗಳ ಮೇಲೆ ತಮ್ಮ ಪ್ರಭುತ್ವವನ್ನು ಸಾರಿದರು. ಆಗ ಬಾಣರು ಮತ್ತೆ ಚೋಳರ ಸಾಮಂತರಾದರು.

ನಂತರ ಬಾಣರ ಶಾಖೆಯೊಂದು ಕನ್ನಡ ಪ್ರದೇಶಗಳಲ್ಲಿ ಆಳುತ್ತಿದ್ದಂತೆ ತೋರುತ್ತದೆ. ಶಾಸನವೊಂದರಲ್ಲಿ ಬಾಣದೊರೆ ಸಂಬಯ್ಯನು ಬಾಣರ ಎಲ್ಲ ಬಿರುದುಗಳೊಂದಿಗೆ ಬಿದರೂರಿನಿಂದ ಆಳುತ್ತಿದ್ದದು ಕಂಡುಬರುತ್ತದೆ[೩೭]. ನೆಲ್ಲೂರ ಜಿಲ್ಲೆಯ ಸನ್ನಮೂರು ಶಾಸನದ ಪ್ರಕಾರ ಮಹಾಬಲಿ ಮನೆತನದ ಅಗ್ಗಪ್ಪರಾಜು ಎಂಬುವವನು ಕ್ರಿ.ಶ.೧೦೦೮ ರಲ್ಲಿ ಆಳುತ್ತಿದ್ದ ವಿಷಯ ತಿಳಿಯುತ್ತದೆ[೩೮]. ಅನಂತಪುರ ಜಿಲ್ಲೆಯ ಶಾಸನಗಳಲ್ಲಿ ಬಾಣರ ದೊರೆಗಳಾದ ಮಹಾಸಾಮಂತ ಚಂದಿಯಣ್ಣ ಮತ್ತು ಮಹಾಸಾಮಂತ ಚಿಲ್ಪರಸ ಎಂಬುವರು ಕ್ರಿ.ಶ.೧೦೬೮ ರಲ್ಲಿ ಆಳುತ್ತಿದ್ದರು[೩೯]. ಈ ವಿವರಗಳ ಮೇಲಿಂದ ಬಾಣ ಅರಸರುಗಳು ಕಲ್ಯಾಣಿ ಚಾಲುಕ್ಯರ ಸಾಮಂತರುಗಳಾಗಿ ಈ ಕಾಲಕ್ಕೆ ಆಳ್ವಿಕೆ ನಡೆಸಿರಬಹುದೆಂದು ಹೇಳಬಹುದು.

ಕಾಳಗಿ ಶಾಸನ ಬಾಣರ ಚಂದರಸ ಮತ್ತು ಬಂದರಸರ ಹೆಸರುಗಳನ್ನು ಹೇಳುತ್ತದೆ[೪೦]. ತೆಂಗಲಿ ಶಾಸನ ಹೇಳುವಂತೆ ಬಾಣ ವಂಶದ ಬಿಬ್ಬರಸನೆಂಬುವನು ತನ್ನ ಧಾರ್ಮಿಕ ಕಾರ್ಯಗಳಿಂದ ಪ್ರಖ್ಯಾತನಾಗಿದ್ದನೆಂದೂ, ಅವನು ಜೀವನಿಕಪುರದಲ್ಲಿ ಶಿವದೇವಾಲಯ ಕಟ್ಟಿಸಿದನೆಂದಿದೆ[೪೧]. ಇದೇ ಬಿಬ್ಬರಸನನ್ನು ಚಾಲುಕ್ಯ ವಿಕ್ರಮ ಶಕೆ ೩೧ (ಕ್ರಿ.ಶ. ೧೧೦೬) ರ ಶಾಸನವೊಂದು ಮಹಾಮಂಡಲೇಶ್ವರನೆಂಬ ಬಿರುದಿನಿಂದ ಕರೆದಿದೆ[೪೨].

ಬಿಬ್ಬರಸನ ನಂತರ ವೀರಗೊಂಕರಸನು ಮಹಾಮಂಡಳೇಶ್ವರನಾದನು. ಕ್ರಿ.ಶ.೧೦೯೭ರ ಹಸೂರು[೪೩] ಮತ್ತು ಕ್ರಿ.ಶ.೧೦೯೮ ರ ನಿಂಬರಗಿ[೪೪] ಶಾಸನಗಳಲ್ಲಿ ಈತನು ಮಹಾಮಂಡಳೇಶ್ವರ, ಮಂನೆಯಸಿಂಗ, ಬಿಬ್ಬನಂಕಕಾರನೆಂದು ಉಲ್ಲೇಖಿತವಾಗಿದ್ದಾನೆ. ಬೀದರ ಜಿಲ್ಲೆಯ ಮಾರ್ಕಲ್ ಶಾಸನದಲ್ಲಿ ಈತನ ಪ್ರಶಸ್ತಿಯನ್ನು ಖಾಂಡವಮಂಡಳಾಧೀಶ್ವರ; ಬಾಣವಂಶೋದ್ಭವ, ನುಡಿದಂತೆ ನಡೆವ ವೀರವೆಡಂಗ, ಅಯ್ಯನಸಿಂಗ, ಶ್ರೀ ಬಿಬ್ಬೇಶ್ವರದೇವ ಪಾಧಾರಾಧಕ ಎಂದು ಹೊಗಳಲಾಗಿದೆ[೪೫]. ಇಂಚೂರಿನ ಕ್ರಿ.ಶ. ೧೧೦೪ರ ಶಾಸನದಲ್ಲಿ ಅಟ್ಟಳೆಯ ಗೊಂಕರಸರು ಎಂದು ಹೇಳಿದೆ[೪೬]. ಗುಲ್ಬರ್ಗ ಜಿಲ್ಲೆಯ ಮತೂ‍ರು ಶಾಸನದಲ್ಲಿ ಇವನ ವಂಶಾವಳಿಯು ಬಿಬ್ಬಭೂಪ-ಶ್ರೀಕರ-ಗೊಂಕನೃಪಾಳ-ಕತ್ತನೃಪಾಳ-ವೀರಗೊಂಕರಸ ಎಂದು ಉಲ್ಲೇಖಿಸಿದೆ [೪೭].

ಎರಡನೆಯ ವೀರಗೊಂಕರಸನು ಈತನ ನಂತರ ಆಳ್ವಿಕೆ ಮಾಡಿದ್ದಾನೆ. ಕಾಳಗಿ ಶಾಸನ ಈತನ ವಂಶಾವಳಿಯನ್ನು ಬಿಬ್ಬನೃಪ-ಚಂದರಸ-ಗೊಂಕ-ಬಿಬ್ಬ+ರೆಬ್ಬಲದೇವಿ-ವೀರಗೊಂಕರಸ ಎಂದು ಹೇಳಿದೆ[೧೪೮]. ಶಾಸನವು ಇವನ ಪ್ರಶಸ್ತಿಯನ್ನು ಮಹಾಮಂಡಳೇಶ್ವರ ಬಾಣ ಖಾಂಡಮಂಡಳಾಧೀಶ್ವರಂ, ವಂಶೋದ್ಭವಂ, ವಿವೇಕವನುಜೋದ್ಭವಂ, ರಿಪುತಿಮಿರಮಾರ್ತಾಡಂ, . . . ಶದಬಂಧುಕರದೊಳು . . . ಭ್ರಮರ . . . . ಕೀರ್ತಿಸುವರಾದಿತ್ಯ, ಬುಧಜನಸಂಸ್ತುತ್ಯಚತು . . . . ಶ್ರೀ ಗೊಂಕೇಶ್ವರಲಬ್ಧವರಪ್ರಸಾದಂ, ವಿದ್ಯಾವಿನೋದ . . . , ಮುಟ್ಟತುರಗರೇವಂತ ಪರಬಳಕೆ ಕೃತಾತಂ, ಶ್ರೀ ಬಿಬ್ಬೇಶ್ವರದೇವ ಪಾದಾರಾಧಕಂ ಎಂದು ಹೇಳಿ ಇವನು ಮನ್ನೆದಡಿ-೧೦೦೦ ದಲ್ಲಿಯ ನೂರುಂಬಾಡನ್ನು ಆಳುತ್ತಿದ್ದನೆಂದು ಹೇಳಿದೆ. ಈ ಗೊಂಕರಸನು ಕಲಚೂರಿ ರಾಯಮುರಾರಿ ಸೋವಿದೇವನ ಕಾಲದ ಶಾಸನವೊಂದರಲ್ಲಿ ಕಾಣಿಸಿಕೊಳ್ಳುತ್ತಾನೆ[೧೪೯]. ಇವನು ಆರನೆಯ ವಿಕ್ರಮಾದಿತ್ಯನ ಸಾಮಂತನಾಗಿ ಸೇವೆಸಲ್ಲಿಸಿದ್ದಾನೆ.

ಇದಲ್ಲದೇ ಕ್ರಿ.ಶ. ೧೦೮೮ ರ ಕೊನಕೊಂಡ್ಲದ ಶಾಸನವೊಂದು ಹಾಂಬುಳಿಗೆಯ ಚಿಕ್ಕರಸನನ್ನು ಉಲ್ಲೇಖಿಸುತ್ತದೆ. ಆರನೆಯ ವಿಕ್ರಮಾದಿತ್ಯನ ಸಾಮಂತನಾದ ಈತನನ್ನು ಶಾಸನ ವೈರಿಮದನ ಮಹೇಶ್ವರ, ಸಕಳ ಜಗತ್ರಯಾಭಿವನ್ದಿತ, ಸುರಾಸುರಾಧೀಸ, ಪರಮೇಶ್ವರ ಪ್ರತಿಹಾರೀ, ಮಹಾಬಲಿ ಕುಲೋದ್ಭವ, ಕೃಷ್ಣಧ್ವಜ ವಿರಾಜಿತ, ವೃಷಭಲಾಂಛನ, ನಂದಗಿರಿನಾಥ, ಪರುವಿಪುರವರೇಶ್ವರ, ಬಾಣರ ಕುಲಾದಿತ್ಯ, ಒಕ್ಕೆತ್ತುಗಂಡ ಮೊದಲಾದ ಪ್ರಶಸ್ತಿಯಿಂದ ಕರೆದಿದೆ. ಆದರೆ ಬಾಣರ ವಂಶಕ್ಕೆ ಸಂಬಂಧಿಸಿದ ಈತನು ಯಾರು? ಯಾರ ನಂತರ ಆಳ್ವಿಕೆಮಾಡಿದ? ಎಲ್ಲಿ ಆಳಿದ ಎಂಬ ವಿಷಯ ತಿಳಿದುಬರುವದಿಲ್ಲ[೧೫೦].

## ಗೋವೆಯ ಕದಂಬರು:

ಕದಂಬರಂತೆಯೇ ಇವರೂ ಕೂಡ ಬನವಾಸಿಪುರವರಾಧೀಶ್ವರ ಎಂದು ಕರೆದುಕೊಂಡಿದ್ದಾರೆ. ಪೆರ್ಮಟ್ಟಿ ರಾಜವಾದ್ಯ, ಸಿಂಹ ಲಾಂಛನ, ವಾನರ ಧ್ವಜ, ಇವರಿಗಿದ್ದವು. ಚಂದ್ರಪುರ ಅಂದರೆ ಗೋವೆಯ ಸಾಲ್ಸೆಟ್ಟಿಯಲ್ಲಿರುವ ಚಾಂದೋರ ಇವರ ಮೂಲ ರಾಜಧಾನಿಯಾಗಿತ್ತು. ನಂತರ ಒಂದನೇ ಜಯಕೇಶಿಯ ಕಾಲಕ್ಕೆ ಗೋವೆಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡರು. ಅನಿಲಾಪುರ ಎಂದರೆ ಧಾರವಾಡ ಜಿಲ್ಲೆಯ ಅಳ್ನಾವರ ಇವರ ಪ್ರಾಂತೀಯ ರಾಜಧಾನಿಯಾಗಿತ್ತು.

ಇವರ ಆಳ್ವಿಕೆಗೊಳಪಟ್ಟ ಪ್ರದೇಶಗಳೆಂದರೆ, ಪಲಸಿಗೆ-೧೨,೦೦೦ ಮತ್ತು ಕೊಂಕಣ-೯೦೦ ಆಗಿದ್ದವು. ಆದರೆ ಕೆಲ ಪ್ರಬಲ ಅರಸರುಗಳು ಹೈವೆ-೫೦೦ ಮತ್ತು ಬನವಾಸಿ-೧೨೦೦೦, ಪಾನುಂಗಲ್ಲು-೫೦೦, ಕೊಂತಕುಳಿ-೩೦, ವೇಲುಗ್ರಾಮ-೭೦ ಹಾಗೂ ಕಾವಡಿದ್ವೀಪಗಳನ್ನು ತಮ್ಮ ಪರಾಕ್ರಮಗಳಿಂದ ಗಳಿಸಿಕೊಂಡಿದ್ದರು.

ಗೋವೆಯ ಕದಂಬ ಮನೆತನದ ಮೊದಲ ಅರಸು ಒಂದನೆಯ ಷಷ್ಠನಾಗಿದ್ದಾನೆ. ಶಕ ೯೬೦ ರ ಎರಡನೆಯ ಷಷ್ಠನ ಮರ್ಸೆಲ್ಲಾ ತಾಮ್ರಶಾಸನದಲ್ಲಿ ಈತನನ್ನು 'ಕಂಟಕಾಚಾರ್ಯ'ನೆಂದು ಕರೆಯಲಾಗಿದೆ[೧೫೧]. ಅಲ್ಲದೇ ಗಣದೇವಿ

ಶಾಸನವು ಈತನನ್ನು ಷಷ್ಠನೆಂದು ಕರೆದಿದೆ[೧೫೨]. ರಾಜ್ಯವನ್ನು ಕಳೆದುಕೊಂಡ ಅನೇಕ ಸಮಕಾಲೀನ ರಾಜರ ಹಿತೈಷಿಯಾಗಿ ಅವರ ರಾಜ್ಯಗಳನ್ನು ಷಷ್ಠನು ಮರಳಿ ಗಳಿಸಿಕೊಟ್ಟನೆಂದು ಶಾಸನಗಳಿಂದ ತಿಳಿದುಬರುತ್ತದೆ.

ಷಷ್ಠನ ನಂತರ ಅವನ ಮಗ ನಾಗವರ್ಮನೆಂಬುವವನು ಆಡಳಿತಕ್ಕೆ ಬಂದನು. ಶಾಸನ ಹೇಳುವಂತೆ ಷಷ್ಠನ ಹೆಂಡತಿ ನಾಯವ್ವದೇವಿ ಅವರಿಬ್ಬರ ಮಗ ನಾಗವರ್ಮ, ನಾಗವರ್ಮನ ಹೆಂಡತಿ ಮಾಲವ್ವದೇವಿ[೧೫೩]. ಇವನು ಶೂರ, ಮಹಾತ್ಮ ಹಾಗೂ ಮೇಧಾವಿಯೆಂದು ಸ್ತುತನಾಗಿದ್ದಾನೆ. ನಾಗಶಾಸ್ತ್ರ ಪಾರಂಗತ, ಸಾಹಿತ್ಯನಿಧಿ ಮತ್ತು ಕಲಾಚತುರನೆಂದು ಖ್ಯಾತನಾಗಿದ್ದಾನೆ.

ನಾಗವರ್ಮನ ಮಗ ಒಂದನೆಯ ಗೂವಲದೇವ ನಂತರ ಆಳ್ವಿಕೆಗೆ ಬಂದನು. ಇವನು ಸಮರ್ಥನಾದ ಅರಸನಾಗಿದ್ದು, ಹುಲಿಯನ್ನು ಕೊಂದಿದ್ದರಿಂದ ಇವನಿಗೆ 'ವ್ಯಾಘ್ರಮಾರಿ' ಎಂಬ ಬಿರುದು ಇತ್ತೆಂದು ಶಿವಚಿತ್ತ ಪೆರ್ಮಾಡಿಯ ದೇಗಾವೆ ಶಾಸನದಿಂದ ತಿಳಿದುಬರುತ್ತದೆ[೧೫೪]. ಶಾಸನವೊಂದು ಉಲ್ಲೇಖಿಸುವಂತೆ ಈತನು ಭಧ್ದಮ ವಂಶದ ರಾಜನೊಬ್ಬನನ್ನು ಕಿತ್ತೊಗೆಯಲು ಹೋರಾಡಿದ ವಿಷಯ ತಿಳಿಯುತ್ತದೆಯಲ್ಲದೇ ಈತನು ನೌಕಾಸೈನ್ಯವನ್ನು ಕೂಡಾ ಹೊಂದಿದ್ದನು ಎಂದು ತಿಳಿಯುತ್ತದೆ[೧೫೫].

ಎರಡನೆಯ ಷಷ್ಠನು ಒಂದನೆಯ ಗೋವಲದೇವನ ಮಗನಾಗಿದ್ದು ಅವನ ನಂತರ ಪಟ್ಟಕ್ಕೆ ಬಂದನು. ಷಷ್ಠನ ಬಗೆಗೆ ದೊರೆಯುವ ಪ್ರಥಮ ಶಾಸನವೆಂದರೆ ಕ್ರಿ.ಶ. ೧೦೫೧-೫೨ ರ ಗುಡಿಕಟ್ಟಿ ಶಾಸನವಾಗಿದೆ. ಇದರಲ್ಲಿ ಕ್ರಿ.ಶ. ೧೦೦೬-೦೭ ರಲ್ಲಿ ಕಲ್ಯಾಣ ಚಾಲುಕ್ಯರ ಎರಡನೆಯ ಜಯಸಿಂಹ ಮತ್ತು ಅವನ ಸಾಮಂತನಾದ ಎರಡನೆಯ ಷಷ್ಠರಿಬ್ಬರೂ ಸೇರಿ ಬಿಟ್ಟ ದಾನವನ್ನು ಉಲ್ಲೇಖಿಸಲಾಗಿದೆ[೧೫೬]. ನೂಲ್ವಿ ಶಾಸನ ಹೇಳುವಂತೆ ಈತನು ತನ್ನ ಮಗ ಜಯಕೇಶಿಯೊಂದಿಗೆ ಕ್ರಿ.ಶ. ೧೦೭೨ ರಲ್ಲಿ ಕೊಂಕಣ-೯೦೦, ಹಲಸಿಗೆ-೧೨೦೦೦, ಕುಂದೂರು-೫೦೦ ಮತ್ತು ಸಬ್ಬಿ-೩೦ ಗಳನ್ನು ಆಳುತ್ತಿದ್ದನೆಂದು ಹೇಳಿದೆ[೧೫೭]. ಇವನು ಕಲ್ಯಾಣ ಚಾಲುಕ್ಯರ ಎರಡನೆಯ ಜಯಸಿಂಹ, ಒಂದನೆಯ ಸೋಮೇಶ್ವರ ಮತ್ತು ಎರಡನೆಯ ಸೋಮೇಶ್ವರರ ಸಾಮಂತನಾಗಿ ಆಳ್ವಿಕೆ ನಡೆಸುತ್ತಿದ್ದನೆಂದು ತಿಳಿದುಬರುತ್ತದೆ. ಕ್ರಿ.ಶ. ೧೦೪೫ ರ ಮುಗದ ಗ್ರಾಮದ ಶಾಸನ ಕೂಡಾ ಇವನು ಪಲಾಸಿಗೆ-೧೨೦೦೦ ಮತ್ತು ಕೊಂಕಣ-೯೦೦ ಪ್ರದೇಶಗಳನ್ನು ಆಳುತ್ತಿದ್ದ ವಿಷಯ ತಿಳಿಸುತ್ತದೆ. ಇವನು ಭೀಮಕಾಯನೆಂದೂ, ಮದ್ದಾನೆಗಳನ್ನು ವಶಪಡಿಸಿಕೊಳ್ಳುವದರಲ್ಲಿ ನಿಸ್ಸೀಮನೆಂದೂ ಶಾಸನ ಹೇಳಿದೆ. ಇವನು ಸೌರಾಷ್ಟ್ರ, ಅಂಗ, ಕಳಿಂಗ, ಮಾಲವ, ಮಹಾರಾಷ್ಟ್ರ, ಆಂಧ್ರ, ವಿಂಧ್ಯ, ಕಾಂಚಿ ಮತ್ತು ಕೇರಳ ಪ್ರದೇಶಗಳನ್ನು ಜಯಿಸಿದನೆಂದು ಗಣದೇವಿ ಶಾಸನ ಹೇಳಿದೆ[೧೫೮]. ಅಲ್ಲದೇ ನೌಕಾಯುದ್ಧದಿಂದ ಸಿಂಹಳ, ಪಾರಸಿಕ ಮತ್ತು ಕಾವದ್ವೀಪಗಳ ಅರಸರುಗಳನ್ನು ಸೋಲಿಸಿದ್ದನೆಂದು ತಿಳಿಯುತ್ತದೆ. ಇಮ್ಮಡಿ ಜಯಕೇಶಿಯ ನರೇಂದ್ರ ಶಾಸನವು ಇವನನ್ನು ಪಶ್ಚಿಮಾಂಭೋಧಿಪತಿ ಎಂದು ಕರೆದು, ಗೋವಾದ್ವೀಪದವರೆಗೆ ನೌಕಾಸೈನ್ಯವನ್ನು ಕಟ್ಟಿದನೆಂದೂ, ನೌಕೆಗಳಲ್ಲಿ ಸುಸಜ್ಜಿತ ಸೈನಿಕರನ್ನು ಕಳಿಸಿದನೆಂದೂ ಹಾಗೂ ಸೌರಾಷ್ಟ್ರದ ಪ್ರಭಾಸ ಪಟ್ಟಣಕ್ಕೆ ಪ್ರಯಾಣಿಸಿದ್ದನೆಂದೂ ಹೇಳಿದೆ[೧೫೯].

ಎರಡನೆಯ ಷಷ್ಠನಿಗೆ ಇಬ್ಬರು ಮಕ್ಕಳಿದ್ದು, ಅವರು ಎರಡನೇ ಗೋವಲದೇವ ಮತ್ತು ಒಂದನೆಯ ಜಯಕೇಶಿ. ಇವರು ತಂದೆಯ ಕಾಲದಲ್ಲಿಯೇ ಅವನಿಗೆ ಯುದ್ಧ ಮತ್ತು ಆಡಳಿತಗಳಲ್ಲಿ ಸಹಾಯ ಮಾಡುತ್ತಿದ್ದಂತೆ ತೋರುತ್ತದೆ. ಆದರೆ ಮರ್ಸ್ಸೆಲ್ಲಾ ಶಾಸನದಲ್ಲಿ ಇಮ್ಮಡಿ ಗೋವಲದೇವನು ರಾಜನೆಂದು ತಂದೆಯಾದ ಇಮ್ಮಡಿ ಷಷ್ಠದೇವನು 'ಅಮಾತ್ಯ ಪರಿಷದಧ್ಯಕ್ಷ'ನೆಂದೂ ಉಲ್ಲೇಖಿಸಲಾಗಿದೆ[೬೦]. ಇವನು ಸೌರಾಷ್ಟ್ರ, ಅಂಗ, ಕಲಿಂಗ ಮುಂತಾದ ದೇಶಗಳ ಮೇಲೆ ಯುದ್ಧ ಕೈಕೊಂಡಿದ್ದಾಗಿ ಶಾಸನಗಳು ಹೇಳುತ್ತವೆ. ಇದು ತಂದೆಯ ಕಾಲದಲ್ಲಿ ಅವನಿಗೆ ಸಹಾಯಕನಾಗಿ ಇವನು ಮಾಡಿದ ಯುದ್ಧಗಳಾಗಿರಬೇಕು.

ಇವನ ನಂತರ ಸಹೋದರನಾದ ಒಂದನೆಯ ಜಯಕೇಶಿ ಆಳ್ವಿಕೆ ಮಾಡಿದನು. ನರೇಂದ್ರ (ಕುಂಭಾಪುರ) ಶಾಸನದಲ್ಲಿನ ವಂಶಾವಳಿಯ ಪ್ರಕಾರ ಈತನು ಚಟ್ಟಯ್ಯದೇವನ ಮಗನಾಗಿದ್ದಾನೆ[೬೧]. ಇವನು ಒಂದನೆಯ ಸೋಮೇಶ್ವರ ಮತ್ತು ಆರನೆಯ ವಿಕ್ರಮಾದಿತ್ಯರುಗಳ ಸಾಮಂತನಾಗಿದ್ದನು. ಒಂದನೆಯ ಸೋಮೇಶ್ವರನ ಗುಡಿಕಟ್ಟೆ ಶಾಸನವು ಇವನನ್ನು 'ಪ್ರಾಜ್ಯ ಸಾಮ್ರಾಜ್ಯವರ್ಧ್ಧಕ' ಎಂದು ಕರೆದಿದೆ[೬೨]. ಚೋಳರ ವಿರುದ್ಧದ ತನ್ನ ಹೋರಾಟಗಳಲ್ಲಿ ಒಂದನೆಯ ಸೋಮೇಶ್ವರನು ಇವನಿಂದ ಸಹಾಯಪಡೆದಿರಬಹುದು. ಕ್ರಿ.ಶ. ೧೦೭೧-೭೨ ರ ಅಮ್ಮಿನಭಾವಿಯ ಶಾಸನದಲ್ಲಿ ಒಂದನೆಯ ಜಯಕೇಶಿಯು ಆರನೆಯ ವಿಕ್ರಮಾದಿತ್ಯನಿಗೆ ಅಧೀನನಾಗಿ, ಕೊಂಕಣ-೯೦೦, ಪಲಸಿಗೆ-೧೨,೦೦೦ ಮತ್ತು ಕುಂದೂರು-೫೦೦ ವಿಭಾಗಗಳನ್ನು ಮಹಾಮಂಡಳೇಶ್ವರನಾಗಿ ರಾಜಧಾನಿ ಗೋವೆಯಿಂದ ಆಳುತ್ತಿದ್ದ ವಿಷಯ ನಿರೂಪಿತವಾಗಿದೆ[೬೩]. ಸಾಮ್ರಾಜ್ಯಕ್ಕಾಗಿ ಆರನೆಯ ವಿಕ್ರಮಾದಿತ್ಯನಿಗೂ ಮತ್ತು ಎರಡನೆಯ ಸೋಮೇಶ್ವರನಿಗೂ ನಡೆದ ಕಾಳಗದಲ್ಲಿ ಜಯಕೇಶಿಯು ಭಾಗವಹಿಸಿ ವಿಕ್ರಮಾದಿತ್ಯನಿಗೆ ಪಟ್ಟಕಟ್ಟುತ್ತಾನೆಯಲ್ಲದೇ ಅಳುಪರನ್ನು ಸೋಲಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತಾನೆ. ಅದನ್ನು ಶಾಸನ ಹೀಗೆ ಹೇಳಿದೆ "ಯಸ್ ಚಾಲುಕ್ಯಂ ನಿಜೆರಾಜ್ಯೆ ಸ್ಥಾಪ್ಯಾನ್-ವಿಜಿತಅಳುಪಃ"[೬೪]. ಮುಂದೆ ವಿಕ್ರಮಾದಿತ್ಯನಿಗೆ ತನ್ನ ಮಗಳನ್ನು ನೀಡಿ ರಕ್ತಸಂಭಂದ ಬೆಳೆಸುತ್ತಾನೆ. ಎರಡನೆಯ ಜಯಕೇಶಿಯ ಆಸೋಗೆ ತಾಮ್ರಶಾಸನವು ಈತನು ಚಾಲುಕ್ಯ ಚೋಳರಲ್ಲಿ ಸೌಹಾರ್ದವನ್ನು ಕಂಚಿಯಲ್ಲಿ ಕುದುರಿಸಿದ್ದಕ್ಕೆ 'ರಾಯಪಿತಾಮಹ' ಎಂಬ ಪ್ರಶಸ್ತಿಯನ್ನು ಪಡೆದನು ಎಂದು ಹೇಳಿದೆ[೬೫]. ಇದೇ ವಿಷಯವನ್ನು ಮೂರನೆಯ ಜಯಕೇಶಿಯ ಕಿರಿಹಲಸಿಗೆ ತಾಮ್ರಶಾಸನದಲ್ಲಿಯೂ ಕೂಡ ನಾವು ಕಾಣಬಹುದು[೬೬]. ಇವನು ಪಾಂಡ್ಯ, ಪರಮಾರ, ಲಾಟ, ಚೋಳ ಮತ್ತು ಪಲ್ಲವ ರಾಜರನ್ನು ಜಯಿಸಿದ್ದನೆಂದೂ, ಇವನ ಸೈನಿಕರು ಸಮುದ್ರಯುದ್ಧದಲ್ಲಿ ಪರಿಶ್ರಮವುಳ್ಳವರೆಂದೂ, ಅವನಿಗೆ ಪ್ರಬಲ ನೌಕಾಸೈನ್ಯವಿತ್ತೆಂದೂ, ಈ ನೌಕಾಸೇನೆಗಳಿಂದಾಗಿ ಸಿಂಹಳ ರಾಜನಿಗೆ ಶಾಂತಿಯಿರಲಿಲ್ಲವೆಂದೂ ಪಣಜಿ ಶಾಸನ ಹೇಳುತ್ತದೆ[೬೭]. ಇವನು ಕಾಪರ್ದಿಕಾದ್ವೀಪದ ಅರಸನನ್ನು ಕೊಂದವನೆಂದೂ, ಚೋಳರಾಜನನ್ನು ಸೋಲಿಸಿದವನೆಂದೂ, ಕಾಮದೇವನನ್ನು ಪದಚ್ಯುತಿಗೊಳಿಸಿದವನೆಂದೂ ದೇಗಾವೆ ಶಾಸನ ಹೇಳಿದೆ[೬೮]. ಬನವಾಸಿ ಕೀರ್ತಿರಾಜನ ದಿಗ್ವಿಜಯವನ್ನು ಹತ್ತಿಕ್ಕಿ, ಚೋಳರ ವಿಜೃಂಭಣೆಯನ್ನು ತಡೆಗಟ್ಟಿದವನೆಂದು ನರೇಂದ್ರ ಶಾಸನವು ಕೊಂಡಾಡಿದೆ[೬೯].

ಒಂದನೆಯ ಜಯಕೇಶಿಯ ನಂತರ ಅವನ ಮಗ ಮೂರನೆಯ ಗೂವಲದೇವನು ಕ್ರಿ.ಶ.ಸು. ೧೦೭೮ ರಲ್ಲಿ ಪಟ್ಟವೇರಿರುವದು ತಿಳಿಯುತ್ತದೆ. ಒಂದನೆಯ ಜಯಕೇಶಿಗೆ ಕೇಸರಿ ಹುಟ್ಟುವಂತೆ ಗೂವಲದೇವನು ಜನಿಸಿದನೆಂದು ಕುಂಭಾಪುರ ಶಾಸನವು ಬಣ್ಣಿಸಿದೆ[೬೦]. ಕ್ರಿ.ಶ. ೧೦೭೯ ರ ಮುಕ್ಕಲ್ ಶಾಸನದಲ್ಲಿಯೇ ಮೊದಲಬಾರಿಗೆ ಈತನ ಉಲ್ಲೇಖ ಬರುತ್ತದೆ[೬೧]. ಅಲ್ಲದೇ ಕಾದರವಳ್ಳಿ[೬೨] ಮತ್ತು ನಿಗದಿ ಶಾಸನಗಳಲ್ಲಿಯೂ[೬೩] ಈತನ ಉಲ್ಲೇಖ ಬರುತ್ತದೆ. ಕ್ರಿ.ಶ. ೧೦೯೫ ರವರೆಗೆ ಅವನ ರಾಜ್ಯವು ಕೊಂಕಣ-೯೦೦ ಮತ್ತು ಪಲಸಿಗೆ-೧೨,೦೦೦ ನಾಡುಗಳವರೆಗೆ ವಿಸ್ತಾರವಾಗಿದ್ದುದು ತಿಳಿದರೆ, ಕ್ರಿ.ಶ. ೧೦೯೯ ರ ಕಾದರವಳ್ಳಿ ಶಾಸನ ವಿವರಿಸುವಂತೆ ಈ ವೇಳೆಗೆ ಪಲಸಿಗೆ-೧೨,೦೦೦ನ್ನು ಮಾತ್ರ ಗೋವೆಯ ನೆಲೆವೀಡಿನೊಂದಿಗೆ ಆಳುತ್ತಿದ್ದುದಾಗಿ ತಿಳಿಯುತ್ತದೆ[೬೪]. ಮುಂದೆ ಈತನ ತಮ್ಮ ವಿಜಯಾದಿತ್ಯನ ಪುತ್ರ ಎರಡನೆಯ ಜಯಕೇಶಿಯು ತನ್ನ ಸಾಹಸ ಶೌರ್ಯಗಳಿಂದ ಸಾಮ್ರಾಜ್ಯವನ್ನು ವಿಸ್ತರಿಸುತ್ತಾನೆ. ಕ್ರಿ.ಶ. ೧೧೨೦ ರ ಸುಮಾರಿಗೆ ಮೂರನೆಯ ಗೂವಲದೇವನು ಕೊಂಕಣ-೯೦೦, ಪಲಸಿಗೆ-೧೨,೦೦೦ ಮತ್ತು ಕವಡಿದ್ವೀಪ-೧,೨೫,೦೦೦ ಗಳ ಅಧಿಪತಿಯಾಗಿ ಆಳ್ವಿಕೆ ನಡೆಸುತ್ತಿದ್ದನು[೬೫]. ಮುಕ್ಕಲ್ ಶಾಸನವು ಹರಧರಣೀ ಪ್ರಸೂತಂ, ತ್ರಿಲೋಚನ ಕದಂಬವಂಸಮಹೋದಯಂ, ಸಕಳ ಮಹೀಮಂಡಳನುತ್ತುಂಗ ಸಿಂಹಲಾಂಚ್ಛನ, ವಾನರ ಮಹಾಧ್ವಜಂ, ಚತುರಾ(ರ)ಸೀತಿನಗರಾಧಿಷ್ಠಿತ ಅಷ್ಟದಶಾಶ್ವಮೇಧ ದೀಕ್ಷಾದೀಕ್ಷಿತ ಕುಳಪ್ರಸೂತ, ಹಿಮವದ್ಗಿರೀಂದ್ರರುಂದ್ರ ಶಿಖರ ಸಂಸ್ಥಾಪಿತ ಮಹಾಶಕ್ತಿಪ್ರಭಾವಂ, ತ್ಯಾಗ ಜಗಝಂಪ ಝಂಪಲಾಚಾರ್ಯ್ಯಂ, ನಿಸ್ಸಂಕರಾಮ, ಸುಭಟ ಕನಕನಿಕಸೋಪಾಳ(ಂ), ಸರಣಾಗತ ವಜ್ರಪ್ರಾಕಾರಂ, ಲೋಕೈಯ್ಯಕಳ್ಪದ್ರುಮಂ, ಸಂಕ್ರಾನ್ತಿಧವಳ, ಮೂರ್ತಿನಾರಾಯಣ, ಕೀರ್ತಿಮಾರ್ತ್ತಾಂಡ, ಮಂಡಳೀಕ ಲಲಾಟಪಟ್ಟ, ಸುಭಟರಾಜ ಮೊದಲಾದ ಪ್ರಶಸ್ತಿಗಳನ್ನು ಉಲ್ಲೇಖಿಸಿದೆ[೬೬]. ತೇಗೂರಿನ ಶಾಸನವು ವಿಕ್ರಮಾದಿತ್ಯನ ಪಾದಪದ್ಮೋಪಜೀವಿಯೆಂದೂ, ಪಗೆಮುಟ್ಟೆಗಣ್ಡಂ, ಮಣ್ಡಳೀಕಲಲಾಟಪಟ್ಟಂ, ವೈರಿಘರಟ್ಟಂ, ಮೂರ್ತಿನಾರಾಯಣಂ, ಚತುರಪಾರಾಯಣಂ ಎಂದೂ ಕರೆದಿದೆ[೬೭]. ನಿಗದಿ ಶಾಸನದಲ್ಲಿ ಪೆರ್ಮಟ್ಟಿತೂರ್ಯ್ಯನಿರ್ಗ್ಘೋಶಣ ಎಂದರೆ[೬೮], ಮುಗದದ ಶಾಸನವು ಶ್ರೀಮತ್ರಿಭುವನಮಲ್ಲಂ ಗೂವಲದೇವರ್ ಎಂದುದರಿಂದ ಈತನು ಚಕ್ರವರ್ತಿಯ ಬಿರುದನ್ನು ಧರಿಸಿದ್ದನೆಂದು ತಿಳಿದುಬರುತ್ತದೆ[೬೯]. ಕಾದ್ರವಳ್ಳಿ ಶಾಸನದ ಪ್ರಕಾರ ಗಂಗವಂಶದ ಅರಿಕೇಸರಿದೇವನು ಗೂವಲದೇವನ ಮಹಾಮಂಡಳೇಶ್ವರನಾಗಿ ಕಾದರವಳ್ಳಿ-೩೦ನ್ನು ಆಳುತ್ತಿದ್ದನೆಂದು ತಿಳಿದುಬರುತ್ತದೆ[೭೦]. ಅಲ್ಲದೇ ಹಾನಗಲ್ಲ ಕದಂಬ ವಂಶದ ಶಾಂತಿವರ್ಮದೇವನೂ ಈತನ ಮಂಡಳಿಕನಾಗಿದ್ದನೆಂದು ತಿಳಿದುಬರುತ್ತದೆ[೭೧]. ಮಹಾಸಾಮಂತ ನಾಕರಸನು ಈ ಗೂವಲದೇವನ ಕೈಕೆಳಗೆ ಅಧಿಕಾರಿಯಾಗಿ ಮುಗದ-೩೦ನ್ನು ಆಳುತ್ತಿದ್ದುದು ಶಾಸನವೊಂದು ನಮಗೆ ತಿಳಿಸುತ್ತದೆ[೭೨].

ಮೂರನೆಯ ಗೂವಲದೇವನಿಗೆ ಮಕ್ಕಳಿಲ್ಲದಂತೆ ತೋರುತ್ತದೆ. ಕಾರಣ ಅವನ ಸಹೋದರ ವಿಜಯಾದಿತ್ಯನ ಮಗನಾದ ಎರಡನೆಯ ಜಯಕೇಶಿಯು ಇವನ ನಂತರ ಆಳ್ವಿಕೆಗೆ ಬಂದನು. ಗೋವೆಯ ಕದಂಬರಲ್ಲಿಯೇ ಅತ್ಯಂತ ಪ್ರಸಿದ್ಧನಾದ ಅರಸು ಎರಡನೆಯ ಜಯಕೇಶಿಯಾಗಿದ್ದಾನೆ. ಈತನು ಕಲ್ಯಾಣಿ ಚಾಲುಕ್ಯ ಕುಲದ ಆರನೆಯ ವಿಕ್ರಮಾದಿತ್ಯ,

ಮೂರನೆಯ ಸೋಮೇಶ್ವರ ಮತ್ತು ಇಮ್ಮಡಿ ಜಗದೇಕಮಲ್ಲರ ಕಾಲದಲ್ಲಿ ಅವರಿಗೆ ಸಾಮಂತನಾಗಿದ್ದನು. ಚಾಲುಕ್ಯ-ಹೊಯ್ಸಳರಿಗೆ ನಡೆದ ಕಲಹದ ಲಾಭ ಪಡೆಯಲು ಇವನು ಪ್ರಯತ್ನಿಸಬಹುದೆನಿಸಲು ನಮಗೆ ಆರನೆಯ ವಿಕ್ರಮಾದಿತ್ಯನು ಮೊದಲು ಯಲಬುರ್ಗಿ ಸಿಂಧವಂಶದ ಮಹಾಮಂಡಳೇಶ್ವರ ಎರಡನೆಯ ಆಚುಗಿಯನ್ನು ಎರಡನೆಯ ಬಾರಿ ಅವನ ಮಗ ಪೆರ್ಮಾಡಿದೇವನನ್ನು ಅವನ ದಂಗೆಯನ್ನಡಗಿಸಲು ಕಳಿಸಿದ್ದನ್ನು ನೋಡಿದಾಗ ತಿಳಿಯುತ್ತದೆ. ಜಯಕೇಶಿಯು ಆರನೆಯ ವಿಕ್ರಮಾದಿತ್ಯನ ಮಗಳನ್ನು ವಿವಾಹವಾದ ಉಲ್ಲೇಖ ಧಾರವಾಡ ತಾಲೂಕಿನ ಕನಕೂರದ ಕ್ರಿ.ಶ. ೧೧೦೪ರ ಶಾಸನದಿಂದ ತಿಳಿಯುತ್ತದೆ[೧೮೩]. ಕುಂಭಾಪುರ ಶಾಸನ[೧೮೪]ದಲ್ಲಿ ಈ ಮದುವೆಯ ವರ್ಣನೆ ಹೀಗಿದೆ -

ಎಂದು ವಿಭೂತಿಯಂ ಧರಿಸಿ ಹೇಮನಗೇಂದ್ರಮೆ ಮುಂದೆ ಬಂದು
ನಿಂದಂದಮೆ ನೀಳ್ಪುಕೆಯ್ದು ಮಣಿಮಂಡಪದೊಳ್ಪದ ಪದ್ಮಮಂ ನಿಜಾ
ನಂದದೆ ಕರ್ಚ್ಚಿ ಪೂಣ್ದು ಕಳಶೋಜ್ಜ್ವಳಧಾರೆ ವಿರಾಜಿಸಲ್ಕೆ ತಾಂ
ನನ್ದನೆಯಂ ಕುಮಾರಕ ಶಿಖಾಮಣಿಗಿತ್ತ ನಿಳಾತಳೇಶ್ವರಂ ॥

ಹೀಗೆ ಅಳಿಯನ ಪಾದತೊಳೆದು ಮಗಳನ್ನು ಕೊಟ್ಟು ಲೆಕ್ಕವಿಲ್ಲದಷ್ಟು ಉಡುಗೊರೆ ಇತ್ತುದನ್ನು ಶಾಸನ ಉಲ್ಲೇಖಿಸಿದೆ. ಮುಮ್ಮಿಗಟ್ಟಿ ಶಾಸನ ಇವನು ಹಿರಿಯರಸಿ ಮೈಳಲಮಹಾದೇವಿಯೊಂದಿಗೆ ಆಡಳಿತ ಮಾಡುತ್ತಿದ್ದುದನ್ನು ತಿಳಿಸಿದೆ[೧೮೫]. ಭಾವಿಹಾಳ ಶಾಸನ ಈತನೂ ಚಕ್ರಿಯ ಪ್ರಿಯತನುಜೆ ಮೈಳಲಮಹಾದೇವಿಯರು ಕೂಡಿ ಪಲಸಿಗೆ-೧೨,೦೦೦, ಕೊಂಕಣ-೯೦೦ ಗಳನ್ನಾಳುತ್ತಿದ್ದ ವಿಷಯ ತಿಳಿದುಬರುತ್ತದೆ[೧೮೬]. ಕುಂಭಾಪುರ ಶಾಸನದಲ್ಲಿ ಜಯಕೇಶಿಯ ಪಟ್ಟದರಸಿ ಚಕ್ರವರ್ತಿಯ ಮಗಳು ಮೈಳಲದೇವಿಯು ಕೊಂಕಣ-೯೦೦, ಉಣಕಲ್ಲು-೩೦, ಸಬ್ಬಿ-೩೦, ಕೊನ್ತಕುಳಿ-೩೦, ಹಾನುಂಗಲ್ಲು-೫೦೦, ಉತ್ಸುಗ್ರಾಮೆ-೩೦, ಕಾದ್ರವಳ್ಳಿ-೩೦, ಪೊಳಲ್ಗುಂದೆ-೩೦, ವೇಳುಗ್ರಾಮೆ-೭೦, ಹೈವೆ-೫೦ ಮತ್ತು ಕವಡಿದ್ವೀಪ-೧,೨೫,೦೦೦ ವಿಭಾಗಗಳನ್ನು ಆಳುತ್ತಿದ್ದ ಉಲ್ಲೇಖ ಬಂದರೆ ಇದೇ ಶಾಸನ ಜಯಕೇಶಿಯು ಗೋವೆಯಲ್ಲಿದ್ದು ಆಳುತ್ತಿದ್ದ ವಿಷಯ ಉಲ್ಲೇಖಿಸುತ್ತದೆ. ಕನಕೂರು ಶಾಸನದಲ್ಲಿ ಶ್ರೀಮತು ಕೊಂಕಣಾಧಿಪತಿ ಎಂದೂ[೧೮೭], ಬೆಟದೂರು ಶಾಸನದಲ್ಲಿ ಬನವಾಸಿಪುರವರಾಧೀಶ್ವರ, ವಾನರ ಮಹಾಧ್ವಜ, ಪೆರ್ಮ್ಮಟ್ಟಿ . . ನಿರ್ಗ್ಘೋಷಣಂ, ಚತುರಾಶೀತಿ ನಗರಾಧಿಷ್ಠಿತಾದಶಾ(ಶ್ವ)ಮೇಧ, ದೀಕ್ಷಾದೀಕ್ಷಿತ ಕುಲಪ್ರಸೂತಂ, ಶರಣಾಗತ ವಜ್ರಪ್ರಾಕಾರ, ಮಣ್ಡಳೀಕ ತ್ರಿನೇತ್ರ ಎಂದು ಪ್ರಶಸ್ತಿಸಲಾಗಿದೆ.

ಕ್ರಿ.ಶ.೧೧೪೭ ರ ಸುಮಾರಿಗೆ ಎರಡನೆಯ ಜಯಕೇಶಿಯ ನಂತರ ಅವನ ಮಕ್ಕಳಾದ ಪೆರ್ಮಾಡಿದೇವ ಮತ್ತು ಎರಡನೆಯ ವಿಜಯಾದಿತ್ಯರು ಪಟ್ಟಕ್ಕೆ ಬಂದರು. ಅವರ ಶಾಸನಗಳು ಅವರನ್ನು ರಾಮ-ಲಕ್ಷ್ಮಣರಿಗೆ ಹೋಲಿಸಿವೆ. ಇವರಲ್ಲಿ ದೊಡ್ಡವನಾದ ಪೆರ್ಮಾಡಿಗೆ ಶಿವಚಿತ್ತನೆಂದೂ, ಚಿಕ್ಕವ ವಿಜಯಾದಿತ್ಯನಿಗೆ ವಿಷ್ಣುಚಿತ್ತನೆಂದೂ ಬಿರುದುಗಳಿದ್ದವು[೧೮೮]. ಪೆರ್ಮಾಡಿದೇವನ ಮೊತ್ತಮೊದಲನೆಯ ಶಾಸನವಾದ ಹುಣಸೀಕಟ್ಟೆಯ ಕ್ರಿ.ಶ.೧೧೪೨ ನೆಯ ವರ್ಷದ ಶಾಸನವು (?) ಮತ್ತು ಸಿದ್ದಾಪೂರದ ಕ್ರಿ.ಶ.೧೧೫೮ ನೆಯ ಶಾಸನವು ಇವನ ಪ್ರಶಸ್ತಿಗಳನ್ನು ಉಲ್ಲೇಖಿಸಿವೆ[೧೮೯].

ಪೆರ್ಮಾಡಿ ಮತ್ತು ಎರಡನೆಯ ವಿಜಯಾದಿತ್ಯರ ೪೦ ವರ್ಷಗಳ ಆಳ್ವಿಕೆಯ ಕಾಲವು ರಾಜಪ್ರಭುತ್ವಕ್ಕಾಗಿ ಮೂರು ಮನೆತನಗಳ ನಡುವೆ ನಡೆದ ಭೀಕರ ಹೋರಾಟದ ಕಾಲವಾಗಿತ್ತು. ಆ ಮನೆತನಗಳೆಂದರೆ ಕಲಚೂರಿಗಳು, ಸೇವುಣರು ಮತ್ತು ಹೊಯ್ಸಳರುಗಳು ಸೇರಿ ಚಾಲುಕ್ಯ ಸಾಮ್ರಾಜ್ಯದ ಮೇಲೆ ಬೀಳುತ್ತಿದ್ದರು. ಹೀಗಾಗಿ ಇವರಿಬ್ಬರು ಕ್ರಿ.ಶ. ೧೧೫೬-೬೨ ರಲ್ಲಿ ಚಾಲುಕ್ಯರ ಸಿಂಹಾಸನವನ್ನು ಕಲಚೂರಿಗಳು ಕಸಿದುಕೊಳ್ಳುವವರೆಗೂ ಚಾಲುಕ್ಯರಿಗೆ ನಿಷ್ಠರಾಗಿದ್ದರು. ಎರಡನೆಯ ಜಗದೇಕಮಲ್ಲ ಮತ್ತು ಮೂರನೆಯ ತೈಲಪರ ಸಾಮಂತರಾಗಿದ್ದ ಇವರು ಮರಳಿ ಚಾಲುಕ್ಯರು ಸಾಮ್ರಾಜ್ಯಗಳಿಸುವವರೆಗೂ ಸ್ವತಂತ್ರರಾಗಿದ್ದರು. ನಂತರ ನಾಲ್ಕನೆಯ ಸೋಮೇಶ್ವರನ ಕಾಲದಲ್ಲಿ ಮತ್ತೆ ಚಾಲುಕ್ಯರ ಅಧೀನತ್ವವನ್ನು ಒಪ್ಪಿಕೊಂಡರು. ಕಾರಣ ಈ ಕಾಲದಲ್ಲಿಯ ಅವರ ಶಾಸನಗಳಲ್ಲಿ ಪಶ್ಚಿಮ ಸಮುದ್ರಾಧೀಶ್ವರ ಎಂದು ಕರೆದು ತನ್ನ ಹೆಸರಿನಿಂದಲೇ ಬಿಡುಗಡೆಗೊಳಿಸಿದ್ದನು. ನಂತರ ಕ್ರಿ.ಶ.೧೧೮೦ ರ ನಂತರದ ಶಾಸನಗಳು ಸೋಮೇಶ್ವರನ ಮಹಾಮಂಡಳೇಶ್ವರನಾಗಿದ್ದನ್ನು ತಿಳಿಸುತ್ತವೆ[೧೦]. ಇವರ ರಾಜ್ಯವು ಕೊಂಕಣ-೯೦೦, ಪಲಸಿಗೆ-೧೨,೦೦೦ ಮತ್ತು ಕಾವಡಿದ್ವೀಪ-೧,೨೫,೦೦೦ ನಾಡುಗಳಿಂದ ಕೂಡಿತ್ತು. ಅಂಗಡಿ ಗ್ರಾಮದ ಕ್ರಿ.ಶ. ೧೧೯೨ ರ ಶಾಸನವೊಂದು ನಾಲ್ಕನೆಯ ಸೋಮೇಶ್ವರನ ಸಾಮಂತನಾಗಿ ಪೆರ್ಮಾಡಿಯು ಆಳುತ್ತಿದ್ದನೆಂದು ಉಲ್ಲೇಖಿಸುತ್ತದೆ[೧೧]. ಇದರಿಂದ ಇವನು ತನ್ನ ನಂತರ ಪಟ್ಟಕ್ಕೆ ಬಂದ ಮೂರನೆಯ ಜಯಕೇಶಿಯ ಕಾಲದಲ್ಲಿ ಅವನಿಗೆ ಸಹಾಯಕನಾಗಿ ಆಳುತ್ತಿರಬಹುದೆಂದು ನಾವು ಊಹಿಸಬಹುದಾಗಿದೆ. ಶಿವಚಿತ್ತ ಪೆರ್ಮಾಡಿಯ ಕುಲವಳ್ಳಿಯ ಶಾಸನ ತಿಳಿಸುವಂತೆ ಯುವರಾಜಕುಮಾರ ವಿಜಯಾದಿತ್ಯ (ಎರಡನೆಯ ವಿಜಯಾದಿತ್ಯ)ನ ಹೆಂಡತಿ ಹಂಪಾದೇವಿಯು ಸಂಪಗಾಡಿಯ ನೆಲೆವೀಡಿನಿಂದ ಆಳುತ್ತಿದ್ದ ವಿಷಯ ತಿಳಿಯುತ್ತದೆ[೧೨].

ಪೆರ್ಮಾಡಿಯ ನಂತರ ಅವನ ತಮ್ಮ ಎರಡನೆಯ ವಿಜಯಾದಿತ್ಯನ ಮಗನಾದ ಮೂರನೆಯ ಜಯಕೇಶಿಯು ಕ್ರಿ.ಶ. ೧೧೮೭ ರಲ್ಲಿ ಆಳ್ವಿಕೆಗೆ ಬಂದನು. ಹಲಸಿಗೆ-೧೨,೦೦೦ ಮತ್ತು ಕೊಂಕಣ-೯೦೦ ಗಳನ್ನು ಈತನು ಆಳುತ್ತಿದ್ದನು. ಮನಗುಂಡಿ ಶಾಸನ ಹೇಳುವಂತೆ ಸಿಂಹದೇವರಸ (ಯಾದವ ಎರಡನೆಯ ಸಿಂಘಣ)ನು ದಿಗ್ವಿಜಯ ಕೈಕೊಂಡು ಜಯಕೇಶಿಯ ಮೇಲೆ ಯುದ್ಧಕ್ಕೆ ಬಂದದ್ದನ್ನು ಉಲ್ಲೇಖಿಸಿದೆ. ಆದರೆ ಅಲ್ಲಿ ನಿರ್ಣಾಯಕ ಕಾಳಗ ನೆಡೆದ ಬಗ್ಗೆ ತಿಳಿದುಬರುವದಿಲ್ಲ[೧೩]. ಅಂಬೆ ಶಾಸನದಲ್ಲಿ ಸಿಂಘಣನಿಂದ ಕೇಸಿಯೆಂಬ ಒಬ್ಬ ರಾಜನು ರಾಜ್ಯ ಕಳೆದುಕೊಂಡ ಉಲ್ಲೇಖವಿದೆ[೧೪]. ಆ ಕೇಸಿಯೇ ಈ ಜಯಕೇಶಿಯಾಗಿರಬಹುದು. ಜಯಕೇಶಿಯು ನಾಲ್ಕನೆಯ ಸೋಮೇಶ್ವರನಿಗೆ ಸಾಮಂತನಾಗಿದ್ದನು. ಇವನಿಗೆ ಇವನ ಮಗ ವಜ್ರದೇವನು ಸಹಾಯಕನಾಗಿದ್ದಂತೆ ಕಾಣುತ್ತದೆ[೧೫]. ಮೂರನೆಯ ಜಯಕೇಶಿಗೆ ಕೊಂಕಣ ಚಕ್ರವರ್ತಿ, ಕದಂಬ ಚಕ್ರವರ್ತಿ ಎಂಬ ಬಿರುದುಗಳಿದ್ದವು.

ಮೂರನೆಯ ಜಯಕೇಶಿಯ ನಂತರ ಅವನ ಮಗ ತ್ರಿಭುವನ ಮಲ್ಲದೇವನು ಕ್ರಿ.ಶ. ೧೨೨೫-೪೬ರ ವರೆಗೆ ಮತ್ತು ತ್ರಿಭುವನ ಮಲ್ಲನ ಮಗ ಮೂರನೆಯ ಷಷ್ಠನು ಕ್ರಿ.ಶ. ೧೨೪೬-೬೦ರ ವರೆಗೆ ಸ್ವತಂತ್ರವಾಗಿ ರಾಜ್ಯಭಾರ ಮಾಡಿದರು.

## ಮಣಲೇರರು:

ಶಾಸನಗಳಲ್ಲಿ ಬರುವ ಮಣಲೇರಿ ಅನ್ವಯ ಮತ್ತು ಸಗರಾನ್ವಯ ಎಂಬ ಶಬ್ದದಿಂದ ಮಣಲೇರಿ ಎಂಬ ವ್ಯಕ್ತಿಯಿಂದ ಈ ಮನೆತನಕ್ಕೆ ಈ ಹೆಸರು ಬಂದಿರಬಹುದೆಂದು ವಿದ್ವಾಂಸರ ಅಭಿಪ್ರಾಯವಾಗಿದೆ[೯೬]. ಮಣಲೇರಿ ಎಂಬುವದು ಒಂದು ಗ್ರಾಮದ ಹೆಸರೂ ಕೂಡ ಆಗಿತ್ತು. ಈ ಮಣಲೇರ ಮನೆತನವು ಮೊದಲು ಒಂದು ಸಣ್ಣ ಗಾವುಂಡ ಮನೆತನವಾಗಿದ್ದು, ನಂತರ ತಮ್ಮ ಚಾಣಾಕ್ಷತೆಯಿಂದ ಶೌರ್ಯ-ಸಾಹಸಗಳಿಂದ ರಾಜರುಗಳ ಮೆಚ್ಚುಗೆ ಗಳಿಸಿಕೊಂಡು ಹಂತ ಹಂತವಾಗಿ ಸಾಮಂತ ಪದವಿಗೇರಿದ್ದನ್ನು ಧಾರವಾಡ ಜಿಲ್ಲೆಯಲ್ಲಿ ದೊರೆಯುವ ಅವರ ಶಾಸನಗಳಿಂದ ತಿಳಿಯಬಹುದಾಗಿದೆ.

ಗಾಡಿಗನು ಈ ಮನೆತನದ ಮೊದಲನೆಯ ವ್ಯಕ್ತಿಯಾಗಿದ್ದು, ಒಂದನೆಯ ಅಮೋಘವರ್ಷನ ಕಾಲದಲ್ಲಿ ಕುಪ್ಪೆಯರಸನು ಪುಲಿಗೆರೆ-೩೦೦ದ ಆಡಳಿತವನ್ನು ನೋಡಿಕೊಳ್ಳುತ್ತಿದ್ದಾಗ, ಮಣಲೇರಿ ಗಾಡಿಗನು ಪುಲಿಗೆರೆಯ ನಾಡಗಾಮುಂಡನಾಗಿದ್ದನೆಂದು ಶಾಸನಗಳಿಂದ ತಿಳಿಯುತ್ತದೆ[೯೭]. ಕ್ರಿ.ಶ. ೮೬೬ರ ಶಿಗ್ಗಾಂವ ಶಾಸನವು ಕೂಡಾ ಇವನು ನಾಳ್ಗಾವುಂಡನಾಗಿದ್ದ ವಿಷಯವನ್ನು ತಿಳಿಸುತ್ತದೆ[೯೮].

ಮಣಲೇರಿ ಗಾಡಿಗನ ನಂತರ ಮಣಲರನು ಅಧಿಕಾರಕ್ಕೆ ಬಂದನು. ಈತನು ಮೂರನೆಯ ಕೃಷ್ಣನ ಸಾಮಂತನಾದ ಗಂಗ ಭೂತುಗನ ಕೈಕೆಳಗಿನ ಅಧಿಕಾರಿಯಾಗಿದ್ದ ವಿಷಯವನ್ನು ಕ್ರಿ.ಶ. ೯೪೯-೫೦ ರ ಅತಕೂರು ಶಾಸನ ಉಲ್ಲೇಖಿಸಿದೆ[೯೯]. ಮೂರನೆಯ ಕೃಷ್ಣನ ಕಾಲದಲ್ಲಿ ರಾಷ್ಟ್ರಕೂಟರ ಸಾಮಂತನಾಗಿದ್ದ ಗಂಗ ಭೂತುಗನು ತಕ್ಕೊಳಂ ಕಾಳಗದಲ್ಲಿ ಚೋಳ ರಾಜಾದಿತ್ಯನನ್ನು ಸೋಲಿಸಿ ಅವನನ್ನು ಕೊಂದು ಜಯ ಸಂಪಾದಿಸಿದ್ದಕ್ಕಾಗಿ ರಾಜನು ಅವನಿಗೆ ಬನವಾಸಿ ೧೨,೦೦೦, ಬೆಳ್ವಲ-೩೦೦, ಪುರಿಗೆರೆ-೩೦೦ ಮತ್ತು ಕಿಸುಕಾಡ-೭೦ ಗಳನ್ನು ನೀಡಿದನು. ಆಗ ಭೂತುಗನಿಗೆ ಆ ಯುದ್ಧದಲ್ಲಿ ಚೋಳ ರಾಜಾದಿತ್ಯನನ್ನು ಬಾಣದಿಂದ ಅವನ ಆನೆಯನ್ನು ಕೊಂದು ಕೆಳಗೆ ಕೆಡವಿಹಾಕಿದ ಮಣಲೇರನ ಸಾಹಸವನ್ನು ಮೆಚ್ಚಿ ಭೂತುಗನು ಅವನಿಗೆ ಅತಕೂರು-೧೨ ಮತ್ತು ಬೆಳ್ವೊಲದ ಕೋಟೆಯೂರುಗಳನ್ನು ಬಾಳ್ಗಚ್ಚು ನೀಡಿದ ವಿಷಯ ಅದೇ ಶಾಸನದಿಂದ ನಮಗೆ ತಿಳಿಯುತ್ತದೆ[೧೦೦].

ಕ್ರಿ.ಶ. ೯೭೨ ರ ಕೊಟ್ಟಿಗನ ಹುಲಗೂರು ಶಾಸನವು[೧೦೧] ಮಣಲೇರ ಮಾರಸಿಂಗಯ್ಯನನ್ನು ಉಲ್ಲೇಖಿಸುತ್ತದೆ. ಇವನು ಮಣಲೇರನ ಉತ್ತರಾಧಿಕಾರಿಯಾಗಿ ಅವನ ನಂತರ ಆಳ್ವಿಕೆಗೆ ಬಂದನು. ಶಾಸನವು ಗುತ್ತಿಯಗಂಗ (ಭೂತುಗನ ಮಗ)ನು ಪುರಿಗೆರೆ-೩೦೦ನ್ನು ಸಾಮಂತನಾಗಿ ಆಳುತ್ತಿದ್ದಾಗ ಮಣಲೇರ ಮಾರಸಿಂಗಯ್ಯನು ಪುರಿಗೆರೆಯ ನಾಳಗಾವುಂಡನಾಗಿದ್ದ ವಿಷಯ ತಿಳಿಸುತ್ತದೆ. ಕ್ರಿ.ಶ. ೯೭೦ರ ಗುಂಡೂರು ಶಾಸನದಲ್ಲಿ ಪೆರ್ಗಡೆ ಮಾರಸಿಂಗದೇವನೆಂಬುವನು ಎರಡಾರುನೂರನ್ನು ಆಳುತ್ತಿದ್ದ ವಿಷಯ ಉಲ್ಲೇಖಿತವಾಗಿದೆ[೧೦೨]. ಬಹುಷಃ ಮಾರಸಿಂಗನು ನಂತರದಲ್ಲಿ ಪೆರ್ಗಡೆ ಸ್ಥಾನವನ್ನು ಅಲಂಕರಿಸಿರಬಹುದು.

ಕ್ರಿ.ಶ.೧೦೩೮ ರ ಚಾಲುಕ್ಯ ಎರಡನೆಯ ಜಯಸಿಂಹನ ಕಾಲದ ಶಾಸನವೊಂದು ಮಣಲೇರ ಮಾರಸಿಂಗದೇವನನ್ನು ಉಲ್ಲೇಖಿಸುತ್ತದೆ[೨೦೩]. ಇದರಿಂದ ನಮಗೆ ಮೊದಲನೆಯ ಮಾರಸಿಂಗಯ್ಯನ ನಂತರ ಕ್ರಿ.ಶ. ೧೦೦೦ದ ಹೊತ್ತಿಗೆ ಎರಡನೆಯ ಮಾರಸಿಂಹನು ಆಳ್ವಿಕೆ ಆರಂಭಿಸಿರಬೇಕು ಎನ್ನುವದು ತಿಳಿದುಬರುತ್ತದೆ. ಶಾಸನ ಹೇಳುವಂತೆ ಮಾರಸಿಂಗದೇವನು ತನ್ನ ತಾಯಿ ನಾಯಿಯಬ್ಬರಸಿಯ ಕೋರಿಕೆಯ ಮೇರೆಗೆ ಸತ್ಯಾಶ್ರಯದೇವನ ಬಳಿಗೆ ಹೋಗುತ್ತಾನೆ. ಇದರಿಂದ ಈ ಮಾರಸಿಂಗಯ್ಯದೇವನು ಇರ್ವೆಬೆಡಂಗ ಸತ್ಯಾಶ್ರಯನ ಆಧೀನನಾಗಿದ್ದನೆಂಬುದು ಖಚಿತವಾಗುತ್ತದೆ.

ಇಲ್ಲಿ ಗಮನಿಸಬಹುದಾದ ವಿಷಯವೆಂದರೆ, ಒಂದನೆಯ ಮಾರಸಿಂಗನವರೆಗೆ ಮಣಲೇರ ಮನೆತನದ ದೊರೆಗಳು ರಾಷ್ಟ್ರಕೂಟರ ಕೈಕೆಳಗೆ ಅಧಿಕಾರಿಗಳಾಗಿದ್ದರು. ಆದರೆ ಕೊಟ್ಟಿಗನ ನಂತರ ರಾಷ್ಟ್ರಕೂಟರ ಅವನತಿಯಾಗಿ ಚಾಲುಕ್ಯರ ಅಧಿಕಾರ ಸ್ಥಾಪಿತವಾದಾಗ ಮಣಲೇರರೂ ಕೂಡ ಇತರ ಸಾಮಂತರುಗಳಂತೆ ತಮ್ಮ ಆಧೀನತ್ವವನ್ನು ಬದಲಾಯಿಸಿಕೊಂಡರು. ಇಲ್ಲಿಯವರೆಗೆ ಪುಲಿಗೆರೆ-೩೦೦ ದ ನಾಳ್ಗಾವುಂಡರಾಗಿದ್ದ ಮಣಲೇರರು ಪುಲಿಗೆರೆ ಪುರವರಾಧೀಶ್ವರರೆಂದು ತಮ್ಮನ್ನು ಗುರುತಿಸಿಕೊಂಡು ಚಾಲುಕ್ಯರ ಕೆಳಗೆ ಮಹಾಮಂಡಳೇಶ್ವರಾಗಿ ಮುಂದುವರೆದರು.

ಮಾರಸಿಂಗದೇವನ ನಂತರ ಅವನ ಉತ್ತರಾಧಿಕಾರಿಯಾದ ಒಂದನೆಯ ಜಯಕೇಶಿಯು ಕಲ್ಯಾಣಿ ಚಾಲುಕ್ಯ ಎರಡನೆಯ ಜಯಸಿಂಹನ ಆಧೀನನಾಗಿ ಪುಲಿಗೆರೆ-೩೦೦ದ ನಾಳ್ಗಾವುಂಡನಾಗಿ ಸೇವೆಸಲ್ಲಿಸುತ್ತಿದ್ದನು[೨೦೪]. ಕ್ರಿ.ಶ. ೧೦೬೦ರ ಬಾಂಬೆ ಪ್ರಿನ್ಸವೇಲ್ಸ ಮ್ಯೂಸಿಯಂ ಶಾಸನದಲ್ಲಿ ಕೂಡಾ ಒಂದನೆಯ ಜಯಕೇಶಿಯ ಉಲ್ಲೇಖ ಬರುತ್ತದೆ[೨೦೫].

ಜಯಕೇಶಿಯ ನಂತರ ಅವನ ಮಗನಾದ ಇಂದ್ರಕೇಶಿಯು ಉತ್ತರಾಧಿಕಾರಿಯಾದನು. ಈತನು ಒಂದನೆಯ ಸೋಮೇಶ್ವರನ ಕೈಕೆಳಗಿನ ಅಧಿಕಾರಿಯಾಗಿದ್ದನೆಂದು ಬಾಂಬೆಯ ಪ್ರಿನ್ಸವೇಲ್ಸ ಮ್ಯೂಸಿಯಂ ಶಾಸನ ತಿಳಿಸುತ್ತದೆ[೨೦೬]. ಇದೇ ಶಾಸನದಲ್ಲಿ ಇಂದ್ರಕೇಶಿಯ ಮಗ ಎರಡನೆಯ ಜಯಕೇಶಿಯು ಅವನಿಗೆ ಆಡಳಿತದಲ್ಲಿ ಸಹಾಯಕನಾಗಿದ್ದ ವಿಷಯ ತಿಳಿಸುತ್ತದೆ. ಕ್ರಿ.ಶ. ೧೦೫೮ರ ಕುಯಿಬಾಳ ಶಾಸನವು ಈ ಇಂದ್ರಕೇಶಿಯನ್ನು ಒಂದನೆಯ ಸೋಮೇಶ್ವರನ ಕಾಲದಲ್ಲಿ ಪುಲಿಗೆರೆ-೩೦೦ ರ ರಾಷ್ಟ್ರಕೂಟಕನಾಗಿದ್ದ ವಿಷಯವನ್ನು ಹೇಳಿದೆ[೨೦೭]. ಈ ರಾಷ್ಟ್ರಕೂಟಕ ಎನ್ನುವದು ನಾಳ್ಗಾವುಂಡ ಪದದ ಸಂಸ್ಕೃತರೂಪವಾಗಿದೆ. ಇಂದ್ರಕೇಶಿಗೆ ಮಾರಸಿಂಹನೆಂಬ ಇನ್ನೊಬ್ಬ ಮಗನಿದ್ದುದಾಗಿ ಆರನೆಯ ವಿಕ್ರಮಾದಿತ್ಯನ ಗದಗ ಶಾಸನದ ಮೂಲಕ ತಿಳಿದುಬರುತ್ತದೆ[೨೦೮]. ಆದರೆ ಈ ಮಾರಸಿಂಹನ ಯಾವುದೇ ವಿವರಗಳು ನಮಗೆ ದೊರೆಯುವದಿಲ್ಲವಾದ್ದರಿಂದ ಈತನು ಆಡಳಿತದಲ್ಲಿ ಭಾಗವಹಿಸಿರಲಿಕ್ಕಿಲ್ಲ ಎನ್ನಬಹುದು.

ಎರಡನೆಯ ಜಯಕೇಶಿಯು ತನ್ನ ತಂದೆ ಇಂದ್ರಕೇಶಿಯ ನಂತರ ಅಧಿಕಾರಕ್ಕೆ ಬಂದನು. ಈತನು ನಂತರದ ಕಲ್ಯಾಣಿ ಚಾಲುಕ್ಯರ ಅರಸು ಎರಡನೆಯ ಸೋಮೇಶ್ವರನ ಕೈಕೆಳಗಿನ ಅಧಿಕಾರಿಯಾಗಿದ್ದ. ಕ್ರಿ.ಶ. ೧೦೭೪ರ ಎರಡನೆಯ ಸೋಮೇಶ್ವರನ ಶಾಸನದಲ್ಲಿ ಈತನನ್ನು ಪುಲಿಗೆರೆ-೩೦೦ದ ರಾಷ್ಟ್ರಕೂಟಕ ಎಂದು ಹೇಳಲಾಗಿದೆ[೨೦೯]. ಇದೇ ಶಾಸನವು

ಇವನನ್ನು ಪುರಿಕರ-ಪುರವರ-ಪರಮೇಶ್ವರನೆಂದು ಕರೆದಿದೆ. ಅಲ್ಲದೆ ಪ್ರಪ್ರಥಮ ಬಾರಿಗೆ ಮಣಲೇರ ಮನೆತನದ ಅರಸನೊಬ್ಬನನ್ನು ಅಂದರೆ ಎರಡನೆಯ ಜಯಕೇಶಿಯನ್ನು ಶಾಸನವು ಮಹಾಸಾಮಂತನೆಂದು ಕರೆದಿದೆ. ಇದರಿಂದ ಇವರು ಅಧಿಕಾರಿಗಳ ಪದವಿಯಿಂದ ಸಾಮಂತ ಪದವಿಗೇರಿದ್ದು ತಿಳಿಯುತ್ತದೆ. ಮುಂದೆ ಕ್ರಿ.ಶ. ೧೦೭೭ರ ಹುಲಗೂರು ಶಾಸನದ ಪ್ರಕಾರ ಈತ ಇದೇ ಪದವಿಯಲ್ಲಿ ಆರನೆಯ ವಿಕ್ರಮಾದಿತ್ಯನ ಕೈಕೆಳಗೆ ಮುಂದುವರೆದಿದ್ದು ತಿಳಿಯುತ್ತದೆ[೨೧೦]. ಮತ್ತು ಕ್ರಿ.ಶ. ೧೦೮೨ರ ಲಕ್ಷ್ಮೇಶ್ವರ ಶಾಸನದಲ್ಲಿ ಈತನು ಆರನೆಯ ವಿಕ್ರಮಾದಿತ್ಯನ ಕಾಲದಲ್ಲಿ ಪುರಿಗೆರೆ-೩೦೦ದ ರಾಷ್ಟ್ರಕೂಟಕನಾಗಿದ್ದ ವಿಷಯ ತಿಳಿಯುತ್ತದೆ[೨೧೧].

ಎರಡನೆಯ ಜಯಕೇಶಿಯ ನಂತರ ಆತನ ತಮ್ಮ ಎರಡನೆಯ ಮಾರಸಿಂಹನ ಮಗನಾದ, ಎರಡನೆಯ ಇಂದ್ರಕೇಶಿಯು ಆಳ್ವಿಕೆಗೆ ಬಂದನೆಂದೂ, ಅವನು ಆರನೆಯ ವಿಕ್ರಮಾದಿತ್ಯನ ಮಾಂಡಳೀಕನಾಗಿದ್ದ ವಿಷಯ ನಮಗೆ ಗದಗ ಶಾಸನದ ಮೂಲಕ ತಿಳಿಯುತ್ತದೆ[೨೧೨].

ಕ್ರಿ.ಶ. ೧೧೩೮ರ ಲಕ್ಷ್ಮೇಶ್ವರ ಶಾಸನದ ಪ್ರಕಾರ ಎರಡನೆಯ ಜಯಕೇಶಿಗೆ ಇಬ್ಬರು ಮಕ್ಕಳು, ಒಬ್ಬ ಮೊಮ್ಮಗನಿದ್ದುದಾಗಿ ತಿಳಿಸುತ್ತಾ, ಈ ಶಾಸನದ ಕಾಲಕ್ಕೆ ಅವನ ಮೊಮ್ಮಗನಾದ ಮೂರನೆಯ ಜಯಕೇಶಿಯು ಭೂಲೋಕಮಲ್ಲ ಮೂರನೆಯ ಸೋಮೇಶ್ವರನ ಆಧೀನನಾಗಿದ್ದನೆಂಬ ವಿಷಯ ತಿಳಿಸುತ್ತದೆ[೨೧೩]. ಅಲ್ಲದೇ ಅಲ್ಲಿಯ ಕ್ರಿ.ಶ.೧೧೪೭ರ ಶಾಸನದ ಪ್ರಕಾರ ಈತನು ಎರಡನೆಯ ಜಗದೇಕಮಲ್ಲನ ಆಧೀನನಾಗಿದ್ದ ವಿಷಯ ತಿಳಿದುಬರುತ್ತದೆ[೨೧೪]. ಅಲ್ಲದೇ ಅಲ್ಲಿಯ ಕ್ರಿ.ಶ. ೧೧೫೩ರ ಶಾಸನವೊಂದು ತಿಳಿಸುವಂತೆ ಮೂರನೆಯ ಜಯಕೇಶಿಯು ಕಲ್ಯಾಣಿ ಚಾಲುಕ್ಯರ ಮೂರನೆಯ ತೈಲಪನ ಮಹಾಮಂಡಳೇಶ್ವರ ಜಯಕೇಶಿದೇವರಸರ್ ಎಂದು ಬಣ್ಣಿಸಲ್ಪಟ್ಟಿದ್ದಾನೆ[೨೧೫]. ಇವನ ನಂತರ ಚಾಲುಕ್ಯ-ಕಲಚೂರಿಗಳ ಕಲಹದ ವೇಳೆಯಲ್ಲಿ ಬಹುಷಃ ಈ ಮನೆತನ ಕಣ್ಮರೆಯಾಗಿರುವ ಸಾಧ್ಯತೆಯಿದೆ.

## ನಿಡುಗಲ್ಲು ಚೋಳರು:

ಕರ್ನಾಟಕದ ತುಮಕೂರು ಮತ್ತು ಚಿತ್ರದುರ್ಗ ಜಿಲ್ಲೆಯ ಅನೇಕ ಪ್ರದೇಶಗಳು ಹಾಗೂ ಈಗಿನ ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯಲ್ಲಿ ಆಳ್ವಿಕೆ ಮಾಡಿದ ಈ ಮನೆತನದ ಮೂಲ ಸ್ಥಳ ಪಾವಗಡದ ಸಮೀಪವಿರುವ ರೊದ್ದ-೩೦೦ ಎಂದು ತಿಳಿಯುತ್ತದೆ. ಇವರು ಕಾಲಕಾಲಕ್ಕೆ ಗೋವಿಂದವಾಡಿ, ಹೇಮಾವತಿ ಅಥವಾ ಹೆಂಜೇರು, ನಿಡುಗಲ್ಲು, ಗುಂಡನಹಳ್ಳಿ ಮತ್ತು ಗುಡಿಯಕುಂಟೆಗಳನ್ನು ರಾಜಧಾನಿಗಳನ್ನಾಗಿ ಮಾಡಿಕೊಂಡು ಆಳ್ವಿಕೆಯನ್ನು ನಡೆಸಿದರು.

ಜಟಾನು ಈ ಮನತನದ ಮೊದಲ ದೊರೆಯಾಗಿದ್ದು, ಈತನ ಆಳ್ವಿಕೆಯ ಅಧ್ಯಯನಕ್ಕೆ ಯಾವುದೇ ಆಧಾರಗಳಿಲ್ಲ. ಆದರೆ ಮೂರನೆಯ ಇರುಂಗೋಳನ ನಿಡುಗಲ್ಲು ಶಾಸನ[೨೧೬] ಇವನನ್ನು ಮೊದಲ ದೊರೆಯೆಂದು ಹೇಳಿದೆ. ಬಹುಷಃ ಈತನು ಹೆಂಜೇರುವಿನ ನೊಳಂಬರ ಸಾಮಂತನಾಗಿರಬಹುದು.

ಬ್ರಹ್ಮದೇವನು ಜಟಾನ ಮಗನಾಗಿದ್ದು ಆತನ ನಂತರ ಆಳ್ವಿಕೆಗೆ ಬಂದನು. ಇವನನ್ನು ಶಾಸನಗಳಲ್ಲಿ ಭೋಗೇಂದ್ರ, ಭೋಗಿ ಎಂದು ಕರೆಯಲಾಗಿದೆ[೧೦೬]. ಕ್ವಾರ್ಯದಲ್ಲಿ ದೊರೆತಿರುವ ಕಲ್ಯಾಣಿ ಚಾಲುಕ್ಯ ಜಗದೇಕಮಲ್ಲನ ಕಾಲದ ಶಾಸನದ ಪ್ರಕಾರ ಈತನು ಮಹಾಮಂಡಳೇಶ್ವರನಾಗಿದ್ದನೆಂದು ತಿಳಿದುಬರುತ್ತದೆ[೧೦೮]. ಶಾಸನವು ಮುಂದುವರೆದು ಈತನು ಗೋವಿಂದವಾಡಿಯಿಂದ ಆಳುತ್ತಿದ್ದನೆಂದೂ, ಇವನಿಗೆ ಒರೆಯೂರ ಪುರವರಾಧೀಶ್ವರ, ರೊದ್ದಗೋವ, ಖಡ್ಗ ಸಹದೇವ, ಹರಪಾರಾಧಕ, ನೊಣಂಬಣಾಳಿಂಮುನಿಯಿವ ಎಂಬ ಬಿರುದುಗಳನ್ನು ಉಲ್ಲೇಖಿಸಿದೆ. ಇವನ ಕಾಲದಲ್ಲಿ ಚೋಳರು ನೊಳಂಬರ ಸಾಮಂತರಾಗಿದ್ದರೆಂದೂ, ನನ್ನಿನೊಳಂಬನು ದೊರೆಯಾಗಿದ್ದನೆಂದು ತಿಳಿದುಬರುತ್ತದೆ.

ನಂತರ ನಮಗೆ ಕಂಡುಬರುವ ಅರಸನೆಂದರೆ ಮಂಗರಸ. ಈತನು ಈ ಮನೆತನದ ಆರಂಭದ ದೊರೆಗಳಲ್ಲಿಯೇ ಪ್ರಮುಖ ಅರಸನಾಗಿದ್ದು, ಈತನೇ ಇದರ ನಿಜವಾದ ಸ್ಥಾಪಕನೆಂದು ಕರೆಯಬಹುದಾಗಿದೆ. ಈತನು ಬ್ರಹ್ಮದೇವನ ಮಗನಾಗಿದ್ದನೆಂದು ತಿಳಿದುಬರುತ್ತದೆ[೧೦೯]. ಈತನನ್ನು ಶಾಸನಗಳಲ್ಲಿ ಇರಿವ ಮಂಗರಸ, ಕಲಿಮಗಿ ಎಂದು ಕರೆಯಲಾಗಿದೆ[೧೧೦]. ಕ್ರಿ.ಶ. ೧೦೭೯ರ ಹೌಅಲಗಿಯ ಶಾಸನವು ಚಾಲುಕ್ಯ ಆರನೆಯ ವಿಕ್ರಮಾದಿತ್ಯನ ಆಳ್ವಿಕೆಯ ಕಾಲದ್ದಾಗಿದ್ದು, ಇಲ್ಲಿ ಇವನನ್ನು ತಂದೆಯ ಬಿರುದುಗಳ ಜೊತೆಗೆ ಕೀಚಕ ವೃಕೋದರ, ಸಿಂಹಲಾ ಇವ್ವನ, ಚೋಳೇಶ್ವರ ದೇವ ಲಬ್ಧವರಪ್ರಸಾದ ಎಂದು ಕರೆಯಲಾಗಿದೆ. ಅಲ್ಲದೇ ಈತನು ರೊದ್ದ-೩೦೦ ಮತ್ತು ಕಣಿಯಕಲ್-೩೦೦ಗಳ ಅಧಿಪತಿಯಾಗಿದ್ದನೆಂದು ಶಾಸನ ಉಲ್ಲೇಖಿಸಿದೆ[೧೧೧]. ಕ್ರಿ.ಶ. ೧೦೮೨-೮೩ರ ಉದಬಣ್ಣ ಶಾಸನವೂ ಕೂಡ ಚಾಲುಕ್ಯ ಆರನೆಯ ವಿಕ್ರಮಾದಿತ್ಯನ ಕಾಲದ್ದಾಗಿದ್ದು, ಅದರಲ್ಲಿ ಮಹಾಮಂಡಳೇಶ್ವರ ಇರಿವ ಮಂಗರಸ ಚೋಳನು ಕರಿಕಾಲ ಚೋಳ ಮನೆತನಕ್ಕೆ ಸೇರಿದವನೆಂದು ಉಲ್ಲೇಖಿಸಿದೆ[೧೧೨].

ಮಂಗರಸನ ನಂತರ ಆಳ್ವಿಕೆಗೆ ಬಂದ ಬೀಚಿಯ ಕಾಲದ ಯಾವುದೇ ಶಾಸನಗಳು ನಮಗೆ ದೊರೆತಿಲ್ಲ. ಆದರೆ ಇರುಂಗೋಳನ ಪಾವಗಡ ಹಾಗೂ ಗಣೇಶನ ಶಾಸನಗಳು ಈತನಿಗೆ ಬೀಚಿ, ಬಬ್ಬಿ ಎಂದು ಕರೆದಿವೆ[೧೧೩].

ಬೀಚನ ನಂತರ ಆತನ ಮಗ ಗೋವಿಂದರಸನ ಉಲ್ಲೇಖ ಅವರ ನಿಡುಗಲ್ಲು ಶಾಸನಗಳ ವಂಶಾವಳಿಯಲ್ಲಿ ಬರುತ್ತದೆ[೧೧೪]. ಈತನ ಆಳ್ವಿಕೆಯ ಕಾಲದ ಶಾಸನಗಳ್ಯಾವವೂ ದೊರೆತಿಲ್ಲ. ಆದರೆ ನಿಡುಗಲ್ಲಿನ ಶಾಸನವೊಂದರಿಂದ ಇವನಿಗೆ ಮಹಾದೇವಿ ಎಂಬ ಪತ್ನಿಯಿದ್ದ ವಿಷಯ ತಿಳಿದುಬರುತ್ತದೆ[೧೧೫].

ಗೋವಿಂದರಸ ಮತ್ತು ಮಹಾದೇವಿಯರ ಮಗನಾದ ಮೊದಲನೆಯ ಇರುಂಗೊಳನ ಎಂಟು ಶಾಸನಗಳು ನಮಗೆ ಚಿತ್ರದುರ್ಗ, ತುಮಕೂರು ಮತ್ತು ಅನಂತಪುರ ಜಿಲ್ಲೆಗಳಲ್ಲಿ ದೊರೆಯುತ್ತವೆ[೧೧೬]. ಇವುಗಳ ಕಾಲ ಕ್ರಿ.ಶ. ೧೧೦೬ ರಿಂದ ೧೧೪೨ರವರೆಗೆ ಇರುವದರಿಂದ, ಈತನು ಕಲ್ಯಾಣಿ ಚಾಲುಕ್ಯರ ಆರನೆಯ ವಿಕ್ರಮಾದಿತ್ಯ, ಮೂರನೆಯ ಸೋಮೇಶ್ವರ ಮತ್ತು ಎರಡನೆಯ ಜಗದೇಕಮಲ್ಲರ ಸಾಮಂತನಾಗಿದ್ದನೆಂದು ಹೇಳಬಹುದು. ಆರನೆಯ ವಿಕ್ರಮಾದಿತ್ಯನ ಕಾಲದಲ್ಲಿ ಇರುಂಗೊಳನು ಕಣಿಯಕಲ್-೩೦೦ರ ಅಧಿಪತಿಯಾಗಿದ್ದನೆಂದೂ, ಇದರ ಕೇಂದ್ರಸ್ಥಳ ಗೋವಿಂದವಾಡಿಯಾಗಿತ್ತೆಂದು





ತಿಳಿಯುತ್ತದೆ. ಕ್ರಿ.ಶ. ೧೧೨೭ ರ ದೊಡ್ಡಬಾಣಗೆರೆಯ ಶಾಸನದ[೨೨೭] ಪ್ರಕಾರ ಮೂರನೆಯ ಸೋಮೇಶ್ವರನ ಕಾಲದಲ್ಲಿ ಕಣಿಯಕಲ್-೩೦೦, ರೊದ್ದ-೩೦೦, ಸಿರಾ-೩೦೦ ಹರವೆ-೩೦೦ ಮತ್ತು ಸಿಂಧವಾಡಿ-೧೦೦೦ಗಳ ಮಹಾಮಂಡಳೇಶ್ವರ ಎಂದು ಉಲ್ಲೇಖಿಸಿದೆ. ಅಲ್ಲದೇ ಶಾಸನವು ಈತನಿಗೆ ಮಹಾಮಂಡಳೇಶ್ವರ ವೀರಪಾಂಡ್ಯ ಇರುಂಗೊಳ ಚೋಳ ಎಂದು ಕರೆದಿದೆ. ಇವನು ಕಲ್ಯಾಣ ಚಾಲುಕ್ಯರ ನಿಷ್ಠಾವಂತ ಸಾಮಂತನಾಗಿದ್ದನೆಂದು ತಿಳಿದುಬರುತ್ತದೆ. ಅಲ್ಲದೇ ಇವನ ಮಗ ಮಲ್ಲಿದೇವನ ಕಾಲದ ಶಾಸನಗಳಲ್ಲಿ ಹೊಯ್ಸಳ ವಿಷ್ಣುವರ್ಧನನು ಇರುಂಗೋಳನ ಸೈನ್ಯವನ್ನು ಸೋಲಿಸಿದುದಾಗಿ ತಿಳಿಸುತ್ತವೆ[೨೨೮]. ಇರುಂಗೋಳನು ನಿಡುಗಲ್ಲು ದುರ್ಗವನ್ನು ರಕ್ಷಿಸಲು ತನ್ನ ನಮಣನನ್ನು ನೇಮಿಸಿದ್ದನೆಂದು ನಿಡುಗಲ್ಲು ಶಾಸನದಿಂದ ತಿಳಿದುಬರುತ್ತದೆ[೨೨೯]. ಹೇಮಾವತಿ ಶಾಸನದ ಪ್ರಕಾರ ಅಳ್ವಿದೇವಿಯು ( ಅಳುಪ ದೇವಿ) ಈತನ ಪತ್ನಿಯಾಗಿದ್ದ ವಿಷಯ ತಿಳಿಸುತ್ತದೆಯಲ್ಲದೇ, ಇವಳು ಜೈನಪಂಥಕ್ಕೆ ಸೇರಿದವಳೆಂದು ತಿಳಿದುಬರುತ್ತದೆ[೨೩೦]. ಕೆ.ವಿ.ರಮೇಶರವರು ಈ ಅಳುಪದೇವಿಯು ತುಳುನಾಡಿನ ಅಳುಪ ಮನೆತನದ ಕವಿಯಾಳುಪೇಂದ್ರನ ಸಹೋದರಿ ಅಥವಾ ಕುವರಿಯಾಗಿರಬಹುದು ಎಂದಿದ್ದಾರೆ.

ಮೊದಲನೆಯ ಇರುಂಗೋಳನ ಮಗನಾದ ಮಲ್ಲಿದೇವನು ಅವನ ನಂತರ ಆಳ್ವಿಕೆಗೆ ಬಂದನು. ಶಾಸನಗಳಲ್ಲಿ ಜಗದೇಕಮಲ್ಲ ಇರುಂಗೋಳ ವೀರನೊಳಂಬ, ಮಲ್ಲಿದೇವ ಚೋಳ ಮಹಾರಾಜ[೨೩೧], ಭೋಗದೇವ[೨೩೨], ಪ್ರಿಯಭೋಗ[೨೩೩] ಮತ್ತು ಭೋಗಿ[೨೩೪], ತ್ರಿಭುವನ ಮಲ್ಲಮಲ್ಲಿದೇವ[೨೩೫], ಅರವತ್ತನಾಲ್ಕು ಮಾಣ್ಡಲೀಕರ ತಲೆಗೊಂಡ ಗಣ್ಡ[೨೩೬], ರೊದ್ದಮಲ್ಲ[೨೩೭] ಎಂಬುದಾಗಿ ಉಲ್ಲೇಖಿತನಾಗಿದ್ದಾನೆ. ಈತನ ಸಾಮ್ರಾಜ್ಯವು ರೊದ್ದನಾಡು, ಕಣಿಯಕಲ್ಲುಮ ಸಿರೆನಾಡು, ಹರುವೆನಾಡುಗಳನ್ನು ಒಳಗೊಂಡಿತ್ತು. ಈತನ ಕಾಲದ ಶಾಸನಗಳಲ್ಲಿ ಇವನು ಹೆಂಜೇರುವಿನಿಂದ ಆಳುತ್ತಿದ್ದುದಾಗಿ ತಿಳಿದುಬರುತ್ತದೆ. ಆದರೆ ಇವನು ಗೋವಿಂದವಾಡಿಯಿಂದ ಹೆಂಜೇರುವಿಗೆ ಏತಕ್ಕಾಗಿ ರಾಜಧಾನಿಯನ್ನು ಬದಲಾಯಿಸಿದನೆಂಬ ವಿಷಯ ಸ್ಪಷ್ಟವಾಗುವದಿಲ್ಲ. ಈತನಿಗಿರುವ ವೀರನೊಳಂಬ ಎನ್ನುವ ಹೆಸರಿನಿಂದ ಈತನು ನೊಳಂಬ ವಂಶದ ರಾಜಕುವರಿಯ ಮಗನಾಗಿದ್ದನೆಂದೂ, ನೊಳಂಬವಂಶದಲ್ಲಿ ಆಗ ಗಂಡು ಸಂತಾನವಿಲ್ಲದ್ದರಿಂದ ಈತನು ನೊಳಂಬ ಸಾಮ್ರಾಜ್ಯದ ರಕ್ಷಣೆಯ ಜವಾಬ್ದಾರಿಯನ್ನು ಹೊತ್ತಿರಬೇಕೆಂದು ಅಭಿಪ್ರಾಯಪಡಲಾಗಿದೆ[೨೩೮]. ಅಲ್ಲದೇ ಜಗದೇಕಮಲ್ಲನೆಂಬ ಬಿರುದನ್ನು ಈತ ಹೊಂದಿದ್ದು, ಇದಕ್ಕೆ ಕಲ್ಯಾಣ ಚಾಲುಕ್ಯ ಜಗದೇಕಮಲ್ಲನ ಸಾಮಂತನಾಗಿದ್ದುದೇ ಕಾರಣವಾಗಿರಬೇಕು. ಕ್ರಿ.ಶ. ೧೧೭೮ರ ಹೊಯ್ಸಳ ಇಮ್ಮಡಿಬಲ್ಲಾಳನ ಹಿಂದೂಪುರ ತಾಲ್ಲೂಕಿನ ಪರಗಿ ಶಾಸನದ[೨೩೯] ಪ್ರಕಾರ ಹೊಯ್ಸಳರು ಇಲ್ಲಿಯವರೆಗಿನ ಪ್ರದೇಶಗಳಿಗೆ ಒಡೆಯರಾಗಿದ್ದರೆಂದು ತಿಳಿಯುತ್ತದೆ. ಅಲ್ಲಿಂದ ಉತ್ತರದ ಭಾಗವು ಮಲ್ಲಿದೇವನ ಆಧೀನದಲ್ಲಿತ್ತೆಂದೂ ಹೊಯ್ಸಳರ ಸಾರ್ವಭೌಮತ್ವವನ್ನು ಇವನು ಒಪ್ಪಿರಲಿಲ್ಲವೆಂದು ತಿಳಿದುಬರುತ್ತದೆ. ಹೇಮಾವತಿಯ ಶಾಸನವೊಂದು ಈತನು ಚೋಳ ಕುಲೋತ್ತುಂಗನ ಆಧೀನರಾಜನಾಗಿದ್ದನೆಂದು ಹೇಳಿದೆ[೨೪೦].

ಈತನಿಗೆ ಲಕ್ಷ್ಮಾದೇವಿ[೨೪೧], ಬಲ್ಲಿದೇವಿ[೨೪೨], ಸೀತಾದೇವಿ[೨೪೩] ಮತ್ತು ಬಿಜ್ಜಳದೇವಿ[೨೪೪] ಎಂಬ ನಾಲ್ಕು ಜನ ರಾಣಿಯರಿದ್ದ ವಿಷಯ ತಿಳಿಯುತ್ತದೆ. ಅದರಲ್ಲಿ ಬಲ್ಲಿದೇವಿಯು ಸಿರಿವೊಳಲ್ಕೆರೆಯ ಆಡಳಿತದ ಅಧಿಕಾರಿಯಾಗಿದ್ದಳು[೨೪೫]. ಮಲ್ಲಿದೇವನು ಹೊಯ್ಸಳ ಒಂದನೆಯ ನರಸಿಂಹರು ಸಮಕಾಲೀನರಾಗಿದ್ದರು. ಮಲ್ಲಿದೇವನ ಮಗ ಎರಡನೆಯ ಇರುಂಗೋಳನು ಹೊಯ್ಸಳ ನರಸಿಂಹನ ಮಗಳಾದ ಸಿರಿಯದೇವಿಯನ್ನು ಮದುವೆಯಾಗಿದ್ದನೆಂದು ತಿಳಿದುಬರುತ್ತದೆ. ಇದರಿಂದಾಗಿ ಈ ಮನೆತನಗಳ ನಡುವೆ ಸುಮಧುರ ಸಂಭಂದ ಈಗ ನಿರ್ಮಾಣವಾಗಿತ್ತು. ಮಲ್ಲಿದೇವನಿಗೆ ಬಮ್ಮಿದೇವನೆಂಬ ಇನ್ನೊಬ್ಬ ಮಗನಿದ್ದುದಾಗಿ ತಿಳಿದುಬರುತ್ತದೆ[೨೪೬].

ಮಲ್ಲಿದೇವನ ಮಗನಾದ ಎರಡನೆಯ ಇರುಂಗೋಳನು ಅವನ ನಂತರ ಆಳ್ವಿಕೆಗೆ ಬಂದನು. ಇವನಾಳ್ವಿಕೆಯ ವಿವರಗಳನ್ನು ತಿಳಿದುಕೊಳ್ಳಲು ನಮಗೆ ಈತನ ಶಾಸನಗಳ್ಯಾವವೂ ದೊರೆತಿಲ್ಲ. ಆದರೆ ಹೊಯ್ಸಳ ಇಮ್ಮಡಿ ಬಲ್ಲಾಳನ ಶಾಸನವೊಂದರಿಂದ[೨೪೭] ತಿಳಿದುಬರುವಂತೆ ಅವನು ಇರುಂಗೋಳ ಚೋಳ ಮತ್ತು ಉಚ್ಚಂಗಿಯ ಪಾಂಡ್ಯರನ್ನು ಸೋಲಿಸಿದನು. ಕ್ರಿ.ಶ. ೧೨೧೮ ರ ಶಾಸನವೊಂದರ[೨೪೮] ಪ್ರಕಾರ ಇಮ್ಮಡಿ ಬಲ್ಲಾಳನು ನಿಡುಗಲ್ಲು ಸಮೀಪ ಬೀಡುಬಿಟ್ಟಿದ್ದನೆಂದು ತಿಳಿದುಬರುತ್ತದೆ. ಹೀಗೆ ಈ ಕಾಲದಲ್ಲಿ ಹೊಯ್ಸಳರು ಮತ್ತು ನಿಡುಗಲ್ಲು ಚೋಳರಿಗೆ ಅನೇಕ ಯುದ್ಧಗಳು ಸಂಭವಿಸಿ, ಚೋಳರು ತಮ್ಮ ಸಾಮ್ರಾಜ್ಯದ ಕೆಲವು ಭಾಗಗಳನ್ನು ಕಳೆದುಕೊಳ್ಳಬೇಕಾಯ್ತು.

ಎರಡನೆಯ ಇರುಂಗೋಳನ ಸಹೋದರನಾದ ಎರಡನೆಯ ಬಮ್ಮದೇವ ಅಥವಾ ಬ್ರಹ್ಮನು ಅವನ ನಂತರ ಆಳ್ವಿಕೆಮಾಡಿದನು. ಈತನ ಕಾಲದ ಒಂದೇ ಒಂದು ಶಾಸನವು ದೊರೆತಿದ್ದು[೨೪೯], ಅದರಲ್ಲಿ ಈತನು ಭೋಗಿ (ಮಲ್ಲಿದೇವ) ಮತ್ತು ಬಿಜ್ಜಳದೇವಿಯರ ಮಗನೆಂದು ತಿಳಿಯುತ್ತದೆ. ಇವನು ರೊದ್ದ, ಕುಣಿಯಕಲ್, ಸೀರೆನಾಡು, ಮದ್ಯೆಮ್ಮೆ ನಾಡ, ಲುಂಕೆ ನೊರುಂಬ, ನೊಳಂಬವಾಡಿ, ರೇಮಾಡಿ (ಇರುಮಾಡಿ) ಮೊದಲಾದ ಪ್ರದೇಶಗಳನ್ನು ನಿಡುಗಲ್ಲಿನಿಂದ ಆಳಿದನೆಂದು ತಿಳಿದುಬರುತ್ತದೆ. ಈ ವೇಳೆಯಲ್ಲಿ ಇಮ್ಮಡಿ ಬಲ್ಲಾಳನು ತಮಿಳುನಾಡಿನಲ್ಲಿ ಪಾಂಡ್ಯರ ಕಡೆಗೆ ಲಕ್ಷ್ಯವಹಿಸಿದ್ದಾಗ ಇವನು ಈ ಸಾಧನೆಗಳನ್ನು ಕೈಕೊಳ್ಳಲು ಸಾಧ್ಯವಾಯಿತು. ಈತನಿಗೆ ಬಿಜ್ಜಳದೇವ, ಬೀರದೇವ, ಇರುಂಗೋಣ ಮತ್ತು ಬಾವಂಟಿಗದೇವರೆಂಬ ನಾಲ್ಕುಜನ ಮಕ್ಕಳಿದ್ದರೆಂದು ಶಾಸನ ತಿಳಿಸುತ್ತದೆ[೨೫೦].

ಬಮ್ಮದೇವನ ಮಗನಾದ ಮೂರನೆಯ ಇರುಂಗೋಳನು ನಂತರ ಆಳ್ವಿಕೆ ಮಾಡಿದನು. ಕಂಬದೂರು[೨೫೧] ಮತ್ತು ನಿಡುಗಲ್ಲು[೨೫೨] ಶಾಸನಗಳು ಈತನು ನಿಡುಗಲ್ಲಿನಿಂದ ಆಳುತ್ತಿದ್ದುದಾಗಿ ಉಲ್ಲೇಖಿಸುತ್ತವೆ. ಇವನ ಕಾಲದಲ್ಲಿ ನಿಡುಗಲ್ಲು ಅಬೇಧ್ಯವಾದ ಕೋಟೆಯನ್ನು ಹೊಂದಿದ್ದು ಅದನ್ನು ಕಾಳಾಂಜನ ಎಂದು ಕರೆಯಲಾಗುತ್ತಿತ್ತಲ್ಲದೇ, ಇವನು ಗಾಂಗೇಯನಾಯಕ ಎಂಬುವ ಒಬ್ಬ ಸಾಮಂತಾಧಿಪತಿಯನ್ನು ಹೊಂದಿದ್ದನು ಎಂದು ಶಾಸನವೊಂದರಿಂದ ತಿಳಿಯುತ್ತದೆ[೨೫೩]. ತುಮಕೂರು[೨೫೪] ಮತ್ತು ಕಾಟಕೇರಿ[೨೫೫] ಶಾಸನಗಳು ಹೇಳುವಂತೆ ಹೊಯ್ಸಳ ಮೂರನೆಯ ನರಸಿಂಹ ಮತ್ತು ಇರುಂಗೋಳರ ನಡುವೆ ಯುದ್ಧಗಳು ನಡೆದ ವಿಷಯ ತಿಳಿಯುತ್ತದೆ. ಮತ್ತು ಇರುಂಗೋಳನು ಸೇವುಣರ

ಪರವಾಗಿ ಹೊಯ್ಸಳರ ವಿರುದ್ಧ ಕಾದಾಡಿದ ವಿಷಯ ತಿಳಿಯುತ್ತದೆ. ಅಮರಾಪುರದ ಶಾಸನವು[೩೫೬] ಇರುಂಗೋಳ ಚೋಳ ಮಗ ತ್ರಿಪುರಾಂತಕದೇವನು ಕ್ರಿ.ಶ. ೧೨೬೨ ರಲ್ಲಿ ಹನಿಯದುರ್ಗದಲ್ಲಿ ಆಳುತ್ತಿದ್ದುದನ್ನು ಉಲ್ಲೇಖಿಸಿದೆ. ಆದರೆ ನಂತರದ ನಿಡುಗಲ್ಲು ಶಾಸನ[೩೫೭] ಚೋಳರ ವಂಶಾವಳಿಯಲ್ಲಿ ಈತನನ್ನು ಉಲ್ಲೇಖಿಸಿಲ್ಲವಾದ್ದರಿಂದ, ಈತನು ತಂದೆಯ ಕಾಲದಲ್ಲಿ ಒಂದು ಭಾಗದ ಅಧಿಕಾರಿಯಾಗಿ ಆಡಳಿತದಲ್ಲಿ ಸಹಾಯಕನಾಗಿರಬೇಕು.

ಮೂರನೆಯ ಇರುಂಗೋಳನ ನಂತರ ಪೆರುಮಾಳದೇವನು ಕ್ರಿ.ಶ.೧೨೮೦ ರಲ್ಲಿ ಆಳ್ವಿಕೆಗೆ ಬಂದಿರಬೇಕು, ಎಂದು ನಿಡಗಲ್ಲಿನಲ್ಲಿ ದೊರೆತಿರುವ ಶಾಸನವೊಂದರಿಂದ ತಿಳಿದುಬರುತ್ತದೆ[೩೫೮]. ಕ್ರಿ.ಶ. ೧೨೮೬ರ ನಿಡಗಲ್ಲು ಶಾಸನದಲ್ಲಿ[೩೫೯] ಈತನನ್ನು ಪೆರುಮಾಳದೇವ ಚೋಳ ಮಹಾರಾಜ ಎಂದು ಕರೆಯಲಾಗಿದೆ. ನಿಡಗಲ್ಲು[೩೬೦], ತಳಲೊರೆ[೩೬೧] ಮತ್ತು ಬಸವಾಪಟ್ಟಣ[೩೬೨] ವೀರಗಲ್ಲುಗಳು ಈತನ ಕಾಲದ ಯುದ್ಧಗಳ ಬಗ್ಗೆ ಹೇಳುತ್ತಾ, ಈತನು ಹುಲ್ಲುಗಲ್ಲ ಕಳಿಂಗಸಿಡಿಲ ಬಮ್ಮರಸನ ಜೊತೆ ಯುದ್ಧ ಕೈಕೊಂಡಾಗ, ಈತ ನ ಮಹಾಪ್ರಧಾನನೊಬ್ಬನು ವೀರಮರಣವನ್ನಪ್ಪಿದ ವಿಷಯ ತಿಳಿಸುತ್ತವೆ. ಈ ಮೇಲೆ ಹೇಳಿದ ಯುದ್ಧವು ಹೊಯ್ಸಳರ ಜೊತೆ ನಡೆದ ಯುದ್ಧವಾಗಿದ್ದು, ಸಿಡಿಲ ಬಮ್ಮರಸನು ಅವರ ಪ್ರತಿನಿಧಿಯಾಗಿರಬೇಕು. ಮತ್ತು ಯುದ್ಧದಲ್ಲಿ ಕ್ರಿ.ಶ. ೧೨೮೬ರ ಕೊನೆಯ ವೇಳೆಗೆ ಹೊಯ್ಸಳ ಮೂರನೆಯ ನರಸಿಂಹನೊಡನೆ ಕಾಳಗ ನಡೆದು, ಈ ಯುದ್ಧದಲ್ಲಿ ಹೊಯ್ಸಳರ ಕೈ ಮೇಲಾಗಿ, ಪೆರುಮಾಳದೇವನು ಮರಣಿಸಿ, ನಿಡುಗಲ್ಲು ಹೊಯ್ಸಳರ ವಶವಾಯಿತೆಂದು ತಿಳಿದುಬರುತ್ತದೆ[೩೬೩].

ಪೆರುಮಾಳದೇವನ ನಂತರ ಆತನ ಸಹೋದರನಾದ ವೀರಬಮ್ಮ ಅಥವಾ ಮೂರನೆಯ ಬೊಮ್ಮನು ಆಳ್ವಿಕೆಗೆ ಬಂದಂತೆ ಕಾಣುತ್ತದೆ. ಕ್ರಿ.ಶ. ೧೨೮೬ರ ನಿಡುಗಲ್ಲ ಗಣೇಶ್ವರ ಚೋಳನ ಶಾಸನದಲ್ಲಿ ಈತನಿಗೆ ಬೈಚನೆಂಬುವ ಸೇನಾಧಿಕಾರಿಯೊಬ್ಬ ಇದ್ದ ವಿಷಯ ತಿಳಿಯುತ್ತದೆ[೩೬೪].

ಮೂರನೆಯ ಇರುಂಗೋಳನ ಮೊಮ್ಮಗ, ಮೂರನೆಯ ಬೊಮ್ಮನ ಮಗನಾದ ಗಣೇಶ್ವರದೇವನು ನಿಡುಗಲ್ಲ ಶಾಸನ ಹೇಳುವಂತೆ, ಕ್ರಿ.ಶ. ೧೨೯೨ರಲ್ಲಿ ಪಟ್ಟಕ್ಕೆ ಬಂದನು. ಈ ಶಾಸನವು ನಿಡುಗಲ್ಲ ಚೋಳರ ವಂಶಾವಳಿಯನ್ನು ಮಂಗಿಯಿಂದ ನೀಡುತ್ತದೆ[೩೬೫]. ಈತನ ಕಾಲದ ಹೊಸೂರಿನ ವೀರಗಲ್ಲೊಂದು ಉಲ್ಲೇಖಿಸುವಂತೆ ಕೂಡಲೂರಿನ ದೊಡ್ಡಗೆರೆನಾಯಕ ಮತ್ತು ಸಾಮಂತನ ಮಗನಾದ ರಾಮಾನಾಯಕರುಗಳು ಹುಲಿಕುಂಟೆಯ ಮೇಲೆ ಆಕ್ರಮಣವೆಸಗಿದಾಗ, ಪೆಮ್ಮೆಯನಾಯಕ, ಅವನ ಮಗ ಅಬ್ಬಯನಾಯಕ ಮತ್ತು ಮಾವ ಬೊಮ್ಮೆಯ ನಾಯಕರು ಮಡಿದರೆಂದು ತಿಳಿಯುತ್ತದೆ[೩೬೬]. ಇದರಿಂದಾಗಿ ಇವನ ಕಾಲದಲ್ಲಿಯೂ ಹೊಯ್ಸಳ-ಚೋಳ ಯುದ್ಧಗಳು ಮುಂದುವರಿದ ಸುಳಿವುಗಳು ನಮಗೆ ಸಿಗುತ್ತವೆ.

ಗಣೇಶ್ವರ ದೇವನ ನಂತರ ಆಳ್ವಿಕೆಗೆ ಬಂದವನೆಂದರೆ, ಈ ನಾಲ್ಕನೆಯ ಇರುಂಗೋಳನಾಗಿದ್ದಾನೆ. ಗಣೇಶ್ವರ ದೇವನ ಕಾಲದಲ್ಲಿ ನಡೆದ ಕಾಳಗಗಳಲ್ಲಿ ಚೋಳರಿಗೆ ನಿಡುಗಲ್ಲು ಕೈಜಾರಿತು. ಕ್ರಿ.ಶ. ೧೩೨೦ರ ಶಾಸನವೊಂದು[೩೬೭]

ತಿಳಿಸುವಂತೆ, ಈ ವೇಳೆಗೆ ಇರುಂಗೋಳನು ತುಮಕೂರು ಜಿಲ್ಲೆಯ ಪಾವಗಡ ತಾಲೂಕಿನ ಗುಣ್ಣನಹಳ್ಳಿ(ಗುಂಡ್ಲಹಳ್ಳಿ)ಯಿಂದ ಆಳುತ್ತಿದ್ದನು. ಶಾಸನದಲ್ಲಿ ನಾಚನಾಯಕನೆಂಬ ವ್ಯಕ್ತಿಯನ್ನು ಇರುಂಗೋಳನ ಮಗನೆಂದು ವರ್ಣಿಸಲಾಗಿದೆ.

ನಾಲ್ಕನೆಯ ಇರುಂಗೋಳನ ನಂತರ ಆಳ್ವಿಕೆಗೆ ಬಂದ ಬೈರರಸನು, ನಾಚನಾಯಕನ ಮಗನಾಗಿದ್ದು, ಇರುಂಗೋಳನ ಮೊಮ್ಮಗನೆಂದು ತಿಳಿದುಬರುತ್ತದೆ[೨೮]. ದೊಡ್ಡಬಾಣಗೆರೆಯ ಶಾಸನವೂ ಈ ವಿಷಯವನ್ನು ಸ್ಪಷ್ಟಪಡಿಸುತ್ತದೆ[೨೯]. ಅಲ್ಲದೇ ಅದೇ ಶಾಸನ ಮುಂದುವರೆದು ಮಹಾಸಾಮಂತಾಧಿಪತಿ ಹೊಳಕಲ್ ಬೊಮ್ಮನಾಯಕನು ನಿಡುಗಲ್ಲಿನಿಂದ ಆಳುತ್ತಿದ್ದು, ಅವನ ಆಧೀನನಾಗಿ ಮಹಾಮಂಡಲೇಶ್ವರ ಬೈರರಸ ಚೋಳಮಹಾರಾಜನು ಗುಡಿಕುಂಟೆಯಿಂದ ಆಳುತ್ತಿದ್ದುದಾಗಿ ತಿಳಿಸುತ್ತದೆ. ಈ ಸಮಯಕ್ಕೆ ಹೊಯ್ಸಳರ ಮೂರನೆಯ ಬಲ್ಲಾಳನು ನಾಯಕ ಮನೆತನದವರಿಗೆ ನಿಡುಗಲ್ಲಿಯ ಆಡಳಿತವನ್ನು ವಹಿಸಿಕೊಟ್ಟಿರಬೇಕೆಂಬುದು ಸ್ಪಷ್ಟವಾಗುತ್ತದೆ. ಬೈರರಸನಿಗೆ ಕೇಸರಸ ಮತ್ತು ವಿಜಯರಸ ಎಂಬ ಇಬ್ಬರು ಮಕ್ಕಳಿದ್ದರೆಂದು ತಿಳಿದುಬರುತ್ತದೆ. ಅಲ್ಲದೇ ಈತನ ನಂತರ ನಮಗೆ ನಿಡುಗಲ್ಲು ಚೋಳರ ಯಾವುದೇ ಅರಸನ ಉಲ್ಲೇಖ ದೊರೆಯುವದಿಲ್ಲ. ಹೀಗಾಗಿ ಮುಂದೆ ವಿಜಯನಗರ ಅರಸರ ಕಾಲದಲ್ಲಿ ಈ ಮನೆತನ ಕಣ್ಮರೆಯಾಗಿರಬಹುದು.

## ಹೊಂಬುಚದ ಶಾಂತಾರರು:

ಕ್ರಿ.ಶ. ೮ನೆಯ ಶತಮಾನದಿಂದ ೧೨ ನೆಯ ಶತಮಾನದವರೆಗೆ ಆಳ್ವಿಕೆಯನ್ನು ಮಾಡಿದ ಶಾಂತಾರರು ಸಾಂತಳಿಗೆ-೧೦೦೦ವನ್ನು ಆಳುತ್ತಿದ್ದರು. ಇದು ಕ್ರಿ.ಶ. ೧೨ನೆಯ ಶತಮಾನದವರೆಗೂ ಸಾಂತಳಿಗೆ-೧೦೦೦ ಎಂದೇ ಪ್ರಚಲಿತದಲ್ಲಿತ್ತು[೩೦]. ಇವರ ರಾಜಧಾನಿ ಪೊಂಬುಜವನ್ನು ಶಾಸನಗಳು ಹೊಂಬುಜ, ಪೊಂಬುಚ, ಪಟ್ಟಿಪೊಂಬುರ್ಚ್ಚ ಎಂದಿತ್ಯಾದಿಯಾಗಿ ಕರೆದಿವೆ. ನಂತರ ಅವರ ನೆಲೆವೀಡು ಸೇತು ಎಂಬಲ್ಲಿ ಬದಲಾಯಿತು. ಅನಂತದ ಅವಧಿಯಲ್ಲಿ ಅದು ಕಳಸ ಹಾಗೂ ಕಾರ್ಕಳಕ್ಕೆ ಬದಲಾಯಿಸಲಾದ ವಿವರ ಅವರ ಶಾಸನಗಳಿಂದ ತಿಳಿದುಬರುತ್ತದೆ.

ಉತ್ತರ ಮಥುರಾಧೀಶ್ವರರಾದ ಹಾಗೂ ಮಹೋಗ್ರವಂಶದಲ್ಲಿ ಜನಿಸಿದ ರಾಹ ಅತವಾ ರಾಳನೆಂಬುವನು ಈ ಮನೆತನದ ಮೂಲಪುರುಷನೆಂದು ತಿಳಿಯುತ್ತದೆ. ಈ ರಾಹನು ಕುರುಕ್ಷೇತ್ರ ಯುದ್ಧದಲ್ಲಿ ಹೋರಾಟಮಾಡಿ ಅವನ ಶೌರ್ಯಗಳನ್ನು ಮೆಚ್ಚಿ ನಾರಾಯಣನು ಅವನಿಗೆ ಏಕಶಂಖವನ್ನು, ವಾನರಧ್ವಜವನ್ನು ನೀಡಿದನೆಂದು ಶಾಸನಗಳು ತಿಳಿಸುತ್ತವೆ[೩೧].

ನಂತರ ಅವರ ಶಾಸನಗಳಲ್ಲಿ ಕಂಡುಬರುವ ವ್ಯಕ್ತಿ ಜಿನದತ್ತನಾಗಿದ್ದಾನೆ. ಇವನು ಸಹಕಾರ ಮತ್ತು ಕೇಯಾಲದೇವಿಯರ ಸುತನಾಗಿದ್ದಾನೆ. ಈ ಜಿನದತ್ತನು ತಂದೆಯ ಮನುಷ್ಯ ಮಾಂಸ ಭಕ್ಷಣೆಯ ಕಾರ್ಯದಿಂದ ಬೇಸರಗೊಂಡು ತನ್ನ ರಾಜ್ಯವನ್ನು ತ್ಯಜಿಸಿ, ದಕ್ಷಿಣಾಭಿಮುಖವಾಗಿ ಬರುವಾಗ ಸಿಂಹರಥನೆಂಬ ರಾಕ್ಷಸನನ್ನು

ಕೊಂದುದ್ದರಿಂದ ಅವನನ್ನು ಮೆಚ್ಚಿದ ಲೊಕ್ಕಿಯಬ್ಬೆ ಅಥವಾ ಪದ್ಮಾವತೀದೇವಿಯು ಅವನಿಗೆ ಸಿಂಹ ಲಾಂಛನವನ್ನು ನೀಡದಳು. ನಂತರ ಇವನು ಅಂಧಾಸುರನೆಂಬ ರಾಕ್ಷಸನನ್ನು ಸೋಲಿಸಿ ಕುಂದದ ಕೋಟೆಯಲ್ಲಿದ್ದ ಕರ ಹಾಗೂ ಕರದೂಷಣರನ್ನು ವಿಮುಕ್ತಿಗೊಳಿಸಿದಾಗ, ಅದನ್ನು ಮೆಚ್ಚಿದ ಪದ್ಮಾವತೀದೇವಿ ಅವನಿಗೆ ಈ ಭಾಗವನ್ನು ರಾಜಧಾನಿಯನ್ನಾಗಿ ಮಾಡುವಂತೆ ಹರಸಿ ತಾನು ಅಲ್ಲಿಯೇ ಇದ್ದ ಲೊಕ್ಕಿ ಮರದಲ್ಲಿ ನೆಲೆ ನಿಂತಳು ಎಂದು ಶಾಸಗಳು ಹೇಳಿವೆ[೨೨]. ದಾನಶಾಲೆ ಶಾಸನದ ಪ್ರಕಾರ ಜಿನದತ್ತನು ಪೊಂಬುಚ್ಚದಲ್ಲಿ ರಾಜ್ಯವನ್ನು ಸ್ಥಾಪಿಸಿ ಸಾನ್ತರನೆಂದು ಹೆಸರು ಪಡೆದಿರುವದರಿಂದ ಈ ವಂಶಕ್ಕೆ ಸಾಂತರ ವಂಶವೆಂದು ಹೆಸರಾಯ್ತು[೨೩].

ಜಿನದತ್ತನ ನಂತರ ನಮಗೆ ದೊರೆಯುವ ಅರಸರೆಂದರೆ ಶ್ರೀಕೇಸಿ ಮತ್ತು ಜಯಕೇಶಿಯರಾಗಿದ್ದಾರೆ. ನಂತರ ರಣಕೇಸಿಯೆಂಬುವನು ಆಳಿದನೆಂದು ತಿಳಿದುಬರುತ್ತದೆ. ನಂತರ ನಮಗೆ ದೊರೆಯುವ ಅರಸನೆಂದರೆ ಜಗೇಸಿಯದಾಗಿದ್ದು ಈತನು ರಾಷ್ಟ್ರಕೂಟ ಅಮೋಘವರ್ಷನ ಕಾಲದವನಾಗಿದ್ದಾನೆ[೨೪].

ಜಗೇಸಿಯ ನಂತರ ಆಳ್ವಿಕೆಗೆ ಬಂದವನೆಂದರೆ ಸಾಂತರರ ಪ್ರಮುಖ ರಾಜನಾದ ಮೊದಲನೆಯ ವಿಕ್ರಮ ಸಾಂತರನಾಗಿದ್ದಾನೆ. ಇವನ ಕಾಲದ ಶಾಸನಗಳು ಈತ ಹಿರಣ್ಯಗರ್ಭ ಮಹಾದಾನಗಳನ್ನು ಮಾಡಿದವನೆಂದು, ಅನೇಕ ಶತ್ರು ಅರಸರುಗಳನ್ನು ಕೊಂದು ಸಾಂತಳಿಗೆ-೧೦೦೦ ದ ಮೇರೆಗಳನ್ನು ಬಲಪಡಿಸಿ ಅದನ್ನು ಏಕಛತ್ರವನ್ನಾಗಿ ಮಾಡಿದನೆಂದು ಉಲ್ಲೇಖಿಸಿವೆ[೨೫]. ಅಲ್ಲದೇ ಶಾಸನಗಳಲ್ಲಿ ಈತನಿಗೆ ಕಂದುಕಾಚಾರ್ಯ, ದಾನವಿನೋದ, ಛಲದಂಕರಾಮ, ಪರಚಕ್ರಗಣ್ಮಂ, ಕಾರ್ಮುಕರಾಮ ಮುಂತಾದ ಬಿರುದುಗಳಿಂದ ಬಣ್ಣಿಸಲಾಗಿದೆ. ಹುಂಚ ಹಾಗೂ ಶಿಖಾರಿಪುರದ ಶಾಸನಗಳಲ್ಲಿ ಈ ವಿಕ್ರಮ ಸಾಂತಾರನು ಉಗ್ರವಂಶದ ಶ್ರೇಷ್ಠನೂ, ತೋಲಾಪುರುಷ ವಿಕ್ರಮ ಸಾಂತಾರನೆಂದು ಕರೆಯಿಸಿಕೊಂಡಿದ್ದ ವಿಷಯ ತಿಳಿದುಬರುತ್ತದೆ. ಶಾಸನವು ಈತನು ತನ್ನ ತೂಕದ ಚಿನ್ನವನ್ನು ತೂಗಿ ದಾನ ಮಾಡಿರುವದರಿಂದ ಈ ಹೆಸರು ಅವನಿಗೆ ಬಂದಿತೆಂದು ತಿಳಿಸುತ್ತದೆ[೨೬]. ಇವನ ಕಾಲದ ಶಾಸನವೊಂದು ಈತನ ಸಾಮ್ರಾಜ್ಯದ ಮೇರೆಯನ್ನು ಗುರುತಿಸಿದ್ದು, ಅದು ತೆಂಕಣದಲ್ಲಿ ಸೂಲದ ಹೊಳೆ, ಪಡುವಣದಲ್ಲಿ ತವನಸಿ (ತವನಂದಿ), ಬಡಗಣದಲ್ಲಿ ಬಂದಗೆ (ಬಂದಗದ್ದೆ)ಯವರೆಗೆ ವಿಸ್ತಾರವಾಗಿತ್ತೆಂದು ತಿಳಿಸುತ್ತದೆ. ಆದರೆ ಪೂರ್ವದ ಕಡೆಗಿನ ಮೇರೆಯನ್ನು ಶಾಸನ ತಿಳಿಸಿಲ್ಲ[೨೭]. ಶಿಖಾರಿಪುರದ ಶಾಸನವೊಂದರ ಪ್ರಕಾರ ಈತನು ರಾಷ್ಟ್ರಕೂಟ ಎರಡನೆಯ ಕೃಷ್ಣ (ವಲ್ಲಭ)ನ ಸಾಮಂತನಾಗಿದ್ದನೆಂದು ತಿಳಿದುಬರುತ್ತದೆ[೨೮]. ಅಲ್ಲದೇ ಈತನ ಪತ್ನಿಯಾದ ಲಕ್ಷ್ಮೀದೇವಿಯು ಬನವಾಸಿಯ ರಾಜನಾದ ಕಾಮದೇವನ ಮಗಳಾಗಿದ್ದಳು. ಹೀಗೆ ಅವರೊಡನೆ ವೈವಾಹಿಕ ಸಂಭಂದಗಳ ಮೂಲಕ ಸಖ್ಯವನ್ನು ಬೆಳೆಸಿಕೊಂಡಿದ್ದನೆಂದು ತಿಳಿದುಬರುತ್ತದೆ. ಕ್ರಿ.ಶ.ಸು. ೮೫೭ರ ಹೊನ್ನಾಳಿ ಶಾಸನದ ಪ್ರಕಾರ ಇವನನ್ನು ಛಲದಂಕರಾಮ ಶಾನ್ತರನೆಂದು ಕರೆಯಲಾಗಿದೆ. ಆಗ ಇವನು ಸಾಂತಳಿಗೆ-೧೦೦೦ ಮತ್ತು ಬನವಾಸಿ ನಾಡನ್ನು ಆಳುತ್ತಿದ್ದು, ಅಲ್ಲಿ ನಡೆದ ಕಾಳಗವೊಂದರಲ್ಲಿ ರಟ್ಟಪಳ್ಳಿಯ ಪೊಲಗನು ಮಡಿದ ಉಲ್ಲೇಖ ನಮಗೆ ಸಿಗುತ್ತದೆ. ಆದರೆ ಈ ಯುದ್ಧದ ವಿವರಣೆ ಸಿಗುವದಿಲ್ಲ[೨೯].

ಮೊದಲನೆಯ ವಿಕ್ರಮ ಸಾಂತರನ ನಂತರ ನಮಗೆ ದೊರೆಯುವ ಅರಸರುಗಳೆಂದರೆ, ಚಾಗಿಸಾಂತರ, ವೀರಶಾನ್ತರ, ಕನ್ನರ, ಕಾಮದೇವ, ತ್ಯಾಗಿಶಾನ್ತರ, ನನ್ನಿಶಾನ್ತ ರಾಯಶಾನ್ತರ, ಚಕ್ರವೀರಶಾನ್ತರ ಎಂಬುವರಾಗಿದ್ದಾರೆ. ಇವರಾಳ್ವಿಕೆಯ ಕಾಲದ ವಿವರಗಳು ನಮಗೆ ದೊರೆಯುವದಿಲ್ಲ.

ನಂತರ ನಮಗೆ ಕಂಡುಬರುವ ಸಾಂತರ ಅರಸು ಎರಡನೆಯ ವಿಕ್ರಮಶಾನ್ತರನಾಗಿದ್ದಾನೆ. ಈತನ ಕಾಲದಲ್ಲಿ ರಾಷ್ಟ್ರಕೂಟರ ಆಳ್ವಿಕೆ ಕೊನೆಗೊಂಡು ಚಾಲುಕ್ಯರು ಸಾಮ್ರಾಜ್ಯ ಸ್ಥಾಪಿಸಿದ್ದರಿಂದ, ಎಲ್ಲ ಸಾಮಂತರುಗಳಂತೆ ಇವರೂ ಕೂಡ ತಮ್ಮ ನಿಷ್ಠೆಯನ್ನು ಚಾಲುಕ್ಯರ ಕಡೆಗೆ ವಾಲಿಸಿದ್ದು ಕಂಡುಬರುತ್ತದೆ. ಈತನು ಕೆಲವೇಳೆಯವರೆಗೆ ಮಾತ್ರ ಆಳ್ವಿಕೆಯನ್ನು ನಡೆಸಿದನು.

ಎರಡನೆಯ ವಿಕ್ರಮಶಾನ್ತರ ನಂತರ ನನ್ನಿಶಾನ್ತರನು ಆಳ್ವಿಕೆಯನ್ನು ಮಾಡಿದನು. ಈತನಿಗೆ ಅಣ್ಣಲದೇವ ನೆಂಬ ಹೆಸರೂ ಇತ್ತು. ಇವನು ಚಾಲುಕ್ಯ ಜಗದೇಕಮಲ್ಲ ಜಯಸಿಂಹದೇವನ ಮಾಂಡಲೀಕನಾಗಿದ್ದನು. ಶಿಕಾರಿಪುರದ ಶಾಸನದಲ್ಲಿ ಇವನನ್ನು ಪಟ್ಟಿಪೊಂಬುಚ್ಚ ಪುರವರೇಶ್ವರಂ, ವಿಪುಲತುಲಾಪುರುಷ ಹಿರಣ್ಯಗರ್ಭ ತ್ರಯೋದ್ಯಾಧಿಕದಾನ ಮಾಡಿದವನೆಂದು, ಮೃಗಲಾಂಛನವನ್ನು ಹೊಂದಿದವನೆಂದೂ ಕರೆಯಲಾಗಿದೆ[೨೦].

ನನ್ನಿಶಾಂತರನ ಪತ್ನಿ ಹೊಚಲದೇವಿ, ಅವರಿಗೆ ಜನಿಸಿದ ಮಗನೇ ತೈಲಪದೇವನಾಗಿದ್ದಾನೆ. ಈ ತೈಲಪದೇವನು ಆಳುಪ ಹಾಗೂ ಗಂಗವಂಶದ ರಾಜಕುಮಾರಿಯರನ್ನು ಮದುವೆಯಾಗಿದ್ದಾಗಿ ತಿಳಿದುಬರುತ್ತದೆ[೨೧]. ಆದರೆ ಈ ತೈಲಪದೇವನ ಆಳ್ವಿಕೆಯ ವಿವರಗಳು ತಿಳಿದುಬಂದಿಲ್ಲ. ಈ ತೈಲಪದೇವ ಹಾಗೂ ಕಳೆಯಬ್ಬರಸಿಗೆ ಜನಿಸಿದ ಮಗನೇ ಸಾಂತರರ ಅತ್ಯಂತ ಪ್ರಮುಖ ರಾಜನಾದ ಬೀರದೇವನಾಗಿದ್ದಾನೆ.

ಬೀರದೇವನನ್ನು ಶಾಸನದಲ್ಲಿ ಬೀರದೇವ, ಬೀರುಗ, ಬೀರಶಾನ್ತರ ಹಾಗೂ ತ್ರೈಲೋಕ್ಯಮಲ್ಲ ವೀರಶಾನ್ತರ ಬೀರದೇವ ಎಂದು ಮುಂತಾಗಿ ಕರೆಯಲಾಗಿದೆ. ಇವನು ಚಾಲುಕ್ಯ ಚಕ್ರವರ್ತಿ ತ್ರೈಲೋಕ್ಯಮಲ್ಲನ ಮಹಾಮಂಡಳೇಶ್ವರನಾಗಿದ್ದನು. ಈ ವೀರಶಾನ್ತರನನ್ನು ಶಾಸನಗಳಲ್ಲಿ ಉತ್ತರಮಧುರಾಧೀಶ್ವರ, ಪಟ್ಟಪೊಂಬುರ್ಚ್ಚ ಪುರವರೇಶ್ವರ, ಮಹೋಗ್ರವಂಶಲಲಾಮ, ಪದ್ಮಾವತೀವರಲಬ್ಧ ಪ್ರಸಾದಿತ, ವಿಪುಳತುಲಾಪುರುಷ, ಮಹಾದಾನ, ಹಿರಣ್ಯಗರ್ಭತ್ರಯಾಧಿಕದಾನಂ . . . . ಮುಂತಾಗಿ ಪ್ರಶಸ್ತಿಸಲಾಗಿದೆ[೨೨]. ಶಾಸನ ಮುಂದುವರೆದು ಈತನು ರಾಜಧಾನಿ ಪೊಂಬುಚದಲ್ಲಿ ಒಂದು ಭುಜಬಳಶಾನ್ತರ ಜಿನಾಲಯವನ್ನು ಕಟ್ಟಿಸಿದುದಾಗಿ ತಿಳಿಸುತ್ತಾ, ಈತನು ಯುದ್ಧರಂಗದಲ್ಲಿ ಆಡಳಿತ ಹಾಗೂ ರಾಜಕೀಯ ಕ್ಷೇತ್ರದಲ್ಲಿ ಅತ್ಯಂತ ನಿಪುಣನಾಗಿದ್ದನೆಂದು ತಿಳಿಸುತ್ತದೆ. ಈತನಿಗೆ ಐದುಜನ ಪತ್ನಿಯರಿದ್ದು ಅವರಲ್ಲಿ ಬಿಜ್ಜಲದೇವಿಯು ನೊಳಂಬರಾಜನಾದ ನರಸಿಂಗದೇವನ ಪುತ್ರಿಯಾಗಿದ್ದಳೆಂದು ತಿಳಿಯುತ್ತದೆ. ಅಲ್ಲದೇ ವೀರಮಹಾದೇವಿ ಎಂಬ ಹೆಂಡತಿಗೆ ಜನಿಸಿದವರು ಭುಜಬಳಶಾನ್ತರ, ನನ್ನಿಶಾನ್ತರ, ಗೋವಿಂದದೇವ ಹಾಗೂ ವಿಕ್ರಮ ಶಾನ್ತರರಾಗಿದ್ದಾರೆ.

ಬೀರದೇವನ ನಂತರ ಆಳಿದವನು ಮಹಾಮಂಡಳೇಶ್ವರ ತೈಲಸಾನ್ತರನಾಗಿದ್ದಾನೆ. ಬೀರದೇವ ಅಥವಾ ಬೀರಶಾನ್ತರ ಮತ್ತು ಬೀರಲ ಮಹಾದೇವಿಯರ ಹಿರಿಯ ಮಗನಾದ ಈತನು ಭುಜಬಳಶಾನ್ತರನೆಂಬ ಇನ್ನೊಂದು ಹೆಸರನ್ನೂ ಕೂಡ ಹೊಂದಿ, ಶಾನ್ತಳಿಗೆ-೧೦೦೦ವನ್ನು ನಿರಂಕುಶವಾಗಿ ಆಳುತ್ತಿದ್ದನೆಂದು ತಿಳಿದುಬರುತ್ತದೆ[೨೮೩]. ಈತನು ಚಾಲುಕ್ಯ ಚಕ್ರವರ್ತಿಗಳಾದ ತ್ರೈಳೋಕ್ಯಮಲ್ಲ ಮತ್ತು ಆರನೆಯ ವಿಕ್ರಮಾದಿತ್ಯನ ಸಾಮಂತನಾಗಿದ್ದನು. ಚಾಲುಕ್ಯ ಚಕ್ರವರ್ತಿ ತ್ರೈಳೋಕ್ಯಮಲ್ಲನಿಗೆ ವಿಧೇಯತೆಯ ಸಂಕೇತವಾಗಿ ಈತನು ತ್ರೈಳೋಕ್ಯಮಲ್ಲ ಭುಜಬಳಶಾನ್ತರ ಎಂದು ಕರೆದುಕೊಂಡಿದ್ದಾನೆ. ಇವನು ತನ್ನ ಸಹೋದರರೊಂದಿಗೆ ರಾಜ್ಯವಾಳುತ್ತಿರುವಾಗ "ಧರ್ಮ್ಮಂ ಪ್ರಗೇವ ಚಿಂತೇದೆಂಬ ವ್ಯಾಕ್ಯಾರ್ತ್ಥಮಂ" ನೆನೆದು ಪಂಚಬಸದಿಯನ್ನು ನಿರ್ಮಿಸಲು ಆರಂಭಿಸುತ್ತಾನಲ್ಲದೇ ಅದಕ್ಕೆ ತನ್ನ ದೊಡ್ಡವ್ವ ಚಟ್ಟಲದೇವಿಯ ಜೊತೆಗೂಡಿ ದಾನ ನೀಡುತ್ತಾನೆ[೨೮೪].

ಬೀರದೇವನ ಎರಡನೆಯ ಮಗನಾದ ಗೊಗ್ಗಿಯು ಸಹೋದರನ ನಂತರ ಆಳ್ವಿಕೆಗೆ ಬಂದನು. ಈತನಿಗೆ ಗೊಗ್ಗಿ, ಗೊಗ್ಗಿಗ, ಗೋವಿಂದರದೇವ, ನನ್ನಿಶಾಂತಾರ, ಶಾಂತರಾದಿತ್ಯ ಎಂಬ ಹೆಸರುಗಳೂ, ಸಮ್ಯಕ್ ಚೂಡಾಮಣಿ, ಜಗದೇಕದಾನಿ, ಜಿನಪಾದಾರಾಧಕ, ಸಮ್ಯಕ್ತ್ವ ರತ್ನಾಕರ ಎಂಬ ಬಿರುದುಗಳಿದ್ದುದು ತಿಳಿದುಬರುತ್ತದೆ[೨೮೫]. ಇವನ ಕಾಲದಲ್ಲಿ ಸಾಂತರರನಾಡು ಮತ್ತೊಂದುಬಾರಿ ಉತ್ತುಂಗತೆಯನ್ನು ಕಂಡಿತ್ತು. ಇವನು ಸಾಂತಳಿಗೆ ನಾಡಿನ ಮೇರೆಗಳನ್ನು ವಿಸ್ತರಿಸಿದನು. ಅಲ್ಲದೇ ಶಾಸನಗಳಿಂದ ತಿಳಿದುಬರುವಂತೆ ಪರಾಯುಕ್ತವಾದ ಸಾಂತಳಿಗೆಯನ್ನು ಸ್ವಾಯತ್ತವಾಗಿ ಮಾಡಿ, ಏಕಛತ್ರಛಾಯೆಯಿಂದ ಆಳಿದನು[೨೮೬]. ಶಾಸನವು ಮುಂದುವರೆದು ಚಾಲುಕ್ಯ ಚಕ್ರವರ್ತಿಯಾದ ಆರನೆಯ ವಿಕ್ರಮಾದಿತ್ಯನು ತನ್ನ ಅರ್ಧಾಸನವಾದ ಲೋಹಸಿಂಹಾಸನದಲ್ಲಿ ಕೂಡಿಸಿಕೊಂಡನೆಂದು ಹೇಳುತ್ತದೆ. ಅಣ್ಣ ನಿರ್ಮಿಸಿದ ಪಂಚಬಸದಿಗೆ ಈತನು ದೊಡ್ಡವ್ವ ಚಟ್ಟಲದೇವಿ ಮತ್ತು ಸಹೋದರರೊಂದಿಗೆ ಕೂಡಿಕೊಂಡು ಪೊಂಬುರ್ಚ್ಚ ನಾಡಿನಲ್ಲಿಯ ಹಾದಿಗಾರು ಅದರ ಕಾಲುಹಳ್ಳಿ, ಹಲ್ಲವನಹಳ್ಳಿ, ಬಿಡೆಯನ್ನು ನೀಡಿದ ವಿವಿರಗಳು ಶಾಸನದಲ್ಲಿವೆ[೨೮೭].

ಗೊಗ್ಗಿ ಅಥವಾ ಎರಡನೆಯ ನನ್ನಿಶಾಂತಾರನ ನಂತರ ಅಧಿಕಾರಕ್ಕೆ ಬಂದವನು ಒಡ್ಡುಗ ಅಥವಾ ಮೂರನೆಯ ವಿಕ್ರಮಶಾಂತಾರನಾಗಿದ್ದಾನೆ. ಅಧಿಕಾರಕ್ಕೆ ಬರುವ ಮುಂಚೆ ಸಹೋದರರೊಂದಿಗೆ ಸೌಹಾರ್ದವಾಗಿದ್ದ ಈತನು, ನಂತರ ಚಾಲುಕ್ಯ ವಿಕ್ರಮಾದಿತ್ಯನ ಹೆಸರನ್ನು ಅವನಿಗೆ ವಿಧೇಯತೆಯನ್ನು ತೋರಿಸಲು ತನ್ನ ಹೆಸರಿನೊಂದಿಗೆ ಸೇರಿಸಿಕೊಂಡು ವಿಕ್ರಮಶಾಂತಾರನಾದನು. ಈತನು ಸಹ ಪಂಚಬಸದಿಯ ನಿರ್ಮಾಣದಲ್ಲಿ ಸಹೋದರರೊಂದಿಗೆ ಭಾಗವಹಿಸಿ, ಅದಕ್ಕೆ ಪೊಂಬುರ್ಚನಾಡಿನಲ್ಲಿರುವ ಹಾಲಂದೂರು, ಕಲ್ಲೂರ್ನಾಡಿನಲ್ಲಿರುವ ಕೆರೆಗೋಡ ಸಮೀಪದ ಮಡಂಬಳ್ಳಿಗಳನ್ನು ದಾನ ನೀಡುತ್ತಾನೆ[೨೮೮]. ಇವನು ಪಂಚಬಸದಿಯ ಮಾದರಿಯ ಇನ್ನೊಂದು ಬಸದಿಯನ್ನು ಆನಂದೂರಿನಲ್ಲಿ ಕಟ್ಟಿಸಿದುದಾಗಿ ತಿಳಿದುಬರುತ್ತದೆ. ಅಲ್ಲದೇ ಇವನ ಹೆಂಡತಿ ಪಾಂಡ್ಯಕುಲದ ಚಂದಲದೇವಿ. ಮಕ್ಕಳು ರಾಯಶಾಂತಾರ ಮತ್ತು ತೈಲಪರೆಂದು ದಾನಶಾಲೆಯ ಶಾಸನ ಹೇಳಿದೆ[೨೮೯].

ಬೀರಶಾಂತಾರದೇವನ ಕೊನೆಯ ಮಗನಾದ ಬರ್ಮದೇವನು ಹುಂಚದ ಎರಡು ಶಾಸನಗಳಲ್ಲಿ ಕಂಡುಬರುತ್ತಿದ್ದು, ಈತನೂ ಕೂಡ ಪಂಚಬಸದಿಯ ನಿರ್ಮಾಣಕಾರ್ಯದಲ್ಲಿ ಸಹೋದರರೊಂದಿಗೆ ಭಾಗವಹಿಸಿ ಅದಕ್ಕೆ ದಾನ ನೀಡಿದನು ಎಂದು ತಿಳಿದುಬರುತ್ತದೆ[೫೦]. ಆದರೆ ಈತ ಆಡಳಿತ ನಿರ್ವಹಿಸಿದ ವಿವರಗಳು ತಿಳಿದುಬಂದಿಲ್ಲ.

ಒಡ್ಡುಗ ನಂತರ ಆಳ್ವಿಕೆಗೆ ಬಂದವನು ಆತನ ಮಗನಾದ ರಾಯಶಾಂತಾರನಾಗಿದ್ದಾನೆ. ಈತನು ಸಾಂತರಪುರದಲ್ಲಿದ್ದು ಸಹೋದರನೊಂದಿಗೆ ಆಳುತ್ತಿದ್ದ ಉಲ್ಲೇಖ ನಮಗೆ ಬೇಸೂರು ಶಾಸನದಲ್ಲಿದೆ[೫೧]. ಈ ಶಾಸನದಲ್ಲಿ ಈತನ ಪ್ರಶಸ್ತಿಯನ್ನು ಪಟ್ಟಿಪೊಂಬುರ್ಚ್ಚಪುರವರೇಶ್ವರಂ, ಪದ್ಮಾವತೀ ಲಬ್ಧವರಪ್ರಸಾದ, ಸಕಳಜನಸ್ತುತ್ಯ ನರಸಂಖಶಾಳಂ, ಪ್ರಸಿವರಸೂಲಂ, ಕೀರ್ತ್ಯಾಂಗನಾಲೋಲಂ ಎಂದು ಹೇಳಲಾಗಿದೆ. ಆವಿನಹಳ್ಳಿ ಶಾಸನದಲ್ಲಿ ಈತನ ಜೊತೆಗೆ ಇವನ ಸಮಸ್ತ ಸೇನಾನಾಥನಾಗಿದ್ದ ಪಡೆವಳ ಎರೆಯಂಮ್ಮ ಹಾಗೂ ಆತನ ಮಗ ಮಹಾಪಡೆವಳ ಸಿಂಗಣನ ಉಲ್ಲೇಖವಿದೆ[೫೨].

ಇವನ ನಂತರ ಸಹೋದರನಾದ ತೈಲ ಅಥವಾ ತ್ರಿಭುವನಮಲ್ಲ ಶಾನ್ತರದೇವನು ಆಳಿದನು. ಬೇಸೂರು ಶಾಸನದಲ್ಲಿ ಈತನು ಸಾಂತರಪುರದಲ್ಲಿದ್ದು ಆಳುತ್ತಿದ್ದ ವಿಷಯ ಬರುತ್ತದೆ[೫೩]. ಈತ ಚಾಲುಕ್ಯರಾಜ ಇಮ್ಮಡಿ ತ್ರಿಭುವನಮಲ್ಲದೇವ ಪೆರ್ಮಾಡಿ (ಆರನೆಯ ವಿಕ್ರಮಾದಿತ್ಯ) ಯ ಮಹಾಮಂಡಳೇಶ್ವರನಾಗಿದ್ದನು. ಮೇಲಿನ ಶಾಸನದಲ್ಲಿ ಈತನ ಪ್ರಶಸ್ತಿಯು ಪಟ್ಟಿಪೊಂಬುರ್ಚ್ಚಪುರವರೇ . . . , (ಕ)ಸ್ತೂರಿಕಾಮೋದ, ಪ್ರಥಮತುಳಾಪುರುಷದಾನ ಪಾರಗ, ಸಿಂಗಲಾಂಚನಂ, ವಾನರಧ್ವಜವಿರಾಜಮಾನಂ, ಸಾಯ್ಯರ್ಯಮಾರ್ತಾಂಡ ಎಂದರೆ, ಆವಿನಹಳ್ಳಿ ಶಾಸನದಲ್ಲಿ[೫೪] ಪೆರ್ಮಾಡಿದೇವರಾದೇಸ ಪೇಸಣವಿನತಾನಂದನ, ಗಣಿಕಾಮುಕುಂದನಂದನ, ಮಂಡಳೀಕಗಂಡಗಜಭೀಮಂ, ಚಲದಂಕರಾಮಂ, ನೇರ್ವ್ವರಗಂಡ ಎಂದು ಉಲ್ಲೇಖಿಸಲಾಗಿದೆ. ಈ ಶಾಸನ ತಿಳಿಸುವಂತೆ ಇವನ ಪಾದಪದ್ಮೋಪಜೀವಿಗಳಾದ ಸೇನಾನಾಥ ಪಡೆವಳೆರೆಯಮ್ಮ, ಪೆರ್ಗಡೆ ಬೀಯಳಯ್ಯರು ಸತ್ಯಾಗರನೊಂದಿಗೆ ಕಾದಿ ಜಯಪಡೆದು ಬಂದುದಕ್ಕೆ ಅವರಿಗೆ ಪಟ್ಟಗಟ್ಟಿ ರಾಜಕೂಟದಿಂದ ೨೦೦ ಗದ್ಯಾಣಗಳನ್ನು ಕೊಟ್ಟು ರಾಜ್ಯಸಮುದ್ಧರಣಂ ಎಂಬ ಬಿರುದನ್ನು ನೀಡುತ್ತಾನೆ. ಇನ್ನೊಂದು ಶಾಸನದ ಪ್ರಕಾರ[೫೫] ಇವನ ಪಾದಪದ್ಮೋಪಜೀವಿಯಾದ ಮಹಾಮಾತ್ಯ ಕುನ್ನುಗನು ತೈಲಪನಂಕಕಾರ, ರಾಯತೈಲಪದೇವರಾದೇಶ ಪೇಷಣವೈನತೇಯ ಎಂದೂ, ಶತೃಗಳನ್ನು ನಿರ್ಮೂಲನ ಮಾಡಿ ಬಿಲ್ಲಂಕಕಾರ ಎಂಬ ಬಿರುದನ್ನು ಹೊಂದಿದ್ದ ವಿಸಯ ತಿಳಿದುಬರುತ್ತದೆ. ದಾನಶಾಲೆ ಶಾಸನದ ಪ್ರಕಾರ ಕ್ರಿ.ಶ. ೧೧೦೩ರಲ್ಲಿ ಬಸದಿಯೊಂದನ್ನು ಕಟ್ಟಿಸಿ ಅದಕ್ಕೆ ದಾನ ನೀಡಿದ ವಿವರ ತಿಳಿಯುತ್ತದೆ[೫೬]. ಅಲ್ಲದೇ ಇವನಿಗೆ ಜಗದೇಕದಾನಿ ಎಂಬ ಬಿರುದಿದ್ದ ವಿಷಯ ತಿಳಿಯುತ್ತದೆ. ಹೊಂಬುಚದ ಶಾಸನವೊಂದರಿಂದ[೫೭] ಈತನಿಗೆ ರಾಯ ಝುಳಪ್ಪ ಎಂಬ ಬಿರುದು ಕಂಡುಬರುತ್ತದೆ. ಇದು ಚಾಲುಕ್ಯ ಚಕ್ರವರ್ತಿ ವಿಕ್ರಮಾದಿತ್ಯನಿಗಿದ್ದ ಇನ್ನೊಂದು ಬಿರುದಾಗಿತ್ತೆಂದು ತಿಳಿದುಬರುತ್ತದೆ[೫೮].

ತ್ರಿಭುವನಮಲ್ಲ ಶಾನ್ತರ ಮತ್ತು ಚಟ್ಟಲದೇವಿಯರ ಮಗನಾದ ವಿಕ್ರಮಸಾನ್ತರ (ನಾಲ್ಕನೆಯ ಶಾನ್ತರ)ನು ಅವನ ನಂತರ ಪಟ್ಟಕ್ಕೆ ಬಂದನು. ಇವನು ಸಹ ಸಾಂತಳಿಗೆ-೧೦೦೦ ನಾಡನ್ನು ಏಕಸ್ವಾಮ್ಯವನ್ನಾಗಿ ಮಾಡಿಕೊಂಡು ಆಳ್ವಿಕೆಮಾಡಿದಂತೆ ಶಾಸನಗಳಿಂದ ತಿಳಿಯುತ್ತದೆ.

ವಿಕ್ರಮಶಾಂತಾರನ ಮಗನಾದ ಎರಡನೆಯ ತ್ರಿಭುವನಮಲ್ಲ ವೀರಶಾನ್ತರನು ಅವನ ನಂತರ ಆಳ್ವಿಕೆಗೆ ಬಂದನು. ಇವನನ್ನು ಶಾಸನಗಳು ಮಹಾಮಂಡಳೇಶ್ವರ, ಉತ್ತರಮಧುರಾಧೀಶ್ವರ ಶಾನ್ತರಾದಿತ್ಯ ಎಂದು ಕರೆದಿವೆ. ಇವನ ಶಾಸನಗಳಿಂದ ತಿಳಿದುಬರುವ ಅಂಶವೆಂದರೆ ಹೊಸಗುಂದದ ಬೀರರಸನು ಈತನ ಪ್ರಮುಖ ಸಾಮಂತನಾಗಿದ್ದನು[೯೯]. ಈ ಹೊಸಗುಂದದ ಬೀರರಸನಿಗೂ ಮತ್ತು ಈತನಿಗೂ ನೆಡೆದ ಯುದ್ಧದ ವಿಷಯ ಸಾಗರದ ಶಾಸನವೊಂದರಲ್ಲಿ ಬರುತ್ತದೆ. ಈ ಯುದ್ಧದಲ್ಲಿ ವೀರಶಾಂತರ ದೇವನಿಗೆ, ಹಿರಿಯ ದಂಡನಾಯಕ ಬನವಾಸಿ ಪನ್ನಿಚ್ಛಾಸಿರದ ಅರಳಯ್ಯ ಹಾಗೂ ಪದ್ದಯ್ಯ, ಹೊಂಬುಚದ ಸಿಂಗಿದೇವ ಮುಂತಾದವರು ಸಹಾಯಕರಾಗಿದ್ದರು[೧೦೦]. ಶಾಸನದಲ್ಲಿ ತಿಳಿದುಬರುವ ಇನ್ನೊಂದು ಪ್ರಮುಖ ಅಂಶವೆಂದರೆ, ಕಳಚೂರಿ ಬಿಜ್ಜಳದೇವನು ಕಲ್ಯಾಣಿಯನ್ನು ಆಳುತ್ತಿರಬೇಕಾದರೆ ಎಂದು ಹೇಳಿದೆ[೧೦೦]. ಆದ್ದರಿಂದ ಈ ಕಾಲದಲ್ಲಿ ಇವರು ಕಲಚೂರಿಯರ ಸಾಮಂತರಾಗಿದ್ದಿರಬಹುದು. ವೀರಶಾನ್ತರನು ಉದ್ಧರೆಯ ಜಂಬೂರು ಠಾಣೆಯನ್ನು ಮುತ್ತಿ ಹೋರಾಟ ಮಾಡಿದನೆಂದು ತಿಳಿದುಬರುತ್ತದೆ. ಆದರೆ ಅವನ ವಿರುದ್ಧವಾಗಿ ಹೋರಾಡಿದ ಅರಸು ಯಾರೆಂದು ತಿಳಿದುಬರುವದಿಲ್ಲ. ಈತನಾಳ್ವಿಕೆಯ ಉಲ್ಲೇಖದ ಕೊನೆಯ ಶಾಸನದಲ್ಲಿ ಈ ವೀರಶಾಂತಾರನು ಸಾಂತಳಿಗೆ-೧೦೦೦ನ್ನು ಆಳುತ್ತಿದ್ದಾಗ, ಅವನ ಸಾಮಂತನಾದ ಬೀರದೇವ ಅಳಿಯನಾದ ತೈಲರನು ಕೆಲ ಪ್ರದೇಶಗಳನ್ನಾಳುತ್ತಿದ್ದ ಉಲ್ಲೇಖ ದೊರೆಯುತ್ತದೆ. ಅಲ್ಲದೇ ಈ ಶಾಸನವು ತುರುಗೋಳ್ ಕದನವನ್ನು ವಿವರಿಸುತ್ತದೆ[೧೦೨].

ಕ್ರಿ.ಶ.ಸು. ೧೨ನೆಯ ಶತಮಾನದ ಉತ್ತರಾರ್ಧದ ಶಾಸನಗಳನ್ನು ನೋಡಿದಾಗ ಶಾಂತಾರರು ಹೊಂಬುಚದಿಂದ ಸೇತುವಿಗೆ ತಮ್ಮ ರಾಜಧಾನಿಯನ್ನು ಬದಲಾಯಿಸಿದ ವಿಷಯ ತಿಳಿದುಬರುತ್ತದೆ. ಈ ಸಮಯದಲ್ಲಿ ಚಾಲುಕ್ಯರು, ಕಲಚೂರಿಗಳು ಮತ್ತು ಹೊಯ್ಸಳರುಗಳಲ್ಲಿ ನಿರಂತರವಾಗಿ ಸಾಮ್ರಾಜ್ಯಕ್ಕಾಗಿ ಕರ್ನಾಟಕದಲ್ಲಿ ಹೋರಾಟಗಳು ನಡೆದದ್ದನ್ನು ನೋಡಬಹುದು. ಇಂತಹ ಪ್ರಕ್ಷುಬ್ಧ ಪರಿಸ್ಥಿತಿಯಲ್ಲಿ ಸಾಂತಾರರು ತಮ್ಮ ನೆಲೆವೀಡನ್ನು ಬದಲಾಯಿಸಿರಬಹುದು. ಆದರೆ ಸೇತುವಿನಿಂದ ಹೊರಡಿಸಿದ ಶಾಸನಗಳು ಮೊದಲಿನ ಜಿನಸ್ತುತಿಯ ಬದಲಾಗಿ ಶಿವಸ್ತುತಿಯಿಂದ ಆರಂಭವಾದದ್ದು ನಮಗೆ ತಿಳಿಯುತ್ತದೆಯಲ್ಲದೇ, ಇಲ್ಲಿ ಸಾಂತಾರರನ್ನು ಉಗ್ರವಂಶದವರೆಂದೂ, ಪಟ್ಟಿಪೊಂಬುಚ್ಚ ಪುರವರೇಶ್ವರರೆಂದು ಕರೆಯಲಾಗಿದೆ.

ನಾಲ್ಕನೆಯ ಶಾಂತಾರ ಅಥವಾ ವಿಕ್ರಮಶಾಂತಾರನ ಹೆಂಡತಿ ತುಳವಳದೇವಿಯಿಂದ ಜನಿಸಿದ ಮಗನೇ ಸಿಂಗಿನೃಪಾಳ ಅಥವಾ ಸಿಂಗಿದೇವನಾಗಿದ್ದಾನೆ. ಅಲ್ಲದೇ ಈತನು ಇಮ್ಮಡಿ ತ್ರಿಭುವನಮಲ್ಲ ವೀರಶಾಂತಾರದೇವನ

ಮಲತಮ್ಮನಾಗಿದ್ದು ಅವನ ನಂತರ ಸೇತುವಿನಿಂದ ಆಳ್ವಿಕೆಯನ್ನು ನಡೆಸಿದ್ದಾನೆ. ಈತನಿಗೆ ಅಮ್ಮಣ ಎಂಬ ಇನ್ನೊಂದು ಹೆಸರಿದ್ದಂತೆ ತಿಳಿಯುತ್ತದೆ[೩೦೩]. ಸಾಗರದ ಶಾಸನವೊಂದರಲ್ಲಿ ವೀರಶಾಂತಾರನಿಗೆ ಮತ್ತು ಹೊಸಗುಂದದ ಬೀರದೇವರಸನಿಗೂ ನಡೆದ ಕಾಳಗದಲ್ಲಿ ಹಲವು ದಂಡನಾಯಕರ ಜೊತೆ ಹೊಂಬುಚದ ಸಿಂಗಿದೇವನೂ ಕೂಡ ಭಾಗವಹಿಸಿದ್ದ ವಿಷಯ ತಿಳಿಯುತ್ತದೆ[೩೦೪]. ಆ ಸಿಂಗಿದೇವ ಈತನೆ ಆಗಿದ್ದು ಅಣ್ಣನ ಕಾಲದಲ್ಲಿ ಅವನಿಗೆ ಸಹಾಯಕನಾಗಿ ಆಡಳಿತದಲ್ಲಿ ಭಾಗವಹಿಸುತ್ತಿರಬಹುದೆಂದು ಊಹಿಸಬಹುದು.

ಸಿಂಗಿದೇವನ ನಂತರ ಆತನ ಮಗನಾದ ಜಗದೇವರಸನು ಆಳ್ವಿಕೆಗೆ ಬಂದನು. ಈತನು ಸಾಂತಳಿಗೆ-೧೦೦೦ ಮತ್ತು ಬನವಾಸಿ ಪನ್ನಿಛ್ಛಾಸಿರವನ್ನು ಆಳುತ್ತಿದ್ದನೆಂದು ಶಾಸನೋಲ್ಲೇಖವಿದೆ[೩೦೫]. ಕದಂಬ ಕೀರ್ತಿವರ್ಮನ ಮೇಲೆ ಈತನು ಧಾಳಿಯಿಟ್ಟು ಅಂಧಾಸುರ ಕೋಟೆಯನ್ನು ಮುತ್ತಿದ ವಿಷಯ ಶಾಸನವೊದರಲ್ಲಿದೆ[೩೦೬]. ಅಂದರೆ ಕದಂಬ ಮತ್ತು ಸಾಂತಾರರ ಈ ಕದನದಿಂದಾಗಿ ಈತನು ಬನವಾಸಿಯ ಕೆಲ ಪ್ರಾಂತ್ಯಗಳನ್ನು ವಶಪಡಿಸಿಕೊಂಡಿರಬಹುದು. ಹಾನಗಲ್ಲಿನ ಕದಂಬರು ಕ್ರಿ.ಶ. ೧೧೨೦ರ ಸುಮಾರಿಗೆ ಸಾಂತಳಿಗೆಯ ಕೆಲ ಪ್ರದೇಶಗಳನ್ನು ವಶಪಡಿಸಿಕೊಂಡಂತೆ ತೋರುತ್ತದೆ. ನಂತರ ಕ್ರಿ.ಶ. ೧೧೬೪-೬೫ರ ವೇಳೆಗೆ ಕಲಚೂರಿ ಬಿಜ್ಜಳನ ಮಹಾಮಂಡಲೇಶ್ವರನಾದ ಬೆಳಗುತ್ತಿಯ ಸಿಂಧರ ಈಶ್ವರದೇವನು ಬನವಾಸಿ ಹಾಗೂ ಸಾಂತಳಿಗೆಯ ಉತ್ತರಕ್ಕಿದ್ದ ಕೆಲ ಭಾಗಗಳನ್ನು ಆಳುತ್ತಿದ್ದನೆಂದು ತಿಳಿದುಬರುತ್ತದೆ[೩೦೭]. ಈ ಜಗದೇವರಸನಿಗೂ ಮತ್ತು ಈಶ್ವರದೇವನಿಗೂ ಕದನವಾಗಿ ಜಗದೇವರಸನು ತನ್ನ ಸಾಂತಳಿಗೆ ನಾಡಿನ ಅನೇಕ ಭಾಗಗಳನ್ನು ಕಳೆದುಕೊಂಡನೆಂದು ತಿಳಿದುಬರುತ್ತದೆ[೩೦೮]. ಕೊನೆಗೆ ಹೊಯ್ಸಳ ವಿಷ್ಣುವರ್ಧನನು ಸಾಂತರ ಅರಸ ಜಗದೇವನ ಪಡೆಯನ್ನು ಸೋಲಿಸಿ ಸಾಂತಳಿಗೆಯ ಪೂರ್ವದ ಕಡೆಗಿನ ಅನೇಕ ಭಾಗಗಳನ್ನು ತನ್ನ ರಾಜ್ಯಕ್ಕೆ ಸೇರಿಸಿಕೊಂಡನೆಂದು ತಿಳಿಯುತ್ತದೆ[೩೦೯].

ನಂತರ ನಮಗೆ ತಿಳಿದುಬರುವ ಶಾಂತಾರ ಅರಸನೆಂದರೆ ಜಗದೇಕನ ಸಹೋದರನಾದ ಸಿಂಗಿದೇವನಾಗಿದ್ದಾನೆ. ಈತನಿಗೆ ಸಾಂತಳಿಗೆ ರಾಜನೆಂದು ಕರೆದಿದ್ದರೂ ಈತನು ಸೇತುವಿನಿಂದ ಆಳುತ್ತಿದ್ದನೆಂದು ತಿಳಿದುಬರುತ್ತದೆ[೩೧೦].

ಹೀಗೆ ಶಾಂತಾರರು ಪ್ರಬಲರಾದ ಹೊಯ್ಸಳರ ಸಾಮಂತರಾಗಿ ಅವರ ಆಶ್ರಯವನ್ನು ಪಡೆದರೆಂದು ತಿಳಿದುಬರುತ್ತದೆ. ಅದಕ್ಕಾಗಿ ಶಾಂತಾರ ಜಗದೇವನು ಹೊಯ್ಸಳರ ಬಿರುದುಗಳಿಂದ ಗುರುತಿಸಿಕೊಂಡಿದ್ದು ತಿಳಿದುಬರುತ್ತದೆ. ಅದೆಂದರೆ ಜಗದೇಕ ಹೊಯ್ಸಳ ಸಾಂತರ ಮಾರದೇವ ಎಂಬುದಾಗಿದೆ. ಮುಂದೆ ಈ ವಂಶದ ಯಾವುದೇ ದೊರೆಯ ಉಲ್ಲೇಖ ನಮಗೆ ಕಂಡುಬರುವದಿಲ್ಲ.

## ನೊಳಂಬರು:

ಕರ್ನಾಟಕ ಇತಿಹಾಸದಲ್ಲಿ ನೊಳಂಬರು ಕ್ರಿ.ಶ. ೮ನೆಯ ಶತಮಾನದಿಂದ ೧೧ನೆಯ ಶತಮಾನದವರೆಗೆ ಆಳಿದರು. ಇವರು ನೊಳಂಬವಾಡಿ-೩೨,೦೦೦ ಅಥವಾ ನೊಳಂಬರಾಷ್ಟ್ರದಲ್ಲಿ ಆಳ್ವಿಕೆಯನ್ನು ನಡೆಸಿದರು. ಮುಂಚೆ ಈ

ನೊಳಂಬವಾಡಿ ಪ್ರದೇಶವು ನೊಳಂಬವಾಡಿ-೧೦೦೦೦ ಪ್ರದೇಶವಾಗಿತ್ತು[೩೧೧]. ಇವರ ರಾಜಧಾನಿ ಹೆಂಜೇರು (ಹೇಮಾವತಿ) ಆಗಿತ್ತೆಂದು ತಿಳಿದುಬರುತ್ತದೆ[೩೧೨].

ಈ ವಂಶದ ಮೂಲಪುರುಷ ತ್ರಿನಯನ ಪಲ್ಲವ ಅಥವಾ ತ್ರಿಲೋಚನಪಲ್ಲವನೆಂದು ತಿಳಿದುಬರುತ್ತದೆ[೩೧೩]. ಈ ತ್ರಿಲೋಚನಪಲ್ಲವನು ಪೂರ್ವ ಚಾಲುಕ್ಯ ವಿಜಯಾದಿತ್ಯನೊಡನೆ ಯುದ್ಧವನ್ನು ಕೈಕೊಂಡಿದ್ದ ವಿಷಯ ತಿಳಿದುಬರುತ್ತದೆ[೩೧೪].

ಕ್ರಿ.ಶ. ೯೪೨-೪೩ರ ಹೇಮಾವತಿ ಸ್ಥಂಭಶಾಸನದ ಪ್ರಕಾರ ಈ ಮನೆತನದ ಮೊದಲ ಐತಿಹಾಸಿಕ ವ್ಯಕ್ತಿಯಾಗಿ ಮಂಗಳನು ಕಂಡುಬರುತ್ತಾನೆ[೩೧೫]. ಈತನಿಗೆ ನೊಳಂಬಾಧಿರಾಜ ಎಂಬ ಬಿರುದಿತ್ತು. ಅಲ್ಲದೇ ಈತನು ಚಂಡಿಯ ಆರಾಧಕನೂ, ವಿದ್ವಜ್ಜನ ಪೋಷಕನು ಚಾಲುಕ್ಯರಿಂದ ಸ್ತುತಿಸಲ್ಪಟ್ಟವನು ಆಗಿದ್ದನೆಂದು ತಿಳಿದುಬರುತ್ತದೆ. ಇವನು ಕಿರಾತರನ್ನು ಸೋಲಿಸಿ ಕರ್ನಾಟಕ ರಾಜರಿಂದ ಮನ್ನಣೆ ಪಡೆದನೆಂದು ಅದೇ ಶಾಸನದಿಂದ ತಿಳಿದುಬರುತ್ತದೆ. ಮಂಗಳನ ಮಗಳು ಅಥವಾ ತಂಗಿಯಾದ ನೊಳಂಬ ರಾಜಕುಮಾರಿಯೋರ್ವಳು ಗಂಗ ಶ್ರೀಪುರುಷನ ಪತ್ನಿಯಾಗಿದ್ದಳೆಂದು ತಿಳಿದುಬರುತ್ತದೆ[೩೧೬]. ಇದರಿಂದ ಈತನು ಗಂಗರ ಸಾಮಂತನಾಗಿದ್ದನೆಂದು ಊಹಿಸಬಹುದು.

ಮಂಗಳನ ನಂತರ ಆತನ ಮಗ ಸಿಂಹಪೋತನು ಉತ್ತರಾಧಿಕಾರಿಯಾದನು. ಈತನಿಗೆ ಶಾಸನಗಳು ಕಲಿನೊಳಂಬಾಧಿಅರಸ, ಕೊಲ್ಲಿಯರಸ[೩೧೭] ಮತ್ತು ಕೊಲ್ಲಿಪಲ್ಲವ ನೊಳಂಬ[೩೧೮] ಎಂಬ ಬಿರುದುಗಳಿದ್ದವೆಂದು ಉಲ್ಲೇಖಿಸಿವೆ. ಗಂಗ ಶ್ರೀಪುರುಷನ ನಂತರ ಅವರ ಸಾಮ್ರಾಜ್ಯದಲ್ಲಿ ಸಿಂಹಾಸನಕ್ಕಾಗಿ ಶಿವಮಾರ ಮತ್ತು ದುಗ್ಗಮಾರರ ನಡುವೆ ನಡೆದ ಸಂಘರ್ಷದಲ್ಲಿ ಈತನು ಶಿವಮಾರನ ಪಕ್ಷವಹಿಸಿದ್ದ ವಿಷಯವನ್ನು ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲೂಕಿನ ದೊಡ್ಡ ಉಳ್ಳರ್ತಿಯ ವೀರಗಲ್ಲು ತಿಳಿಸುತ್ತದೆ[೩೧೯]. ಅಲ್ಲದೇ ಈತನಿಗೆ ಪಂಚಮಹಾಶಬ್ದ ಮತ್ತು ಪೃಥ್ವೀವಲ್ಲಭ ಎಂಬ ಬಿರುದುಗಳಿದ್ದವು. ಇವನು ಚಾರುಪೊನ್ನೇರ ಎಂಬ ಮಗ ಮತ್ತು ಶ್ರೀಮಹಾದೇವಿ ಎಂಬ ಮಗಳನ್ನು ಹೊಂದಿದ್ದನೆಂದು ತಿಳಿದುಬರುತ್ತದೆ. ಅವಳು ಕೆಲಪ್ರದೇಶಗಳನ್ನು ಆಳುತ್ತಿದ್ದುದಾಗಿ ತಿಳಿದುಬರುತ್ತದೆ[೩೨೦].

ಸಿಂಹಪೋತನ ನಂತರ ಆತನ ಮಗ ಚಾರುಪೊನ್ನೇರನು ಆಳ್ವಿಕೆಗೆ ಬಂದನು. ಇವನು ರಾಷ್ಟ್ರಕೂಟ ಮೂರನೆಯ ಗೋವಿಂದನ ಅಧೀನನಾಗಿ ನೊಳಂಬಳಿಗೆ-೧೦೦೦೦ ಮತ್ತು ನೀರ್ಗುಂದನಾಡು-೩೦೦ಗಳನ್ನು ಆಳುತ್ತಿದ್ದನು[೩೨೧]. ಅಲ್ಲದೇ ಈತನು ಪರಮೇಶ್ವರ ಪಲ್ಲವಾಧಿರಾಜ[೩೨೨], ನಿಜರಾಮ, ನಯಧಿರಾಜ[೩೨೩] ಮತ್ತು ನೊಳಂಬರಾದಿತ್ಯ[೩೨೪] ಎಂಬ ಬಿರುದುಗಳನ್ನು ಹೊಂದಿದ್ದಾಗಿ ತಿಳಿದುಬರುತ್ತದೆ. ಇವನ ಹೆಂಡತಿ ಗವಣಗಬ್ಬೆಯು ಮದರಿಕಲ್ಲನ್ನು ಆಳುತ್ತಿದ್ದುದಾಗಿ ತಿಳಿಯುತ್ತದೆಯಲ್ಲದೇ ಮಗ ಪಲ್ಲವಮಲ್ಲ (ಪೋಳಲ್ಚೋರ)ನು ತೊಂಡೂರು-೧೨, ಕೋಲೂರು-೧೨, ಗಂಗವೂರು-೩೦ ಮೊದಲಾದ ಪ್ರದೇಶಗಳನ್ನು ಆಳುತ್ತಿದ್ದುದಾಗಿ ತಿಳಿದುಬರುತ್ತದೆ[೩೨೫]. ಈತನು ರಾಷ್ಟ್ರಕೂಟರ ಸಾಮಂತನಾಗಿದ್ದಾಗ್ಯೂ ಕೂಡ ಗಂಗರೊಡನೆ ಒಳ್ಳೆಯ ಸಂಭಂದವನ್ನುಹೊಂದ್ದಿನು. ಆಗ ಆಳುತ್ತಿದ್ದ ಗಂಗರದೊರೆ ರಾಜಮಲ್ಲನ ಮಗಳಾದ ಜಾಯಬ್ಬೆಯನ್ನು ತನ್ನ ಮಗ ಪೋಳಲ್ಚೋರನಿಗೆ ವಿವಾಹ ಮಾಡಿಸುತ್ತಾನೆ[೩೨೬].

ಒಂದನೆಯ ಪೋಳಲ್ಚೋರನು ಚಾರುಪೊನ್ನೇರನ ಮಗನಾಗಿದ್ದು, ಅವನ ನಂತರ ಆಳ್ವಿಕೆಗೆ ಬಂದನು. ಇವನು ಯುವರಾಜನಾಗಿದ್ದಾಗಲೇ ತಂದೆಯೊಡನೆ ಆಡಳಿತದಲ್ಲಿ ಭಾಗಿಯಾಗಿದ್ದನೆಂದು ತಿಳಿದುಬರುತ್ತದೆ[೧೦೭]. ಗಂಗ ರಾಜಮಲ್ಲ ಮತ್ತು ಆತನ ಮಗ ಒಂದನೆಯ ನೀತಿಮಾರ್ಗರ ಸಾಮಂತನಾಗಿದ್ದ ಈತ ಅವರ ಅನೇಕ ದಂಡಯಾತ್ರೆಗಳಲ್ಲಿ ಭಾಗವಹಿಸಿದ್ದನೆಂದು ತಿಳಿದುಬರುತ್ತದೆ. ಈ ಹೊತ್ತಿಗೆ ರಾಷ್ಟ್ರಕೂಟರ ಮೂರನೆಯ ಗೋವಿಂದರಸನು ಮರಣಿಸಿದ. ಆಗ ಅಮೋಘವರ್ಷನು ಪಟ್ಟಕ್ಕೆ ಬಂದನು. ಈ ಸಮಯದ ಸದುಪಯೋಗವನ್ನು ಪಡೆಯಲು ಗಂಗ ರಾಜಮಲ್ಲನು ಸ್ವತಂತ್ರನಾಗಲು ಹವಣಿಸಿ ರಾಜ್ಯವಿಸ್ತಾರವನ್ನು ಕೈಕೊಂಡು ಪಲ್ಲವರಿಂದ ಕೋಲಾರವನ್ನು ಕಸಿದುಕೊಂಡನು[೧೦೮]. ಆಗ ಅದರ ಆಡಳಿತಾಧಿಕಾರಿಯನ್ನಾಗಿ ಪೋಳಲ್ಚೋರನನ್ನು ನೇಮಿಸಿದ್ದನೆಂದು ತಿಳಿದುಬರುತ್ತದೆ. ಇದರಿಂದಾಗಿ ಬಾಣರೊಂದಿಗೆ ನೊಳಂಬರು ನಿರಂತರವಾಗಿ ವೈಷಮ್ಯ ಆರಂಭಿಸಬೇಕಾಯಿತು. ಕ್ರಿ.ಶ. ೮೫೩ ರ ಶಾಸನವೊಂದರಿಂದ ತಿಳಿಯುವಂತೆ ಗಂಗ ನೀತಿಮಾರ್ಗನು ಕಂಚಿಯವರೆಗೆ ತನ್ನ ಸಾಮ್ರಾಜ್ಯವನ್ನು ವಿಸ್ತರಿಸಿ ಆಳುತ್ತಿದ್ದುದಾಗಿಯೂ, ಅವರ ಸಾಮಂತನಾಗಿ ನೊಳಂಬ ಪೋಳಾಲ್ಚೋರನು ಆಳುತ್ತಿದ್ದು, ಅವರ ದಂಡಯಾತ್ರೆಗಳಲ್ಲಿ ಭಾಗವಹಿಸಿದ್ದನು[೧೦೯].

ಪೋಳಲ್ಚೋರನ ನಂತರ ಆತನ ಮಗನಾದ ಮಹೇಂದ್ರಾಧಿರಾಜ ನೊಳಂಬನು ಕ್ರಿ.ಶ.೮೭೦ರಲ್ಲಿ ಪಟ್ಟಕ್ಕೆ ಬಂದನು. ಈತನಿಗೆ ಮಯಿಂದಮ್ಮ[೧೧೦], ನೊಳಂಬಾದಿಯರಸ[೧೧೧], ಮಹೇಂದ್ರತ್ರಿಭುವನಾದಿರಾಜ[೧೧೨], ಮಯಿಂದಮನೊಳಂಬ[೧೧೩] ಮತ್ತು ಮಹಾಬಲಿವಂಶವಿಧ್ವಂಸ[೧೧೪] ಎಂಬ ಬಿರುದುಗಳಿದ್ದವೆಂದು ತಿಳಿದುಬರುತ್ತದೆ. ಈತನು ಮೊದಲಿಗೆ ಗಂಗರ ಸಾಮಂತನಾಗಿದ್ದು, ಗಂಗ-೬೦೦೦ನ್ನು ಆಳುತ್ತಿದ್ದುದಾಗಿಶಾಸನಗಳು ತಿಳಿಸುತ್ತವೆ[೧೧೫]. ಶಾಸನಗಳಿಂದ ತಿಳಿದುಬರುವಂತೆ ಈತನು ಕ್ರಿ.ಶ. ೮೭೦ರಿಂದ ೮೯೭ರವರೆಗೆ ಆಳ್ವಿಕೆ ಮಾಡಿದ್ದಾನೆ. ಕ್ರಿ.ಶ. ೮೭೮ ರ ಶಾಸನಗಳ ಪ್ರಕಾರ ಇವನು ಚೋಳ ಮೊದಲಾದ ದಾಯಿಗರನ್ನು ನಿರ್ಮೂಲನ ಮಾಡಿ ರಾಜ್ಯವಾಳಿದನಲ್ಲದೇ, ತೆಲುಗುಚೋಳರ ರೇನಾಡು-೭೦೦೦ ಪ್ರಾಂತ್ಯದ ನೈರುತ್ಯ ಭಾಗಗಳನ್ನು ಈತನು ಆಕ್ರಮಿಸಿ ತನ್ನ ರಾಜ್ಯವಿಸ್ತರಿಸಿದನೆಂದು ತಿಳಿಯುತ್ತದೆ[೧೧೬]. ಇವನ ಕಾಲದಲ್ಲಿ ವೈದುಂಬರು ಮತ್ತು ಬಲಿಬಾಣರು ನೊಳಂಬರ ಮೇಲೇರಿ ಬಂದು ಹೇಮಾವತಿಯನ್ನು ಮುತ್ತಲು ಪ್ರಯತ್ನಿಸಿದರು. ಆಗ ನೊಳಂಬರಿಗೂ ಅವರಿಗೂ ಸೋರೆಮಡಿ, ಮುದಿಮಡವು ಮತ್ತು ಮಂದಾವು ಎಂಬಲ್ಲಿ ಯುದ್ಧಗಳು ನಡೆದು ಅಲ್ಲಿ ಬಾಣರು ಹಿಮ್ಮೆಟ್ಟಿಸಿದರು[೧೧೭]. ಇದರಿಂದ ಹರ್ಷಗೊಂಡ ಮಹೇಂದ್ರನು ಬಾಣರನ್ನು ಬೆನ್ನಟ್ಟಿ ಚಿತ್ತೂರದವರೆಗೆ ಹೋಗಿ ಅದನ್ನು ವಶಪಡಿಸಿಕೊಂಡನೆಂದು ಕ್ರಿ.ಶ. ೮೬೭ರ ಧರ್ಮಪುರಿ ಸ್ಥಂಭಶಾಸನ ಉಲ್ಲೇಖಿಸಿದೆ[೧೧೮]. ಈತನ ಕಾಲದಲ್ಲಿ ನೊಳಂಬವಾಡಿಯು ವಿಸ್ತಾರವಾಗಿ ಪರಿವರ್ತಿತವಾಯಿತು. ಈತನ ಅಘಾದವಾದ ಏಳಿಗೆಯನ್ನು ಕಂಡ ಗಂಗರು ಇವನನ್ನು ಹತೋಟಿಯಲ್ಲಿಟ್ಟುಕೊಳ್ಳಲು ಇವನ ಮೇಲೆ ಧಾಳಿಯೆಸಗಿರಬಹುದೆನಿಸುತ್ತದೆ. ಕಾರಣ ಕ್ರಿ.ಶ. ೮೮೦ರಲ್ಲಿ ಗಂಗದೊರೆಯು ಇವನನ್ನು ಎದುರಿಸಿದನು. ಆದರೆ ಗಂಗರು ಇಲ್ಲಿ ಸೋಲನ್ನನುಭವಿಸಬೇಕಾಯ್ತು[೧೧೯]. ನಂತರ ಒಂದನೆಯ ಭೂತುಗನು ಮತ್ತೆ ಹಿರಿಯೂರು ಮತ್ತು ಸೂರೂರು ಎಂಬಲ್ಲಿ ನೊಳಂಬರನ್ನು ಎದುರಿಸಿದನು[೧೨೦]. ಇಲ್ಲಿ ಗಂಗ ಭೂತುಗನ ಮಗ ಎರೆಯಪ್ಪ ಅಥವಾ ಎರೆಗಂಗನು ಪರಾಕ್ರಮದಿಂದ

ಹೋರಾಡಿ ತಿಪ್ಪೇರು, ಸೂರೂರು ಮತ್ತು ಹೆಂಜೇರುಗಳನ್ನು ಹಿಡಿದುಕೊಂಡನಲ್ಲದೇ, ಎರೆಯಪ್ಪನು ಮಹೇಂದ್ರನನ್ನು ಕೊಂದು ಮಹೇಂದ್ರಾಂತಕ ಎಂಬ ಬಿರುದನ್ನು ಧರಿಸಿದನೆಂದು ಶಾಸನವೊಂದು ಹೇಳುತ್ತದೆ[೩೪೧]. ಹೇಮಾವತಿ ಶಾಸನದ ಪ್ರಕಾರ ಈತನಿಗೆ ಬಿಜ್ಜಮಹಾದೇವಿ, ಪರಮಮಹಾದೇವಿ, ಅಕ್ಕಬ್ಬೆ ಮತ್ತು ದೊಂಬಬ್ಬೆ ಎಂಬ ನಾಲ್ಕು ಜನ ರಾಣಿಯರಿದ್ದು ಅವರು ಇವನಿಗೆ ಆಡಳಿತದಲ್ಲಿ ಸಹಾಯ ನೀಡುತ್ತಿದ್ದುದಾಗಿ ತಿಳಿದುಬರುತ್ತದೆ[೩೪೨].

ನೊಳಂಬಾಧಿರಾಜ ಮಹೇಂದ್ರನ ನಂತರ ಅವನ ಮಗನಾದ ಅಯ್ಯಪ್ಪದೇವನು ಆಳ್ವಿಕೆಗೆ ಬಂದನು. ಈತನ ಪ್ರಥಮ ಶಾಸನ ನಮಗೆ ಕ್ರಿ.ಶ. ೮೯೭ರಲ್ಲಿ ದೊರೆಯುತ್ತದೆ. ಆದರೆ ಈತನು ತಂದೆಯ ಮರಣದ ನಂತರ ಕ್ರಿ.ಶ. ೮೯೫ರಲ್ಲಿ ಆಳ್ವಿಕೆಗೆ ಬಂದಿರಬೇಕು[೩೪೩]. ಇವನನ್ನು ಶಾಸನಗಳು ನನ್ನಿಗ[೩೪೪], ನನ್ನಿಗಾಶ್ರಯ[೩೪೫] ಮತ್ತು ನೊಳಂಬಾಧಿರಾಜ ನೊಲ್ಲಿಪ್ಪಯ್ಯ[೩೪೬] ಎಂದು ಕರೆದಿವೆ. ಈತನ ಕಾಲಕ್ಕಾಗಲೇ ನೊಳಂಬರ ಅನೇಕ ಪ್ರದೇಶಗಳು ಗಂಗರ ವಶವಾಗಿದ್ದವು. ಅವುಗಳನ್ನು ಬಿಡಿಸಿಕೊಳ್ಳಲು ಈತನು ಕಲಿಕಟ್ಟೆ (ಈಗಿನ ಕಣಕಟ್ಟೆ) ಯಲ್ಲಿ ಸೈನ್ಯಸಮೇತ ತಂಗಿದ್ದು ಗಂಗರ ಅಧಿರಾಜನಾದ ಮಾದಿವರ್ಮನನ್ನು ಕೊಂದುಹಾಕಿದನೆಂದು ತಿಳಿದುಬರುತ್ತದೆ. ಈ ಯುದ್ಧದ ನಂತರ ಮತ್ತೆ ಈತನು ಗಂಗರ ಸಾಮಂತನಾಗಿ ನೊಳಂಬವಾಡಿ-೩೨೦೦೦ನ್ನು ಈತನು ಆಳ್ವಿಕೆಮಾಡಿದನೆಂದು ತಿಳಿದುಬರುತ್ತದೆ. ಬಳ್ಳಾರಿ ಜಿಲ್ಲೆಯ ಶಿರಸ್ಥಹಳ್ಳಿಯ ಶಾಸನದ ಪ್ರಕಾರ ಮಸೆಯವಾಡಿ-೧೪೦, ಕೋಗಳಿನಾಡು-೫೦೦ ಪ್ರಾಂತ್ಯಗಳನ್ನು ರಾಷ್ಟ್ರಕೂಟ ಗೋವಿಂದನ ಕೈಕೆಳಗೆ ಈತ ಆಳುತ್ತಿದ್ದನೆಂದು ತಿಳಿದುಬರುತ್ತದೆ[೩೪೭]. ಪೂರ್ವ ಚಾಲುಕ್ಯ ಎರಡನೆಯ ಭೀಮನು ನೊಳಂಬರಾಜ್ಯದ ಮೇಲೆ ದಂಡೆತ್ತಿ ಬಂದನು. ಆಗ ಈ ಅಯ್ಯಪ್ಪದೇವನನ್ನು ಆತನು ಕೊಂದನೆಂದು ತಿಳಿದುಬರುತ್ತದೆ[೩೪೮].

ಅಣ್ಣಿಗನು ತಂದೆ ಅಯ್ಯಪ್ಪದೇವನ ನಂತರ ಆಳ್ವಿಕೆಗೆ ಬಂದನು. ಇವನು ಬೀರನೊಳಂಬ[೩೪೯] ಮತ್ತು ಅಣ್ಣೆಯನೆಂದು[೩೫೦] ಶಾಸನಗಳಲ್ಲಿ ಉಲ್ಲೇಖಿಸಲ್ಪಟ್ಟಿದ್ದಾನೆ. ಕ್ರಿ.ಶ. ೯೨೨ರಲ್ಲಿ ನೊಳಂಬ ಅಣ್ಣಿಗನು ರಾಷ್ಟ್ರಕೂಟ ಮೂರನೆಯ ಇಂದ್ರನ ಆಳ್ವಿಕೆಯಲ್ಲಿ ಪಡುಗಲ್ಲು ಎಂಬಲ್ಲಿ ಕದಂಬರಾಜನೊಬ್ಬನೊಡನೆ ಹೋರಾಡಿದ ವಿವರಗಳಿವೆ. ಮಲಯ ಮತ್ತು ಕದಂಬ ವಂಶದ ನಾಕಲೊಕ್ಕರನ್ನು ಈ ಯುದ್ಧದಲ್ಲಿ ಈತನು ಕೊಂದನೆಂದು ತಿಳಿಯುತ್ತದೆ[೩೫೧]. ಅಣ್ಣಿಗನು ನನ್ನಿಯಗಂಗನೊಡನೆ ಸೇರಿ ಶಾಂತಾರರ ಮೇಲೆ ಧಾಳಿಮಾಡಿದ ವಿಷಯ ಕ್ರಿ.ಶ. ೯೨೦ರ ಶಾಸನವೊಂದರಲ್ಲಿ ಬರುತ್ತದೆ[೩೫೨]. ಅಲ್ಲದೇ ಗಂಗರಾಜನಿಗೆ ತುರುಗೋಳ್ ಕಾಳಗವೊಂದರಲ್ಲಿ ಕೂಡ ಅಣ್ಣಿಗನು ಸಹಾಯ ನೀಡಿದ್ದನೆಂದು ತಿಳಿದುಬರುತ್ತದೆ[೩೫೩]. ಕ್ರಿ.ಶ. ೯೩೦ರಲ್ಲಿ ನೊಳಂಬ ಅಣ್ಣಿಗನು ಮತ್ತೊಮ್ಮೆ ಶಾಂತಾರ ದೊರೆ ಮತ್ತು ಬಟ್ಟಮರಸರ ಮೇಲೆ ಧಾಳಿಯಿಟ್ಟನು. ಈ ಧಾಳಿಯ ವೇಳೆಯಲ್ಲಿ ಅಣ್ಣಿಗನ ಸೇನಾಧಿಕಾರಿಯೊಬ್ಬನು ಶಾಂತಾರದೊರೆಯನ್ನು ಕೊಂದನೆಂದು ತಿಳಿಯುತ್ತದೆ[೩೫೪]. ಕೂಡಲೂರು ಶಾಸನದ ಪ್ರಕಾರ ಗಂಗರ ಮೊದಲನೆ ರಾಜಮಲ್ಲನು ಅಣ್ಣಿಗನ ಮೇಲೆ ಧಾಳಿಯಿಟ್ಟು ಕೊತ್ತಮಂಗಲದಲ್ಲಿ ನಡೆದ ಕಾಳಗದಲ್ಲಿ ಅಣ್ಣಿಗನನ್ನು ಸೋಲಿಸಿ ಕ್ಷಮಿಸಿದನೆಂದು ತಿಳಿಯುತ್ತದೆ[೩೫೫]. ಇಲ್ಲಿಂದ ಈತನು ಗಂಗರ ಸಾಮಂತನಾದನು. ಮುಂದೆ ಗಂಗ ಮೂರನೆಯ ರಾಜಮಲ್ಲನ ಮೇಲೆ ರಾಷ್ಟ್ರಕೂಟ ಮೂರನೆಯ

ಕೃಷ್ಣನು ಧಾಳಿಯಿಟ್ಟು ಅವನನ್ನು ಕೊಂದನು. ಈ ಯುದ್ಧದಲ್ಲಿ ಅಣ್ಣಿಗ ನೊಳಂಬನೂ ಗಂಗರ ಪರವಾಗಿ ಭಾಗವಹಿಸಿದ್ದರಿಂದ ಅಪಾರ ಕಷ್ಟ-ನಷ್ಟಗಳನ್ನನುಭವಿಸಿದನೆಂದು ತಿಳಿದುಬರುತ್ತದೆ[೩೫೬]. ತುಮಕೂರು ತಾಲೂಕಿನ ಕಿರಿಗುಂಡಗಲ್ ವೀರಗಲ್ಲೊಂದು ಶ್ರೀ ಅಣ್ಣಿಗ ಎಂಬ ಉಲ್ಲೇಖ ನೀಡುತ್ತಿದ್ದು, ರಾಷ್ಟ್ರಕೂಟ ಮೂರನೆಯ ಕೃಷ್ಣನ ಧಾಳಿಗಳಲ್ಲಿ ಈತನು ಮರಣಹೊಂದಿರಬಹುದೆಂದು ಊಹಿಸಬಹುದು[೩೫೭]. ಈತನಿಗೆ ಇರುಳನೆಂಬ ಮಗನಿದ್ದನು. ಈತನು ತಂದೆಯ ಆಳ್ವಿಕೆಯ ಕಾಲದಲ್ಲಿ ಆಡಳಿತವನ್ನು ನಿರ್ವಹಿಸುತ್ತಿದ್ದನೆಂದು ತಿಳಿಯುತ್ತದೆ[೩೫೮]. ಅಣ್ಣಿಗನು ಚಾಲುಕ್ಯ ರಾಜಕುಮಾರಿ ಅತ್ತಿಯಬ್ಬರಸಿಯನ್ನು ಮದುವೆಯಾಗಿದ್ದನೆಂದು ತಿಳಿದುಬರುತ್ತದೆ.

ಅಣ್ಣಿಗನ ನಂತರ ಅವನ ಮಗ ಇರುಳನು ಪಟ್ಟಕ್ಕೆ ಬರದೇ ಅವನ ತಮ್ಮ ದಿಲಿಪರಸನು ಪಟ್ಟಕ್ಕೆ ಬಂದದ್ದನ್ನು ಹೇಮಾವತಿಯ ಕ್ರಿ.ಶ. ೯೪೨ರ ಶಾಸನದಲ್ಲಿ ಉಲ್ಲಖಿಸಲಾಗಿದೆ[೩೫೯]. ದಿಲಿಪರಸನನ್ನು ಶಾಸನಗಳು ತ್ರಿಭುವನಧೀರ್[೩೬೦], ಪಲ್ಲವಮುರಾರಿ[೩೬೧], ಪಲ್ಲವರಾಮ್[೩೬೨], ದಿಲಿಪಯ್ಯ[೩೬೩], ಇರಿವನೊಳಂಬ್[೩೬೪], ನೊಳಂಬಾಧಿರಾಜ್[೩೬೫], ಇರಿವನೊಳಂಬ ನೊಲಿಪಯ್ಯ[೩೬೬] ಮತ್ತು ಏಕವಾಕ್ಯ[೩೬೭] ಎಂದು ಕರೆದಿವೆ. ಶಕ ೮೭೦ (ಕ್ರಿ.ಶ.೯೪೮)ರ ಶಾಸನವೊಂದರ ಪ್ರಕಾರ ದಿಲಿಪರಸನು ರಾಷ್ಟ್ರಕೂಟ ಮೂರನೆಯ ಕೃಷ್ಣನ ದಂಡಯಾತ್ರೆಯಲ್ಲಿ ಭಾಗವಹಿಸಿದ ವಿಷಯ ತಿಳಿದುಬರುತ್ತದೆ. ರಾಷ್ಟ್ರಕೂಟರ ಸೈನ್ಯ ಗಜಾಂಕುಶ ಚೋಳನ ಮೇಲೆ ಧಾಳಿಯಿಟ್ಟಾಗ ಅದರ ನೇತೃತ್ವವನ್ನು ಕಿರಿಯ ಪೊನ್ನೆಯ ಮತ್ತು ದಿಲಿಪರಸರು ವಹಿಸಿದ್ದರೆಂದೂ, ಇಬಿಲಿಯ ಬಳಿ ನಡೆದ ಯುದ್ಧದಲ್ಲಿ ಪೊನ್ನೆಯನು ವೀರಮರಣವನ್ನಪ್ಪಿದನೆಂದು ಶಾಸನ ಹೇಳಿದೆ[೩೬೮]. ಕ್ರಿ.ಶ. ೯೪೯ರಲ್ಲಿ ತಕ್ಕೋಳಂ ವಿಜಯದ ನಂತರ ಕೃಷ್ಣನು ಗೆದ್ದ ಪ್ರದೇಶಗಳಿಗೆ ಸಾಮಂತರನ್ನಾಗಿ ನೊಳಂಬರು, ವೈದುಂಬರು ಮತ್ತು ಬಾಣರನ್ನು ನೇಮಿಸಿದನೆಂದು ಅದರಲ್ಲಿ ದಿಲಿಪರಸನು ಪ್ರಮುಖನಾಗಿದ್ದನೆಂದು ತಿಳಿಯುತ್ತದೆ. ಅಲ್ಲದೇ ಕ್ರಿ.ಶ. ೯೫೦ರಲ್ಲಿ ವೈದುಂಬರ ವಿಕ್ರಮಾದಿತ್ಯ ತಿರುವಯ್ಯನ್‌ನು ದಿಲಿಪನ ಕೈಕೆಳಗೆ ಅಧಿಕಾರಿಯಾಗಿದ್ದನೆಂದು ತಿಳಿದುಬರುತ್ತದೆ[೩೬೯]. ಕ್ರಿ.ಶ. ೯೬೧ರಲ್ಲಿ ಬಾಣರ ಸಂಬಯ್ಯನೆಂಬುವನು ದಿಲಿಪರಸನ ಆಧೀನನಾಗಿ ಆಳುತ್ತಿದ್ದ ಉಲ್ಲೇಖವಿದೆ[೩೭೦]. ಅಲ್ಲದೇ ಈತನಿಗೆ ಆಡಳಿತದಲ್ಲಿ ಇವನ ಮಗ ನನ್ನಿ ನೊಳಂಬ ಮತ್ತು ಮೊಮ್ಮಗ ಎರಡನೆಯ ಪೋಳಲ್ಚೋರರು ಸಹಾಯ ನೀಡುತ್ತಿದ್ದರು[೩೭೧]. ಅಜ್ಜನ ಕಾಲದಲ್ಲಿ ಈ ಎರಡನೆಯ ಪೋಳಲ್ಚೋರನು ಕಾಂಚಿಯ ದೊರೆಯಾಗಿದ್ದನೆಂದು ಶಾಸನ ಹೇಳಿವೆ[೩೭೨]. ಮೂರನೆಯ ಕೃಷ್ಣನ ನಂತರ ರಾಷ್ಟ್ರಕೂಟರ ಶಕ್ತಿಯು ಕ್ಷೀಣಿಸಿತು. ಆಗ ಗಂಗ ಎರಡನೆಯ ಮಾರಸಿಂಹನು ಸಾಮ್ರಾಜ್ಯದ ಮೇರೆ ವಿಸ್ತರಿಸಲು ಹಂಚಿಕೆ ಹಾಕಿದನು. ಅವನು ನೊಳಂಬವಾಡಿಯ ಮೇಲೆ ಧಾಳಿಯಿಟ್ಟು, ನೊಳಂಬರಾಜ ದಿಲಿಪರಸನನ್ನು ಕೊಂದು ನೊಳಂಬವಾಡಿಯನ್ನು ಹಿಡಿದು ನೊಳಂಬಕುಲಾಂತಕ ಎಂಬ ಬಿರುದನ್ನು ಧರಿಸಿದನೆಂದು ತಿಳಿದುಬರುತ್ತದೆ[೩೭೩].

ದಿಲಿಪರಸನ ನಂತರ ಅವನ ಮಗ ನನ್ನಿ ನೊಳಂಬನು ಆಳ್ವಿಕೆಗೆ ಬಂದನು. ಈತನಿಗೆ ಥಲದಂಕಕಾರ್[೩೭೪] ಮತ್ತು ತ್ರಿನೇತ್ರ[೩೭೫] ಎಂಬ ಬಿರುದುಗಳಿದ್ದವು. ಶಾಸನಗಳಲ್ಲಿ ಈತನು ತಂದೆಯೊಡನೆ ಆತನ ಎಲ್ಲ ಯುದ್ಧಗಳಲ್ಲಿ

ಭಾಗವಹಿಸುತ್ತಿದ್ದನೆಂದು ಉಲ್ಲೇಖಿಸಲಾಗಿದೆ. ಈತನಿಗೆ ಎರಡನೆಯ ಪೊಳಲ್ಚೋರ ಎಂಬ ಮಗನಿದ್ದುದಾಗಿ, ಅವನೂ ಕೂಡ ತಂದೆ ಮತ್ತು ಅಜ್ಜನ ಕಾಲದಲ್ಲಿ ಆಡಳಿತದಲ್ಲಿ ಭಾಗವಹಿಸುತ್ತಿದ್ದ ವಿಚಾರ ತಿಳಿದುಬರುತ್ತದೆ[೭೬].

ನನ್ನಿ ನೊಳಂಬನ ನಂತರ ಪೊಳಾಲ್ಚೋರನು ಆಳ್ವಿಕೆಗೆ ಬಂದನು. ಈಗಾಗಲೇ ತಿಳಿದಂತೆ ಈತನು ತಂದೆಯ ಕಾಲದಲ್ಲಿ ಕೋಲಾರದಿಂದ ಆಳ್ವಿಕೆ ನಡೆಸುತ್ತಿದ್ದ ವಿಷಯ ತಿಳಿದುಬರುತ್ತದೆ[೭೭]. ಈತನು ಪರಾಕ್ರಮಿಯಾಗಿದ್ದು ಅನೇಕ ಯುದ್ಧಗಳಲ್ಲಿ ಅಜ್ಜ ಮತ್ತು ತಂದೆಯರೊಡನೆ ಭಾಗವಹಿಸಿದ್ದನೆಂದು ತಿಳಿಯುತ್ತದೆ. ಈತನು ಕೆಲಕಾಲ ಮಾತ್ರ ಆಳ್ವಿಕೆ ಮಾಡಿರಬಹುದು. ಕಾರಣ ಈತನ ಶಾಸನಗಳು ನಮಗೆ ದೊರೆಯುವದಿಲ್ಲ. ಅಲ್ಲದೇ ಈತನು ಅಜ್ಜನ ಕಾಲದಲ್ಲಿ ಚೋಳರೊಂದಿಗೆ ಹೋರಾಟಮಾಡಿ ಗೆದ್ದನೆಂಬ ವಿಷಯ ತಿಳಿದುಬರುತ್ತದೆ. ಮತ್ತು ಈತನಿಗೆ ಕಾಂಚಿಪುರವರಾಧೀಶ್ವರ ಎಂಬ ಬಿರುದಿತ್ತು. ಇವನಿಗೆ ವುಂದಯ್ಯ ಎಂಬ ಮಂತ್ರಿಯಿದ್ದುದಾಗಿಯೂ ತಿಳಿದುಬರುತ್ತದೆ[೭೮]. ಈತನಿಗೆ ದಿವಲಬ್ಬರಸಿ ಎಂಬ ಕದಂಬ ಮನೆತನದ ರಾಣಿಯಿದ್ದಳೆಂದು ಅವನಿಯ ಶಾಸನವು ತಿಳಿಸುತ್ತದೆ. ಅದೇ ಶಾಸನ ಮುಂದುವರಿದು ಈತನು ಅಕಾಲ ಮರಣಕ್ಕೀಡಾದನೆಂದು ತಿಳಿಸುತ್ತದೆ[೭೯].

ಎರಡನೆಯ ಮಹೇಂದ್ರನು ಕ್ರಿ.ಶ. ೯೭೭ ರಲ್ಲಿ ಎರಡನೆಯ ಪೊಳಾಲ್ಚೋರನ ನಂತರ ಆಳ್ವಿಕೆಗೆ ಬಂದನಲ್ಲದೇ, ಈತ ಬರಗೂರು ನೆಲೆವೀಡಿನಿಂದ ಆಳುತ್ತಿದ್ದ ವಿಷಯ ಕೂಡ ತಿಳಿಯುತ್ತದೆ[೮೦]. ರಾಷ್ಟ್ರಕೂಟರ ಆಧಿಪತ್ಯ ಕೊನೆಗೊಂಡು ಚಾಲುಕ್ಯರ ಸಾಮ್ರಾಜ್ಯ ಸ್ಥಾಪನೆಯಾದಾಗ ಈ ನೊಳಂಬರೂ ಕೂಡ ಚಾಲುಕ್ಯರ ಸಾಮಂತರಾಗಿ ಮುಂದುವರೆದ್ದು ತಿಳಿದುಬರುತ್ತದೆ[೮೧]. ಈತನು ಚೋಳರೊಡನೆ ಯುದ್ಧ ಕೈಕೊಂಡ ವಿವರಗಳೂ ಕೂಡ ದೊರೆಯುತ್ತವೆ[೮೨]. ಈತ ಕ್ರಿ.ಶ. ೯೮೧ರ ವೇಳೆಗೆ ಮರಣಸಿರಬೇಕು. ಇವನ ಮರಣದ ನಂತರ ಇವನ ತಾಯಿ ಅನೇಕ ದಾನ, ಧರ್ಮ ನೀಡಿದ ವಿವರ ಅವನಿ ಶಾಸನದಲ್ಲಿ ಬರುತ್ತದೆ[೮೩].

ಇರಿವ ನೊಳಂಬ ಘಟೆಯಂಕಕಾರನು ಎರಡನೆಯ ಪೊಳಲ್ಚೋರನ ಮಗ ಹಾಗೂ ಎರಡನೆಯ ಮಹೇಂದ್ರನ ತಮ್ಮನಾಗಿದ್ದಾನೆ. ಅಣ್ಣನ ಮರಣದ ವೇಳೆಯಲ್ಲಿ ಈತ ಅಪ್ರಾಪ್ತವಯಸ್ತನಾದ್ದರಿಂದ ಈತನ ತಾಯಿ ದೀವಾಂಬಿಕೆಯು ರಾಜ್ಯವಾಳುತ್ತಿದ್ದಳೆಂದು ಅವನಿ ಶಾಸನ ಹೇಳಿದೆ[೮೪]. ಈ ವೇಳೆಯಲ್ಲಿ ಚಾಲುಕ್ಯರಿಗೂ ಮತ್ತು ಚೋಳರಿಗೂ ಕಾಳಗಗಳು ನಡೆಯುತ್ತಿದ್ದವು. ಆಗ ಒಂದನೆಯ ರಾಜರಾಜನು ಚಾಲುಕ್ಯ ತೈಲನ ಮೇಲೆರಗಿ ಬಂದಾಗ ತೈಲನು ಅವನನ್ನು ಮೊದಲಿಗೆ ಸೋಲಿಸಿದನು[೮೫]. ನಂತರ ಮತ್ತೆ ಚೋಳ ರಾಜರಾಜನು ಚಾಲುಕ್ಯರ ಮೇಲೆ ಧಾಳಿಯಿಟ್ಟು, ಅವರನ್ನು ಸೋಲಿಸಿದನು. ಈ ಯುದ್ಧದಲ್ಲಿ ಅವರ ಸಾಮಂತರಾಗಿದ್ದ ನೊಳಂಬರನ್ನೂ ಕೂಡ ಸೋಲಿಸಿದನೆಂದು ತಿಳಿದುಬರುತ್ತದೆ[೮೬]. ಈ ಯುದ್ಧದ ನಂತರ ನೊಳಂಬವಾಡಿಯು ಎರಡು ಭಾಗವಾಯಿತೆಂದೂ, ಅದರಲ್ಲಿ ಒಂದುಭಾಗ ಚೋಳರ ವಶದಲ್ಲಿದ್ದರೆ, ಇನ್ನೊಂದು ಭಾಗವು ಚಾಲುಕ್ಯರ ಸಾಮಂತರಾದ ನೊಳಂಬರ ವಶದಲ್ಲಿದ್ದುದಾಗಿ ತಿಳಿದುಬರುತ್ತದೆ. ಆಲೂರಿನ ಶಾಸನವೊಂದರ ಪ್ರಕಾರ ನೊಳಂಬರ ಇರಿವ ನೊಳಂಬಾಧಿರಾಜ ಘಟೆಯಂಕಕಾರನು ಚಾಲುಕ್ಯ ಐದನೆಯ ವಿಕ್ರಮಾದಿತ್ಯನ

ಸಾಮಂತನಾಗಿ ನೊಳಂಬವಾಡಿ-೩೨,೦೦೦, ಕಣಗಿಲಿ-೫೦೦, ಬಲ್ಲಕುಂದೆ-೩೦೦, ಕುಕ್ಕನೂರು-೩೦ ಮತ್ತು ಮಾಸೆಯವಾಡಿನಾಡಿನ ಕೆಲ ಪ್ರದೇಶಗಳನ್ನಾಳುತ್ತಿದ್ದುದಾಗಿ ತಿಳಿದುಬರುತ್ತದೆ. ಮತ್ತು ಈತನು ಚಾಲುಕ್ಯ ಇರಿವೆಬೆಡಂಗ ಸತ್ಯಾಶ್ರಯನ ಮಗಳು ಮತ್ತು ಐದನೆಯ ವಿಕ್ರಮಾದಿತ್ಯನ ಸಹೋದರಿಯನ್ನು ಮದುವೆಯಾಗಿದ್ದನೆಂದು ತಿಳಿದಬರುತ್ತದೆ[೩೭]. ಈತನು ಪಲ್ಲವಾನ್ವಯ, ಶ್ರೀಪೃಥ್ವೀವಲ್ಲಭಂ, ಪಲ್ಲವಕುಲತಿಲಕನೇಕವಾಕ್ಯಂ, ಕಾಂಚೀಪುರವರೇಶ್ವರಂ, ಮಂಡಳೀಕತ್ರಿನೇತ್ರಂ ಎಂದು ಶಾಸನದಲ್ಲಿ ಉಲ್ಲೇಖಿಸಲ್ಪಟ್ಟಿದ್ದಾನೆ.

ಉದಯಾದಿತ್ಯನು ತನ್ನ ತಂದೆ ಘಟಿಯಂಕಕಾರನ ನಂತರ ಆಳ್ವಿಕೆಗೆ ಬಂದನು. ಈತನು ತಂದೆಯ ಜೊತೆ ಕ್ರಿ.ಶ. ೧೦೧೮ರಲ್ಲಿ ಆಳ್ವಿಕೆಮಾಡುತ್ತಿದ್ದುದಾಗಿ ತಿಳಿದುಬರುತ್ತದೆ[೩೮]. ಈತನನ್ನು ಶಾಸನವು ಜಗದೇಕಮಲ್ಲ ನೊಳಂಬ ಪಲ್ಲವ ಪೆರ್ಮಾಡಿ ಎಂದು ಕರೆದಿದೆ. ಇವನು ಚಾಲುಕ್ಯ ಜಗದೇಕಮಲ್ಲ ಎರಡನೆಯ ಜಯಸಿಂಹನ ಸಾಮಂತನಾಗಿ ಕ್ರಿ.ಶ. ೧೦೧೮ರಲ್ಲಿ ಗಂಗವಾಡಿ-೯೬೦೦೦, ಕದಂಬಳಿಗೆ-೧೦೦೦, ಕೋಗಳಿ-೫೦೦, ಮಾಸಿಯವಾಡಿ-೧೪೦ರ ಕೆಲ ಪ್ರದೇಶಗಳು, ಬಲ್ಲಕುಂದೆ-೩೦೦ ಮತ್ತು ಎಡದೊರೆ-೨೦೦೦ದೊಳಗಣ ಕುಡಿಹಾರ-೭೦ ಗಳನ್ನು ಆಳುತ್ತಿದ್ದುದಾಗಿ ತಿಳಿದುಬರುತ್ತದೆ[೩೯]. ಕ್ರಿ.ಶ. ೧೦೩೨ ರಲ್ಲಿ ಈತನು ನೊಳಂಬವಾಡಿ-೩೨೦೦೦, ಕೋಗಳಿ-೫೦೦, ಬಲ್ಲಕುಂದೆ-೩೦೦, ಹರಗೆ-೭೦ ಮತ್ತು ಕರಿವಿಡಿ-೩೦ ಗಳನ್ನಾಳುತ್ತಿದ್ದುದಾಗಿ ತಿಳಿದುಬರುತ್ತದೆ[೪೦]. ಅಂದರೆ ಈ ವೇಳೆಗಾಗಲೇ ಗಂಗವಾಡಿ ಮತ್ತು ಕದಂಬಳಿಗೆಗಳು ಈತನ ಕೈಬಿಟ್ಟುಹೋಗಿ, ನೊಳಂಬವಾಡಿ ಈತನ ಆಳ್ವಿಕೆಗೆ ಸೇರಿತ್ತೆಂದು ತಿಳಿಯುವುದು. ಈತನ ಕಾಲದ ಮಹತ್ವದ ಘಟನೆಯೆಂದರೆ ನೊಳಂಬರು ತಮ್ಮ ರಾಜಧಾನಿಯನ್ನು ಕಂಪ್ಲಿಗೆ ಬದಲಾಯಿಸಿದ್ದು[೪೧].

ಉದಯಾದಿತ್ಯದೇವನ ನಂತರ ಆತನ ಮಗ ಜಗದೇಕಮಲ್ಲ ಇರ್ಮಡಿ ನೊಳಂಬಪಲ್ಲವನು ಆಳ್ವಿಕೆಗೆ ಬಂದನು. ತಂದೆಯ ಕಾಲದಲ್ಲಿ ಈತನು ಅಧಿಕಾರಿಯಾಗಿ ಆಳುತ್ತಿದ್ದುದಾಗಿ ತಿಳಿಸುತ್ತವೆ. ಉದಯಾದಿತ್ಯದೇವನು ಚಾಲುಕ್ಯ ಎರಡನೆಯ ಜಯಸಿಂಹನ ಸಾಮಂತನಾಗಿ ಆಳ್ವಿಕೆ ಮಾಡುತ್ತಿದ್ದಾಗ, ಅವನ ಮಗನಾದ ಜಗದೇಕಮಲ್ಲ ಇಮ್ಮಡಿ ನೊಳಂಬಪಲ್ಲವನು ಮಾಸೆಯವಾಡಿ-೧೪೦ ರ ಆಡಳಿತಾಧಿಕಾರಿಯಾಗಿ ಆಳುತ್ತಿದ್ದುದಾಗಿ ತಿಳಿಯುತ್ತದೆ[೪೨]. ತಂದೆಯ ಮರಣದ ನಂತರ ಈತನು ಮಾಸೆಯವಾಡಿ-೧೪೦, ಕೋಗಳಿ-೫೦೦ ಮತ್ತು ಕದಂಬಳಿಗೆ-೧೦೦೦ಗಳನ್ನು ಆಳುತ್ತಿದ್ದುದಾಗಿ ತಿಳಿದುಬರುತ್ತದೆ[೪೩]. ಜಗದೇಕಮಲ್ಲ ಇಮ್ಮಡಿ ನೊಳಂಬನ ಮಂತ್ರಿ ಬ್ರಹ್ಮಾಧಿರಾಜನೆಂಬುವವನು ಅತ್ಯಂತ ಪರಾಕ್ರಮಿಯಾಗಿದ್ದು, ಪಲ್ಲವಾಭರಣ ಎಂಬ ಬಿರುದನ್ನು ಹೊಂದಿ ಕೆಲ ಪ್ರದೇಶಗಳನ್ನು ಈತನಿಗೆ ಅಧೀನನಾಗಿ ಆಳುತ್ತಿದ್ದುದಾಗಿ ತಿಳಿದುಬರುತ್ತದೆ[೪೪].

ಉದಯಾದಿತ್ಯನ ಕಿರಿಯಮಗನಾದ ನನ್ನಿನೊಳಂಬನು ಅಣ್ಣ ಇರ್ಮಡಿ ನೊಳಂಬನ ನಂತರ ಪಟ್ಟಕ್ಕೆ ಬಂದನು[೪೫]. ಈತನು ಕ್ರಿ.ಶ. ೧೦೪೪ರಲ್ಲಿ ಪಟ್ಟಾಭಿಷಕ್ತನಾದನೆಂದು ಶಾಸನವೊಂದು ಉಲ್ಲೇಖಿಸಿದೆ[೪೬]. ಈತನು ಚಾಲುಕ್ಯ ತ್ರೈಲೋಕ್ಯಮಲ್ಲ ಸೋಮೇಶ್ವರನ ಸಾಮಂತನಾಗಿ ಆಳ್ವಿಕೆ ನಡೆಸಿದನು. ಅದಕ್ಕಾಗಿ ಈತನು ತ್ರೈಲೋಕ್ಯಮಲ್ಲ

ನನ್ನಿನೊಳಂಬನೆಂದು ಕರೆಯಲ್ಪಟ್ಟಿದ್ದಾನೆ. ಇವನು ನೊಳಂಬವಾಡಿ-೩೨,೦೦೦, ಬಲ್ಲಕುಂದೆ-೩೦೦, ಕೋಗಳಿ-೫೦೦, ಕದಂಬಳಿಗೆ-೧೦೦೦, ಕುಡಿಯಹರವಿ-೭೦, ಕರಿವಿಡಿ-೭೦ ಮತ್ತು ಪಂಚಗ್ರಾಮಗಳನ್ನು ಆಳುತ್ತಿದ್ದುದಾಗಿ ಕ್ರಿ.ಶ. ೧೦೪೫ರ ಶಾಸಗಳು ಉಲ್ಲೇಖಿಸಿವೆ[೯೭]. ಇದೇ ವೇಳೆಗೆ ಚಾಲುಕ್ಯ ಒಂದನೆಯ ಸೋಮೇಶ್ವರನು ಚೋಳರೊಂದಿಗೆ ಕಾದಾಟದಲ್ಲಿ ಒಂದನೆಯ ರಾಜಾಧಿರಾಜ ಚೋಳನಿಗೆ ಸೋತನು. ಈ ಯುದ್ಧದಲ್ಲಿ ಅವನ ಸಾಮಂತರೂ ಕೂಡ ಭಾಗವಹಿಸಿದ್ದು ಅವರು ಅನೇಕ ರೀತಿಯ ಕಷ್ಟನಷ್ಟಗಳನ್ನನುಭವಿಸಿದರೆಂದು ತಿಳಿದುಬರುತ್ತದೆ[೯೮]. ಅದರಲ್ಲಿ ನನ್ನಿನೊಳಂಬನೂ ಕೂಡ ಒಬ್ಬನಾಗಿದ್ದನೆಂದು ಮತ್ತು ಒಂದನೆಯ ರಾಜಾಧಿರಾಜ ಚೋಳನಿಂದ ಅವನ ರಾಜಧಾನಿ ಕಂಪ್ಲಿಯು ನಾಶವಾಯಿತೆಂದು ತಿಳಿದುಬರುತ್ತದೆ[೯೯]. ಮುಂದುವರಿದ ಚೋಳ ಚಾಲುಕ್ಯ ಯುದ್ಧವು ಕ್ರಿ.ಶ. ೧೦೫೨ರಲ್ಲಿ ಕೊಪ್ಪಂ ಎಂಬಲ್ಲಿ ಮತ್ತೆ ಘಟಿಸಿತು. ಇಲ್ಲಿ ಚಾಲುಕ್ಯರಿಂದ ಒಂದನೆಯ ರಾಜಾಧಿರಾಜನು ಸೋತು ಕೊಲ್ಲಲ್ಪಟ್ಟನು. ಆದರೆ ಆ ಯುದ್ಧವನ್ನು ಆತನ ಸಹೋದರ ಎರಡನೆಯ ರಾಜೇಂದ್ರದೇವನು ಮುಂದುವರೆಯಿಸಿ, ಚಾಲುಕ್ಯರನ್ನು ಮತ್ತು ಅವರ ಸಾಮಂತರುಗಳನ್ನು ಸೋಲಿಸುವಲ್ಲಿ ಜಯಶಾಲಿಯಾದನು[೧೦೦]. ಆಗ ಈ ಯುದ್ಧದಲ್ಲಿ ಚಾಲುಕ್ಯರ ಅನೇಕ ಸಾಮಂತರುಗಳು ಕೊಲ್ಲಲ್ಪಟ್ಟರು. ಆ ವೇಳೆಯಲ್ಲಿ ನನ್ನಿನೊಳಂಬನೂ ಕೂಡ ಮರಣಿಸಿರಬಹುದೆಂದು ತಿಳಿಯಲಾಗಿದೆ.

ನನ್ನಿ ನೊಳಂಬನ ನಂತರ ಇರಿವ ನೊಳಂಬ ಪಲ್ಲವ ಪೆರ್ಮಾನಡಿ ನರಸಿಂಗದೇವನೆಂಬುವನು ಆಳ್ವಿಕೆಗೆ ಬರುತ್ತಾನೆ[೧೦೧]. ಈತನಿಗೆ ಘಟ್ಟಿದೇವ ಎಂಬ ಇನ್ನೊಂದು ಹೆಸರಿದ್ದುದಾಗಿ ಶಾಸನದಿಂದ ತಿಳಿದುಬರುತ್ತದೆ[೧೦೨]. ಈತನು ಕೋಗಳಿ-೫೦೦, ಬಲ್ಲಕುಂದೆ-೩೦೦ ಮತ್ತು ಕದಂಬಳಿಗೆ-೧೦೦೦ಗಳನ್ನು ಆಳುತ್ತಿದ್ದನೆಂದು ತಿಳಿಯುತ್ತದೆ[೧೦೩]. ಈತನೂ ಕೂಡ ಒಂದನೆಯ ಸೋಮೇಶ್ವರನ ಸಾಮಂತನಾಗಿದ್ದನೆಂದು ಇವನು ಧರಿಸಿದ್ದ ತ್ರೈಲೋಕ್ಯಮಲ್ಲನೆಂಬ ಬಿರುದಿನಿಂದ ಹಾಗೂ ಶಾಸನಗಳಿಂದ ತಿಳಿದುಬರುತ್ತದೆ. ವೈದುಂಬರ ಮಣಿಬೇತ ಮಹಾರಾಜನು ಈತನ ಸಾಮಂತನಾಗಿ ಆಳುತ್ತಿದ್ದುದಾಗಿ ತಿಳಿದುಬರುತ್ತದೆ[೧೦೪]. ಕ್ರಿ.ಶ. ೧೦೫೨ರಲ್ಲಿ ಈತನು ವೀರನೊಳಂಬಪಲ್ಲವ ಪೆರ್ಮಾನಡಿ ಮತ್ತು ವೀರನೊಳಂಬ ಘಟ್ಟಿದೇವ ಎಂಬ ನಾಮಾಂಕಿತದೊಂದಿಗೆ ಸಿಂಧವಾಡಿ-೧೦೦೦ನ್ನು ಆಳುತ್ತಿದ್ದನೆಂದು ಕಂಡುಬರುತ್ತದೆ[೧೦೫]. ಕ್ರಿ.ಶ. ೧೦೫೪ರ ಶಾಸನವೊಂದು ತಿಳಿಸುವಂತೆ ಈತನು ಒಂದನೆಯ ಸೋಮೇಶ್ವರನ ಸಾಮಂತನಾಗಿ ಈ ಎಲ್ಲ ಮೇಲಿನ ಪ್ರದೇಶಗಳೊಂದಿಗೆ ನೊಳಂಬವಾಡಿ-೩೨೦೦೦ವನ್ನೂ ಆಳುತ್ತಿದ್ದನು[೧೦೬]. ಕ್ರಿ.ಶ. ೧೦೫೬ರ ನಂತರ ಈತನ ಆಳ್ವಿಕೆ ಕೊನೆಗೊಂಡಿರಬೇಕು ಕಾರಣ ಕ್ರಿ.ಶ. ೧೦೫೭ರಲ್ಲಿ ಗಂಗವಾಡಿ-೯೬೦೦೦, ನೊಳಂಬವಾಡಿ-೩೨೦೦೦ ಮತ್ತು ಬನವಾಸಿ-೩೨೦೦೦ಗಳನ್ನು ಒಂದನೆಯ ಸೋಮೇಶ್ವರನ ಮಗನಾದ ವಿಕ್ರಮಾದಿತ್ಯನು ಪಾಲಿಸುತ್ತಿದ್ದುದಾಗಿ ತಿಳಿಯುತ್ತದೆ[೧೦೭]. ಈತನ ನಂತರ ನೊಳಂಬರ ವಂಶ ಕೊನೆಗೊಂಡಂತೆ ತೋರುತ್ತದೆ.

ಕ್ರಿ.ಶ. ೧೦೬೮ರ ಶಾಸನವೊಂದು ತ್ರೈಲೋಕ್ಯಮಲ್ಲ ನೊಳಂಬಪಲ್ಲವ ಪೆರ್ಮಾಡಿ ಜಯಸಿಂಹದೇವನೆಂಬುವನು ನೊಳಂಬವಾಡಿ-೩೨೦೦೦ನ್ನು ಆಳುತ್ತಿದ್ದುದಾಗಿ ಉಲ್ಲೇಖಿಸಿದೆ. ಮುಂದುವರೆದು ಅದೇ ಶಾಸನವು ಈತನು

ಕಾಂಚೀಪುರವರೇಶ್ವರ ಎಂಬ ಬಿರುದನ್ನು ಹೊಂದಿ ಸಿಂಧವಾಡಿ-೧೦೦೦ವನ್ನು ಕಂಪ್ಲಿಯಿಂದ ಆಳುತ್ತಿದ್ದುದಾಗಿ ತಿಳಿಸುತ್ತದೆ. ಅಲ್ಲದೇ ಇವನು ಒಂದನೆಯ ಸೋಮೇಶ್ವರನ ಪುತ್ರನೆಂದು ಈ ಶಾಸನದಲ್ಲಿ ಹೇಳಿಕೊಂಡಿದ್ದಾನೆ[೧೮]. ಕ್ರಿ.ಶ. ೧೧೯೬ರಲ್ಲಿ ಭುವನೈಕ್ಯಮಲ್ಲ ನೊಳಂಬಾಧಿರಾಜ ಪರುಮಾನಡಿ ಸಿಂಗಣ್ಣದೇವನೆಂಬುವನು ನೊಳಂಬವಾಡಿ-೩೨೦೦೦, ಕಿಸುಕಾಡು-೭೦ಗಳನ್ನು ಆಳುತ್ತಿದ್ದುದಾಗಿ ತಿಳಿದುಬರುತ್ತದೆ[೧೯]. ಆದರೆ ಇವರಿಗೂ ಮತ್ತು ಮೊದಲಿನ ನೊಳಂಬ ವಂಶದವರಿಗೂ ಇದ್ದ ಸಂಭಂದ ನಮಗೆ ತಿಳಿದುಬರುವದಿಲ್ಲ.

### ಅಡಿಟಿಪ್ಪಣಿಗಳು

೧. ಕಿಟೆಲ್ ಕನ್ನಡ ಇಂಗ್ಲೀಷ್ ನಿಘಂಟು, ಸಂ-೩, ಪು-೧೨-೧೬೬.
೨. ನಾಗಯ್ಯಾ,ಜಿ.ಎಂ., ಆರನೆಯ ವಿಕ್ರಮಾದಿತ್ಯನ ಶಾಸನಗಳು ಒಂದು ಅಧ್ಯಯನ, ಪು-೧೩೩-೩೪.
೩. Ind.Ant., Vol-IX, p-7.
೪. Ibid., Vol-VIII, p-237.
೫. MAR, 1929, p-50.
೬. ARIE, 1966-67, No-A. 11; Ep.Ind., Vol-XXXVIII, p-99 ff.
೭. E.C., Vol-V, p-594.
೮. Ind.Ant., Vol-VI, p-31.
೯. Ibid., Vol-VII.
೧೦. Pathan,Z.M., Some Feudatory Families (Minor Dynasties) of Medieval Karnataka-A Study, 1983, p-65.
೧೧. J.K.U., Social Sciences, Vol-V, p-180.
೧೨. Ep.Ind., Vol-III, p-50.
೧೩. Ibid., Vol-XXI, p-289 ff.
೧೪. Pathan,Z.M., op.cit., p-66.
೧೫. Ind.Ant., Vol-VII, p-106.
೧೬. Ibid., Vol-VII, p-106.
೧೭. SII., Vol-XV, No-417 & 441-43.
೧೮. Ind.Ant., Vol-XIX, p-142 ff.
೧೯. MAR., 1909, p-12-14.
೨೦. KI., No-3, p-48.
೨೧. Pathan,Z.M., op.cit., p-75.
೨೨. ಗುರುರಾಜಭಟ್,ಪಿ., ತುಳುನಾಡು, ಪು-೯.
೨೩. MAR., 1936, pp-72 ff.

೨೪. Ibid., 1911, p-33.

೨೫. Ind. Ant., Vol-XIX, p-17, Line-7.

೨೬. Ep. Ind., Vol-VI, Pp-5-6.

೨೭. Ind. Ant., Vol-VII, Pp-300ff.

೨೮. APGAS., No-6, Pp-11-39, 663 A.D.

೨೯. E.C., Vol-VI, Kp, No-38, 675 A.D.

೩೦. Ind. Ant., Vol-XIX, Pp-146 ff.

೩೧. E.C., Vol-VI, Kp, No-38, 675 A.D.

೩೨. Ind. Ant., Vol-XIX, Pp-146 ff.

೩೩. Ep.Ind., Vol-XXXII, Pp-317 ff, 707 A.D.

೩೪. Ind. Ant., Vol-XVIII, Pp-35 ff.

೩೫. Nellore District Inscriptions, Vol-I, pp-429-30.

೩೬. SII., Vol-VII, No-284.

೩೭. E.C., Vol-VIII, Sb, No-10.

೩೮. Ep.Ind., Vol-IX, p-21, No-VI.

೩೯. Ep.Ind., Vol-IX, No-VII-VIII, p-22-23; SII, Vol-VII, No-283.

೪೦. SII., Vol-VII, No-307.

೪೧. ARSIE., 1943-44, BK, No-26.

೪೨. SII., Vol-VII, No-191.

೪೩. Ep.Ind., Vol-XXIX, Pp-203-209.

೪೪. Ibid., Vol-XXII, Pp-213 ff.

೪೫. SII., Vol-VII, No-327.

೪೬. BILHANA: Vikramankadeva Charitam, Tr.by. Suresh Chandra Banerji & Amal Kumar Gupta, Culcutta; Sambodhi, 1965, Canto.V.V. 26.

೪೭. ರಮೇಶ,ಕೆ.ವಿ., ತುಳುನಾಡಿನ ಇತಿಹಾಸ, ಪು-೫೫.

೪೮. ARSIE., 1927-28, No-374; SII., Vol-IX, part-I, No-399.

೪೯. E.C., Vol-XII, Tp, No-81.

೫೦. Ibid., Vol-V, Bl, No-58 & 71; Ibid., Hn, No-69.

೫೧. MAR., 1930, pp-223-26.

೫೨. SII., Vol-VII, No-294, 308 & 354.

೫೩. E.C., Vol-VII, Hl, No-117.

೫೪. ರಮೇಶ,ಕೆ.ವಿ., ತುಳುನಾಡಿನ ಇತಿಹಾಸ, ಪು-೬೨.

೫೫. E.C.,Vol-XI, Dg, No-41.

೫೬. Ibid.,Vol-V, Ak, No-102(a).

೫೭. Ibid.,Vol-XI, Dg, No-41.

೫೮. Buhler, Vikramankadeva Charita, I, p-102-103.

೫೯. E.C.,Vol-V, Ak, No-102(a).

೬೦. Ibid., Vol-II, No-327 & Ibid., Vol-V, Hn, No-65.

೬೧. Ibid.,Vol-XI, Dg, No-41.

೬೨. Rangacharya, Inscriptions of the Madras Presidency, I, p-296.

೬೩. Ibid., Vol-XI, Dg, No-39.

೬೪. SII.,Vol-IX,(i), No-141.

೬೫. Ibid., No-145.

೬೬. SII.,Vol-IX,(i), No-153.

೬೭. E.C.,Vol-VIII, Cg, No-33.

೬೮. SII.,Vol-IX,(i), No-154, 1085-86.

೬೯. Ibid., No-158, 1090.

೭೦. SII.,Vol-IX,(i), No-154, 1085-86.

೭೧. Ibid., No-205, 1122.

೭೨. Ibid., No-206, 1122.

೭೩. E.C.,Vol-XI, Dg, No-2, 1124.

೭೪. SII.,Vol-IX,(i), No-206, 1122.

೭೫. E.C.,Vol-XI, Dg, No-77.

೭೬. Ibid., No-168.

೭೭. Ibid., No-85.

೭೮. Ibid.,Vol-VII, Ci, No-38.

೭೯. Ibid.,Vol-XI, Dg, No-84.

೮೦. Ibid., No-77.

೮೧. Ibid., No-5.

೮೨. Ibid.,Vol-II, Sb, No-327.(124).

೮೩. Ibid.,Vol-VII, Sk, No-105.

೮೪. Ibid.,Vol-XI, Cd, No-36.

೮೫. Ibid., Mg, No-4.

೮೬. Ibid., Dg, No-84.

೮೭. Ibid., Hk, No-56.

೮೮. Ibid.

೮೯. Ibid.

೯೦. Ibid.

೯೧. Ibid.,Vol-VII, Sk, No-99.

೯೨. Ibid.

೯೩. Ibid.

೯೪. Ibid.,

೯೫. Ibid.,

೯೬. Fleet, Kanarese Dynasties, p-568.

೯೭. E.C.,Vol-VII, Sk, No-300.

೯೮. SII, Vol-XVIII, No-112.

೯೯. Ibid.

೧೦೦. Ibid.

೧೦೧. Fleet, Bombay Gazetteer, I Part-II.

೧೦೨. SII, XVIII, No-124, 1124.

೧೦೩. Fleet, P.S.O.C. Inscriptions, No-230.

೧೦೪. SII, XVIII, No-124, 1124.

೧೦೫. Ibid., No-293.

೧೦೬. Fleet, Kanarese Dynasties, Pp-475-76.

೧೦೭. SII, XVIII, No-293.

೧೦೮. Ibid., No-296.

೧೦೯. E.C.,Vol-V, Bl, No-93.

೧೧೦. ARSIE, 1933-34, BK. No-84.

೧೧೧. SII, XVIII, No-294.

೧೧೨. E.C.,Vol-VII, Sk, No-123.

೧೧೩. South Ind. Ep., 215 of 1918.

೧೧೪. Ritti,S.H., The Seunas, p-314.

೧೧೫. South Ind. Ep., 215 of 1918.

೧೧೬. SII.,Vol-XVII, No-296.

೧೧೭. Ibid.

೧೧೮. Ibid., No. -163.

೧೧೯. Fleet, Kanarese Dynasties, P-524.

೧೨೦. JBBRAS, Vol-XV, P-384.

೧೨೧. SII., Vol-XVII, No-231.

୧୨୨. Fleet, P.S.O.C. Inscriptions, No-111.

୧୨୩. E.C., Vol-V, Cn, No-269.

୧୨୪. Fleet, Kanarese Dynasties, P-584.

୧୨୫. SII., Vol-XX, No-221.

୧୨୬. Ep.Ind., Vol-VIII, Pp-24-36; E.C., Vol-VII, Sk, No-76.

୧୨୭. ARE., No-343 of 1920; SII., Vol-IX, Part-I, No-46.

୧୨୮. SII., Vol-IX, Part-I, No-46.

୧୨୯. ARE., No-474 of 1906; Ep.Ind., Vol-XXIV, P-185 ff.

୧୩୦. SII., Vol-IX, (i), No-47.

୧୩୧. ARE., No-359 of 1920.

୧୩୨. Ibid., Vol-XVII, p-3.

୧୩୩. Ibid., Vol-XI, p-221.

୧୩୪. Ind.Ant., Vol-XI, p-121.

୧୩୫. M.A.R., 1914, P-67-69.

୧୩୬. A.R.E., No-327 of 1912; SII., Vol-IX, (i), No-6.

୧୩୭. E.C., Vol-X, Mb, No-126.

୧୩୮. ARE., No-99 of 1947-48.

୧୩୯. ARE., No-107 of 1950-51; ARE., No-5 of 1947-48.

୧୪୦. JOR., Vol-XXI, pp-99, 1068 A.D.

୧୪୧. Ibid.

୧୪୨. Ibid., Vol-XXI, pp-100.

୧୪୩. H & C, 24, 1097 A.D.

୧୪୪. Ibid., 25, 1098 A.D.

୧୪୫. Ibid., 28, 1100 A.D.

୧୪୬. Ibid., 36, 1104 A.D.

୧୪୭. A.P.G.A.S., Vol-IX, Selected Stone Inscriptions of A.P., No-22, 1123 A.D.

୧୪୮. H & C, 40; ARE., No-504 of 1960-61.

୧୪୯. ARE., No-499 of 1961-61.

୧୫୦. SII., Vol-IX, (i), No-157, 1088.

୧୫୧. Moraes., Kadamba Kula, App-III, No-1, p-387.

୧୫୨. Gadre, A.S., Important Inscriptions of Baroda State, Vol-I, p-64.

୧୫୩. Bombay Gazetteer, Pt-II, p-565.

୧୫୪. JBBRAS., Vol-IX, p-266.

୧୫୫. Sources of Medieval History of Deccan, IV, P-32 and note-14.
୧୫୬. B.G., Vol-I, pt-II, P-567; ARIE., 1959-60, App-B, p-393.
୧୫୭. ARSIE., 1941-42, BK. No-51.
୧୫୮. Gadre, A.S., Important Inscriptions of Baroda State, Vol-I, p-64.
୧୫୯. Ep.Ind., Vol-XIII, No-28 A & B, pp-298-326.
୧୬୦. Moraes., Kadamba Kula, App-III, No-1, p-387.
୧୬୧. Ep.Ind., Vol-XIII, No-28 A, 1125, p-298.
୧୬୨. B.G., Vol-I, pt-II, p-567; ARIE, 1959-60, App-B, p-393.
୧୬୩. SII., Vol-XI, (ii), No-121, 1071-72.
୧୬୪. JBBRAS., Vol-IX, No-2, p-278.
୧୬୫. Ep.Ind., Vol-XXVI, p-304.
୧୬୬. JBBRAS., Vol-IX, p-242.
୧୬୭. Moraes., Kadamba Kula, App-III, No-2, p-394.
୧୬୮. JBBRAS., Vol-IX, p-266.
୧୬୯. Ep.Ind., Vol-XIII, No-28 A, p-298.
୧୭୦. Ibid.
୧୭୧. Kadambas of Goa and thair Inscriptions, No-8 A, 1079.
୧୭୨. Moraes., Kadamba Kula, App-III, No-21, p-465, 1099.
୧୭୩. SII., Vol-XI, (i), No-160, 1111.
୧୭୪. Moraes., Kadamba Kula, App-III, No-21, p-465, 1099.
୧୭୫. Kadambas of Goa and thair Inscriptions, No-18, 1120.
୧୭୬. Ibid., No-8 A, 1079.
୧୭୭. SII., Vol-XI, (ii), No-128, 1082.
୧୭୮. SII., Vol-XI, (i), No-160, 1111.
୧୭୯. Ibid., No-177, 1125.
୧୮୦. Kadambas of Goa and thair Inscriptions, No-14, 1098.
୧୮୧. Ibid., No-8 A, 1079.
୧୮୨. SII., Vol-XI, (ii), No-211.
୧୮୩. Ibid., No-154, 1104.
୧୮୪. Ep.Ind., Vol-XIII, No-28 A, p-298, 1125.
୧୮୫. Ibid., Vol-XVII, No-9, 1124.
୧୮୬. SII., Vol-XV, No-9, 1125.
୧୮୭. Ibid., Vol-XI, (ii), No-154, 1104.

೧೮೮. Ibid., Vol-XV, No-229, p-280.

೧೮೯. Ibid.

೧೯೦. Ibid., Vol-XX, No-127; ARSIE., 1936-37, BK No-34.

೧೯೧. Summaries of Inscriptions, No-17 of 1944-45.

೧೯೨. KRI's Collection.

೧೯೩. ARSIE., 1927-28, BK No-264.

೧೯೪. SMHD., Vol-I, pp-62 ff.

೧೯೫. SII., Vol-XV, No-233, p-285.

೧೯೬. Ep.Ind., Vol-XXXV, p-85.

೧೯೭. Ibid., Vol-VII, p-198; Vol-XIII, p-176.

೧೯೮. K.I., Vol-I, No-14, 866 A.D.

೧೯೯. Ep.Ind., Vol-II, pp-171-72, 949-50 A.D.

೨೦೦. Ibid.

೨೦೧. Ibid., Vol-XXXIV, p-59, 972 A.D.

೨೦೨. ARIE., 1945-46, No-286, 979 A.D.

೨೦೩. Ep.Ind., Vol-XVI, p-332 ff.

೨೦೪. Ibid.

೨೦೫. ASR., 1936-37, p-98; K.I., Vol-I, No-21.

೨೦೬. Ibid.

೨೦೭. SII., Vol-XX, No-38.

೨೦೮. Ibid., Vol-XI, (ii), No-201.

೨೦೯. Ibid., Vol-XX, No-47.

೨೧೦. Ep.Ind., Vol-XVI, pp-330-31.

೨೧೧. SII., Vol-XX, No-55.

೨೧೨. Ibid., Vol-XI, (ii), No-201.

೨೧೩. Ibid., Vol-XX, No-107.

೨೧೪. Ep.Ind., Vol-XVI, No-8(c), p-44 ff.

೨೧೫. SII., Vol-XX, No-122.

೨೧೬. E.C., Vol-XII, No-50, Pavagad.

೨೧೭. Ibid.

೨೧೮. Ibid., Vol-XII, No-37, Shira.

೨೧೯. Ibid., Vol-XII, No-50, Pavagad.

೨೨೦. SII., Vol-IX, (i), No-152.

೨೨೧. Ibid., No-146.

೨೨೨. E.C., Vol-XII, No-50.

೨೨೩. Ibid., Vol-XII, No-53, Pavagad.

೨೨೪. Ibid., No-50 & 53, Pavagad.

೨೨೫. Ibid., No-43, Pavagad.

೨೨೬. Ibid., No-7 & 25, Shira; ARSIE., 1917, No-20.

೨೨೭. Ibid.

೨೨೮. Ibid., Vol-V, Belur, No-16, 124; Ibid., Arasikere, No-34.

೨೨೯. Ibid., Vol-XII, No-43, Pavagad.

೨೩೦. E.C., Vol-XII, No-25, Shira; ARSIE., 1917, No-20.

೨೩೧. Ibid., No-43, Pavagad.

೨೩೨. SII., Vol-IX, (i), No-278.

೨೩೩. Ibid., No-146.

೨೩೪. Ibid., No-298.

೨೩೫. Ep.Ind., Vol-XXXI, No-37.

೨೩೬. E.C., Vol-XI, No-21, Challakere.

೨೩೭. Ibid., Vol-XII, No-21.

೨೩೮. Ibid.

೨೩೯. SII., Vol-IX, (i), No-318.

೨೪೦. Ep.Ind., Vol-XXXI, No-37.

೨೪೧. SII., Vol-IX, (i), No-146; E.C., Vol-XII, No-35, Pavagad.

೨೪೨. E.C., Vol-XI, No-21, Challakere.

೨೪೩. Ibid., Vol-XII, No-23, Shira.

೨೪೪. Ibid., Vol-XI, No-20, Molakalmur.

೨೪೫. Ibid., No-21, Challakere.

೨೪೬. Ibid., No-20, Molakalmur.

೨೪೭. Ibid., Vol-XII, No-157, Tipatur.

೨೪೮. Ibid., Vol-VIII, No-145, Hasan.

೨೪೯. Ibid., Vol-XI, No-20, Molakalmur.

೨೫೦. Ibid., No-24, Molakalmur.

೨೫೧. Madras Presidency Inscriptions, No-123.

೨೫೨. Ibid., No-50, Pavagad.

೨೫೩. Ibid., No-52, Pavagad.

೨೫೪. Ibid., No-49, Tumakur.

೨೫೫. Ibid., Vol-V, Part-II, No-64, Belur.

೨೫೬. Ibid., Vol-XII, No-34, Shira.

೨೫೭. Ibid., Vol-XII, No-53, Pavagad.

೨೫೮. Ibid., No-106, Pavagad.

೨೫೯. Ibid., No-47, Pavagad.

೨೬೦. Ibid.

೨೬೧. Ibid., Vol-V, No-151, Arasikere.

೨೬೨. E.C., Vol-VII, No-87, Arakalgud.

೨೬೩. Ibid., Vol-XII, No-47, Pavagad.

೨೬೪. Ibid., No-53, Pavagad.

೨೬೫. Ibid.

೨೬೬. Ibid., No-60, Shira.

೨೬೭. Ibid., No-14, Pavagad.

೨೬೮. Ibid.

೨೬೯. Ibid., No-8, Shira.

೨೭೦. Rice,B.L., Epigraphia Carnatika, Vol-VIII.

೨೭೧. Ibid., No-35. Nagara. 1077 A.D.

೨೭೨. Ibid., Nagara, No-22, 900 A.D.; Ibid., Nagara, No-35 1077 A.D.

೨೭೩. Ibid., No-192, P-686, Thirthahalli.

೨೭೪. Ibid., Vol-VII, No-283, Shikaripur. 830 A.D.

೨೭೫. Ibid., Vol-VI, Introduction, p-10.

೨೭೬. Ibid., Vol-VII, No-45, Shikaripur & Ibid., Vol-VIII, No-60, Nagara.

೨೭೭. Ibid., Vol-VIII, No-35. Nagara. 1077 A.D.

೨೭೮. Ibid., Vol-VII, No-284, Shikaripur.

೨೭೯. Ibid., No-23, P-379, Honnali.

೨೮೦. Ibid., No-53, Shikaripur

೨೮೧. Ibid., Vol-VIII, No-35. Nagara. 1077 A.D.

೨೮೨. E.C., Vol-VIII, No-58. Nagara. 1062 A.D.

೨೮೩. Ibid., No-36. Nagara. 1077 A.D.

೨೮೪. Ibid., No-35, 36. Nagara. 1077 A.D.

೨೮೫. Ibid.

೨೮೬. Ibid., No-36. Nagara.

೨೮೭. Ibid.

೨೮೮. Ibid., Vol-VIII, No-36. Nagara.

೨೮೯. Ibid., No-192. Thirtahalli, 1103 A.D.

೨೯೦. E.C., Vol-VIII, No-36. Nagara.

೨೯೧. Ibid., No-103. Sagar, 1089A.D.

೨೯೨. Ibid., No-80. Sagar, 1096A.D.

೨೯೩. Ibid., No-103. Sagar, 1089A.D.

೨೯೪. E.C., Vol-VIII, No-80. Sagar, 1096A.D.

೨೯೫. Ibid., No-103. Sagar.

೨೯೬. Ibid., No-192. Thirtahalli, 1103 A.D.

೨೯೭. Ibid., No-37. Nagara.

೨೯೮. ನಾಗರಾಜಯ್ಯ,ಹಂಪಾ, ಸಾಂತಾರರು ಒಂದು ಅಧ್ಯಯನ, ಪು-೭೭.

೨೯೯. Ibid., No-66, 67. Sagar.

೩೦೦. Ibid., No-67, Sagar.

೩೦೧. Ibid., p-45.

೩೦೨. MAR., 1930, Ins.No-63, p-223. Nagara

೩೦೩. E.C., Vol-VII, No-103, Shikaripur, 1149A.D.

೩೦೪. Ibid., Vol-VIII, No-66, Sagar.

೩೦೫. Ibid., Vol-VII, No-103, Shikaripur, 1149A.D.

೩೦೬. Ibid., Vol-VIII, No-177, Sorab.

೩೦೭. ARIE., 1958-59, No-571; K.I., Vol-IV, No-13.

೩೦೮. Ibid., Vol-VIII, No-177, Sorab.

೩೦೯. Ibid., No-66. Nagara, 1125A.D.

೩೧೦. Ibid., Vol-VII, No-103, Shikaripur, 1149A.D.

೩೧೧. JIH., Vol-XXXVI, p-132.

೩೧೨. E.C., Vol-XII, Si, No-28.

೩೧೩. Ibid.

೩೧೪. Venkataramanayya,N., Eastern Chalukyas of Vengi, p-6, 7.

೩೧೫. E.C., Vol-XII, Si, No-28.

೩೧೬. Desai,P.B., History of Karnataka, p-70.

೩೧೭. E.C., Vol-IV, Introduction, p-10.

೩೧೮. Ibid., Vol-VIII, Sb, No-70.

೩೧೯. Ibid., Vol-XI, Cl, No-8.

୩୨୦. Ibid., No-33.

୩୨୧. Ibid.

୩୨୨. Ep.Ind., Vol-X, p-56.

୩୨୩. E.C., Vol-IV, Sr, No-160.

୩୨୪. Ibid., Vol-VIII, Sb, No-70.

୩୨୫. Ibid., Vol-XI, Cl, No-34.

୩୨୬. Ep.Ind., Vol-X, p-56.

୩୨୭. E.C., Vol-XI, Cl, No-34.

୩୨୮. Ep.Ind., Vol-IV, No-15.

୩୨୯. ARE., No-98 of 1913.

୩୩୦. Ibid., No-12 of 1917.

୩୩୧. Ibid., No-306 of 1912.

୩୩୨. Ibid.,, No-91 of 1913.

୩୩୩. E.C., Vol-IX, Ht, No-9.

୩୩୪. Ep.Ind., Vol-X, No-54.

୩୩୫. E.C., Vol-IX, Ht, No-9; MAR., 1919, p-31, Para-72.

୩୩୬. Ibid., Vol-XII, Si, No-24, 38; Ibid., Vol-X, p-60.

୩୩୭. ARE., No-314 of 1922; Ep.Ind., Vol-XXIV, p-192; ARE., No-533, 543 of 1906;Ibid., No-295-96 of 1905.

୩୩୮. Ibid., No-304 of 1901; Ep.Ind., Vol-X, No-14.

୩୩୯. E.C., Vol-IX, Db, No-3.

୩୪୦. KrishnaRao,M.V., The Gangas of Talkad, p-83.

୩୪୧. E.C., Vol-XII, Nj, No-269.

୩୪୨. Ibid., Si, No-24.

୩୪୩. Ibid., Mi, No-52.

୩୪୪. Ep.Ind., Vol-X, No-70; ARE., No-305 of 1901.

୩୪୫. E.C., Vol-XI, Cd, No-62.

୩୪୬. Ibid., Vol-XII, Mi, No-27.

୩୪୭. SII., Vol-IX, Pt-I, No-61; ARE., No-297 of 1918.

୩୪୮. Ep.Ind., Vol-VI, No-40; Ibid., Vol-I, No-40

୩୪୯. E.C., Vol-XII, Si, No-59; Ibid., Vol-XI, Cl, No-6.

୩୫୦. Ibid., Vol-XI, Cl, No-56; Ibid., Vol-X, Sp, No-28.

୩୫୧. SII., Vol-IX, Pt-I, No-57, 58; ARE., No-271-72 of 1918.

୩୫୨. E.C., Vol-X, Gd, No-4.

୩୫୩. Ibid., Vol-XII, Tp, No-55.

୩୫୪. Ibid., Vol-X, Sp, No-64.

୩୫୫. Mysore Gazetteer, Vol-II, Pt-II, No-968.

୩୫୬. Ep.Ind., Vol-IV, No-289; Ibid., Vol-V, p-191; Altekar,A.S., Rashtrakutas and their Times, p-112.

୩୫୭. MAR., 1909-10, p-28, Para-66.

୩୫୮. ARE., No-198 of 1910.

୩୫୯. E.C., Vol-XII, Si, No-28.

୩୬୦. Ep.Ind., Vol-IV, No-83.

୩୬୧. SII., Vol-I, P-76; Fleet, Kannarese Districts, p-421.

୩୬୨. E.C., Vol-X, Ct, No-49; Ep.Ind., Vol-XXXIII, No-77.

୩୬୩. Ibid., Vol-XII, Si, No-28.

୩୬୪. ARE., No-17 of 1917; ARE., No-655 of 1958-59.

୩୬୫. Ibid., No-731 of 1917.

୩୬୬. Ibid., No-55 of 1917.

୩୬୭. SII., Vol-IX, Pt-I, No-41.

୩୬୮. Ibid., Vol-IX, Pt-I, No-25; E.C., Vol-XII, Si, No-35.

୩୬୯. E.C., Vol-X, Bp, No-4; Ibid., Vol-X, Ct, No-49.

୩୭୦. Ibid., Mb, No-126.

୩୭୧. ARE., No-93 of 1913.

୩୭୨. E.C., Vol-XVII, Mb, No-306; Ibid., Vol-X, Mb, No-93, 94 & 264; MAR., 1911, p-39.

୩୭୩. KrishnaRao,M.V., The Gangas of Talkad, p-106; Ep.Ind., Vol-XVI, p-28.

୩୭୪. ARE., No-93 of 1913.

୩୭୫. E.C., Vol-X, Mb, No-59.

୩୭୬. ARE., No-93 of 1913.

୩୭୭. Ibid., No-325 of 1912; SII., Vol-IX, Pt-I, No-39 & 41; ARE., No-208 of 1932;.

୩୭୮. ARE., No-93 of 1913; SII., Vol-IX, Pt-I, No-30.

୩୭୯. E.C., Vol-X, Mb, No-38, 50.

୩୮୦. SII., Vol-IX, Pt-I, No-39-40; ARE., No-325 of 1912.

୩୮୧. E.C., Vol-XII, Si, No-26, 29.

୩୮୨. SII., Vol-IX, Pt-I, No-39-40.

୩୮୩. E.C., Vol-X, Mb, No-38, 50.

୩୮୪. Ibid.

୩୮୫. SII., Vol-IX, Pt-I, No-41.

୩୮୬. ARE., No-261 of 1910; Ibid., No-97 of 1921.

୩୮୭. Ep.Ind., Vol-XVI, p-28.

୩୮୮. SII., Vol-IX, Pt-I, No-101; ARE., No-443 of 1914.

୩୮୯. Ibid., No-80; ARE., No-87 of 1904.

୩୯୦. ARE., No-253 of 1918.

୩୯୧. SII., Vol-IX, Pt-I, No-80; Mysore Gazetteer, Vol-II, Part-II, p-581.

୩୯୨. Ibid., No-93; ARE., No-454 of 1914.

୩୯୩. Ibid., No-75, 94 & 96; E.C., Vol-XI, Dg, No-19.

୩୯୪. E.C., Vol-XI, Dg, No-126.

୩୯୫. SII., Vol-IX, Pt-I, No-101.

୩୯୬. Ibid., No-98; ARE., No-443 of 1914.

୩୯୭. Ibid., No-98 & 101; ARE., No-232 of 1913.

୩୯୮. SII., Vol-III, No-28.

୩୯୯. ARE., No-6 of 1890.

୪୦୦. SII., Vol-III, No-29.

୪୦୧. SII., Vol-IX, Pt-I, No-110.

୪୦୨. Ibid., Vol-IX, Pt-I, No-111 & 114.

୪୦୩. Ibid., Pt-I, No-109.

୪୦୪. Ibid., No-131.

୪୦୫. Ibid., No-111.

୪୦୬. Ibid., No-115.

୪୦୭. Ibid., No-118.

୪୦୮. Ibid., No-133.

୪୦୯. Ibid., No-109 & 110.

## ಅಧ್ಯಾಯ-೪

# ಕರ್ನಾಟಕದ ಪ್ರಮುಖ ಸಾಮಂತ ಅರಸುಮನೆತನಗಳು

ಪ್ರಾಚೀನ ಹಾಗೂ ಮಧ್ಯಕಾಲೀನ ಕರ್ನಾಟಕದಲ್ಲಿ ಬಾಳಿಹೋದ ಸಾಮ್ರಾಜ್ಯಗಳು ಹಾಗೂ ಚಕ್ರವರ್ತಿಗಳ ಮಹಾಮಂಡಳೇಶ್ವರರಾಗಿದ್ದುಕೊಂಡು, ಹಲವಾರು ರೀತಿಯಿಂದ ತಾವು ಆಧೀನವಾಗಿರುವ ಸಾಮ್ರಾಜ್ಯಗಳಿಗೆ ನಿಷ್ಠರಾಗಿರುತ್ತಿದ್ದ ಇವರು ಅಂದಿನ ಆಡಳಿತದ ಒಂದು ಅವಿಭಾಜ್ಯ ಅಂಗವಾಗಿದ್ದರು. ಅಂತಹ ಮಹಾಮಂಡಳೇಶ್ವರರಲ್ಲಿ ನಮ್ಮ ಅಧ್ಯಯನ ಅವಧಿಯಲ್ಲಿ (ಕ್ರಿ.ಶ. ೪೫೦ ರಿಂದ ಕ್ರಿ.ಶ. ೧೩೩೬ರವರೆಗೆ) ಕರ್ನಾಟಕದ ಇತಿಹಾಸದಲ್ಲಿ ಪ್ರಮುಖ ಪಾತ್ರವಹಿಸಿದಂತಹ ಪ್ರಮುಖ ಸಾಮಂತ ಅರಸುಮನೆತನಗಳಾದ ೧)ಗಂಗರು, ೨)ಸವದತ್ತಿಯ ರಟ್ಟರು, ೩)ಚೆಲ್ಲಕೇತನರು, ೪)ಶಿಲಹಾರರು, ೫)ಹಾನಗಲ್ಲ ಕದಂಬರು ಮತ್ತು ೬)ಸಿಂದರುಗಳು ಪ್ರಮುಖರಾಗಿದ್ದಾರೆ. ಅವರ ರಾಜಕೀಯ ಇತಿಹಾಸವನ್ನು ಹೀಗೆ ನೋಡಬಹುದು.

## ೧) ಗಂಗರು:

ಕರ್ನಾಟಕದ ಅರಸುಮನೆತನಗಳಲ್ಲಿಯೇ ಅತಿಹೆಚ್ಚು ಕಾಲದವರೆಗೆ ಆಳಿದಂತಹ ಮನೆತನ ಗಂಗರದ್ದಾಗಿದೆ. ಇದಲ್ಲದೇ ಇವರ ಶಾಸನಗಳು ನಮಗೆ ಪಶ್ಚಿಮದಲ್ಲಿ ಕೊಡಗಿನಿಂದ, ಪೂರ್ವದಲ್ಲಿ ಉತ್ತರ ಅರ್ಕಾಟ ಮತ್ತು ತಂಜಾವೂರದವರೆಗೆ ಹಾಗೂ ಉತ್ತರದಲ್ಲಿ ಬೆಳಗಾಂವಿಯಿಂದ ದಕ್ಷಿಣದ ಮೈಸೂರು ಜಿಲ್ಲೆಯವರೆಗೆ ದೊರೆಯುತ್ತವೆ. ಇದರ ಆಧಾರದ ಮೇಲೆ ಇವರು ವಿಸ್ತಾರವಾದ ಸಾಮ್ರಾಜ್ಯವನ್ನು ಆಳಿದವರೆಂದು ಹೇಳಬಹುದು. ಇವರು ತಲಕಾಡಿನಿಂದ ಕ್ರಿ.ಶ. ೪ನೆಯ ಶತಮಾನದ ಮಧ್ಯಭಾಗದಿಂದ ಹಿಡಿದು ೧೧ ನೆಯ ಶತಮಾನದ ವರೆಗೆ ಸುಮಾರು ೭ ಶತಮಾನಗಳ ಕಾಲ ಆಳ್ವಿಕೆ ನಡೆಸಿದರು. ಇವರು ಕದಂಬ, ಬಾದಾಮಿ ಚಾಲುಕ್ಯ, ರಾಷ್ಟ್ರಕೂಟ, ಕಲ್ಯಾಣಿ ಚಾಲುಕ್ಯ ಹಾಗೂ ಹೊಯ್ಸಳರ ಸಾಮಂತರಾಗಿ ಅವರಿಗೆ ನಿಷ್ಠೆಯಿಂದ ಅನೇಕ ಸಮಯದವರೆಗೂ ಸೇವೆಯನ್ನು ನೀಡಿದ್ದಾರೆ.

### ಕೊಂಗುಣಿವರ್ಮ ಮಾಧವ (ಕ್ರಿ.ಶ.೩೫೦-೩೭೦)[೧]:

ಈತ ಗಂಗವಂಶದ ಮೊಟ್ಟಮೊದಲ ದೊರೆ ಮತ್ತು ಆ ವಂಶದ ಸ್ಥಾಪಕನಾಗಿದ್ದಾನೆ. ಶಾಸನಗಳಲ್ಲಿ ಈತನಿಗೆ ಕೊಂಗುಣಿವರ್ಮ, ಕೊಂಕಣಿವರ್ಮ ಮತ್ತು ಕೊಂಗುಲಿವರ್ಮ ಎಂಬ ಹೆಸರುಗಳು ಕಾಣಸಿಗುತ್ತವೆ. ಗಂಗ ಸಾಮ್ರಾಜ್ಯ ಸ್ಥಾಪನೆಯ ಈ ಕಾಲದಲ್ಲಿ ಕರ್ನಾಟಕದಲ್ಲಿ ಆಗಲೇ ಪಲ್ಲವ, ಕದಂಬ ಮತ್ತು ಬಾಣರು ತಮ್ಮ ಸಾಮ್ರಾಜ್ಯಗಳನ್ನು ಸ್ಥಾಪಿಸಿದ್ದರು. ಪಲ್ಲವ ಮತ್ತು ಕದಂಬರ ನಡುವಿನ ದ್ವೇಷಯುಕ್ತುಮಯ ವಾತಾವರಣದ ಸಂದರ್ಭವನ್ನು ಈತ ಬಳಸಿಕೊಂಡು ಸಾಮ್ರಾಜ್ಯವನ್ನು ಸ್ಥಾಪಿಸಿದನು. ಆಗ ಅಷ್ಟೇನು ಪ್ರಬಲವಾಗಿರದ ಬಾಣರನ್ನು ಸದೆಬಡಿಯುವದು ಈತನ ಯೋಜನೆಯಾಗಿರಬೇಕು. ಆದರಂತೆ ಅವರನ್ನು ತನ್ನ ಸಹೋದರ ದಡಿಗನ ಸಹಾಯದಿಂದ ಸೋಲಿಸಿ ಕೋಲಾರವನ್ನು

ಹಿಡಿದುಕೊಂಡನು. ಇದಕ್ಕೆ ಅವನಿಗಿದ್ದ 'ಕುವಲಾಲಪುರವರಾಧೀಶ್ವರ' (Confounder of Bana Kula) ಮತ್ತು ಬಾಣತಿಗಹನ-ಕೊಕಸೊ- ಪ್ರಧಾನದವಾಗ್ನೇಹ ಎಂಬ ಬಿರುದುಗಳು ಸಾಕ್ಷಿಯಾಗಿವೆ[೨]. ಮುಂದೆ ಒಂದನೆಯ ಕೊಂಗುಣಿವರ್ಮನು ತನ್ನ ಸೈನ್ಯವನ್ನು ಕೊಂಕಣದ ಕಡೆಗೆ ತಿರುಗಿಸಿ, ಕೊಂಕಣದ ಮೇಲೆ ಜಯಸಾಧಿಸಿದನು ಎಂದು ಲೂಯಿಸ್ ರೈಸ್‌ರು ಸಿಂಹನಂದಿ ಎಂಬ ಜೈನ ಆಚಾರ್ಯನ ಸಲಹೆಯ ಮೇರೆಗೆ ಶಿವಮೊಗ್ಗ ಜಿಲ್ಲೆಯ ಮಣ್ಣಲಿ ಬಳಿ ಚೈತ್ಯಾಲಯವನ್ನು ಈತ ನಿರ್ಮಿಸಿದ್ದನ್ನು ಆಧಾರವಾಗಿಟ್ಟುಕೊಂಡು ಹೇಳುತ್ತಾರೆ[೩]. ಮುಂದೆ ಈತನು ತನ್ನ ಧಾಳಿಯನ್ನು ಸೇಲಂ ಜಿಲ್ಲೆಯವರೆಗೂ ಮುಂದುವರೆಯಿಸಿ, ಅದನ್ನು ಪಡೆದುಕೊಂಡನು. ಆಗ ಅದಕ್ಕೆ ಕೊಂಗುದೇಶವೆಂದು ಕರೆಯಲಾಗುತ್ತಿತ್ತು. ಒಂದನೆಯ ಕೊಂಗುಣಿವರ್ಮನ ಉತ್ತರಾಧಿಕಾರಿಯಾದ ಕಿರಿಯಮಾಧವನ ಕಂಡಸಾಲ ಶಾಸನದ ಪ್ರಕಾರ ಈತನು ಅನೇಕ ಯುದ್ಧಗಳನ್ನು ಕೈಕೊಂಡಿದ್ದು ತಿಳಿದುಬರುತ್ತದೆ[೪]. ಅಲ್ಲದೇ ಮಾರಸಿಂಹನ ಕೂಡಲೂರು ಮತ್ತು ದೇವನಹಳ್ಳಿಯ ತಾಮ್ರಪಟಗಳು ಕೊಂಗುಣಿವರ್ಮನ ಸೈನಿಕ ನಿಪುಣತೆ ಮತ್ತು ಯುದ್ಧ ಕೌಶಲ್ಯದ ಬಗ್ಗೆ ವಿವರಿಸುತ್ತವೆ[೫]. ಇದರಿಂದ ಈತ ತನ್ನ ಈ ಧಾಳಿಗಳಿಂದಾಗಿ ಕೋಲಾರ, ಕೊಂಕಣ ಮತ್ತು ಕೊಂಗುದೇಶಗಳವರೆಗೆ ತನ್ನ ಸಾಮ್ರಾಜ್ಯವನ್ನು ವಿಸ್ತರಿಸಿದ ವಿಷಯ ನಮಗೆ ಸ್ಪಷ್ಟವಾಗುತ್ತದೆ.

**ಎರಡನೆಯ ಮಾಧವ ಅಥವಾ ಕಿರಿಯ ಮಾಧವ (ಕ್ರಿ.ಶ.೩೭೦-೩೯೦)[೬]:**

ಒಂದನೆಯ ಕೊಂಗುಣಿವರ್ಮನಿಗೆ ಮಕ್ಕಳಿಲ್ಲದ ಕಾರಣ ಅವನ ಸಹೋದರ ದಢಿಗನ ಮಗ ಎರಡನೆಯ ಮಾಧವ ಅಥವಾ ಕಿರಿಯ ಮಾಧವನು ಅವನ ಉತ್ತರಾಧಿಕಾರಿಯಾದನು. ಈತನ ಕಾಲದಲ್ಲಿ ಯಾವುದೇ ಮಹತ್ವದ ಘಟನೆಗಳು ನಡೆಯಲಿಲ್ಲ. ಇವನ ಕಾಲದಲ್ಲಿ ಸಾಮ್ರಾಜ್ಯವನು ಶಾಂತಿ ಮತ್ತು ಸಮೃದ್ಧತೆಯಿಂದ ಕೂಡಿದ್ದು ತಿಳಿದುಬರುತ್ತದೆ. ಕಲೆ ಮತ್ತು ಸಾಹಿತ್ಯದಲ್ಲಿ ಈ ಕಾಲದಲ್ಲಿ ಪ್ರಾಮುಖ್ಯತೆಯನ್ನು ನೀಡಲಾಯಿತು. ಕಿರಿಯ ಮಾಧವನು ನೀತಿಶಾಸ್ತ್ರ ಮತ್ತು ಉಪನಿಷದ್‌ಗಳಲ್ಲಿ ಪಾರಂಗತನಾಗಿದ್ದನೆಂದು ತಿಳಿಯುತ್ತದೆ[೭].

**ಹರಿವರ್ಮ (ಕ್ರಿ.ಶ.೩೯೦-೪೧೦)[೮]:**

ಕಿರಿಯ ಮಾಧವನ ನಂತರ ಅಧಿಕಾರಕ್ಕೆ ಬಂದ ಹರಿವರ್ಮನು ಗಂಗರ ರಾಜ್ಯವನ್ನು ಮತ್ತಷ್ಟು ಬಲಪಡಿಸಿದನು. ಈತನ ಕಾಲದಲ್ಲಿ ಗಂಗ-ಪಲ್ಲವ ಸಂಭಂದ ಮತ್ತಷ್ಟು ಬೆಳೆಯಿತಲ್ಲದೇ ಅವರಲ್ಲಿ ರಾಜ-ಸಾಮಂತ ಸಂಭಂದ ಗಟ್ಟಿಯಾಯಿತು. ಅಲ್ಲದೇ ಈತನು ಆನೆಗಳನ್ನು ತನ್ನ ಸೈನ್ಯದಲ್ಲಿ ಅಳವಡಿಸಿಕೊಂಡ ವಿಷಯ ತಿಳಿಯುತ್ತದೆ. ನಂಜನಗೂಡು ತಾಮ್ರ ಶಾಸನವು ಈತನ ಪ್ರಸಿದ್ಧಿಯು ನಾಲ್ಕು ಸಮುದ್ರಗಳನ್ನು ದಾಟಿ ಬೆಳೆದಿತ್ತು ಎಂದಿದೆ[೯]. ತಗಡೂರು ಶಾಸನವು ಈತನು ಹೆಂಜೇರುವಿನ ಮೇಲೆ ಯುದ್ಧ ಕೈಕೊಂಡು ಅಪಾರ ಪ್ರಮಾಣದ ಸಂಪತ್ತನ್ನು ದೋಚಿದ ವಿಷಯ ಹೇಳಿದೆ[೧೦]. ಇವನ ಕಾಲದಲ್ಲಿ ಗಂಗ ಸಾಮ್ರಾಜ್ಯವು ಪರುವಿ ಮತ್ತು ಕೈವಾರ ಎಂಬ ಎರಡು ಶಾಖೆಗಳನ್ನು ಹೊಂದಿತ್ತು[೧೧].

**ವಿಷ್ಣುಗೋಪ (ಕ್ರಿ.ಶ.೪೧೦-೪೩೦)[೧೨]:**

ಹರಿವರ್ಮನ ನಂತರ ಅವನ ಮಗ ವಿಷ್ಣುಗೋಪನು ಅಧಿಕಾರಕ್ಕೆ ಬಂದನು. ಆದರೆ ಇವನ ಕಾಲವು ಶಾಂತಿಯ ಕಾಲವಾಗಿದ್ದು, ಅಂತಹ ಯಾವುದೇ ಮಹತ್ವದ ಘಟನೆಗಳು ನಡೆದಂತೆ ವಿವರಗಳಿಲ್ಲ.

**ತಡಂಗಾಲ ಮಾಧವ (ಕ್ರಿ.ಶ. ೪೩೦-೪೬೬)[೧೩]:**

ವಿಷ್ಣುಗೋಪನ ನಂತರ ತಡಂಗಾಲ ಮಾಧವನು ಆಳ್ವಿಕೆಗೆ ಬಂದನು. ಈತನ ಆಳ್ವಿಕೆಯ ಕಾಲಕ್ಕಾಗಲೇ ಗಂಗ ಸಾಮ್ರಾಜ್ಯ ಬಲಹೀನವಾಗಿತ್ತೆಂದು ತೋರುತ್ತದೆ. ಕದಂಬ ಶಾಂತಿವರ್ಮನು ತಡಂಗಾಲ ಮಾಧವನ ಆಳ್ವಿಕೆಗಿಂತ ಮುಂಚೆ ಗಂಗಸಾಮ್ರಾಜ್ಯದ ಮೇಲೆ ಧಾಳಿಯಿಟ್ಟು ಅವರ ಅನೇಕ ಪ್ರದೇಶಗಳನ್ನು ವಶಪಡಿಸಿಕೊಂಡಿದ್ದನು[೧೪]. ಶೃಂಗೇರಿ[೧೫] ಮತ್ತು ನೊಣಮಂಗಲ[೧೬] ಶಾಸನಗಳು ಹೇಳುವಂತೆ ತಡಂಗಲ ಮಾಧವನು ಆ ಪ್ರದೇಶಗಳನ್ನು ಮರಳಿ ಪಡೆದುಕೊಂಡ ವಿಷಯ ತಿಳಿದುಬರುತ್ತದೆ. ಅಲ್ಲದೇ ತಾಗರತಿ ಶಾಸನವು ತಡಂಗಾಲ ಮಾಧವನ ಸಾಮ್ರಾಜ್ಯ ವಿಸ್ತಾರದ ಕುರಿತು ಉಲ್ಲೇಖಿಸಿದೆ[೧೭]. ಈತನು ಕದಂಬ ಕಾಕುಸ್ಥವರ್ಮನ ಮಗಳನ್ನು ಮದುವೆಯಾಗಿ ಅವರೊಡನೆ ರಕ್ತಸಂಭಂದವನ್ನು ಬೆಳೆಸಿದನಲ್ಲದೇ, ಪಲ್ಲವರೊಂದಿಗೂ ಕೂಡ ಉತ್ತಮ ಸಂಬಂಧವನ್ನು ಮುಂದುವರೆಯಿಸಿದನು. ಈ ಹಿಂದೆ ಗಂಗ ಸಾಮ್ರಾಜ್ಯವು ಶಾಖೆಗಳಾಗಿದ್ದು, ಕೈವಾರ ಮತ್ತು ಪುರುವಿ ಶಾಖೆಗಳನ್ನು ಈತನು ಒಂದುಗೂಡಿಸಿ ತಲಕಾಡಿನ ಮುಖ್ಯ ಶಾಖೆಗೆ ಸೇರಿಸಿಕೊಂಡನೆಂದು ಕೆರೆಗೋಲೂರು ಶಾಸನ ಉಲ್ಲೇಖಿಸುತ್ತದೆ[೧೮].

**ಅವನೀತ (ಕ್ರಿ.ಶ.೪೬೬-೫೨೯)[೧೯]:**

ತಡಂಗಾಲ ಮಾಧವನ ನಂತರ ಅವನ ಕದಂಬರಾಣಿಯ ಮಗನಾದ ಅವನೀತನು ಆಳ್ವಿಕೆಗೆ ಬಂದನು. ಹೆಬ್ಬೆಟ್ಟಾ[೨೦] ಮತ್ತು ನಲ್ಲಾಳ ಶಾಸನಗಳ ಪ್ರಕಾರ ಈತನು ಕ್ರಿ.ಶ.೪೬೬ ರಲ್ಲಿ ಆಳ್ವಿಕೆಗೆ ಬಂದನೆಂದು ತಿಳಿಯುತ್ತದೆ. ಈತನು ತನ್ನ ಶೌರ್ಯ ಪರಾಕ್ರಮಗಳಿಂದ ಸುತ್ತಮುತ್ತಲಿನ ಅರಸುಮನೆತನಗಳನ್ನು ಜಯಿಸಿ ಹತೋಟಿಯಲ್ಲಿಟ್ಟುಕೊಂಡಿದ್ದ ವಿಷಯ ಬೆಂಗಳೂರು ಮ್ಯೂಸಿಯಂ ತಾಮ್ರಪಟಗಳಿಂದ ತಿಳಯುತ್ತದೆ[೨೧]. ಹೊಸಕೋಟೆ ತಾಮ್ರಪಟ ಶಾಸನಗಳು ಈತನು ಆನೆ ಮತ್ತು ಕುದುರೆಯ ಬಲವನ್ನು ಹೊಂದಿದ್ದ ವಿಷಯ ತಿಳಿಸುತ್ತವೆ[೨೨]. ಪಲ್ಲವರೊಂದಿಗೆ ಈತ ಮೊದಲಿನ ನೀತಿಯನ್ನೇ ಮುಂದುವರಿಸಿ ಅವರೊಂದಿಗೆ ಒಳ್ಳೆಯ ಸಂಭಂದ ಹೊಂದಿದ್ದ ವಿಷಯ ತಿಳಿಯುತ್ತದೆ. ಮೇಲೆ ಉಲ್ಲೇಖಿಸಿದ ಹೊಸಕೋಟೆ ಶಾಸನವು ಈತನನ್ನು 'ಕೊಂಗಣಧಿರಾಜ' ಎಂದು ಕರೆದಿದೆ. ಇವನು ಬಲಿಷ್ಟ ಅರಸನಾಗಿದ್ದು, ತನ್ನ ಶಕ್ತಿಯಿಂದ ಅನೇಕ ಸಾಮಂತ ರಾಜರುಗಳನ್ನು ಹತೋಟಿಯಲ್ಲಿಟ್ಟುಕೊಂಡಂತೆ ಶಾಸನಗಳಿಂದ ತಿಳಿದುಬರುತ್ತದೆ. ಮಲ್ಲೇಹಳ್ಳಿ ತಾಮ್ರಶಾಸನವು ಈತನು ಪುನ್ನಾಟದ ದೊರೆ ಸ್ಕಂದವರ್ಮನ ಮಗಳನ್ನು ಮದುವೆಯಾಗಿದ್ದ ವಿಷಯ ತಿಳಿಸುತ್ತದೆ[೨೩]. ಶಾಸನವೊಂದು ಈತನು ವರ್ಣಾಶ್ರಮ ಧರ್ಮವನ್ನು ಪರಿಪಾಲಿಸುವನಾಗಿದ್ದಾನೆಂದಿದೆ[೨೪]. ಹಾಗೂ ಈತನು ಅಶ್ವಮೇಧಯಾಗವನ್ನು ಕೈಕೊಂಡಿದ್ದ ವಿಷಯವನ್ನು ಕೂಡಾ ಶಾಸನವೊಂದು ತಿಳಿಸುತ್ತದೆ[೨೫].

**ದುರ್ವಿನೀತ (ಕ್ರಿ.ಶ.೪೯೫-೫೩೫)[೨೬]:**

ಅವನೀತನ ಹಿರಿಯಮಗನಾದ ದುರ್ವಿನೀತನು ನಂತರ ಗಂಗವಾಡಿಯ ಅರಸನಾದನು. ಆದರೆ ಅವನು ಉತ್ತರಾಧಿಕಾರಕ್ಕಾಗಿ ಹೋರಾಟವನ್ನು ಮಾಡಬೇಕಾಯ್ತು. ಅವನೀತನ ಇನ್ನೊಬ್ಬ ರಾಣಿಯ ಮಗನನ್ನು ಸೋಲಿಸಿ ಪಟ್ಟಕ್ಕೆ ಬರಬೇಕಾಯ್ತು. ಆದರೆ ತಂದೆ ಅವನೀತನಿಗೆ ಅವನ ಇನ್ನೊಬ್ಬ ರಾಣಿಯ ಮಗನನ್ನೇ ಪಟ್ಟಕ್ಕೆ ತರುವ ಇಚ್ಚೆಯಿದ್ದಂತೆ ತೋರುತ್ತದೆ[೨೭]. ಶಾಸನಗಳಿಂದ ತಿಳಿಯುವಂತೆ ಈ ಯಾದವೀಕಲಹದಲ್ಲಿ ದುರ್ವಿನೀತನ ವಿರುದ್ಧವಾಗಿ ಅವನ ಸಹೋದರನ ಪರ ಪಲ್ಲವರು ಪಾಲ್ಗೊಂಡಿದ್ದರು[೨೮]. ಪಲ್ಲವರ ಅಧೀನದಲ್ಲಿದ್ದ ಕೊಂಗುದೇಶವನ್ನು ದುರ್ವಿನೀತನು ಸಂಪೂರ್ಣವಾಗಿ ವಶಪಡಿಸಿಕೊಂಡನಲ್ಲದೇ ತೊಂಡೈಮಂಡಲದವರೆಗೂ ತನ್ನ ರಾಜ್ಯವಿಸ್ತಾರಮಾಡಿದನು. ಉತ್ತನೂರು ಶಾಸನ ಅವನ ಈ ಯುದ್ಧಗಳನ್ನು ಕುರಿತು ತಿಳಿಸುತ್ತದೆ[೨೯]. ಇದೇ ಕಾಲಕ್ಕೆ ಬನವಾಸಿಯ ಕದಂಬರು ಕೂಡಾ ಈತನ ಮೇಲೆ ಯುದ್ಧ ಸಾರಿದರು. ಆಗ ದುರ್ವಿನೀತನು ಕದಂಬ ಕೃಷ್ಣವರ್ಮನ ಮಗ ಮತ್ತು ಮೊಮ್ಮಗನಾದ ಅಜವರ್ಮ ಹಾಗೂ ಭೋಗವರ್ಮರನ್ನು ಸೋಲಿಸಿ ಹಿಂದಕ್ಕಟ್ಟಿದನು[೩೦]. ಶಾಸನವೊಂದು ಈತನು ಆಂದ್ರಿ, ಆಲ್ತೂರು(ಕೊಯಮತ್ತೂರ ಜಿಲ್ಲೆ), ಪೋರಲೈ (ಚಂಗಲಪೇಟೆ ಜಿಲ್ಲೆ) ಮತ್ತು ಪೆನ್ನಾಗರ (ಸೇಲಂ ಜಿಲ್ಲೆ)ಗಳಲ್ಲಿ ಪಲ್ಲವರ ವಿರುದ್ಧ ನಡೆದ ಯುದ್ಧಗಳಲ್ಲಿ ಭಾಗವಹಿಸಿದ್ದ ವಿವರ ತಿಳಿಸುತ್ತದೆ[೩೧]. ಮುಂದೆ ಪುನ್ನಾಟದಲ್ಲಿನ ಒಳಜಗಳಗಳ ಲಾಭ ಪಡೆದ ಈತ ಅದನ್ನು ಗಂಗಸಾಮ್ರಾಜ್ಯಕ್ಕೆ ಸೇರಿಸಿಕೊಂಡನು. ಗುಮ್ಮರೆಡ್ಡಿಪುರ[೩೨] ಮತ್ತು ಉತ್ತನೂರು[೩೩] ತಾಮ್ರಪಟಗಳು ಈತನನ್ನು ಪುನ್ನಾಟದ ದೊರೆಯೆಂದು ಕರೆದಿವೆ. ದುರ್ವಿನೀತನಿಗೆ 'ಅವಿಣಸ್ಥಿರಪ್ರಜಾಲಯ'[೩೪], 'ದಕ್ಷಿಣರಾಜ್ಯಶಿಮರಕ್ಷಣ ಸಮರ್ಥರಾಜ್ಯ' ಮತ್ತು 'ಕೊಂಗುಣಿವರ್ಮಧರ್ಮಮಹಾರಾಜಾಧಿರಾಜ' ಎಂಬ ಬಿರುದುಗಳಿದ್ದವು. ಅಲ್ಲದೇ ಈತನನ್ನು ಮಾಧವಾಂಕ ಅಥವಾ ಮಾಧವೇಶ[೩೫], ಮಾಧವವರ್ಮ[೩೬]ನೆಂದು ಶಾಸನಗಳಲ್ಲಿ ಉಲ್ಲೇಖಿಸಲಾಗಿದೆ.

**ಮುಷ್ಕರ (ಕ್ರಿ.ಶ.೫೩೫-೫೮೫)[೩೭]:**

ದುರ್ವಿನೀತನ ನಂತರ ಆತನ ಮಗ ಮುಷ್ಕರನು ಆಳ್ವಿಕೆಗೆ ಬಂದನು. ಈತನು ಗಂಗವಾಡಿ ಮತ್ತು ಕೊಂಗುದೇಶಗಳ ವಿಸ್ತಾರವಾದ ಪ್ರದೇಶವನ್ನಾಳುತ್ತಿದ್ದುದಾಗಿ ತಿಳಿಯುತ್ತದೆ. ಅರಕೆರೆ[೩೮], ಬೆದಿರೂರ ಮತ್ತು ಹೆಬ್ಬೂರು[೩೯] ಶಾಸನಗಳು ಈತನ ಆಸ್ಥಾನದಲ್ಲಿ ಇವನಿಂದ ಪರಾಜಿತರಾದ ರಾಜರುಗಳು ಪಾದಪದ್ಮೋಪಜೀವಿಗಳಾಗಿದ್ದರೆಂದು ತಿಳಿಯುತ್ತದೆ. ಈತನು ತಂದೆಯಂತೆ ಅಪ್ರತಿಮ ವೀರನಾಗಿ ತನ್ನ ಸಾಮ್ರಾಜ್ಯವನ್ನು ಸುವ್ಯವಸ್ಥೆಯಿಂದ ಕಾಯ್ದುಕೊಂಡಿದ್ದ ವಿಷಯ ಹಳ್ಳಿಗೆರೆ ತಾಮ್ರಶಾಸನದ ಮೂಲಕ ತಿಳಿಯುತ್ತದೆ[೪೦]. ಶಾಸನವೊಂದು ಈತನಿಗೆ 'ಮೊಕ್ಕರ' ಎಂಬ ಹೆಸರಿದ್ದುದನ್ನು ಉಲ್ಲೇಖಿಸಿದೆ[೪೧]. ಅಲ್ಲದೇ ಬ್ರಿಟೀಷ್ ಮ್ಯೂಸಿಯಂ ಶಾಸನದ ಪ್ರಕಾರ ಈತನು ಸಿಂಧುವಿನ ರಾಜನ ಮಗಳನ್ನು ಮದುವೆಯಾದ ವಿಷಯ ತಿಳಿಯುತ್ತದೆ[೪೨]. ಈತನು ತನ್ನ ಸಾಮ್ರಾಜ್ಯವನ್ನು ಬಳ್ಳಾರಿ ಮತ್ತು ಧಾರವಾಡ ಜಿಲ್ಲೆಗಳ ಕಡೆಗೆ ವಿಸ್ತರಿಸಿದ್ದ ವಿಷಯ ಶಾಸನವೊಂದರಿಂದ ತಿಳಿದುಬರುತ್ತದೆ[೪೩].

**ಶ್ರೀವಿಕ್ರಮ (ಕ್ರಿ.ಶ.೫೮೫-೬೩೫)[೪೪]:**

ಶ್ರೀವಿಕ್ರಮನು ಮುಷ್ಕರನಿಗೆ ಸಿಂಧು ಮಹಾರಾಣಿಯ ಮಗನಾಗಿದ್ದು, ಕ್ರಿ.ಶ. ೫೮೫ರಲ್ಲಿ ಆಳ್ವಿಕೆಗೆ ಬಂದನು. ಈತನು ತನ್ನ ಪೂರ್ವಜರಂತೆ ಸಾಮಂತರುಗಳನ್ನೆಲ್ಲ ಹತೋಟಿಯಲ್ಲಿಟ್ಟುಕೊಂಡು ಸಾಮ್ರಾಜ್ಯವನ್ನು ವಿಸ್ತಾರಗೊಳಿಸಿದನೆಂದು ತಿಳಿದುಬರುತ್ತದೆ. ಕಲ್ಲೂರು ಶಾಸನದ ಪ್ರಕಾರ ಈತನು ರಕ್ಕಸನೂರಿನ ಮೇಲೆ ಧಾಳಿಯಿಟ್ಟು ವಶಪಡಿಸಿಕೊಂಡ ವಿಷಯ ತಿಳಿಯುತ್ತದೆ[೪೫]. ಶಾಸನವು ಮುಂದುವರೆದು ಈತನು ಸಾಹಿತ್ಯದ ೧೪ ಪ್ರಕಾರಗಳನ್ನು ಬಲ್ಲವನಾಗಿದ್ದು, ರಾಜ್ಯಶಾಸ್ತ್ರದಲ್ಲಿ ಪ್ರವೀಣನಾಗಿದ್ದನೆಂದು ಹೇಳುತ್ತದೆ. ಅಲ್ಲದೇ ಇವನಿಗೆ 'ಗಣವಿನೀತ' ಎಂಬ ಬಿರುದಿದ್ದನ್ನು ಕೂಡ ಶಾಸನ ಉಲ್ಲೇಖಿಸಿದೆ. ಈತ ತನ್ನ ಮಗನಾದ ಭೂವಿಕ್ರಮನನ್ನು 'ಕೋಲಾಲನಾಡ'ನ್ನು ಆಳಲು ಕ್ರಿ.ಶ. ೬೦೮ರಲ್ಲಿ ನೇಮಿಸಿದ್ದನೆಂದು ತಿಳಿದುಬರುತ್ತದೆ[೪೬].

**ಭೂವಿಕ್ರಮ (ಕ್ರಿ.ಶ.೬೩೫-೬೭೯)[೪೭]:**

ಶ್ರೀವಿಕ್ರಮನ ಹಿರಿಯಮಗ ಭೂವಿಕ್ರಮನು ಅವನ ನಂತರ ಅಧಿಕಾರಕ್ಕೆ ಬಂದನು. ತಂದೆಯ ಕಾಲದಲ್ಲಿಯಾಗಲೇ ಈತನು ಕೊಲಾಲನಾಡಿನ ಆಡಳಿತಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದ ವಿಷಯ ನಮಗೆ ತಿಳಿದುಬರುತ್ತದೆ[೪೮]. ಬಾದಾಮಿ ಚಾಲುಕ್ಯರ ಎರಡನೆಯ ಪುಲಕೇಶಿಯು ಪಲ್ಲವ ಮಹೇಂದ್ರವರ್ಮನೊಡನೆ ಹೋರಾಟ ನಡೆಸಿದಾಗ ಆತನ ಸಾಮಂತನಾಗಿದ್ದ ಭೂವಿಕ್ರಮನು ಅದರಲ್ಲಿ ಪುಲಕೇಶಿಯ ಪರವಾಗಿ ಮಹತ್ವದ ಪಾತ್ರವಹಿಸಿದ್ದು ತಿಳಿಯುತ್ತದೆ[೪೯]. ಪ್ರೊ. ಎಸ್.ಶ್ರೀಕಂಠಶಾಸ್ತ್ರಿಯವರು ಅಭಿಪ್ರಾಯಪಡುವಂತೆ ಭೂವಿಕ್ರಮನು ಪಲ್ಲವರೊಡನೆ ವಿಲಂದೆಯಲ್ಲಿ ನಡೆಸಿದ ಹೋರಾಟವು ಎರಡನೆಯ ಪುಲಕೇಶಿಗೆ ಪಲ್ಲವರೊಡನೆ ಹೋರಾಡುವಲ್ಲಿ ಸಹಕರಿಸಿದ್ದಾಗಿರಬಹುದು ಎಂದಿದ್ದಾರೆ[೫೦]. ಬೆದಿರೂರು ಶಾಸನದ ಆಧಾರದ ಮೇಲೆಯೂ ಕೂಡ ನಾವು ಗಂಗಭೂವಿಕ್ರಮನು ಪುಲಕೇಶಿಯ ಪರವಾಗಿ ಪಲ್ಲವರೊಡನೆ ಹೋರಾಟಮಾಡಿದ್ದನ್ನು ದೃಢೀಕರಿಸಬಹುದು[೫೧]. ಅಲ್ಲದೇ ಶಾಸನವು ಮುಂದುವರೆದು ಭೂವಿಕ್ರಮನು ಪಲ್ಲವನರೇಂದ್ರನ ಉಗ್ರೋದ್ಯ ಎಂಬ ವಜ್ರದ ಕಂಠೀಹಾರವನ್ನು ಸೆಳೆದುಕೊಂಡು ಬಂದನೆಂದು ಹೇಳಿದೆ. ಮುಂದೆ ಕೆಲಕಾಲಗಳ ನಂತರ ಎರಡನೆಯ ನಂದಿವರ್ಮ (ಪಲ್ಲವಮಲ್ಲ)ನು ಪಲ್ಲವ ಅರಸನಾದಾಗ ಅದನ್ನು ಗಂಗರಿಂದ ಮರಳಿ ಪಡೆದುಕೊಂಡನು[೫೨]. ಹೀಗೆ ಪಲ್ಲವ ನರಸಿಂಹವರ್ಮನೊಡನೆ ಹಲವಾರು ಯುದ್ಧಗಳನ್ನು ಕೈಕೊಂಡ ಭೂವಿಕ್ರಮನು 'ಶ್ರೀವಲ್ಲಭ' ಮತ್ತು 'ದುಗ್ಗ' ಎಂಬ ಬಿರುದುಗಳನ್ನು ಪಡೆದುಕೊಂಡನಲ್ಲದೇ, 'ಮನೋವಿನೀತ'ನೆಂದು ಕರೆಸಿಕೊಂಡನು ಮತ್ತು ಇಡೀ ಪಲ್ಲವ ಸಾಮ್ರಾಜ್ಯವನ್ನು ಕೈವಶಮಾಡಿಕೊಂಡನೆಂದು ಶಾಸನಗಳು ಹೇಳಿವೆ[೫೩]. ಇಷ್ಟೆಲ್ಲಾ ಹೋರಾಟಗಳ ಜೊತೆಗೆ ಭೂವಿಕ್ರಮನು ಚೋಳ, ಪಾಂಡ್ಯ, ಕಳಿಂಗರು, ಮಹಾರಟ್ಟ ಮತ್ತು ಮಹಾರಾಷ್ಟ್ರ ರಾಜ್ಯಗಳ ಮೇಲೆ ಧಾಳಿಯನ್ನು ಮಾಡಿ, ಅಲ್ಲಿಂದ ಅನೇಕ ಆನೆಗಳನ್ನು ತಂದು ಗಜಪತಿ ಎಂಬ ಬಿರುದನ್ನು ಧರಿಸಿದ್ದ ವಿಷಯ ಕೊಂಗುದೇಶ ರಾಜಕ್ಕಲ್ಲದಲ್ಲಿ ಬರುತ್ತದೆ[೫೪].

**ಶಿವಮಾರ (ಕ್ರಿ.ಶ.೬೭೯-೭೨೫)[೫೫]:**

ಭೂವಿಕ್ರಮನ ಸಹೋದರನಾಗಿದ್ದ ಶಿವಮಾರನು ಅವನ ನಂತರ ಆಳ್ವಿಕೆಗೆ ಬಂದನು. ಈತನು ಕ್ರಿ.ಶ. ೬೭೯ರಲ್ಲಿ ಆಳ್ವಿಕೆಗೆ ಬಂದು, ಕ್ರಿ.ಶ. ೭೨೫ ರ ವರೆಗೆ ಶ್ರೀಪುರುಷನು ಆಳ್ವಿಕೆಗೆ ಬರುವವರೆಗೆ ಆಡಳಿತ ನಡೆಸಿದನು[೫೬]. ಶಿವಮಾರನಿಗೆ ಮೂರನೆಯ ಕೊಂಗುಣಿವರ್ಮ ಎಂಬ ಹೆಸರಿತ್ತು. ಈತನಿಗೆ ನವಕಾಮ, ಶಿಷ್ಟಪ್ರಿಯ, ಅವಣಿಮಹೇಂದ್ರ, ಸ್ಥಿರವಿನೀತ, ಲೋಕಧೂರ್ತ ದೇವರಾಜ, ಶ್ರೀಪುರುಷ, ಪೃಥ್ವಿಕೊಂಗಣಿ, ವೃದ್ಧರಾಜ, ಪುನ್ನಾಟಪುರವರಾಧೀಶ್ವರ ಮತ್ತು ನವಚೊಕ್ಕ ಎಂಬ ಬಿರುದುಗಳಿದ್ದ ವಿಷಯ ತಿಳಿದುಬರುತ್ತದೆ. ಬರದೂರು ಶಾಸನದ ಪ್ರಕಾರ ಈತನು ಕ್ರಿ.ಶ. ೭೨೫ ರವರೆಗೆ ಬದುಕಿದ್ದು ೪೬ ವರ್ಷಗಳ ಕಾಲ ಆಳ್ವಿಕೆ ಮಾಡಿದ ವಿವರ ತಿಳಿದುಬರುತ್ತದೆ[೫೭]. ಪಲ್ಲವರು ಭೂವಿಕ್ರಮನಿಂದ ತಮಗಾದ ಅವಮಾನದ ಸೇಡನ್ನು ತೀರಿಸಿಕೊಳ್ಳಲು ಗಂಗವಾಡಿಯ ಮೇಲೆ ಧಾಳಿಯಿಟ್ಟರು[೫೮]. ಶಿವಮಾರನು ಆಗ ಪಲ್ಲವರ ಮೇಲೆ ಯಶಸ್ವಿಯಾಗಿ ಯುದ್ಧ ಕೈಕೊಂಡು ಅವರನ್ನು ಸೋಲಿಸಿದನಷ್ಟೇ ಅಲ್ಲದೇ ಪಲ್ಲವರ ಇಬ್ಬರು ಮಕ್ಕಳನ್ನು ಒತ್ತೆಯಾಗಿಟ್ಟುಕೊಂಡನು. ಈ ಯುದ್ಧದ ನಂತರ ಗಂಗಮಾರನು ಪಲ್ಲವೆಲರಸ, ತುಪ್ಪುರಲರಸ, ಜಯ ಮತ್ತು ಪಲ್ಲವ ಯುವರಾಜನ ಮಗ ವೃದ್ಧರನ್ನು ತನ್ನ ಸಾಮಂತರನ್ನಾಗಿಸಿಕೊಂಡನು. ಹೊಸಕೋಟೆ ತಾಲೂಕಿನ ಭಕ್ತರಹಳ್ಳಿ ವೀರಗಲ್ಲಿನ ಪ್ರಕಾರ ಶಿವಮಾರನು ಪಲ್ಲವ ರಾಜನಿಂದಾದ ಧಾಳಿಯನ್ನು ಸಮರ್ಥವಾಗಿ ಎದುರಿಸಿದ ವಿವರ ದೊರೆಯುತ್ತದೆ[೫೯]. ಇದೇ ವೇಳೆಯಲ್ಲಿ ಗಂಗ ಶಿವಮಾರನು ಅತ್ತ ಯುದ್ಧದಲ್ಲಿ ಬಿಡುವಿಲ್ಲದೇ ಇದ್ದಾಗ, ಇತ್ತಕಡೆ ಚಾಲುಕ್ಯ ವಿನಯಾದಿತ್ಯನು ಆತನ ಸಾಮ್ರಾಜ್ಯದ ಮೇಲೆ ಧಾಳಿಯಿಟ್ಟು ಅವನನ್ನು ತನ್ನ ಅಧೀನಗೊಳಿಸಿಕೊಂಡ ವಿಷಯ ತಿಳಿದುಬರುತ್ತದೆ[೬೦]. ಈತನು ತನ್ನ ಕಾಲದಲ್ಲಿ ಮಗನಾದ ಎರೆಗಂಗನನ್ನು ಪ್ರಾಂತ್ಯವೊಂದಕ್ಕೆ ಆಡಳಿತಾಧಿಕಾರಿಯಾಗಿ ನೇಮಿಸಿದ್ದ ವಿಷಯ ನಮಗೆ ತಿಳಿದುಬರುತ್ತದೆ[೬೧]. ಈತನ ಕಾಲದಲ್ಲಿ ಗಂಗ ಸಾಮ್ರಾಜ್ಯವು ವಿಸ್ತಾರವಾಗಿ ಬೆಳೆದಿತ್ತಲ್ಲದೇ, ಅದು ಗಂಗವಾಡಿ, ತೊರೆನಾಡು-೫೦೦, ಮಲೆ-೧೦೦೦ ಮತ್ತು ಕೊಂಗಲನಾಡು-೨೦೦೦ಗಳನ್ನು ಒಳಗೊಂಡಿತ್ತು.

**ಶ್ರೀಪುರುಷ (ಕ್ರಿ.ಶ.೭೨೫-೭೮೮)[೬೨]:**

ಶ್ರೀಪುರುಷನು ಎರೆಗಂಗನ ಮಗನಾಗಿದ್ದು, ಶಿವಮಾರನ ಮೊಮ್ಮಗನಾಗಿದ್ದನು. ಎರೆಗಂಗನು ತಂದೆಯ ಆಳ್ವಿಕೆಯ ಕಾಲಕ್ಕೆ ಮರಣಹೊಂದಿದ್ದರಿಂದ, ಈತನು ಕ್ರಿ.ಶ.೭೨೫ ರಲ್ಲಿ ಗಂಗವಾಡಿಯ ಆಳ್ವಿಕೆಗೆ ಬಂದನು. ಇವನಿಗೆ ಮುತ್ತರಸ ಎಂದು ಶಾಸನಗಳು ಕರೆದಿವೆ. ಇವನು ಮುತ್ತೈಯ್ಯ, ಪೃಥ್ವೀಕೊಂಗಣಿ, ಕೊಂಕಣಿ ಮುತ್ತರಸ, ಪೆರ್ಮಾನಡಿ, ಶ್ರೀವಲ್ಲಭ, ಕಡ್ಡಾಣಿ, ಭೀಮಕೋಪ, ರಣಭೋಜನ ಮತ್ತು ಕೊಂಗಣಿ ರಾಜಾಧಿರಾಜಪರಮೇಶ್ವರ ಶ್ರೀಪುರುಷ ಎಂಬ ಬಿರುದುಗಳನ್ನು ಹೊಂದಿದ್ದನು. ಅಜ್ಜನ ಕಾಲದಲ್ಲಿ ಈತನು ಗಂಗವಾಡಿಯ ಪೂರ್ವದ ಪ್ರದೇಶಗಳಾದ ಕರೆಕುಂದ-೩೦೦, ಎಳೆನಗರನಾಡ-೭೦, ಆವನ್ಯನಾಡ-೩೦೦, ಪೆನುಕೊಂಡ-೧೨ ಗಳ ಆಡಳಿತಾಧಿಕಾರಿಯಾಗಿದ್ದನು. ಆರಂಭದಲ್ಲಿ ಈತನು ಬಾಣರ ದೊರೆ ಮಹಾವಲಿ ಬಾಣರಸನು ಗಂಗರ ಮೇಲೆ ಧಾಳಿ ಕೈಕೊಂಡಾಗ ಆತನೊಡನೆ ಕಾಳಗಕ್ಕಿಳಿಯಬೇಕಾಯ್ತು.

ಶಾಸನಗಳು ಮಾಧವ ಮುತ್ತರಸ (ಶ್ರೀಪುರುಷ)ನು ಬಾಣರ ಮೇಲೆ ಕೊಯತ್ತೂರ, ತೊಂಡಕಲ್ ಮತ್ತು ಮಾನಾಯತೂರ ಎಂಬಲ್ಲಿ ಧಾಳಿಯಿಟ್ಟ ವಿಷಯ ತಿಳಿಸುತ್ತವೆ[೬೩]. ಈ ದಂಡಯಾತ್ರೆಯಲ್ಲಿ ಗಂಗ ಶ್ರೀಪುರುಷನಿಗೆ ಅವನ ಅನೇಕ ಸಾಮಂತರುಗಳು ಸಹಾಯ ನೀಡಿದರು. ಅವರಲ್ಲಿ 'ಬಾಣಕುಲ ಕಲಕಲ' ಎಂಬ ಬಿರುದುಳ್ಳ ದುಂಡು ಎಂಬುವವನು ಪ್ರಮುಖ ಪಾತ್ರ ವಹಿಸಿದ್ದನೆಂದು ತಿಳಿದುಬರುತ್ತದೆ[೬೪]. ಆಗ ಗಂಗ ಶ್ರೀಪುರುಷನು ಬಾಣದೊರೆ ವಿಜಯಾದಿತ್ಯನ ಮಗನಾದ ಜಗದೇಕಮಲ್ಲನನ್ನು ಬಾಣರ ಸಿಂಹಾಸನದ ಮೇಲೆ ಕುಳ್ಳರಿಸಿ ಅವರನ್ನು ಗಂಗರ ಸಾಮಂತರನ್ನಾಗಿ ಮಾಡಿಕೊಂಡನು[೬೫].

ಚಾಲುಕ್ಯರು-ಗಂಗರು ಈ ವೇಳೆಯಲ್ಲಿ ಸುಮಧುರ ಸಂಭಂದಗಳನ್ನು ಹೊಂದಿದ್ದು ನಮಗೆ ತಿಳಿದುಬರುತ್ತದೆ. ಈ ಸಮಯದಲ್ಲಿ ಪಲ್ಲವರಿಗೆ ಅವರಿಂದ ಅನೇಕ ಬಾರಿ ಸೋಲುಂಟಾಗಿತ್ತು. ಈಗ ಪಲ್ಲವರ ಕಣ್ಣು ಗಂಗರ ಕೊಂಗುಪ್ರದೇಶದ ಮೇಲೆ ಬಿದ್ದಿತ್ತು. ಅದಕ್ಕಾಗಿ ನಂದಿವರ್ಮನು ಗಂಗರ ಮೇಲೆ ಧಾಳಿಯಿಟ್ಟು, ತನ್ನ ಪೂರ್ವಜರಿಂದ ಗಂಗರು ಕಸಿದು ತಂದಿದ್ದ ಉಗ್ರೋಧ್ಯ ಕಂಠಿಹಾರವನ್ನು ಮರಳಿ ಪಡೆದುಕೊಂಡನು[೬೬]. ಅದನ್ನು ಈ ಹಿಂದೆ ಭೂವಿಕ್ರಮನು ಕಂಚಿಗೆ ಧಾಳಿಯಿಟ್ಟು ಕಸಿದು ತಂದಿದ್ದನು[೬೭]. ನಂದಿವರ್ಮನೇನೋ ಉಗ್ರೋಧ್ಯವನ್ನು ಮರಳಿ ಪಡೆದುಕೊಂಡನಾದರೂ, ಗಂಗ ಶ್ರೀಪುರುಷನು ಅವನನ್ನು ಬಹಳಕಾಲ ಸುಮ್ಮನಿರಲು ಬಿಡಲಿಲ್ಲ. ಅದಕ್ಕಾಗಿ ಪಲ್ಲವರ ಮೇಲೆ ಹಲವಾರು ಯುದ್ಧಗಳನ್ನು ಕೈಕೊಂಡನು. ಅದರಲ್ಲಿ ವಿಲಂಥೆಯಲ್ಲಿ ನಡೆದ ಯುದ್ಧವು ಮಹತ್ವದ್ದಾಗಿದೆ. ಕ್ರಿ.ಶ. ೧೦೭೭ ರ ಶಾಸನವೊಂದು ಹೇಳುವಂತೆ ಶ್ರೀಪುರುಷನು ಪಲ್ಲವ ರಾಜನಾದ ಕಾಡುವೆಟ್ಟಿಯನ್ನು ಈ ಯುದ್ಧದಲ್ಲಿ ಕೊಂದುಹಾಕಿದನು. ಪಲ್ಲವರಿಂದ ಅವರ ಧ್ವಜವನ್ನು ಅಪಹರಿಸಿದನಲ್ಲದೇ, ನಂದಿವರ್ಮನಿಂದ ಅವನ ಪೆರ್ಮಾನಡಿ ಎಂಬ ಬಿರುದನ್ನು ಕೂಡಾ ಕಿತ್ತುಕೊಂಡನು. ತುಮಕೂರು ತಾಲೂಕಿನ ಹಿರೇಗುಂಡಗಲ ವೀರಗಲ್ಲಿನ ಪ್ರಕಾರ ಶ್ರೀಪುರುಷನ ಮಗ ಸಿಯೆಗೆಲ್ಲನು ಈ ಯುದ್ಧದಲ್ಲಿ ಪ್ರಮುಖ ಪಾತ್ರವಹಿಸಿದ್ದನು ಎಂದು ತಿಳಿದುಬರುತ್ತದೆ[೬೮]. ಕೆರೆಗೋಡಿರಂಗಾಪುರ ತಾಮ್ರಪಟಗಳೂ ಕೂಡಾ ಈ ವಿಲಂಥೆ ಯುದ್ಧದ ಕುರಿತು ವಿವರ ನೀಡುತ್ತಾ, ಈ ಯುದ್ಧದಲ್ಲಿ ಗಂಗ ಸೈನ್ಯ ಅನೇಕ ವೀರರುಗಳು, ಕುದುರೆಗಳು, ಆನೆಗಳು ಮತ್ತು ಶಸ್ತ್ರಸಜ್ಜಿತ ಸೈನಿಕರನ್ನು ಒಳಗೊಂಡು ವೈರಿಗಳ ಮೇಲೆ ಭೀಕರವಾಗಿ ವಿಜೃಂಭಿಸಿತು ಎಂದು ತಿಳಿಸುತ್ತದೆ[೬೯]. ನರಸಿಂಗರಾಜಪುರ ತಾಮ್ರಪಟಗಳು ಶ್ರೀಪುರುಷನು ಈ ಯುದ್ಧವನ್ನು ಗೆದ್ದು ಭೀಮಕೋಪ ಎಂಬ ಬಿರುದನ್ನು ಹೊಂದಿದನೆಂದಿದೆ. ಅಲ್ಲದೇ ಈತನ ಹರಿತವಾದ ಖಡ್ಗದಿಂದ, ಶತ್ರುಗಳ ಮತ್ತು ಅವರ ಆನೆಗಳ ರಕ್ತವು ಹರಿದು ಅದರಲ್ಲಿ ವಿಜಯಲಕ್ಷ್ಮೀಯು ಸ್ನಾನಮಾಡಿದಳೆಂದು ಉಲ್ಲೇಖಿಸಿದೆ[೭೦]. ಈ ಯುದ್ಧದಲ್ಲಿ ಬಾಣರು ಪಲ್ಲವರ ಪರವಾಗಿ ಭಾಗವಹಿಸಿದ್ದರು, ಅವರೂ ಕೂಡಾ ಗಂಗ ಶ್ರೀಪುರುಷನಿಂದ ಸೋತು ಹೋದರು[೭೧].

ಇವನ ಕಾಲದ ಇನ್ನೊಂದು ಪ್ರಮುಖ ಘಟನೆಯೆಂದರೆ, ಪಾಂಡ್ಯರೊಡನೆ ಈತನಿಗಿದ್ದ ಸಂಭಂದ. ಪಾಂಡ್ಯರು ಮತ್ತು ಪಲ್ಲವರಿಗೆ ಈಗಾಗಲೇ ಕೆಲಪ್ರದೇಶಗಳ ಸಲುವಾಗಿ ಯುದ್ಧಗಳು ನಡೆಯುತ್ತಲಿದ್ದವು[೭೨]. ಆಗ ಪಲ್ಲವರಿಗೆ

ತಲೆನೋವಾಗಿ ಪರಿಣಮಿಸಿದ್ದ ಅವರನ್ನು, ಸೋಲಿಸಿದ್ದ ಗಂಗರು ಪಾಂಡ್ಯರಿಗೆ ಮಿತ್ರರಾದರೆ, ಅವರ ಉದ್ದೇಶ ಸಫಲವಾಗಬಹುದಾಗಿತ್ತೇನೋ. ಹೀಗಾಗಿ ಪಾಂಡ್ಯರು ಗಂಗರೊಡನೆ ವೈವಾಹಿಕ ಸಂಭಂದ ಬೆಳೆಸಿರಬಹುದು. ಪಾಂಡ್ಯ ರಾಜಸಿಂಹನ ಮಗನಾದ ಜಟಿಲಪರಾಂತಕನನ್ನು ಗಂಗ ಶ್ರೀಪುರುಷನ ಮಗಳು ಮದುವೆಯಾಗಿದ್ದ ವಿಷಯ ನಮಗೆ ತಿಳಿದುಬರುತ್ತದೆ. ಮತ್ತು ಈ ಜಟಿಲಪರಾಂತಕ ರಾಜಸಿಂಹನ ನಂತರ ಪಾಂಡ್ಯರಾಜ್ಯದ ಉತ್ತರಾಧಿಕಾರಿಯಾದನು[೭೩].

ಇದೇ ವೇಳೆಗಾಗಲೇ ಕ್ರಿ.ಶ. ೭೫೮ ರಲ್ಲಿ ಎರಡನೆಯ ಕೀರ್ತಿವರ್ಮನನ್ನು ದಂತಿದುರ್ಗನು ಸೋಲಿಸಿ ಚಾಲುಕ್ಯರನ್ನು ಕಿತ್ತೊಗೆದು ರಾಷ್ಟ್ರಕೂಟರ ಸಾಮ್ರಾಜ್ಯವನ್ನು ಸ್ಥಾಪಿಸಿದನು. ಆಗ ಚಾಲುಕ್ಯರ ಸಾಮಂತರಾದ ಗಂಗರು ಅವರ ಪರವಾಗಿ ಹೋರಾಟಕ್ಕಿಳಿದಿರಬೇಕು. ಅಲ್ಲದೇ ಗಂಗ ಶ್ರೀಪುರುಷನು ಚಾಲುಕ್ಯ ಮನೆತನದ ವಿಜಯಮಹಾದೇವಿ ಎಂಬ ರಾಣಿಯನ್ನು ಹೊಂದಿ ಅವರೊಡನೆ ವೈವಾಹಿಕ ಸಂಭಂದ ಬೆಳೆಸಿದ್ದನು[೭೪]. ಇದಕ್ಕೆ ಉದಾಹರಣೆಯಾಗಿ ಹಲವಾರು ಶಾಸನಗಳು ರಾಷ್ಟ್ರಕೂಟ (ರಟ್ಟ)ರೊಡನೆ ಗಂಗರ ಶ್ರೀಪುರುಷನು ಕಾಳಗಕ್ಕಿಳಿದ ವಿಷಯವನ್ನು ಉಲ್ಲೇಖಿಸುತ್ತವೆ[೭೫]. ಗಂಗರ ಮೇಲೆ ರಾಷ್ಟ್ರಕೂಟರ ಒಂದನೆಯ ಕೃಷ್ಣನು ಧಾಳಿಯನ್ನು ಮಾಡಿದ ವಿಷಯವನ್ನು ಶಾಸನಗಳು ಉಲ್ಲೇಖಿಸುತ್ತವೆ. ಆಗ ಗಂಗ ಮತ್ತು ರಾಷ್ಟ್ರಕೂಟರ ಸೈನ್ಯಗಳ ನಡುವೆ ಪಿಂಚನೂರು, ಕಗಿಮೊಗೆಯೂರು ಮತ್ತು ಬಾಗೆಯೂರು ಎಂಬಲ್ಲಿ ಯುದ್ಧಗಳು ನಡೆದವು[೭೬]. ಶ್ರೀಪುರುಷನ ಮಗನಾದ ಸಿಯೆಗೆಲ್ಲನು ಈ ಯುದ್ಧಗಳಲ್ಲಿ ಪ್ರಮುಖ ಪಾತ್ರವಹಿಸಿದ್ದನೆಂದು ತಿಳಿದುಬರುತ್ತದೆ. ತೆಲಗಾಂವ್ ಶಾಸನದ ಪ್ರಕಾರ ಕ್ರಿ.ಶ.೭೬೮ ರಲ್ಲಿ ಒಂದನೆಯ ಕೃಷ್ಣನು ಗಂಗರ ರಾಜ್ಯದ ಮೇಲೆ ಧಾಳಿಯಿಟ್ಟು ಅದರ ಅನೇಕ ಭಾಗಗಳನ್ನು ವಶಪಡಿಸಿಕೊಂಡ ವಿಷಯ ತಿಳಿಯುತ್ತದೆ[೭೭]. ಒಂದನೆಯ ಕೃಷ್ಣನು ಮಣಕುಂಡದ ಬಳಿ ತನ್ನ ಶಿಬಿರವನ್ನು ಹೂಡಿದ್ದನೆಂದೂ, ಗಂಗ ಶ್ರೀಪುರುಷನು ತನ್ನ ರಾಜಧಾನಿಯನ್ನು ಮಾನ್ಯಪುರ ಅಥವಾ ಮಣ್ಣೆಗೆ ಬದಲಾಯಿಸಬೇಕಾಯ್ತೆಂದು ತಿಳಿದುಬರುತ್ತದೆ. ಹೀಗೆ ಕೊನೆಗೆ ರಾಷ್ಟ್ರಕೂಟರು ಸಾಮ್ರಾಟರಾದಾಗ ಚಾಲುಕ್ಯರ ಅನೇಕ ಸಾಮಂತರು ರಾಷ್ಟ್ರಕೂಟರ ಅಧೀನರಾದರು. ಗಂಗರೂ ಕೂಡ ಅದನ್ನು ಒಪ್ಪಬೇಕಾಯ್ತು.

ಮುಂದೆ ಒಂದನೆಯ ಕೃಷ್ಣನ ನಂತರ ರಾಷ್ಟ್ರಕೂಟ ಸಾಮ್ರಾಜ್ಯದಲ್ಲಿ ಉತ್ತರಾಧಿಕಾರಕ್ಕಾಗಿ ಧೃವ ಮತ್ತು ಎರಡನೆಯ ಗೋವಿಂದರ ನಡುವೆ ಕಾಳಗ ಆರಂಭವಾದಾಗ, ಗೋವಿಂದನಿಗೆ ಹಲವಾರು ಸಾಮಂತರು ಸಹಾಯನೀಡಿದರು. ಆಗ ಗಂಗ ಶ್ರೀಪುರುಷ ಈ ಸಮಯದ ಸದುಪಯೋಗ ಪಡೆದು ಎರಡನೆಯ ಗೋವಿಂದನನ್ನು ಬೆಂಬಲಿಸಿದನು. ಆದರೆ ಎರಡನೆಯ ಗೋವಿಂದನಿಗೆ ಸೋಲಾಗಿ ಧೃವನು ಅಧಿಕಾರಕ್ಕೆ ಬಂದಾಗ ಆ ಸಾಮಂತರುಗಳೆಲ್ಲ ಶಿಕ್ಷಿಸಲ್ಪಟ್ಟರು. ಸಹಜವಾಗಿ ಗಂಗ ಶ್ರೀಪುರುಷನು ಕೂಡಾ ಶಿಕ್ಷೆಗೊಳಗಾದನು. ಆಗ ನಡೆದ ಯುದ್ಧದಲ್ಲಿ ಶ್ರೀಪುರುಷನು ಸೋತು ಅಪಾರ ಹಾನಿಗೊಳಗಾದನು[೭೮].

**ಶಿವಮಾರ (ಕ್ರಿ.ಶ.೭೮೮-೮೧೨)[೭೯]:**

ಶ್ರೀಪುರುಷನ ನಂತರ ಅವನ ಮಗ ಸೈಗೊಟ್ಟ ಶಿವಮಾರನು ಆಳ್ವಿಕೆಗೆ ಬಂದನು. ಈತನು ರಾಷ್ಟ್ರಕೂಟ ಮೂರನೆಯ ಗೋವಿಂದನ ಸಾಮಂತನಾಗಿದ್ದನೆಂದು ತಿಳಿದುಬರುತ್ತದೆ[೮೦]. ಇವನಾಳ್ವಿಕೆಯ ಆರಂಭಕಾಲವು ಸಿಂಹಾಸನದ

ಉತ್ತರಾಧಿಕಾರತ್ವಕ್ಕಾಗಿ ನಡೆದ ಒಳಜಗಳಗಳಿಂದಾಗಿ ಶಾಂತಿಯುತವಾಗಿರಲಿಲ್ಲ. ಈತನ ಸಹೋದರನಾದ ಕೋವಲಲನಾಡದ ಪ್ರಾಂತ್ಯಾಧಿಕಾರಿಯಾದ ದುಗ್ಗಮಾರನು ಸಿಂಹಾಸನಕ್ಕಾಗಿ ಕಲಹವನ್ನಾರಂಭಿಸಿದನು[೯೦]. ಆದರೆ ಆ ಕದನದಲ್ಲಿ ಎರಡನೆಯ ಶಿವಮಾರನಿಗೆ ನೊಳಂಬರಾಜ ಸಿಂಗಪೋತನು ಸಹಾಯನೀಡಿದನು. ಅದರಿಂದಾಗಿ ಶಿವಮಾರನು ಜಯಿಸಿ, ಇಡೀ ಗಂಗವಾಡಿಯ ಉತ್ತರಾಧಿಕಾರಿಯಾದನು[೯೧].

ತಂದೆಯ ಕಾಲದಲ್ಲಿ ರಾಷ್ಟ್ರಕೂಟ ಸಾಮ್ರಾಜ್ಯದಲ್ಲಿ ನಡೆದ ಅಂತಃಕಲಹದಲ್ಲಿ ಗಂಗರು ಭಾಗವಹಿಸಿ ಕಹಿಯುಂಡಿದ್ದರೂ, ಇವನೂ ಕೂಡ ಅದೇ ನೀತಿಯನ್ನು ಮುಂದುವರೆಯಿಸಿದನು. ಮಾಳವ, ವೆಂಗಿ, ಮತ್ತು ಗಂಗ ಶಿವಮಾರರು ರಾಷ್ಟ್ರಕೂಟ ಗೋವಿಂದನಿಗೆ ಸಹಾಯ ನೀಡಲು ಅವನನ್ನು ಬೆಂಬಲಿಸಿದರು[೯೨]. ಆದರೆ ಧೃವನು ರಾಷ್ಟ್ರಕೂಟರ ಅಂತಃಕಲಹದ ಯುದ್ಧದಲ್ಲಿ ಜಯಶಾಲಿಯಾಗಿ ತನಗೆ ವಿರುದ್ಧವಾಗಿ ಗೋವಿಂದನಿಗೆ ಸಹಾಯ ನೀಡಿದವರನ್ನು ಶಿಕ್ಷಿಸಲು ಮನಸ್ಸುಮಾಡಿದನು. ಪರಿಣಾಮ ಗಂಗರ ಮೇಲೆ ಧಾಳಿಯಿಟ್ಟು ಅವರನ್ನು ಸೋಲಿಸಿ ಶಿವಮಾರನನ್ನು ಬಂಧನದಲ್ಲಿಟ್ಟನು. ತನ್ನ ಮಗನಾದ ಕಂಭ ಅಥವಾ ಸ್ತಂಭನನ್ನು ಗಂಗವಾಡಿಯ ಪ್ರಾಂತ್ಯಾಧಿಕಾರಿಯನ್ನಾಗಿ ನೇಮಿಸಿದನು[೯೩]. ಕ್ರಿ.ಶ.೭೯೪ ರಲ್ಲಿ ಧೃವನು ಮರಣಿಸಿದಾಗ, ಮೂರನೆಯ ಗೋವಿಂದನು ರಾಷ್ಟ್ರಕೂಟರ ಉತ್ತರಾಧಿಕಾರಿಯಾದನು. ಆಗ ಸಹಜವಾಗಿ ಕಂಭನು ಅವನ ವಿರುದ್ಧ ಸಿಂಹಾಸನಕ್ಕಾಗಿ ಅಂತಃಕಲಹವನ್ನಾರಂಭಿಸಿದನು. ಕಂಭನು ಹನ್ನೆರಡುಜನ ಸಾಮಂತರ ಬೆಂಬಲವನ್ನು ಗಳಿಸಿಕೊಂಡು ಗೋವಿಂದನ ಮೇಲೆ ಧಾಳಿಗಾರಂಭಿಸಿದನು, ಆ ವೇಳೆಗೆ ಶಿವಮಾರನನ್ನು ಸೆರೆಯಿಂದ ಬಿಟ್ಟರೆ ತನಗೆ ಸಹಾಯವಾದೀತೆಂದು ಅವನನ್ನು ಬಿಡುಗಡೆಗೊಳಿಸಿದನು[೯೪]. ಆಶ್ಚರ್ಯವೆಂದರೆ ಶಿವಮಾರನು ಮೂರನೆಯ ಗೋವಿಂದನಿಗೆ ಸಹಾಯ ನೀಡುವದನ್ನು ಬಿಟ್ಟು ಕಂಭನ ಪರವಾಲಿದನು. ಆಗ ಮುದುಗುಂದೂರು ಎಂಬಲ್ಲಿ ನಡೆದ ಯುದ್ಧದಲ್ಲಿ, ಗೋವಿಂದನು ಚಾಲುಕ್ಯ ಹೈಹಯ ಮತ್ತು ಆನೇಕ ಸಾಮಂತರುಗಳ ಸಹಾಯ ಪಡೆದು ಕಂಭ ಮತ್ತು ಅವನ ಪಡೆಯನ್ನು ಸೋಲಿಸಿದನು. ಮತ್ತೆ ಶಿವಮಾರನನ್ನು ಸೆರೆಯಲ್ಲಿಟ್ಟನು[೯೫]. ನಂತರ ಸಹೋದರ ಕಂಭನನ್ನು ಮನ್ನಿಸಿ ಮತ್ತೆ ಅವನನ್ನು ಗಂಗವಾಡಿಯ ಪ್ರಾಂತ್ಯಾಧಿಕಾರಿಯನ್ನಾಗಿ ನೇಮಿಸಲಾಯ್ತು. ಕೆಲಕಾಲದ ನಂತರ ಗಂಗ ಶಿವಮಾರನನ್ನು ಕೂಡ ಮನ್ನಿಸಿ ಗಂಗವಾಡಿಯ ಸಿಂಹಾಸನದ ಮೇಲೆ ಕುಳ್ಳಿರಿಸಲಾಯಿತು. ಇದು ಅವನು ಪೂರ್ವ ಚಾಲುಕ್ಯರ ದೊರೆ ವಿಜಯಾದಿತ್ಯನ ಉಪಟಳದಿಂದ ತಪ್ಪಿಸಿಕೊಳ್ಳಲು ಮಾಡಿದ ಉಪಾಯವಾಗಿರಬಹುದು. ಈ ಸಿಂಹಾಸನಾರೋಹಣದ ಸಮಯದಲ್ಲಿ ಮೂರನೆಯ ಗೋವಿಂದ ಮತ್ತು ಪಲ್ಲವ ಮೂರನೆಯ ನಂದಿವರ್ಮರು ಭಾಗವಹಿಸಿದ್ದುದಾಗಿ ತಿಳಿದುಬರುತ್ತದೆ[೯೬].

ನಂತರ ಗೋವಿಂದನು ಕ್ರಿ.ಶ. ೭೯೫-೮೦೦ರವರೆಗೆ ಉತ್ತರ ಭಾರತಕ್ಕೆ ದಂಡಯಾತ್ರೆಗೆ ತೆರಳಿದನು. ಆಗ ರಾಷ್ಟ್ರಕೂಟರ ಕೆಲ ಸಾಮಂತರುಗಳು ದಂಗೆಯೆದ್ದರು. ಈ ಸಮಯದ ಉಪಯೋಗ ಪಡೆದ ಗಂಗ ಶಿವಮಾರನು ಚಾಲುಕ್ಯದೊರೆಯಾದ ಬಲವರ್ಮನು, ರಾಷ್ಟ್ರಕೂಟರ ವಿರುದ್ಧ ದಂಗೆಯೆದ್ದಾಗ ಅವನನ್ನು ಸದೆಬಡಿದನೆಂದು

ಶಾಸನಗಳಿಂದ ತಿಳಿದುಬರುತ್ತದೆ[೮೮]. ಮುಂದೆ ಈತನು ಮೂರನೆಯ ಗೋವಿಂದನ ಜೊತೆ ಪೂರ್ವಚಾಲುಕ್ಯ ದೊರೆ ಎರಡನೆಯ ವಿಜಯಾದಿತ್ಯನ ವಿರುದ್ಧ ನಡೆದ ಯುದ್ಧಗಳಲ್ಲಿ ಭಾಗವಹಿಸಿದ್ದು ತಿಳಿದುಬರುತ್ತದೆ. ಈ ವಿಜಯಾದಿತ್ಯನ ಮೇಲೆ ರಾಷ್ಟ್ರಕೂಟ-ಗಂಗರು ಒಂದನೂರಾ ಎಂಟು ಯುದ್ಧಗಳನ್ನು ಕೈಕೊಂಡರೆಂದು ಶಾಸನವೊಂದು ಹೇಳುತ್ತದೆ[೮೯].

**ಒಂದನೆಯ ರಾಜಮಲ್ಲ ಸತ್ಯವಾಕ್ಯ (ಕ್ರಿ.ಶ.೮೧೭-೮೫೩)[೯೦]:**

ಶಿವಮಾರನಿಗೆ ಇಬ್ಬರು ಮಕ್ಕಳಿದ್ದು, ಅವರಲ್ಲಿ ಮಾರಸಿಂಹನು ಮೊದಲೇ ತೀರಿಹೋಗಿದ್ದನು. ಆದರೆ ಅವನ ಇನ್ನೊಬ್ಬ ಮಗ ಪೃಥ್ವೀಪತಿಯು ಇನ್ನೂ ಪ್ರಾಪ್ತನಾಗಿಲ್ಲದ್ದರಿಂದ, ಅವನ ನಂತರ ಶಿವಮಾರನ ಸಹೋದರ ವಿಜಯಾದಿತ್ಯನು ಕೆಲಕಾಲ ಆಳ್ವಿಕೆ ಮಾಡಿರಬಹುದಾದರೂ, ಮುಂದೆ ಅವನ ಮಗ ಒಂದನೆಯ ರಾಜಮಲ್ಲನು ಆಳ್ವಿಕೆಗೆ ಬಂದನು[೯೧]. ರಾಜಮಲ್ಲನು ಅಮೋಘವರ್ಷನ ಸಾಮಂತನಾಗಿ ಆಳ್ವಿಕೆಯನ್ನು ಮಾಡಿಕೊಂಡಿದ್ದನು. ಶಿವಮಾರನ ಕಾಲದಲ್ಲಿ ಗಂಗರಿಗೆ ಅವರ ಗಂಗವಾಡಿಯ ಮೇಲಿನ ಪೂರ್ಣ ಹಕ್ಕು ದೊರೆತಿರಲಿಲ್ಲವೆಂದು ಕಾಣುತ್ತದೆ. ಆದರ ಅರ್ಧಭಾಗವನ್ನು ರಾಷ್ಟ್ರಕೂಟ ಅಮೋಘವರ್ಷನ ಸಾಮಂತ ಮತ್ತು ನಿಷ್ಠೆಯ ಸೇವಕನಾದ ಚಲ್ಲಕೇತನ ಮನೆತನದ ಬಂಕೇಶನು ಆಳುತ್ತಿದ್ದುದಾಗಿ ಅವನ ಕೊಣ್ಣೂರು ತಾಮ್ರಶಾಸನಗಳ ಮೂಲಕ ತಿಳಿದುಬರುತ್ತದೆ[೯೨]. ಅದೇ ವೇಳೆಯಲ್ಲಿ ರಾಷ್ಟ್ರಕೂಟರ ಸಾಮ್ರಾಜ್ಯದಲ್ಲಿ ಅರಾಜಕತೆಯೆದ್ದಿತ್ತು. ಈ ಸಮಯವನ್ನು ಸಾಧಿಸಿಕೊಂಡು ಒಂದನೆಯ ರಾಜಮಲ್ಲನು ರಾಷ್ಟ್ರಕೂಟರ ಆಧೀನತ್ವವನ್ನು ತೊರೆಯಲು ದಂಗೆಯೆದ್ದನು. ಇದನ್ನು ಸದೆಬಡಿಯಲು ಅಮೋಘವರ್ಷನು ಬಂಕೇಶನಿಗೆ ಕೇಳಿಕೊಂಡನು. ಆಗ ಬಂಕೇಶನು ತನ್ನ ಸೈನ್ಯದೊಂದಿಗೆ ಗಂಗವಾಡಿಯ ಮೇಲೆ ಧಾಳಿಯಿಟ್ಟು ಕೇದಲ ಕೋಟೆಯನ್ನು ಹಿಡಿದುಕೊಂಡು ಕಾವೇರಿಯನ್ನು ದಾಟುವ ಸನ್ನಾಹದಲ್ಲಿದ್ದಾಗ ಅಮೋಘವರ್ಷನು ಅವನನ್ನು ರಾಜಧಾನಿಗೆ ಮರಳಿ ಕರೆಸಿಕೊಂಡನು. ಈ ಸಮಯವನ್ನು ಸಾಧಿಸಿ ರಾಜಮಲ್ಲನು ತನ್ನ ಗಂಗವಾಡಿಯ ಎಲ್ಲ ಪ್ರದೇಶಗಳನ್ನು ಹಿಡಿದುಕೊಂಡನು[೯೩].

ಈತನ ಕಾಲದ ಇನ್ನೊಂದು ಪ್ರಮುಖ ಘಟನೆಯೆಂದರೆ, ನೊಳಂಬರೊಂದಿಗೆ ವೈವಾಹಿಕ ಸಂಭಂದ. ತಂದೆಯ ಕಾಲದಲ್ಲಿ ಕಳೆದುಕೊಂಡಿದ್ದ ಪ್ರತಿಷ್ಠೆಯನ್ನು ಮರಳಿ ಪಡೆದ ನಂತರ, ಬಲಾಢ್ಯವಾಗಿದ್ದ ನೊಳಂಬರು ಮತ್ತೆ ಈತನ ಪ್ರಭಾವವನ್ನು ಕಂಡು ಈತನೊಡನೆ ಸುಮಧುರ ಸಂಭಂದ ಬೆಳೆಸಿದರು. ಈತನು ನೊಳಂಬರಾಜನ ಸಹೋದರಿಯನ್ನು ಮದುವೆಯಾಗಿದ್ದನು. ಅಲ್ಲದೇ ನಂತರ ನೀತಿಮಾರ್ಗನ ಸಹೋದರಿಯಾದ ಜಯಬ್ಬೆಯನ್ನು ನೊಳಂಬರಾಜನಾದ ಅಧಿರಾಜ ಪೊಳಲಚೋರನಿಗೆ ನೀಡಿ ಮದುವೆಮಾಡಲಾಗಿತ್ತು[೯೪].

**ಕೊಂಗು ಶಾಖೆ:**

ಇದೇ ವೇಳೆಗೆ ಗಂಗರ ಇನ್ನೊಂದು ಶಾಖೆ ಅಸ್ತಿತ್ವಕ್ಕೆ ಬಂದು ಕ್ರಿ.ಶ.೮೨೮ ರಿಂದ ೯೨೧ ರ ವರೆಗೆ ಗಂಗರಾಜ್ಯದ ಕೊಂಗುಪ್ರದೇಶದ ಸುತ್ತಮುತ್ತ ಆಳ್ವಿಕೆಯನ್ನು ನಡೆಸಿತು. ಅದನ್ನು ಕೊಂಗುಶಾಖೆ ಎಂದು ಗುರುತಿಸಲಾಗಿದೆ.



**ಒಂದನೆಯ ಪೃಥ್ವೀಪತಿ (ಕ್ರಿ.ಶ.೮೫೮-೮೭೮)[೯೫]:**

ಎರಡನೆಯ ಶಿವಮಾರನ ನಂತರ ಆತನ ಎರಡನೆಯ ಮಗನಾದ ದಿಂಡಿಕ ಅಥವಾ ಪೃಥ್ವೀಪತಿಯು ಅಪ್ರಾಪ್ತವಯಸ್ಕನಾಗಿದ್ದರಿಂದ ಗಂಗರ ಮುಖ್ಯಶಾಖೆಯ ಆಳ್ವಿಕೆಯನ್ನು ವಿಜಯಾದಿತ್ಯ ಅವನ ನಂತರ ರಾಜಮಲ್ಲರು ಮಾಡುತ್ತಿದ್ದರು. ಆದರೆ ಆತ ಪ್ರಾಪ್ತವಯಸ್ಕನಾದಾಗ ಆತನಿಗೆ ಸಾಮ್ರಾಜ್ಯವನ್ನು ಬಿಟ್ಟುಕೊಡಲು ನಿರಾಕರಿಸಿದರು. ಇದಕ್ಕಾಗಿ ಆತ ಯುದ್ಧಕ್ಕಿಳಿಯಬೇಕಾಯ್ತು. ಆಗ ಪೃಥ್ವೀಪತಿಯು ಬಾಣ, ವೈದುಂಬ ಮತ್ತು ಕೆಲಜನ ಸಾಮಂತರುಗಳ ಬೆಂಬಲದಿಂದ ಯುದ್ಧವನ್ನು ಕೈಕೊಂಡನು[೯೬]. ಆಗ ಮಾಂಡವು, ಮದುಮದುರ್ಗ, ಮಣ್ಣೆ, ಮಂಗಲೆ ಮತ್ತು ಸೋರಿಮಲೆ ಎಂಬಲ್ಲಿ ಯುದ್ಧಗಳು ನಡೆದವೆಂದು ಶಾಸನಗಳು ತಿಳಿಸುತ್ತವೆ[೯೭]. ಈ ಯುದ್ಧದಲ್ಲಿ ಒಂದುಕಡೆ ಗಂಗರು ಮತ್ತು ನೊಳಂಬರು, ಇನ್ನೊಂದು ಕಡೆ ಪೃಥ್ವೀಪತಿ, ಬಾಣರು ಮತ್ತು ವೈದುಂಬರು ಇದ್ದು ಹೋರಾಟಗಳು ನಡೆದವು. ಮೊದಮೊದಲಿಗೆ ಗಂಗರು ಮತ್ತು ನೊಳಂಬರು ತೊಂದರೆಗೀಡಾದರೂ ಕೂಡ ನಂತರ ನೊಳಂಬಪಲ್ಲವ ಒಂದನೆಯ ಮಹೇಂದ್ರನಿಂದಾಗಿ ಅವರು ಮೇಲುಗೈಸಾಧಿಸಿದರು[೯೮]. ಮಹೇಂದ್ರ ಕಳಿಸಿದ ಸೈನ್ಯವು ಬಾಣರ ಪೆರ್ಮಾವಿ ಮತ್ತು ಕೊಯರೂರ ಪಟ್ಟಣಗಳನ್ನು ಸುಟ್ಟುಭಸ್ಮ ಮಾಡಿತೆಂದು ತಿಳಿದುಬರುತ್ತದೆ[೯೯]. ಇಷ್ಟೆಲ್ಲಾ ಯುದ್ಧಗಳನ್ನು ಕೈಕೊಂಡು ಕೂಡಾ ಪೃಥ್ವೀಪತಿಯು ತನ್ನ ಪೂರ್ವಜರ ಸಾಮ್ರಾಜ್ಯವನ್ನು ಗಳಿಸಿಕೊಳ್ಳದಾದನು. ಆದರೆ ಅವನು ಕೊಂಗುದೇಶ ಮತ್ತು ಅದರ ಸುತ್ತಲಿನ ಪ್ರದೇಶಗಳನ್ನು ಪಡೆದು ಅಲ್ಲಿ ಗಂಗರ ಇನ್ನೊಂದು ಶಾಖೆಗೆ ಅಡಿಪಾಯ ಹಾಕಿದನು[೧೦೦]. ಒಂದನೆಯ ಪೃಥ್ವೀಪತಿಯು ತನ್ನ ಮಗಳಾದ ಕುಂದವ್ವೆಯನ್ನು ಬಾಣ ದೊರೆಗೆ ಮದುವೆ ಮಾಡಿಕೊಟ್ಟಿದ್ದನು. ತಿರುವಳ್ಳಂ ಶಾಸನದ ಪ್ರಕಾರ ವಣವಿದ್ಯಾಧರನು ಪೃಥ್ವೀಪತಿಯ ಅಳಿಯನಾಗಿದ್ದ ವಿಷಯ ತಿಳಿದುಬರುತ್ತದೆ[೧೦೧].

ಪಲ್ಲವದೊರೆ ನೃಪತುಂಗವರ್ಮ ಪಾಂಡ್ಯರ ವಿರುದ್ಧ ಎರಡನೆಯ ವರ್ಗುಣಪಾಂಡ್ಯನ ಮೇಲೆ ಯುದ್ಧ ಸಾರಿದಾಗ, ಪೃಥ್ವೀಪತಿಯು ಪಲ್ಲವರಿಗೆ ಸಹಾಯಕನಾಗಿ, ವರ್ಗುಣಪಾಂಡ್ಯನೊಡನೆ ಹೋರಾಟಕ್ಕಿಳಿದನು[೧೦೨]. ಆಗ ನಡೆದ ನಿರ್ಣಾಯಕ ಕಾಳಗದಲ್ಲಿ ಕುಂಭಕೋಣಂ ಬಳಿಯ ಶ್ರೀಪುರಂಬಿಯಂ ಎಂಬಲ್ಲಿ ಎರಡನೆಯ ವರ್ಗುಣ ಮತ್ತು ಪೃಥ್ವಿಪತಿ ಅಪರಾಜಿತರು ಕ್ರಿ.ಶ.೮೮೭-೭೮ ರಲ್ಲಿ ಎದುರಾದರು. ಆಗ ಪಲ್ಲವರಿಗೆ ಜಯವಾಯಿತಾದರೂ ಪೃಥ್ವೀಪತಿ ಅಪರಾಜಿತನ ರಣರಂಗದಲ್ಲಿ ಮರಣಿಸಬೇಕಾಯ್ತು[೧೦೩].

ರಾಷ್ಟ್ರಕೂಟರೊಡನೆ ಈತ ಅಂತಹ ಉತ್ತಮ ಸಂಭಂದವನ್ನೇನೂ ಹೊಂದಿರಲಿಲ್ಲವೆಂದೇ ಹೇಳಬಹುದು. ಆದರೆ ಪೃಥ್ವೀಪತಿಯು ಅಮೋಘವರ್ಷನ ಇಬ್ಬರು ಸಾಮಂತರಾದ ರಾಜದಂಡಿಯ ಮಕ್ಕಳಾದ ನಾಗದಂತ ಮತ್ತು ಜೋರಿಗರಿಗೆ ಆಶ್ರಯನೀಡಿದ್ದನೆಂಬ ವಿಷಯ ಶಾಸನಗಳಿಂದ ತಿಳಿದುಬರುತ್ತದೆ[೧೦೪]. ಅದೇ ಶಾಸನ ಮುಂದುವರಿದು ಈತ ವೈಂಬಲಗುರಿ ಎಂಬಲ್ಲಿ ಯುದ್ಧವೊಂದನ್ನು ಕೈಕೊಂಡನೆಂದು ಹೇಳುತ್ತದೆ ಇದರಿಂದ ರಾಷ್ಟ್ರಕೂಟರ ವಿರುದ್ಧವಾಗಿ ಆ ಸಾಮಂತರನ್ನು ರಕ್ಷಿಸಲು ಪೃಥ್ವೀಪತಿ ಈ ಯುದ್ಧ ಕೈಕೊಂಡಿರಬಹುದೆಂದೆನಿಸುತ್ತದೆ.

**ಎರಡನೆಯ ಪೃಥ್ವೀಪತಿ (ಕ್ರಿ.ಶ.೯೦೦-೯೨೦)[೧೦೫]:**

ಎರಡನೆಯ ಮಾರಸಿಂಹನ ಮಗನಾದ ಎರಡನೆಯ ಪೃಥ್ವೀಪತಿಯು ತನ್ನ ಅಜ್ಜ ಒಂದನೆಯ ಪೃಥ್ವೀಪತಿಯ ನಂತರ ಪಟ್ಟಕ್ಕೆ ಬಂದನು. ಅಜ್ಜನ ಕಾಲದಲ್ಲಿ ಈ ಶಾಖೆಯ ಅರಸರುಗಳು ಪಲ್ಲವರೊಡನೆ ಉತ್ತಮ ಸಂಭಂದ ಹೊಂದಿದ್ದರು. ಆದರೆ ಅದನ್ನು ಈತ ಬದಲಾಯಿಸಿ, ಚೋಳರೊಡನೆ ಸವಿನಯ ಸಂಭಂದವನ್ನು ಹೊಂದಿದನು. ಅಲ್ಲದೇ ಅವರ ಸಹಾಯದಿಂದ ಬಾಣರ ಮೇಲೆ ಎರಗಿ ಅವರನ್ನು ಸೋಲಿಸಿದನು. ಆಗ ಈತನು ಚೋಳದೊರೆ ಒಂದನೆಯ ಪರಾಂತಕನಿಂದ ಹಸ್ತಿಮಲ್ಲ ಮತ್ತು ಬಾಣರಾಧಿಪತಿ ಎಂಬ ಬಿರುದುಗಳನ್ನು ಹೊಂದಿದನೆಂದು ಉದಯೆಂದಿರಂ ತಾಮ್ರಪಟಗಳ ಮೂಲಕ ತಿಳಿದುಬರುತ್ತದೆ[೧೦೬]. ಮತ್ತು ಶಾಸನವು ಮುಂದುವರೆದು ಈತನಿಗೆ ಶೆಂಬಿಯನ್ ಮವಳಿವಣರೈಯಂ ಎಂಬ ಬಿರುದಿದ್ದುದನ್ನು ತಿಳಿಸುತ್ತದೆ. ಕೆಲಕಾಲದ ನಂತರ ರಾಷ್ಟ್ರಕೂಟರ ಮೂರನೆಯ ಕೃಷ್ಣನು ತನ್ನ ಬಲವನ್ನು ಹೆಚ್ಚಿಸಿಕೊಂಡಾಗ ಈತ ಮತ್ತೊಮ್ಮೆ ಅವನ ಕಡೆಗೆ ವಾಲಿದನು. ಆಗ ಈತನು ಕನ್ನರದೇವ ಮತ್ತು ಗಂಗರೈಯರ್ ಎಂಬ ಬಿರುದುಗಳನ್ನು ಧರಿಸಿದನು[೧೦೭]. ನಂದಿದುರ್ಗದ ಬಳಿ ಗುಡ್ಡಗಾಡು ಅರಸುಗಳನ್ನು ಸೋಲಿಸಿ ಕೃಷ್ಣಾಧಿರಾಜ ಪಾರವಿಪುರಾಧಿಪತಿ ಮತ್ತು ನಂದಿನಾಥನೆಂಬ ಬಿರುದುಗಳಿಸಿದನು. ಮುಂದೆ ಪಲ್ಲವರನ್ನು ಗೆದ್ದು ಅವರಿಂದ ಧ್ವಜವನ್ನು ಕಿತ್ತುಕೊಂಡನು[೧೦೮]. ಆದರೆ ಇವನ ನಂತರ ಈ ಗಂಗ ಶಾಖೆಯು ಮತ್ತೆ ಮುಖ್ಯ ತಲಕಾಡು ಶಾಖೆಯೊಂದಿಗೆ ಬೆರೆತು ಒಂದಾಯಿತು.

**ನೀತಿಮಾರ್ಗ (ಎರೆಯಗಂಗ) (ಕ್ರಿ.ಶ.೮೫೩-೮೬೯)[೧೦೯]:**

ಕ್ರಿ.ಶ. ೮೫೩ರಲ್ಲಿ ಒಂದನೆಯ ರಾಜಮಲ್ಲನ ಮರಣದ ನಂತರ ಅವನ ಮಗನಾದ ನೀತಿಮಾರ್ಗನು ಗಂಗರ ಮುಖ್ಯ ತಲಕಾಡು ಶಾಖೆಗೆ ಆಳ್ವಿಕೆಗೆ ಬಂದನು. ಈತನಿಗೆ ಎರೆಯಗಂಗದೇವ, ರಣವಿಕ್ರಮಯ್ಯ, ನೀತಿಮಾರ್ಗ, ಪೆರ್ಮಾನಡಿ ಎಂಬ ಬಿರುದುಗಳಿದ್ದವೆಂದು ತಿಳಿದುಬರುತ್ತದೆ[೧೧೦]. ಪಟ್ಟಕ್ಕೆ ಬಂದ ನಂತರ ಈತನು ಬಾಣರೊಡನೆ ಕದನಕ್ಕಿಳಿದನು. ನೊಳಂಬರಿಗೆ ಸೇರಿದ ಗಂಗ-೬೦೦೦ ವನ್ನು ಪಡೆಯಲು ಪಲ್ಲವರು, ಬಾಣರು ಮತ್ತು ಗಂಗರ ಇನ್ನೊಂದು ಸಾಖೆಯ ಪೃಥ್ವೀಪತಿಯರು ಸೇರಿ ಪ್ರಯತ್ನಿಸುತ್ತಿದ್ದರು. ಅದಕ್ಕಾಗಿ ಬಾಣರ ಮೇಲೆ ನೀತಿಮಾರ್ಗನು ದಂಡಯಾತ್ರೆ ಕೈಕೊಂಡನು. ಮುಳಬಾಗಿಲ ಶಾಸನದ ಪ್ರಕಾರ ಯುದ್ಧವು ನಿರ್ಣಾಯಕವಾಗಿ, ಬಾಣರ ಹಲವಾರು ಪ್ರದೇಶಗಳನ್ನು ನೀತಿಮಾರ್ಗನು ವಶಪಡಿಸಿಕೊಂಡನು[೧೧೧]. ಈ ಯುದ್ಧದಲ್ಲಿ ನೀತಿಮಾರ್ಗನಿಗೆ ಅವನ ಅಳಿಯನಾದ ನೊಳಂಬರಾಜ ಪೋಲವೀರನು ಸಹಾಯಕನಾಗಿದ್ದ. ಅಲ್ಲದೇ ನೊಳಂಬ ದಂಡನಾಯಕನಾದ ಪೊಂಪೆಲ್ಲನು ಮುರುಗ್ಗೆಪಾಡಿ ಎಂಬಲ್ಲಿ ನಡೆದ ಯುದ್ಧದಲ್ಲಿ ವೀರಮರಣವನ್ನಪ್ಪಿದನೆಂದು ಶಾಸನದಿಂದ ತಿಳಿದುಬರುತ್ತದೆ[೧೧೨]. ಇದರಿಂದಾಗಿ ಬಾಣರಿಗೆ ಸೋಲುಂಟಾಗಿ ಗಂಗರ ಪ್ರತಿಷ್ಠೆ ಇನ್ನಷ್ಟು ಹೆಚ್ಚಾಯ್ತು.

ಒಂದನೆಯ ರಾಜಮಲ್ಲನು ಬಂಕೇಶನ ಮರಳುವಿಕೆಯಿಂದಾಗಿ ಗಂಗ ಸಾಮ್ರಾಜ್ಯದ ಭಾಗಗಳನ್ನು ಹಿಡಿದುಕೊಂಡಿದ್ದನಾದರೂ, ಇನ್ನೂ ಕೆಲ ಭಾಗಗಳು ರಾಷ್ಟ್ರಕೂಟರ ಕೆಳಗೆ ಉಳಿದುಕೊಂಡಿದ್ದವು. ಈ ವೇಳೆಯಲ್ಲಿ ವೆಂಗಿಯ ಕಡೆಗೆ ರಾಷ್ಟ್ರಕೂಟರ ಕಣ್ಣುಬಿದ್ದಿದ್ದರಿಂದ ಗಂಗ ನೀತಿಮಾರ್ಗ ಈ ಸಮಯ ಸಾಧಿಸಿ ರಾಷ್ಟ್ರಕೂಟರ ಮೇಲೆ ಯುದ್ಧಕ್ಕಿಳಿದನು. ಆಗ ಕೋಲಾರ ಜಿಲ್ಲೆಯ ಉತ್ತರಕ್ಕಿದ್ದ ರಾಜರಾಮುಡು ಎಂಬಲ್ಲಿ ಕ್ರಿ.ಶ.೮೬೮ ರಲ್ಲಿ ನಡೆದ ಯುದ್ಧದಲ್ಲಿ ರಾಜಮಲ್ಲನು ಜಯಶಾಲಿಯಾದನು[೧೧೩]. ಕೆರೆಗೋಡಿ ರಂಗಾಪುರ ತಾಮ್ರಶಾಸನಗಳ ಪ್ರಕಾರ ರಾಷ್ಟ್ರಕೂಟರು, ಪಲ್ಲವರು, ಮಾಳ್ವರು, ಚೋಳರು ಮತ್ತು ಚಾಲುಕ್ಯರನ್ನೊಳಗೊಂಡಿದ್ದ ಬಲವನ್ನು ಹೊಂದಿದ್ದರೂ ಕೂಡಾ ನೀತಿಮಾರ್ಗನು ಸಲೀಸಾದ ವಿಜಯವನ್ನು ಹೊಂದಿದನೆಂದು ತಿಳಿದುಬರುತ್ತದೆ[೧೧೪]. ಮೂರನೆಯ ಮಾರಸಿಂಹನ ಕೂಡಲೂರು ಶಾಸನ ಈ ಯುದ್ಧದ ವರ್ಣನೆ ತಿಳಿಸುತ್ತದೆ, ಯುದ್ಧವು ಅತ್ಯಂತ ಭೀಕರವಾಗಿತ್ತೆಂದು ತಿಳಿದುಬರುತ್ತದೆ[೧೧೫]. ಈ ಯುದ್ಧದ ನಂತರ ಗಂಗರ ಪ್ರತಿಷ್ಠೆ ಎಷ್ಟು ಹೆಚ್ಚಾಯಿತೆಂದರೆ, ಮುಂದೆ ಯಾವ ಶಕ್ತಿಯೂ ಇವರ ತಂಟೆಗೆ ಬರಲಿಲ್ಲ. ಅಮೋಘವರ್ಷನು ತನ್ನ ಮಗಳಾದ ಜಯಬ್ಬೆ ಅಥವಾ ಚಂದ್ರೋಬಲಬ್ಬೆಯನ್ನು ನೀತಿಮಾರ್ಗನ ಮಗ ಯುವರಾಜ ಭೂತುಗನಿಗೆ ನೀಡಿ ಮದುವೆಮಾಡಿಕೊಟ್ಟು ರಕ್ತಸಂಭಂದವನ್ನು ಬೆಳೆಸಿದನು. ಕ್ರಿ.ಶ.೮೬೯ ರಲ್ಲಿ ನೀತಿಮಾರ್ಗನು ತನ್ನ ಮಗ ಸತ್ಯವಾಕ್ಯ ರಾಜಮಲ್ಲನ ಸಮ್ಮುಖದಲ್ಲಿಯೇ ಮರಣಸಿದನೆಂದು ಅವನ ದೊಡ್ಡಹುಂಡಿ ಶಾಸನದ ಮೂಲಕ ತಿಳಿದುಬರುತ್ತದೆ[೧೧೬].

## ಎರಡನೆಯ ರಾಜಮಲ್ಲ (ಸತ್ಯವಾಕ್ಯ) (ಕ್ರಿ.ಶ.೮೭೦-೯೦೭)[೧೧೭]:

ನೀತಿಮಾರ್ಗನ ನಂತರ ಆತನ ಹಿರಿಯ ಮಗ ಎರಡನೆಯ ರಾಜಮಲ್ಲನು ಪಟ್ಟಕ್ಕೆ ಬಂದನು. ಆದರೆ ಈತನು ಹೆಸರಿಗೆ ಮಾತ್ರ ಅರಸನಾಗಿದ್ದನೆಂದು ತೋರುತ್ತದೆ. ಈತನ ಕಾಲದಲ್ಲಿ ಇವನಿಗೆ ಒಂದನೆಯ ಭೂತುಗನು ಗಂಗರ ಶಕ್ತಿಯಾಗಿ ಸಹಾಯಮಾಡಿದನು.

ಗಂಗವಾಡಿ-೬೦೦೦ ವಿಭಾಗದ ಆಡಳಿತಾಧಿಕಾರಿಗಳಾಗಿ ಗಂಗರ ಅಧೀನರಾಗಿ ಆಳುತ್ತಿದ್ದ ನೊಳಂಬರು ಮೊದಲು ಗಂಗರೊಡನೆ ಸ್ನೇಹದಿಂದಿದ್ದುದು ನಮಗೆ ತಿಳಿದವಿಷಯ. ಆದರೆ ಈ ಸಮಯದಲ್ಲಿ ನೊಳಂಬಾಧಿರಾಜ ಮಹೇಂದ್ರನು ನೊಳಂಬರ ರಾಜನಾಗಿದ್ದನು. ಆತ ಸ್ವತಂತ್ರನಾಗಲು ಹವಣಿಸಿ, ಬಂಡಾಯಕ್ಕೆದ್ದನು. ಆಗ ಅವರಿಗೂ ಗಂಗರಿಗೂ ಯುದ್ಧ ಸಂಭವಿಸಿತು. ಯುವರಾಜನಾದ ಒಂದನೆಯ ಭೂತುಗನ ನೇತೃತ್ವದಲ್ಲಿ ಹಿರಿಯೂತು ಅಥವಾ ಸೂರೂರು, ಸೂಳೂರು ಮತ್ತು ಸಾಮಿಯೂರು ಎಂಬಲ್ಲಿ ನಡೆದ ಯುದ್ಧದಲ್ಲಿ ನೊಳಂಬರು ಸೋಲಿಗೀಡಾದರು. ಆದರೆ ಮಹೇಂದ್ರನೂ ಕೂಡಾ ಅತ್ಯಂತ ಪರಾಕ್ರಮದಿಂದ ಹೋರಾಡಿ ಸುಲಭವಾಗಿ ಸೋಲುಣ್ಣಲಿಲ್ಲವಾದರೂ ಕೊನೆಗೆ ಗಂಗರ ಅಧೀನತೆಯನ್ನು ಒಪ್ಪಿಕೊಂಡನು[೧೧೮].

ಕೊಂಗುದೇಶದ ಕೆಲಭಾಗಗಳು ಗಂಗರ ಇನ್ನೊಂದು ಶಾಖೆಯ ದೊರೆ ಪೃಥ್ವೀಪತಿಯ ಆಧೀನದಲ್ಲಿದ್ದ ವಿಷಯ ನಮಗೆ ಮೊದಲೇ ತಿಳಿದಿದೆ. ಈಗ ಕೊಂಗುದೇಶದ ರಾಜಕೀಯಕ್ಕಾಗಿ ಪಲ್ಲವರು ಮತ್ತು ಪಾಂಡ್ಯರ ನಡುವೆ ಕದನಗಳು ನಡೆದಿದ್ದವು. ಪಲ್ಲವ ನಂದಿವರ್ಮನು ಭೂತುಗರು ಪರಸ್ಪರ ಸಂಭಂದಿಗಳೂ ಆಗಿದ್ದರು. ಆದಕ್ಕಾಗಿ ಭೂತುಗನು ಪಾಂಡ್ಯರೊಡನೆ ಹೋರಾಟಕ್ಕಿಳಿದನು. ಈ ಸಮಯಕ್ಕೆ ಪಾಂಡ್ಯರ ದೊರೆ ಶ್ರೀಮಾರನಾಗಿದ್ದನು. ಆತನು ಕುಂಭಕೋಣಂ ಬಳಿ ನಡೆದ ಯುದ್ಧದಲ್ಲಿ ಭೂತುಗ ಮತ್ತು ಪಲ್ಲವ ನಂದಿವರ್ಮರನ್ನು ಸೋಲಿಸಿ ಪರಚಕ್ರ-ಕೋಲಾಹಲ ಎಂಬ ಬಿರುದನ್ನು ಧರಿಸಿದನು[೧೧೯]. ಕೆಲಕಾಲದ ನಂತರ ಪಲ್ಲವ ನಂದಿವರ್ಮನ ಮರಣವಾಗಿ ಆತನ ಮಗ ನೃಪತುಂಗನು ಆಳ್ವಿಕೆಗೆ ಬಂದಾಗ ಮತ್ತೊಮ್ಮೆ ಪಾಂಡ್ಯರ ಮೇಲೆ ಕ್ರಿ.ಶ. ೮೮೪ರಲ್ಲಿ ಆರ್ಸಿಟ್ ನದಿಯ ದಡದ ಮೇಲೆ ಯುದ್ಧ ಸಂಭವಿಸಿತು. ಆಗ ಗಂಗ-ಪಲ್ಲವರ ಸೇನೆಯು ಶ್ರೀಮಾರನ ಸೇನೆಯ ಶಿಬಿರಗಳನ್ನು ಸುಟ್ಟು, ಆವರ ಸಂಪತ್ತನ್ನು ಕೊಳ್ಳೆಹೊಡೆಯಿತು[೧೨೦]. ಈ ಯುದ್ಧದಲ್ಲಿ ಭೂತುಗ ಮತ್ತು ನೃಪತುಂಗರು ಹೆಗಲಿಗೆ ಹೆಗಲು ನೀಡಿ ಹೋರಾಡಿದರು ಎಂದು ಮೂರನೆಯ ಮಾರಸಿಂಹನ ಕೂಡಲೂರು ಶಾಸನ ಹೇಳಿದೆ. ಅಲ್ಲದೇ ಶಾಸನ ಮುಂದುವರೆದು ಶ್ರೀಮಾರನು ಸೋತುಹೋದನೆಂದು ಈ ಯುದ್ಧದಲ್ಲಿ ಗಂಗಭೂತುಗನಿಂದಾಗಿ ಪಲ್ಲವ ನೃಪತುಂಗನಿಗೆ ಜಯಲಭಿಸಿತೆಂದು ಉಲ್ಲೇಖಿಸುತ್ತದೆ[೧೨೧]. ಹೀಗೆ ಕೊಂಗಲನಾಡ-೮೦೦೦ವು ಗಂಗರ ಆಳ್ವಿಕೆಗೆ ಸೇರಿತು. ಗಂಗ ಭೂತುಗನ ರಾಣಿಯಾದ ಪರಮಬ್ಬೆಯು ಕುಣಿಗಲ್ ಪ್ರದೇಶದ ಆಡಳಿತವನ್ನು ನೋಡಿಕೊಳ್ಳುತ್ತಿದ್ದ ವಿಷಯವು ನಮಗೆ ತಿಳಿದುಬರುತ್ತದೆ[೧೨೨]. ಭೂತುಗನು ಮುಂದೆ ಚೋಳರೊಡನೆ ಕಾದಾಟಕ್ಕಿಳಿದನು. ಚೋಳರ ದೊರೆ ರಾಜರಾಜನು ಭೂತುಗನಿಂದ ಸೋಲಿಗೀಡಾದನು[೧೨೩].

ಅಮೋಘವರ್ಷನ ನಂತರ ಆಳ್ವಿಕೆಗೆ ಬಂದ ಎರಡನೆಯ ಕೃಷ್ಣನ ಕಾಲದಲ್ಲಿ ಗಂಗರು ಅವರಿಗೆ ಆಧೀನರಾಗಿದ್ದರಿಂದ ರಾಷ್ಟ್ರಕೂಟರ ವೈರಿಗಳಾದ ವೆಂಗಿಯ ಚಾಲುಕ್ಯರ ಮೇಲೆ ಎರಡನೆಯ ಕೃಷ್ಣನು ಯುದ್ಧ ಕೈಕೊಂಡಾಗ ಗಂಗ ಭೂತುಗನ ಸಹಾಯ ಯಾಚಿಸಿದನು. ಆಗ ಭೂತುಗ ಮತ್ತು ಕೃಷ್ಣರು ಯುದ್ಧಕ್ಕಿಳಿದು ವೆಂಗಿಯ ಮೇಲೆ ಧಾಳಿಯಿಟ್ಟರು. ಈ ಯುದ್ಧವು ರೇಮಿಯ ಮತ್ತು ಗುಂಗೂರು ಎಂಬಲ್ಲಿ ನಡೆಯಿತು. ಎರಡನೆಯ ರಾಜಮಲ್ಲನು ಕೂಡ ಇದರಲ್ಲಿ ಪ್ರಮುಖ ಪಾತ್ರವಹಿಸಿದನು[೧೨೪]. ಯುದ್ಧ ನಿರ್ಣಾಯಕವಾಗಿರಲಿಲ್ಲವಾದರೂ ವೆಂಗಿಯ ಚಾಲುಕ್ಯ ವಿಜಯಾದಿತ್ಯನು ಸೋಲೊಪ್ಪಿಕೊಂಡಂತೆ ತೋರುವದಿಲ್ಲ.

ತನ್ನ ಜೀವಮಾನವೆಲ್ಲ ಯುದ್ಧಗಳಲ್ಲಿ, ರಣರಂಗದಲ್ಲಿಯೇ ಕಳೆದ ಭೂತುಗನು, ಅನೇಕ ಜಯಗಳನ್ನು ಸಂಪಾದಿಸಿ ಗಂಗರಿಗೆ ಕೀರ್ತಿಯನ್ನು ತಂದುಕೊಟ್ಟಿದ್ದನು. ಆದರೆ ಕೊನೆಯಲ್ಲಿ ಈತನು ತನ್ನ ಜೀವವನ್ನು ಯುದ್ಧದಲ್ಲಿಯೇ ಕೊನೆಗಾಣಿಸಿಕೊಂಡನು. ಶಾಸನವೊಂದರ ಪ್ರಕಾರ ಯುದ್ಧ ಭೂಮಿಯಲ್ಲಿ ಹೋರಾಟಮಾಡುತ್ತಲೇ ಈತನು ತನ್ನ ಕೊನೆಯುಸಿರೆಳೆದನು[೧೨೫]. ಭೂತುಗನ ನಂತರ ಆವನ ಮಗ ಎರೆಯಪ್ಪ ನೀತಿಮಾರ್ಗನು ಯುವರಾಜನಾಗಿ ಎರಡನೆಯ ರಾಜಮಲ್ಲನಿಗೆ ಸಹಾಯಕನಾಗಿ ಕೆಲಸ ಮಾಡಿದನು. ಕ್ರಿ.ಶ. ೯೧೫ ರಲ್ಲಿ ಎರಡನೆಯ ರಾಜಮಲ್ಲನು ಮರಣಿಸಿದನು.

**ಎರಡನೆಯ ಎರೆಯಪ್ಪ ನೀತಿಮಾರ್ಗ (ಕ್ರಿ.ಶ.೯೦೭-೯೧೯)[೧೬]:**

ಎರಡನೆಯ ರಾಜಮಲ್ಲನು ಭೂತುಗನ ಮರಣದ ನಂತರ ಆತನ ಮಗನಾದ ಎರೆಯಪ್ಪನನ್ನು ಯುವರಾಜನನ್ನಾಗಿ ನೇಮಿಸಿದ್ದನು. ಅಲ್ಲದೇ ಕ್ರಿ.ಶ. ೯೦೭ ರಲ್ಲಿ ಈತನ ಪಟ್ಟಾಭಿಷೇಕವನ್ನು ಕೂಡ ನೆರವೇರಿಸಿದ ವಿಷಯ ತಿಳಿದುಬರುತ್ತದೆ[೧೭]. ಈತನು ಅಜ್ಜನ ಕಾಲದಲ್ಲಿ ನುಗಪಾಡ ಮತ್ತು ನವಲೆನಾಡುಗಳ ಪ್ರಾಂತಾಧಿಕಾರಿಯಾಗಿ ರಾಜಕೀಯ ಮತ್ತು ಸೈನಿಕ ಆಡಳಿತಗಳಲ್ಲಿ ಸಾಕಷ್ಟು ನುರಿತಿದ್ದನು[೧೮]. ಅಲ್ಲದೇ ನಂತರದಲ್ಲಿ ಈತನು ಕೊಂಗಲನಾಡ-೮೦೦೦ ದ ಪ್ರಾಂತಾಧಿಕಾರಿಯೂ ಆಗಿ ಕಾರ್ಯನಿರ್ವಹಿಸಿದ್ದನು[೧೯].

ಈತನ ಕಾಲದಲ್ಲಿ ಗಂಗ-ರಾಷ್ಟ್ರಕೂಟರ ಸಂಭಂದ ಮೊದಲಿನಂತೆ ಮುಂದುವರೆಯಲಿಲ್ಲ. ಬಂಕೇಶನು ರಾಜಮಲ್ಲನ ಕಾಲದಲ್ಲಿ ಗಂಗರಿಂದ ಕೇದಾಲ ದುರ್ಗವನ್ನು ಅಪಹರಿಸಿದ್ದನಲ್ಲದೇ ಈಗ ಅವನ ಉತ್ತರಾಧಿಕಾರಿಯಾದ ಲೋಕಾದಿತ್ಯನು ರಾಷ್ಟ್ರಕೂಟ ಕೃಷ್ಣನ ಸಾಮಂತನಾಗಿ ಬನವಾಸಿಯಿಂದ ಆಳುತ್ತಿದ್ದನು. ಅಲ್ಲದೇ ಈತನು ವೆಂಗಿಯ ಚಾಲುಕ್ಯರೊಡನೆ ಸ್ನೇಹದಿಂದಿದ್ದನು. ಆದರೆ ವೆಂಗಿಯ ಚಾಲುಕ್ಯರಿಗೂ ಗಂಗರಿಗೂ ಕೂಡಾ ವೈರತ್ವವಿತ್ತು. ಮಣ್ಣೆ ಮತ್ತು ಅನೇಕ ಗಂಗವಾಡಿಯ ಪ್ರದೇಶಗಳು ಇನ್ನೂ ರಾಷ್ಟ್ರಕೂಟರ ಆಧೀನದಲ್ಲಿದ್ದವು. ಮತ್ತು ಮಣ್ಣೆಯ ಪ್ರಾಂತಾಧಿಕಾರಿಯನ್ನಾಗಿ ಎರಡನೆಯ ಕೃಷ್ಣನು ಸಾಮಪಯ್ಯನನ್ನು ನೇಮಿಸಿದ್ದನು. ಆತನು ಇಡೀ ದಕ್ಷಿಣ ದಂಡನಾಯಕನಂತೆ ವರ್ತಿಸತೊಡಗಿದ್ದನು. ಇಷ್ಟೆಲ್ಲ ಆದರೂ ನೀತಿಮಾರ್ಗನು ಇವೆಲ್ಲವನ್ನು ಸಹಿಸಿಕೊಂಡಿದ್ದನು[೨೦]. ಇದೇ ವೇಳೆಗೆ ರಾಷ್ಟ್ರಕೂಟರ ಸೈನ್ಯವು ಗಂಗರ ಮತ್ತೊಂದು ಪ್ರದೇಶವಾದ ಕಂಬೋಲಗೆಯನ್ನು ಹಿಡಿದುಕೊಂಡಿತು. ಆಗ ಯುದ್ಧವು ಆರಂಭವಾಯಿತೆನ್ನಬಹುದು. ನಾಗಮಂಗಲ ತಾಲೂಕಿನ ಕರಬಾಳೆ ವೀರಗಲ್ಲೊಂದು ಈ ಯುದ್ಧದ ಕುರಿತು ಉಲ್ಲೇಖಿಸಿದೆ. ಆದರೆ ಅದರಿಂದ ವಿವರಗಳೇನೂ ತಿಳಿದುಬರುವದಿಲ್ಲ[೨೧].

ಭೂತುಗನ ಕಾಲದಲ್ಲಿ ಸ್ವತಂತ್ರತೆಗೆ ಯತ್ನಿಸಿದ ಮಹೇಂದ್ರನು ತಕ್ಕಮಟ್ಟಿಗೆ ಸುಮ್ಮನಾಗಿದ್ದರೂ ಈ ವೇಳೆಗೆ ತನ್ನ ಬಲವರ್ಧಿಸಿಕೊಂಡಿದ್ದನು. ಅವನು ಬಾಣರು, ಕಂಚಿ, ಧರ್ಮಪುರಿ ಮತ್ತು ಗಂಗವಾಡಿಯ ಕೆಲಭಾಗಗಳನ್ನು ವಶಪಡಿಸಿಕೊಂಡು ಆಳುತ್ತಿದ್ದನು[೨೨]. ಭೂತುಗನ ನೀತಿಯನ್ನು ಮುಂದುವರೆಯಿಸಿದ ಎರಡನೆಯ ನೀತಿಮಾರ್ಗನು ಮಹೇಂದ್ರನ ಮೇಲೆ ಏರಿಬಂದನು. ಕ್ರಿ.ಶ. ೯೦೭-೦೮ರ ನೀತಿಮಾರ್ಗನ ಬೇಗೂರು ಶಾಸನದ ಪ್ರಕಾರ ತುಂಬೆಪಾಡಿ ಎಂಬಲ್ಲಿ ನೀತಿಮಾರ್ಗನ ಸೇನಾನಿಯಾದ ಅಯ್ಯಪ್ಪದೇವ (ನಾಗತ್ತರಸ) ಮತ್ತು ಮಹೇಂದ್ರನ ನಡುವೆ ಯುದ್ಧ ಸಂಭವಿಸಿತು. ಆದರಲ್ಲಿ ಅಯ್ಯಪ್ಪನು ವೀರಮರಣವನ್ನಪ್ಪಿದಾಗ, ಆ ಯುದ್ಧವನ್ನು ಅವನ ಮಗ ಇರುಗನು ಮುಂದುವರೆಯಿಸಿದನೆಂದು ತಿಳಿದುಬರುತ್ತದೆ[೨೩]. ಈ ಯುದ್ಧದಲ್ಲಿ ಸೂರೂರು, ಮದುಗನಿ, ಮಿಡಿಗ, ಸುಲಿಸಲೇಂದ್ರ, ತಿಪ್ಪೇರು, ಪೇಂಚೇರು ಇನ್ನು ಮುಂತಾದ ಅನೇಕ ದುರ್ಗಮ ಕೋಟೆಗಳನ್ನು ವಶಪಡಿಸಿಕೊಳ್ಳಲಾಯಿತು[೨೪]. ಮಹೇಂದ್ರವರ್ಮನನ್ನು ಯುದ್ಧದಲ್ಲಿ ಕೊಲ್ಲಲಾಯಿತು. ಆದರಿಂದ ಎರಡನೆಯ ನೀತಿಮಾರ್ಗನು ಮಹೇಂದ್ರಾಂತಕ

ಎಂಬ ಬಿರುದನ್ನು ಹೊಂದಿದನು. ಈ ಯುದ್ಧವು ಮಧುಗಿರಿ ತಾಲೂಕ ತುಮಕೂರು ಜಿಲ್ಲೆ ತುಂಬೆಪಾಡಿ ಎಂಬಲ್ಲಿ ಕ್ರಿ.ಶ. ೯೦೮ ರಲ್ಲಿ ನಡೆಯಿತು ಎಂದು ತಿಳಿಯುತ್ತದೆ[೧೩೫]. ಅಲ್ಲದೇ ಇವರಿಬ್ಬರಿಗೆ ಬೆಂಗಳೂರಿನ ಬಳಿಯೂ ಯುದ್ಧ ಸಂಭವಿಸಿದ ವಿಷಯ ವೀರಗಲ್ಲುಗಳಿಂದ ತಿಳಿದುಬರುತ್ತದೆ[೧೩೬].

ಈತನ ಕಾಲದ ಇನ್ನೊಂದು ಪ್ರಮುಖ ಘಟನೆಯೆಂದರೆ, ಗಂಗರ ಇನ್ನೊಂದು ಶಾಖೆಯ ಎರಡನೆಯ ಪೃಥ್ವೀಪತಿಯಿಂದ ರಾಷ್ಟ್ರಕೂಟರು ಮತ್ತು ಬಾಣರನ್ನು ಸೋಲಿಸಿದ್ದು. ಅವನು ಚೋಳರೊಡನೆ ಸೇರಿಕೊಂಡು ರಾಷ್ಟ್ರಕೂಟರು ಮತ್ತು ಬಾಣರನ್ನು ಕ್ರಿ.ಶ. ೯೦೩ರಲ್ಲಿ ವಲಾಳ ಬಳಿಯಲ್ಲಿ ನಡೆದ ಕದನದಲ್ಲಿ ಸೋಲಿಸಿದನು. ಇದಾದ ನಂತರ ಬಾಣರು ಚೇತರಿಸಕೊಳ್ಳಲೇ ಇಲ್ಲ[೧೩೭]. ಅಲ್ಲದೇ ಗಂಗರ ಇನ್ನೊಂದು(ಕೊಂಗು)ಶಾಖೆಯು ಮತ್ತೆ ಮುಖ್ಯ ಶಾಖೆಯೊಂದಿಗೆ ಕೂಡಿಕೊಂಡು ಒಂದಾಗಿ ಗಂಗರು ಮತ್ತಷ್ಟು ಬಲಿಷ್ಟರಾದರು.

## ನರಸಿಂಹದೇವ (ಕ್ರಿ.ಶ.೯೧೯-೯೨೫)[೧೩೮]:

ಎರಡನೆಯ ನೀತಿಮಾರ್ಗನ ನಂತರ ಆತನ ಮಗ ನರಸಿಂಹದೇವನು ಆಳ್ವಿಕೆಗೆ ಬಂದನು. ಇವನು ಸತ್ಯವಾಕ್ಯ ಮತ್ತು ಬೀರವೆಡಂಗನ ಅಥವಾ ವೀರವೆಡಂಗನ ಮನುಜಪತಿ ಎಂಬ ಬಿರುದುಗಳನ್ನು ಹೊಂದಿದ್ದನು[೧೩೯]. ಶಾಸನಗಳು ಈತನ ಶೌರ್ಯ, ಪರಾಕ್ರಮಗಳ ಬಗೆಗೆ ಕೊಂಡಾಡಿವೆಯಾದರೂ, ಈತನ ಕಾಲದಲ್ಲಿ ಯಾವುದೇ ಮಹತ್ವದ ಘಟನೆಗಳು ಕಂಡುಬರುವದಿಲ್ಲ.

## ಮೂರನೆಯ ರಾಜಮಲ್ಲ (ಕ್ರಿ.ಶ.೯೨೫-೯೩೫)[೧೪೦]:

ನರಸಿಂಹದೇವನಾಳ್ವಿಕೆಯ ನಂತರ ಆತನ ಸಹೋದರ ಮೂರನೆಯ ರಾಜಮಲ್ಲನು ಆಳ್ವಿಕೆಗೆ ಬಂದನು. ಈತನು ನೀತಿಮಾರ್ಗ, ಕಚ್ಚೆಯಗಂಗ, ಮತ್ತು ಪೆರ್ಮಾನಡಿ ಮುಂತಾದ ಬಿರುದುಗಳನ್ನು ಹೊಂದಿದ್ದನು. ಈತನ ಆಳ್ವಿಕೆಯ ಕಾಲದಲ್ಲಿ ಗಂಗಸಾಮ್ರಾಜ್ಯದಲ್ಲಿ ಸಿಂಹಾಸನಕ್ಕಾಗಿ ಒಳಜಗಳಗಳು ನಡೆದವು. ಈತನ ಸಹೋದರ ಎರಡನೆಯ ಭೂತುಗನು ಸಿಂಹಾಸನಕ್ಕಾಗಿ ಹೋರಾಟಕ್ಕಿಳಿದನು. ಈತನು ರಾಷ್ಟ್ರಕೂಟರ ಮೂರನೆಯ ಅಮೋಘವರ್ಷನ ಮಗಳಾದ ರೇವಕ್ಕನಿಮ್ಮಾಡಿಯನ್ನು ಮದುವೆಯಾಗಿದ್ದರಿಂದ ಸಹಜವಾಗಿ ಅವರು ಇವನಿಗೆ ಬೆಂಬಲ ನೀಡಿದರು.

ಇದೇ ವೇಳೆಗೆ ಗಂಗರ ಸಾಮಂತರಾಗಿದ್ದ ನೊಳಂಬರು ಈ ಸನ್ನಿವೇಶದ ಲಾಭ ಪಡೆಯಲು ಹವಣಿಸಿ ಗಂಗರ ವಿರುದ್ಧ ಬಂಡೆದ್ದರು. ಆಗ ನೊಳಂಬರ ಆಡಳಿತವನ್ನು ಅಯ್ಯಪ್ಪನು ನೋಡಿಕೊಳ್ಳುತ್ತಿದ್ದನು. ಈ ಅಯ್ಯಪ್ಪನು ನೋಡಿಕೊಳ್ಳುತ್ತಿದ್ದನು. ಈ ಅಯ್ಯಪ್ಪನು ಮಹೇಂದ್ರನ ಮಗನಾಗಿದ್ದನು. ಅಯ್ಯಪ್ಪನ ನಂತರ ಆತನ ಮಗ ನೊಳಂಬರ ಸಿಂಹಾಸನಕ್ಕೆ ಅಣ್ಣಿಗ ಅಥವಾ ಅಣ್ಣಯ್ಯ ಅಥವಾ ಬೀರನೊಳಂಬ ಎಂಬುವವನು ಉತ್ತರಾಧಿಕಾರಿಯಾಗಿದ್ದನು. ಆ ಅಣ್ಣಿಗನಿಗೂ ಮತ್ತು ಮೂರನೆಯ ರಾಜಮಲ್ಲನಿಗೂ ಕೊಟ್ಟಮಂಗಲ ಎಂಬಲ್ಲಿ ಯುದ್ಧ ಸಂಭವಿಸಿತು[೧೪೧]. ಯುದ್ಧದ

ಪರಿಣಾಮವಾಗಿ ಅವರಿಬ್ಬರಲ್ಲಿ ಒಪ್ಪಂದವುಂಟಾಯ್ತು. ಇದರಿಂದಾಗಿ ಅಣ್ಣಿಗನು ಗಂಗರ ಸಾಮಂತನಾಗಿ ಮುಂದುವರಿದನು[೧೪೨].

ಈ ಯುದ್ಧದ ನಂತರ ಗಂಗ ಎರಡನೆಯ ಭೂತುಗ ಮತ್ತು ರಾಷ್ಟ್ರಕೂಟರ ಮೂರನೆಯ ಕೃಷ್ಣರು ಇವನ ಮೇಲೆ ಧಾಳಿಯಿಟ್ಟರು. ಎರಡನೆಯ ಭೂತುಗನ ಆತಕೂರು ಶಾಸನ[೧೪೩], ಮೂರನೆಯ ಕೃಷ್ಣನ ಕರಹಾಡ ತಾಮ್ರಪಟಗಳು[೧೪೪], ಮಾರಸಿಂಹನ ಶ್ರವಣಬೆಳಗೊಳ ಶಾಸನ[೧೪೫] ಮತ್ತು ಮೂರನೆಯ ಕೃಷ್ಣನ ದಯೋಲಿ ತಾಮ್ರಪಟ[೧೪೬]ಗಳಿಂದ ಭೂತುಗನು ರಾಷ್ಟ್ರಕೂಟರ ಸಹಾಯದಿಂದ ರಾಜಮಲ್ಲನ ವಿರುದ್ಧ ದಂಡೆತ್ತಿ ಹೋಗಿ ಅವನನ್ನು ಯುದ್ಧದಲ್ಲಿ ಸೋಲಿಸಿ ಕೊಂದುಹಾಕಿದನು ಎಂದು ತಿಳಿದುಬರುತ್ತದೆ.

**ಎರಡನೆಯ ಭೂತುಗ (ಕ್ರಿ.ಶ.೯೩೮-೯೬೦)[೧೪೭]:**

ಮೂರನೆಯ ರಾಜಮಲ್ಲನನ್ನು ಕೊಂದುಹಾಕಿ ಎರಡನೆಯ ಭೂತುಗನು ಆಳ್ವಿಕೆಗೆ ಬಂದನು. ಈತನು ಕ್ರಿ.ಶ.೯೩೮ ರಲ್ಲಿ ಆಳ್ವಿಕೆಯನ್ನಾರಂಭಿಸಿದನೆಂದು ಸೂಡಿ ತಾಮ್ರಪಟಗಳಿಂದ ತಿಳಿದುಬರುತ್ತದೆ[೧೪೮]. ಭೂತುಗನು ಗಂಗೇಯ, ಗಂಗನಾರಾಯಣ, ನನ್ನಿಯಗಂಗ, ಚಲದುತ್ತರಂಗ, ಸತ್ಯವಾಕ್ಯ ಕೊಂಗುಣಿವರ್ಮ, ಧರ್ಮಮಹಾರಾಜ ಮತ್ತು ಪೆರ್ಮಾನಡಿ ಎಂಬ ಬಿರುದುಗಳನ್ನು ಧರಿಸಿದ್ದನು.

ಮೊದಲಿಗೆ ಈತನು ರಾಷ್ಟ್ರಕೂಟ ಸಾಮ್ರಾಜ್ಯಕ್ಕೆ ಕಂಟಕವಾದವರನ್ನು ಸದೆಬಡಿಯುವದರಲ್ಲಿ ನಿರತನಾದನು. ಮೂರನೆಯ ಕೃಷ್ಣನು ಉತ್ತರ ಭಾರತದ ಕಡೆ ಹೋದಾಗ ಸಾಮ್ರಾಜ್ಯದಲ್ಲಿ ಅವನ ಆಧೀನನಾದ ಲಾಲ್ಲಿಯ ಎಂಬುವನು ದಂಗೆಯೆದ್ದನು. ಆಗ ಭೂತುಗನು ಸೈನ್ಯದೊಂದಿಗೆ ಹೋಗಿ ಅವನನ್ನು ಸೋಲಿಸಿದನು[೧೪೯]. ಅದೇ ವೇಳೆಗೆ ರಾಷ್ಟ್ರಕೂಟರ ಇನ್ನಷ್ಟು ಸಾಮಂತರುಗಳಾದ ಅಚಲಾಪುರದ ಕಕ್ಕರಾಜ, ವನವಾಸಿಯ ದಂತಿವರ್ಮ, ಅಜವರ್ಮ, ಶಾಂತಾರದೊರೆ, ನಾಗವರ್ಮ ಮತ್ತು ದಮರಿ, ನುಲುಗುರಿ ರಾಜರುಗಳ ಕೂಡ ದಂಗೆಯೆದ್ದಿದ್ದರು. ಅವರನ್ನೂ ಕೂಡ ಭೂತುಗನು ಸೋಲಿಸಿ ರಾಷ್ಟ್ರಕೂಟರ ಆಧೀನತ್ವವನ್ನು ಒಪ್ಪಿಕೊಳ್ಳುವಂತೆ ಮಾಡಿದನು[೧೫೦].

ಅದೇ ವೇಳೆಗೆ ಪಲ್ಲವರ ಅವನತಿಯ ನಂತರ ದಕ್ಷಿಣ ಭಾರತದಲ್ಲಿ ಚೋಳರು ಪ್ರಬಲರಾದರು. ಅವರ ದೊರೆಯಾದ ಒಂದನೆಯ ಪರಾಂತಕನು ತನ್ನ ಸಾಮ್ರಾಜ್ಯವನ್ನು ವಿಸ್ತರಿಸುವ ಬಯಕೆಯನ್ನು ಹೊಂದಿದ್ದನು. ಆಗ ರಾಷ್ಟ್ರಕೂಟರು, ಗಂಗರು ಮತ್ತು ವೈದುಂಬರು ಒಂದಾಗಿ ಅವನನ್ನು ಸದೆಬಡಿಯುವ ಪ್ರಯತ್ನಕ್ಕಿಳಿದರು. ಜೊತೆಗೆ ಬಾಣರು ಕೂಡ ಇವರೊಡನೆ ಸೇರಿ ಒಂದು ದೊಡ್ಡ ಬಲವೇ ಅವರ ವಿರುದ್ಧ ಸೇರಿತು. ಪರಾತಂಕನು ತನ್ನ ಮಗನಾದ ರಾಜಾದಿತ್ಯನನ್ನು ತೊಂಡೈಮಂಡಲದ ಆಳ್ವಿಕೆಯನ್ನು ಕೈಕೊಳ್ಳಲು ಕಳಿಸಿದನು. ಅವನೂ ಕೂಡ ರಾಜ್ಯವಿಸ್ತಾರದ ಹಂಬಲವುಳ್ಳವನಾಗಿದ್ದು ಮುಂದುವರಿದನು. ಈ ಯುದ್ಧದಲ್ಲಿ ರಾಷ್ಟ್ರಕೂಟ ಕೃಷ್ಣನು ಮುಂದಾಳಾಗಿ ಸೈನ್ಯವನ್ನು ನಡೆಸಿದನು. ಭೂತುಗನು ಕೂಡಾ ಅವನೊಡನೆ ಇದ್ದನು. ರಾಜಾದಿತ್ಯ ಮತ್ತು ಇವರ ನಡುವೆ ತಕ್ಕೋಳಂ ಎಂಬಲ್ಲಿ ಯುದ್ಧ

ಸಂಭವಿಸಿತು. ಕ್ರಿ.ಶ. ೯೪೯ರಲ್ಲಿ ಈ ಯುದ್ಧವು ನಡೆಯಿತು. ಮಂಡ್ಯ ತಾಲೂಕಿನ ಶಾಸನವೊಂದು ಹೇಳುವಂತೆ ಭೂತುಗನ ಸೈನ್ಯವು ಚೋಳರಿಗೆದುರಾಗಿ ಭೀಕರ ಕಾಳಗ ಕೈಕೊಂಡು ವೈರಿಪಡೆಯನ್ನು ನಾಶಗೊಳಿಸಿತು ಎಂದಿದೆ[೧೫೧]. ರಾಜಾದಿತ್ಯನೂ ಕೂಡ ತನ್ನೆಲ್ಲ ಬಲವನ್ನು ಒಂಗ್ಗೂಡಿಸಿಕೊಂಡು ಅತ್ಯಂತ ಶಕ್ತಿಯುತವಾಗಿ ಕಾದಾಡಿದನು[೧೫೨]. ಕೊನೆಗೆ ಈ ಯುದ್ಧದಲ್ಲಿ ಭೂತುಗನ ಶಕ್ತಿಯೇ ಮೇಲಾಯಿತು. ಅವನ ಬಿಲ್ಲುಗಾರ ದಳದ ಮುಖ್ಯಸ್ಥರಾದ ಕೇಲಾಯದಂಡನಾಯಕ ಮತ್ತು ಮಣಲೇರರು ಪ್ರಮುಖ ಪಾತ್ರವಹಿಸಿದರು[೧೫೩]. ರಾಜಾದಿತ್ಯನಿಗೆ ಎದುರಾಗಿ ಮಣಲೇರನು ಅವನ ಆನೆಯನ್ನು ಕೊಂದುಹಾಕಿದನು. ಆನೆಯ ಮೇಲಿಂದ ರಾಜಾದಿತ್ಯನು ಕೆಳಗೆ ಬಿದ್ದಾಗ ಗಂಗ ಭೂತುಗನು ಅವನನ್ನು ಕೊಂದು ಹಾಕಿದನು ಎಂದು ಶಾಸನ ವಿವರಿಸುತ್ತದೆ[೧೫೪]. ಅತಕೂರು ಶಾಸನ ಹೇಳುವಂತೆ ಭೂತುಗನ ಈ ಕಾರ್ಯವನ್ನು ಮೆಚ್ಚಿ, ರಾಷ್ಟ್ರಕೂಟ ಮೂರನೆಯ ಕೃಷ್ಣನು ಅವನಿಗೆ ಬನವಾಸಿ-೧೨೦೦೦, ಪುರಿಗೆರೆ, ಕಿಸುಕಾಡು ಮತ್ತು ಬಾಗೆನಾಡುಗಳನ್ನು ಕೊಡುಗೆಯನ್ನಾಗಿ ನೀಡಿದನು[೧೫೫]. ಅಲ್ಲದೇ ಈ ಯುದ್ಧದಲ್ಲಿ ಪ್ರಮುಖ ಪಾತ್ರವಹಿಸಿದ ಸಗರ ವಂಶದ ಮಣಲೇರನಿಗೆ ಗಂಗ ಭೂತುಗನು ಅತಕೂರು-೧೨ ಮತ್ತು ಬೆಳ್ವಲದಲ್ಲಿರುವ ಕೋಟೆಯೂರನ್ನು ನೀಡಿದನು. ಇದರಿಂದಾಗಿ ಮಣಲೇರನು 'ಭೂತುಗನ ಅಂಕಕಾರ' ಮತ್ತು 'ವಲ್ಲಭ' ಎಂಬ ಬಿರುದುಗಳನ್ನು ಧರಿಸಿದನು[೧೫೬]. ವಿಜಯೀ ಸೈನ್ಯವು ತೊಂಡೈಮಂಡಲ, ಕಂಚಿ, ತಂಜಾವೂರು ಮತ್ತು ನಲ್ಕೋಟೆ ಅಥವಾ ನಲ್ಕೆಲೊವರೆಗೆ ಮುಂದುವರೆಯಿತಲ್ಲದೇ ಅವುಗಳನ್ನು ವಶಪಡಿಸಿಕೊಂಡಂತೆ ತೋರುವದಿಲ್ಲ[೧೫೭]. ಮತ್ತು ಮೂರನೆಯ ಕೃಷ್ಣನ ಕರಹಾಡ ತಾಮ್ರಪಟಗಳೂ ಕೂಡ ಈ ತಂಜಾಪುರಿ ಅಥವಾ ತಂಜಾವೂರುದ ವಶವನ್ನು ಕುರಿತು ಹೇಳುತ್ತವೆ[೧೫೮]. ಭೂತುಗನು ಮೂರನೆಯ ಕೃಷ್ಣನ ಉತ್ತರ ಭಾರತದ ದಂಡಯಾತ್ರೆಯಲ್ಲಿಯೂ ಕೂಡ ಭಾಗವಹಿಸಿದ್ದನೆಂದೂ ಅವನು ತನ್ನ ಸೈನ್ಯದೊಂದಿಗೆ ಚಿತ್ರಕೂಟ ಮತ್ತು ಮಾಳ್ವಗಳಿಗೂ ಹೊಗಿದ್ದನೆಂದು ತಿಳಿದುಬರುತ್ತದೆ[೧೫೯]. ಈತನು ಅಮೋಘವರ್ಷನ ಮಗಳು ಕೃಷ್ಣನ ತಂಗಿಯಾದ ರೇವಕ್ಕಮ್ಮಡಿಯನ್ನು ಮದುವೆಯಾಗಿದ್ದನು ಹೀಗೆ ರಾಷ್ಟ್ರಕೂಟರಿಗೆ ಸಾಮಂತರಾಗಿ ಅವರೊಡನೆ ಉತ್ತಮ ಸಂಭಂದ ಈ ಕಾಲದಲ್ಲಿ ಇತ್ತು.

**ಮರುಳದೇವ (ಕ್ರಿ.ಶ.೯೬೦-೯೬೩)[೧೬೦]:**

ಎರಡನೆಯ ಭೂತುಗನ ಹಿರಿಯ ಮಗನಾದ ಮರುಳದೇವನು ಆಳ್ವಿಕೆಗೆ ಬಂದು ಕೆಲಕಾಲದವರೆಗೆ ಆಳ್ವಿಕೆಮಾಡಿದನು. ಈತನಿಗೆ ಪುನ್ನಸೇಯಗಂಗ, ಗಂಗ ಮಾರ್ತಾಂಡ, ಗಂಗಚಕ್ರಾಯುಧ, ಕಾಮದ ಕಲಿಯುಗಭೀಮ, ಕೀರ್ತಿ ಮನೋಭಾವ, ಕೊಂಗಣವರ್ಮ-ಧರ್ಮ-ಮಹಾರಾಜಾಧಿರಾಜ-ಪರಮೇಶ್ವರ ಮತ್ತು ನೀತಿಮಾರ್ಗ ಎಂಬ ಬಿರುದುಗಳಿದ್ದವು. ಈತನ ಕಾಲದಲ್ಲಿ ಗಂಗ ಸಾಮ್ರಾಜ್ಯದಲ್ಲಿ ಅಂತಹ ಯಾವುದೇ ಬದಲಾವಣೆಗಳಾಗಲಿಲ್ಲ. ಈತನು ಮೂರನೆಯ ಕೃಷ್ಣನ ಮಗಳಾದ ಬಿಜ್ಜಬ್ಬೆಯನ್ನು ಮದುವೆಯಾಗಿದ್ದನೆಂದು ತಿಳಿದುಬರುತ್ತದೆಯಲ್ಲದೇ, ಕೃಷ್ಣನಿಂದ ಈತನು 'ಮದನಾವತಾರ' ಎಂಬ ಛತ್ರ (Umbrela)ವನ್ನು ಪಡೆದಿದ್ದನೆಂದು ಶಾಸನಗಳಿಂದ ತಿಳಿದುಬರುತ್ತದೆ[೧೬೧].

**ಮೂರನೆಯ ಮಾರಸಿಂಹ (ಕ್ರಿ.ಶ.೯೬೩-೯೭೪)[೯೨]:**

ಮರುಳದೇವನ ನಂತರ ಅವನ ಸಹೋದರನಾದ ಮಾರಸಿಂಹನು ಪಟ್ಟಕ್ಕೆ ಬಂದನು. ಈತನು ಕ್ರಿ.ಶ. ೯೬೩ ರಲ್ಲಿ ಪಟ್ಟಕ್ಕೆ ಬಂದನೆಂದು ಕಡಲೂರು ತಾಮ್ರಶಾಸನಗಳಿಂದ ತಿಳಿದುಬರುತ್ತದೆ[೯೩]. ಅಲ್ಲದೇ ಅರಣಿಯ ಕ್ರಿ.ಶ. ೯೬೩ರ ಶಾಸನವು ಈತನ ಪಟ್ಟಾಭಿಷೇಕದ ಬಗ್ಗೆ ಸಂಪೂರ್ಣ ವಿವರವನ್ನು ನಮಗೆ ನೀಡುತ್ತದೆ[೯೪]. ಈತನು ಗಂಗ ಸಾಮ್ರಾಜ್ಯದ ಕೊನೆಯ ಪ್ರಬಲ ಅರಸನಾಗಿದ್ದನೆಂದು ತಿಳಿದುಬರುತ್ತದೆ. ಈತನಿಗೆ ಆಡಳಿತ ಮತ್ತು ಸೈನಿಕ ಸಾಧನೆಗಳಲ್ಲಿ ಈತನ ಮಂತ್ರಿ ಚಾಮುಂಡರಾಯನು ಪ್ರಮುಖ ಸಹಾಯ ನೀಡಿರುವದನ್ನು ಕಾಣುತ್ತೇವೆ. ಈತನು ಧರ್ಮಮಹಾರಾಜಾಧಿರಾಜ ಸತ್ಯವಾಕ್ಯ ಕೊಂಗುಣಿವರ್ಮ ಪೆರ್ಮಾನಡಿ ಮಾರಸಿಂಹ, ಗಂಗಕಂದರ್ಪ, ಗಂಗವಿದ್ಯಾಧರ, ಗಂಗಚೂಡಾಮಣಿ, ಗಂಗಮಂಡಲೀಕ, ಗಂಗವಜ್ರ, ಗಂಗರಸಿಂಹ, ಗಂಗರೊಳ್‌ಗಂಗ, ಗುತ್ತಿಯಗಂಗ, ನೊಳಂಬಾಂತಕ, ಚಲದುತ್ತರಂಗ, ಧರ್ಮಾವತಾರ, ಜಗದೇಕವೀರ ಮತ್ತು ಮಂಡಳೀಕತ್ರಿನೇತ್ರ ಎಂಬ ಬಿರುದುಗಳನ್ನು ಹೊಂದಿದ್ದನು. ತಂದೆ ಭೂತುಗನ ಕಾಲದಿಂದಲೂ ಈತನು ರಾಷ್ಟ್ರಕೂಟರಿಗಾಗಿ ಗಂಗರು ಭಾಗವಹಿಸಿದ್ದ ಎಲ್ಲ ಯುದ್ಧಗಳಲ್ಲಿ ಪಾಲ್ಗೊಂಡಿದ್ದನು. ಈತನ ಪಟ್ಟಾಭೀಷೇಕದ ಸಮಯದಲ್ಲಿ ಮೂರನೆಯ ಕೃಷ್ಣನು ಹಾಜರಿದ್ದುದನ್ನು ತಿಳಿದಾಗ ನಮಗೆ ಈತನ ಶಕ್ತಿಯ ಅರಿವಾಗುತ್ತದೆ.

ಪಟ್ಟಾಭಿಷೇಕದ ಕೆಲಕಾಲದ ನಂತರ ಈತನು ಕ್ರಿ.ಶ. ೯೬೪-೬೫ರಲ್ಲಿ ಗುಜರಾತಿನ ದಂಡಯಾತ್ರೆಯನ್ನು ಕೈಕೊಂಡನು. ಕೂಡಲೂರು ತಾಮ್ರಪಟಗಳು ಹೇಳುವಂತೆ ಗುಜರಾತ ಮತ್ತು ಮಾಳ್ವ ಪ್ರದೇಶಗಳನ್ನಾಳುತ್ತಿದ್ದ ಪರಮಾರ ದೊರೆ ಅಶ್ವಪತಿಪಾರಮಾರ ಎರಡನೆಯ ಸೀಮುಕನು ಈತನ ಕೈಯಲ್ಲಿ ಸೋಲುಂಡನು[೯೫]. ಆದರೆ ಶಾಸನವೊಂದು ಹೇಳುವಂತೆ ಕೃಷ್ಣ ಮತ್ತು ಮಾರಸಿಂಹರಿಂದ ಸೋಲಿಗೀಡಾದಾಗ ಮುಲರಾಜನು ಗೂರ್ಜರ ದೊರೆಯಾಗಿದ್ದನೆಂದು ಹೇಳಿದೆ[೯೬]. ಆದರೆ ಈಗಾಗಲೇ ತಿಳಿದಂತೆ ಮಾಳವ ಮತ್ತು ಉತ್ತರಗುಜರಾತನ್ನು ರಾಷ್ಟ್ರಕೂಟರ ಸಾಮಂತನಾದ ಪರಮಾರ ಸೀಯಕನು ಆಳುತ್ತಿದ್ದನೆಂದು ವಿದ್ವಾಂಸರ ಅಭಿಪ್ರಾಯವಾಗಿದೆ[೯೭]. ಮೂರನೆಯ ಕೃಷ್ಣನು ದಕ್ಷಿಣ ಭಾರತದಲ್ಲಿ ಹೆಚ್ಚು ಗಮನ ಕೇಂದ್ರಿಕರಿಸಿದಾಗ, ಉತ್ತರದಲ್ಲಿ ಸೀಯಕನು ಸ್ವತಂತ್ರನಾಗಲು ಹವಣಿಸಿದನು. ಹೊರಸೋಲ ತಾಮ್ರಶಾಸನಗಳ ಪ್ರಕಾರ ಪರಮಾರ ರಾಜನು ರಾಷ್ಟ್ರಕೂಟ ಮೂರನೆಯ ಇಂದ್ರ ಮತ್ತು ಮೂರನೆಯ ಕೃಷ್ಣರ ಕಾಲದಲ್ಲಿ ಅವರ ಸಮ್ರಾಜ್ಯದ ಕೆಲ ಪ್ರದೇಶಗಳ ಮೇಲೆ ಧಾಳಿಯಿಟ್ಟನು[೯೮]. ಅಲ್ಲದೇ ರಾಷ್ಟ್ರಕೂಟರ ಸಾಮಂತರಾಗಿದ್ದ ಕಲಚೂರಿಗಳ ಮೇಲೆಯೂ ಕೂಡ ಈತನು ಧಾಳಿಗೆ ಮುಂದಾದಾಗ, ಮೂರನೆಯ ಕೃಷ್ಣನಿಗೆ ಈತನ ಮೇಲೆ ಯುದ್ಧ ಕೈಕೊಳ್ಳುವದು ಅನಿವಾರ್ಯವಾಯಿತು[೯೯]. ಕೊನೆಗೆ ಗಂಗ ಮತ್ತು ರಾಷ್ಟ್ರಕೂಟರ ಸೈನ್ಯದ ಮುಂದಾಳತ್ವವನ್ನು ವಹಿಸಿ, ಮಾರಸಿಂಹನು ಗುಜರಾತದ ಕಡೆಗೆ ಹೊರಟನು. ಅಲ್ಲದೇ ಈತನಿಗೆ ಈ ಯುದ್ಧದಲ್ಲಿ ಶೂದ್ರಕಯ್ಯಾ ಮತ್ತು ಗೊಗ್ಗಿಮಯ್ಯ ಎಂಬ ಇಬ್ಬರು ದಂಡನಾಯಕರು ಯುದ್ಧದಲ್ಲಿ ಅಪ್ರತಿಮವಾಗಿ ಹೋರಾಡಿ ಸಹಾಯವನ್ನು ನೀಡಿದರು. ಆಗ ಅವರ ಸಹಾಯದಿಂದ ಚಿತ್ರಕೂಟ ಮತ್ತು ಕಾಲಿಂಜರ ಕೋಟೆಗಳನ್ನು ವಶಪಡಿಸಿಕೊಂಡನು[೧೦೦]. ಅದಕ್ಕಾಗಿ ಗಂಗ ಮಾರಸಿಂಹನು

ಅವರಿಗೆ ಉಜ್ಜೈನಿಭುಜಂಗರು ಎಂಬ ಬಿರುದನ್ನು ನೀಡಿದನು[೧೬೧]. ಈ ಯುದ್ಧದಲ್ಲಿ ಸೀಯಕನಿಗೆ ಸೋಲುಣ್ಣಿಸಿ ಅಪಾರ ಪ್ರಮಾಣದ ದ್ರವ್ಯವನ್ನು ಸೆಳೆದುಕೊಂಡು ತಂದು ಕೃಷ್ಣನಿಗೆ ಒಪ್ಪಿಸಲಾಯ್ತು. ಇದರಿಂದಾಗಿ ಸಂತುಷ್ಟನಾದ ಕೃಷ್ಣನು ಮಾರಸಿಂಹನಿಗೆ ಗೂರ್ಜರರಾಜ ಅಥವಾ ಗೂರ್ಜರಾಧಿರಾಜ ಎಂಬ ಬಿರುದು ನಿಡಿದನಲ್ಲದೇ, ಪುಲಿಗೆರೆ, ಬೆಳ್ವೊಲ ಮತ್ತು ಸಾಂತಳಿಗೆ ಪ್ರದೇಶಗಳನ್ನು ಕೂಡ ನೀಡಿದನು. ಮತ್ತು ಶೂದ್ರಕಯ್ಯ ಮತ್ತು ಗೊಗ್ಗಿಮಯ್ಯರನ್ನು ಕದಂಬಳಿಗೆ-೧೦೦೦ ದ ಆಡಳಿತಾಧಿಕಾರಿಗಳನ್ನಾಗಿ ನೇಮಿಸಿದನು[೧೬೨].

ಶ್ರವಣಬೆಳಗೊಳದ ಶಾಸನದ ಪ್ರಕಾರ ಮಾರಸಿಂಹನು ವಿಂಧ್ಯಪರ್ವತದ ರಾಷ್ಟ್ರಕೂಟರ ಪ್ರದೇಶಗಳ ಮೇಲೆ ಧಾಳಿಯಿಡುತ್ತಿದ್ದ ಕಿರಾತರನ್ನು ತಪತಿನದಿ ದಡದ ಮೇಲೆ ಎದುರಿಸಿ ಸೋಲಿಸಿದನು ಎಂದು ತಿಳಿದುಬರುತ್ತದೆ[೧೬೩]. ರಾಷ್ಟ್ರಕೂಟರ ಮೂರನೆಯ ಕೃಷ್ಣನ ಮತ್ತೋರ್ವ ಸಾಮಂತನಾದ ಅಲ್ಲ ಎಂಬುವವನ ದಂಗೆಯನ್ನು ಕೂಡ ಅಡಗಿಸಿದನೆಂದು ತಿಳಿದುಬರುತ್ತದೆ.

ಕ್ರಿ.ಶ. ೯೬೮ರಲ್ಲಿ ರಾಷ್ಟ್ರಕೂಟ ಮೂರನೆಯ ಕೃಷ್ಣನ ಮರಣದ ನಂತರ ಮತ್ತೆ ಅವರ ಸಾಮಂತರು ದಂಗೆಯೆದ್ದರು. ಅದರಲ್ಲಿ ಪ್ರಮುಖವಾಗಿ ಪರಮಾರ ಎರಡನೆಯ ಸೀಯಕನು ಪ್ರಬಲನಾಗಿ ರಾಷ್ಟ್ರಕೂಟರ ಮೇಲೆ ಧಾಳಿಯಿಟ್ಟನು. ಈ ವೇಳೆಯಲ್ಲಿ ದುರ್ಬಲನಾದ ಖೊಟ್ಟಿಗನು ಆಳ್ವಿಕೆಯಲ್ಲಿದ್ದನು. ಸೀಯಕನು ರಾಷ್ಟ್ರಕೂಟರ ಸಾಮ್ರಾಜ್ಯದ ಮೇಲೆ ದಂಡೆತ್ತಿ ಮಳಖೇಡದವರೆಗೂ ಬಂದು ಅದನ್ನು ಹಾನಿಗೀಡುಮಾಡಿದನು[೧೬೪]. ಆಗ ಖೊಟ್ಟಿಗನು ಯುದ್ಧದಲ್ಲಿ ಮರಣಿಸಿ, ಎರಡನೆಯ ಕಕ್ಕನು ಆಳ್ವಿಕೆಗೆ ಬಂದನು[೧೬೫]. ಆಗ ಮಾರಸಿಂಹನು ಸೀಯಕನನ್ನು ವಿಂಧ್ಯಪರ್ವತದವರೆಗೆ ಅಟ್ಟಿಕೊಂಡು ಹೋದನು. ಸೀಯಕನ ಸಹಾಯಕ್ಕೆ ಬಂದ ಕಿರಾತರನ್ನು ಕೂಡ ಈತನು ಸೋಲಿಸಿದನಲ್ಲದೇ ಅವರಿಂದ ಅಪಾರ ಪ್ರಮಾಣದ ದ್ರವ್ಯವನ್ನು ಕೊಳ್ಳೆಹೊಡೆದನು[೧೬೬].

ರಾಷ್ಟ್ರಕೂಟರ ಬಲ ತಗ್ಗಿದಾಗ ಕ್ರಿ.ಶ. ೯೭೩ರಲ್ಲಿ ಚಾಲುಕ್ಯ ತೈಲಪನು ಅವರನ್ನು ಸರಿಸಿ ಚಾಲುಕ್ಯ ಸಾಮ್ರಾಜ್ಯವನ್ನು ಸ್ಥಾಪಿಸುವದರೊಂದಿಗೆ ಸಿಂಹಾಸನಾರೂಢನಾದನು. ನಂತರದಲ್ಲಿ ಗಂಗ ಮಾರಸಿಂಹನು ನಾಲ್ಕನೆಯ ಇಂದ್ರನನ್ನು ಪಟ್ಟಕಟ್ಟಿದನು[೧೬೭]. ಇಂದ್ರನ ಸಾಮ್ರಾಜ್ಯವನ್ನು ಬಲಪಡಿಸಲು, ಮಾರಸಿಂಹನು ಮಂತ್ರಿಯಾದ ಚಾಮುಂಡರಾಯನೊಡನೆ ದಂಗೆಯೆದ್ದ ರಾಷ್ಟ್ರಕೂಟರ ಸಾಮಂತರನ್ನು ಸದೆಬಡಿಯಲು ಹೊರಟನು. ಶಿಲಹಾರ ವಜ್ಜಳ ಮತ್ತು ಆತನ ಸಹೋದರ ಪಾತಾಳಮಲ್ಲರನ್ನು ಸೋಲಿಸಿ ರಾಷ್ಟ್ರಕೂಟರ ಆಧೀನತ್ವವನ್ನು ಒಪ್ಪುವಂತೆ ಮಾಡಿದನು. ನಂತರ ಬನವಾಸಿಯ ಕಡೆಗೆ ನಡೆದು ಅಲ್ಲಿನ ಮಹಾಸಾಮಂತಾಧಿಪತಿ ಶಾಂತಿವರ್ಮನನ್ನು ಸೋಲಿಸಿ, ಬನವಾಸಿ-೧೨೦೦೦ವನ್ನು ರಾಷ್ಟ್ರಕೂಟರ ಆಧೀನಕ್ಕೆ ಕ್ರಿ.ಶ. ೯೭೨ ರಲ್ಲಿ ಸೇರಿಸಿಕೊಂಡನು[೧೬೮]. ನಂತರ ವಿಂಧ್ಯಪರ್ವತದ ಶಬರರನ್ನು ಸೋಲಿಸಿ ಅವರನ್ನೂ ಕೂಡ ರಾಷ್ಟ್ರಕೂಟರ ಆಧಿಪತ್ಯವನ್ನು ಒಪ್ಪಿಕೊಳ್ಳುವಂತೆ ಮಾಡಿದನು.

ಮೂರನೆಯ ಕೃಷ್ಣನ ಮರಣದ ನಂತರ ಅರಾಜಕತೆಯ ಲಾಭವನ್ನು ಪಡೆಯಲೆತ್ನಿಸಿದ ನೊಳಂಬರಾಜ ಎರಡನೆಯ ಪೋಲಾಳಚೊರನು ಗಂಗವಾಡಿಯ ಗಡಿಗಳ ಮೇಲೆ ಧಾಳಿಯಿಟ್ಟು ಕೆಲ ಪ್ರದೇಶಗಳನ್ನು ವಶಪಡಿಸಿಕೊಂಡನು[೧೭೯]. ನೊಳಂಬರು ಅಪಾರ ಪ್ರಮಾಣದ ಸೈನ್ಯ ಮತ್ತು ಆನೆಯ ಬಲದೊಂದಿಗೆ ಧಾಳಿಗೆ ಮುಂದಾದರೆಂದು ಶಾಸನಗಳು ವರ್ಣಿಸಿವೆ[೧೮೦]. ಕ್ರಿ.ಶ. ೯೭೨ರಲ್ಲಿ ಗೋಣೂರು ಎಂಬಲ್ಲಿ ಈ ಯುದ್ಧವು ಸಂಭವಿಸಿತೆಂದೂ, ಆದರಲ್ಲಿ ನೊಳಂಬರು ಹೀನಾಯವಾದ ಸೋಲನ್ನನುಭವಿಸಿದರೆಂದು ಕಿಬ್ಬನಹಳ್ಳಿಯ ಶಾಸನವು ತಿಳಿಸುತ್ತದೆ[೧೮೧]. ಚಾಮುಂಡರಾಯ ಪುರಾಣದಲ್ಲಿ ಹೇಳುವಂತೆ ಈ ಧಾಳಿಯಲ್ಲಿ ಮಾರಸಿಂಹನಿಗೆ ಅವನ ಮಂತ್ರಿಯಾದ ಚಾಮುಂಡರಾಯನು ಪ್ರಮುಖವಾಗಿ ಸಹಾಯವನ್ನು ನೀಡಿದನು. ಅದಕ್ಕಾಗಿ ಚಾಮುಂಡರಾಯನಿಗೆ ಮಾರಸಿಂಹನು 'ವೀರಮಾರ್ತಾಂಡ' ಎಂಬ ಬಿರುದನ್ನು ನೀಡಿದನು. ಅಲ್ಲದೇ ಸ್ವತಃ ಮಾರಸಿಂಹನು 'ನೊಳಂಬಕುಲಾಂತಕ' ಎಂಬ ಬಿರುದನ್ನು ಧರಿಸಿದನು. ಮಾರಸಿಂಹನಿಗೆ ಈ ಯುದ್ಧದಲ್ಲಿ ಅವನ ಇನ್ನಿಬ್ಬರು ದಂಡನಾಯಕರು ಸಹಾಯವನ್ನು ನೀಡಿದ್ದು ತಿಳಿದುಬರುತ್ತದೆ. ಅವರಲ್ಲಿ ಒಬ್ಬನಾದ ಅಸಗಯ್ಯನೆಂಬುವನು ವೀರಮರಣ ಹೊಂದಿದ್ದಕ್ಕೆ ಅವನ ಮರಣದ ನಂತರ ಶಂಕರನೆಂಬುವವನಿಗೆ ಬಾಳ್ಗಿಚ್ಚು ನೀಡಲಾಯ್ತು[೧೮೨]. ನೇರಲಗಿಯ ವೀರಗಲ್ಲಿನ ಪ್ರಕಾರ ಇನ್ನೊಬ್ಬ ದಂಡನಾಯಕನ ಹೆಸರು ಅಮವಸಯ್ಯ ಎಂದು ತಿಳಿದುಬರುತ್ತದೆ[೧೮೩].

ಇದಾದ ನಂತರ ಕ್ರಿ.ಶ. ೯೭೧ರಲ್ಲಿ ಮಾರಸಿಂಹನು ಉಚ್ಚಂಗಿ ದುರ್ಗವನ್ನು ವಶಪಡಿಸಿಕೊಂಡನೆಂದು ತಿಳಿದುಬರುತ್ತದೆಯಲ್ಲದೇ, ಚಾಮುಂಡರಾಯನು ಇವನ ಜೊತೆಗಿದ್ದು ಅಪ್ರತಿಮ ಶೌರ್ಯತೋರಿದ್ದಕ್ಕಾಗಿ 'ರಣರಂಗಸಿಂಹ' ಎಂಬ ಬಿರುದನ್ನು ಹೊಂದಿದ್ದ ವಿಷಯ ತಿಳಿದುಬರುತ್ತದೆ. ಆಗ ಉಚ್ಚಂಗಿ ದುರ್ಗವನ್ನು ಸಂಪೂರ್ಣವಾಗಿ ನಾಶಗೊಳಿಸಲಾಯ್ತು[೧೮೪].

ರಾಷ್ಟ್ರಕೂಟರ ಅರಾಜಕತೆಯ ಸಮಯದಲ್ಲಿ ಅಂದರೆ ಮೂರನೆಯ ಕೃಷ್ಣನ ಮರಣದ ನಂತರ, ಲಾಭ ಪಡೆಯಲೆತ್ನಿಸಿದ ಪಶ್ಚಿಮ ಚಾಲುಕ್ಯರ 'ಚಾಲುಕ್ಯಚೂಡಾಮಣಿ' ರಾಜಾದಿತ್ಯನನ್ನು ಕೂಡ ಮಾರಸಿಂಹನು ಸೋಲಿಸಿದನಲ್ಲದೇ ಅವನನ್ನು ಯುದ್ಧದಲ್ಲಿಯೇ ಕೊಂದುಹಾಕಿದನೆಂದು ತಿಳಿದುಬರುತ್ತದೆ[೧೮೫]. ಕ್ರಿ.ಶ. ೯೭೪ರಲ್ಲಿ ಬಂಕಾಪುರಕ್ಕೆ ತೆರಳಿ ಅಲ್ಲಿ ಸಲ್ಲೇಖನ ವಿಧಿಯಿಂದ ಮರಣಿಸಿದನು.

**ಪಾಂಚಾಳದೇವ (ಕ್ರಿ.ಶ.೯೭೪-೯೭೭)[೧೮೬]:**

ಮಾರಸಿಂಹನ ಮರಣಾನಂತರ ಗಂಗ ಮತ್ತು ರಾಷ್ಟ್ರಕೂಟ ರಾಜ್ಯಗಳಲ್ಲಿನ ಅರಾಜಕತೆಯ ಲಾಭವನ್ನು ಪಡೆಯಲು ಅವರ ಅನೇಕ ಸಾಮಂತರು, ಅಧಿಕಾರಿಗಳು ಪ್ರಯತ್ನಿಸಿದರು. ಆಗ ಗಂಗರ ರಾಜ್ಯಕ್ಕೆ ಉತ್ತರಾಧಿಕಾರಿಯಾಗಿ ಪಾಂಚಾಳದೇವನೆಂಬ ಒಬ್ಬ ಯೋಧನು ಆಳ್ವಿಕೆಗೆ ಬಂದನು.

ಹುಂಚದ ಶಾಸನದ ಪ್ರಕಾರ ಮಾರಸಿಂಹನ ನಂತರ ಅವನ ಸಹೋದರ ಗೋವಿಂದರಸನು ಸಿಂಹಾಸನಕ್ಕಾಗಿ ಕಲಹವನ್ನಾರಂಭಿಸಿದನು. ಚಾಮುಂಡರಾಯ ಪುರಾಣ ಮತ್ತು ಅಜಿತನಾಥ ಪುರಾಣಗಳಲ್ಲಿಯೂ ಈ ಗೋವಿಂದರಸನ ಅಂತಃಕಲಹದ ಬಗ್ಗೆ ಉಲ್ಲೇಖ ಸಿಗುತ್ತದೆ. ಇವೆಲ್ಲವುಗಳಿಂದ ತಿಳಿಯುವಂತೆ ಗಂಗ ಸಾಮ್ರಾಜ್ಯದ ಸಮರ್ಥ ಮಂತ್ರಿಯಾಗಿದ್ದ ಚಾಮುಂಡರಾಯನು ಗೋವಿಂದರಸನ ವಿರುದ್ಧವಾಗಿ ನಾಲ್ಕನೆಯ ರಾಜಮಲ್ಲನ ಪರವಾಗಿದ್ದನು. ಅದಕ್ಕಾಗಿ ಅವನು ಗೋವಿಂದರಸನನ್ನು ಎದುರಿಸಿ ಕೊಂದುಹಾಕಿದನು[೧೬].

ಈ ಸಮಯದ ಲಾಭವನ್ನು ಪಡೆದು ಪಾಂಚಾಲದೇವನು ಗಂಗ ಸಾಮ್ರಾಜ್ಯದ ಅಧಿಕಾರವನ್ನು ಹಿಡಿದುಕೊಂಡನು. ಪಾಂಚಾಲದೇವನೂ ಕೂಡ ಸಮರ್ಥನಾಗಿದ್ದನು. ಅಲ್ಲದೇ ಆಡಳಿತದಲ್ಲಿ ನುರಿತವನಾಗಿದ್ದನು. ಈತನು ಧಾರವಾಡ ಜಿಲ್ಲೆಯ ಸಬ್ಬಿ-೩೦ರ ಆಡಳಿತಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದನೆಂದು ಕ್ರಿ.ಶ. ೯೭೧ರ ಅದರಗುಂಚಿ ಶಾಸನದ ಪ್ರಕಾರ ತಿಳಿದುಬರುತ್ತದೆ. ಗುಂಡೂರು ಶಾಸನ ಹೇಳುವಂತೆ ಈತನು ಕ್ರಿ.ಶ. ೯೭೩ರಲ್ಲಿ ೯೬ ಜಿಲ್ಲೆಗಳ ಆಳ್ವಿಕೆಯನ್ನು ನೋಡಿಕೊಳ್ಳುತ್ತಿದ್ದನು. ಇದರಿಂದ ನಮಗೆ ಈತನ ಸಾಮರ್ಥ್ಯದ ಅರಿವಾಗುತ್ತದೆ. ಮಾರಸಿಂಹನು ಇವನನ್ನು ಗಂಗ-ಚಾಲುಕ್ಯ ರಾಜ್ಯಗಳ ನಡುವೆ ಸಮರ್ಥವಾಗಿ ಬಳಸಿಕೊಂಡಿದ್ದನು. ಚಾಲುಕ್ಯರನ್ನು ಹತೋಟಿಯಲ್ಲಿಟ್ಟುಕೊಳ್ಳುವ ಕ್ರಮವಾಗಿತ್ತು. ಇದಕ್ಕೆ ಉದಾಹರಣೆಯಾಗಿ ಮುಳಗುಂದ ಶಾಸನವು ಈತನನ್ನು 'ಚಾಲುಕ್ಯ ಪಂಚಾನನ' ಎಂದು ಸಂಭೋದಿಸಿದೆ[೧೭]. ಹಿರಿಯೂರು ಶಾಸನದ ಪ್ರಕಾರ ಪಾಂಚಾಲದೇವನು 'ಮಹಾಸಾಮಂತಾಧಿಪತಿ' ಎಂಬ ಬಿರುದನ್ನು ಹೊಂದಿದ್ದ ವಿಷಯ ತಿಳಿಯುತ್ತದೆ[೧೮]. ಮುಳಗುಂದದ ರಾಮದೇವರ ಗುಡಿಯಲ್ಲಿನ ಶಾಸನದಲ್ಲಿ ಈತನನ್ನು 'ಸತ್ಯವಾಕ್ಯ' ಮತ್ತು 'ಕೊಂಗುಣಿವರ್ಮ' ಎಂಬುದಾಗಿ ಕರೆದಿದ್ದನ್ನು ಫ್ಲೀಟರು ಹೇಳುತ್ತಾರೆ[೧೯]. ಈತನ ವಿರುದ್ಧವಾಗಿ ಗಂಗರು ಕಾರ್ಯನಿರ್ವಹಿಸಿ ಹತ್ತಿಕ್ಕುವದಕ್ಕಿಂತ ಮೊದಲೇ ಇವನ ಬೆಳವಣಿಗೆಯನ್ನು ಕಂಡು ಈತನು ಅಪಾಯಕಾರಿಯೆಂದು ಗ್ರಹಿಸಿದ ಚಾಲುಕ್ಯ ಎರಡನೆಯ ತೈಲನು ಪಾಂಚಾಲನ ಮೇಲೆರಗಿದನು. ಆಗ ನಡೆದ ಯುದ್ಧದಲ್ಲಿ ಪಾಂಚಾಲದೇವನನ್ನು ಕೊಲ್ಲಲಾಯಿತು[೨೦].

ಮಾರಸಿಂಹನ ಮರಣದ ನಂತರ ದಂಗೆಯೆದ್ದವರಲ್ಲಿ ಈ ಪಾಂಚಾಲದೇವ ಮತ್ತು ಗೋವಿಂದರಸ ಮಾತ್ರವಲ್ಲದೇ ಇನ್ನೊಬ್ಬ ಪ್ರಮುಖ ವ್ಯಕ್ತಿಯೆಂದರೆ, ಮುದುರಾಚಯ್ಯ. ಈತನು ಗಂಗರ ಸೈನ್ಯದ ದಂಡನಾಯಕನಾಗಿದ್ದನು. ಆಗ ಈತನು 'ಚಲದಂಕಗಂಗ', 'ಗಂಗರಭಂಟ' ಎಂಬ ಬಿರುದುಗಳನ್ನು ಧರಿಸಿದ್ದನು. ಈ ಮೊದಲೇ ಈತನು ಚಾಮುಂಡರಾಯನ ತಮ್ಮನಾದ ನಾಗವರ್ಮನನ್ನು ಕೊಂದುಹಾಕಿ ಗಂಗರ ಪಾಳೆಯದಲ್ಲಿ ಸಾಕಷ್ಟು ಹಾನಿಯುಂಟು ಮಾಡಿದನು[೨೧]. ಆದರೆ ಚಾಮುಂಡರಾಯನು ಅದರ ಸೇಡನ್ನು ತೀರಿಸಿಕೊಳ್ಳಲು ಬಾಗೆಯೂರು ಎಂಬಲ್ಲಿ ಮುದುರಾಚಯ್ಯನಿಗೆ ಎದುರಾಗಿ ಯುದ್ಧವನ್ನು ಕೈಕೊಂಡನು. ಪರಿಣಾಮವಾಗಿ ಮುದುರಾಚಯ್ಯನು ಕೊಲ್ಲಲ್ಪಟ್ಟು ಚಾಮುಂಡರಾಯನು 'ಸಮರಪರಶುರಾಮ' ಎಂಬ ಬಿರುದನ್ನು ಧರಿಸಿದನು[೨೨]. ಈ ಯುದ್ಧದಲ್ಲಿ ರಕ್ಕಸಗಂಗನನ್ನು

ರಕ್ಷಿಸಲು ಬಾಗೇಯನೆಂಬುವನ ಜೊತೆ ಸುರಕ್ಷಿತವಾದ ಪ್ರದೇಶಕ್ಕೆ ಕಳಿಸಿಕೊಡಲಾಯ್ತು. ನಂತರ ಆ ಬಾಗೇಯನು ಯುದ್ಧದಲ್ಲಿ ವೀರಮರಣವನ್ನಪ್ಪಿದನೆಂದು ಶ್ರವಣಬೆಳಗೊಳದ ಶಾಸನವೊಂದರಿಂದ ತಿಳಿದುಬರುತ್ತದೆ[೯೪]. ಹೀಗೆ ಗಂಗ ಸಾಮ್ರಾಜ್ಯಕ್ಕೆ ಕಂಟಕ ಬಂದಾಗ ಚಾವುಂಡರಾಯನು ತನ್ನ ಶೌರ್ಯ ಸಾಹಸಗಳಿಂದ ಪಾರು ಮಾಡಿದನು.

**ನಾಲ್ಕನೆಯ ರಾಜಮಲ್ಲ ಸತ್ಯವಾಕ್ಯ (ಕ್ರಿ.ಶ.೯೭೪-೯೮೫)[೯೫]:**

ಮಾರಸಿಂಹನ ನಂತರ ಕ್ರಿ.ಶ. ೯೭೪ ರಲ್ಲಿಯೇ ರಾಜಮಲ್ಲನು ಸಿಂಹಾಸನಕ್ಕೆ ಬಂದಿದ್ದನು. ಆದರೆ ಪಾಂಚಾಲದೇವನ ದಂಗೆಯಿಂದಾಗಿ ಅವನ ಆಳ್ವಿಕೆಯು ಕ್ರಿ.ಶ. ೯೭೭ರಲ್ಲಿ ಆರಂಭವಾಯಿತೆನ್ನಬಹುದು. ಪೆಗ್ಗೂರು ಶಾಸನವು ಈತನು ಕ್ರಿ.ಶ.೯೭೭ರಲ್ಲಿ ಆಳ್ವಿಕೆಗೆ ಬಂದ ವಿಷಯವನ್ನು ತಿಳಿಸುತ್ತದೆಯಲ್ಲದೇ, ಕ್ರಿ.ಶ. ೯೭೮ರಲ್ಲಿ ಇವನಾಳ್ವಿಕೆಯಲ್ಲಿ ರಕ್ಕಸಗಂಗನು ಬೆದ್ದೊರಗೆರೆಯ ಪ್ರಾಂತ್ಯಾಧಿಕಾರಿಯಾಗಿ ಆಳುತ್ತಿದ್ದನೆಂದು ಹೇಳುತ್ತದೆ[೯೬]. ಈತನು ಧರ್ಮಮಹಾರಾಜಾಧಿರಾಜ, ಸತ್ಯವಾಕ್ಯ ಕೊಂಗುಣಿವರ್ಮ, ಪೆರ್ಮಾನಡಿ, ಗಂಗಕುಲಾಬ್ಧಿ ಚಂದ್ರ, ಜಗದೇಕವೀರ ಮತ್ತು ಧರ್ಮಾವತಾರ ಎಂಬ ಬಿರುದುಗಳನ್ನು ಧರಿಸಿದ್ದನೆಂದು ತಿಳಿದುಬರುತ್ತದೆ.

ಚಾಮುಂಡರಾಯನೆಂಬ ಸಮರ್ಥ ಮಂತ್ರಿಯ ಆಳ್ವಿಕೆಯ ಬೆಂಬಲದೊಂದಿಗೆ ನಾಲ್ಕನೆಯ ರಾಜಮಲ್ಲನಿಗೆ ಅವನ ತಮ್ಮ ರಕ್ಕಸಗಂಗನೂ ಕೂಡ ಆಡಳಿತದಲ್ಲಿ ವಿಶೇಷವಾಗಿ ಸಹಾಯವನ್ನು ನೀಡಿದನು. ಈ ಮೇಲೆ ಉಲ್ಲೇಖಿಸಿದಂತೆ ಅವನು ಬೆದ್ದೊರೆಗೆರೆ ಪ್ರಾಂತ್ಯದ ಅಧಿಕಾರಿಯಾಗಿದ್ದನಲ್ಲದೇ, 'ಅಣ್ಣನಭಂಟ' ಎಂದು ಕರೆದುಕೊಂಡಿದ್ದನು[೯೭]. ನಾಲ್ಕನೆಯ ರಾಜಮಲ್ಲ ಮತ್ತು ರಕ್ಕಸಗಂಗರ ಆಳ್ವಿಕೆಯ ಎಲ್ಲಾ ಕಾಲದಲ್ಲಿಯೂ ಅವರಿಗೆ ಬೆಂಗಾವಲಾಗಿ ನಿಂತ ಚಾಮುಂಡರಾಯನು, ಅವರಿಗಾಗಿ ಅನೇಕ ಯುದ್ಧಗಳನ್ನು ಕೈಕೊಂಡನು. ಗಂಗರ ವಿರೋಧಿಗಳಾದ ಸುತ್ತಮುತ್ತಲಿನ ಅನೇಕ ರಾಜರುಗಳನ್ನು ಸದೆಬಡಿದನು. ಇದರ ಪರಿಣಾಮವಾಗಿ ಈತನು ಉಚ್ಚಂಗಿಯ ಮೇಲೆ ಧಾಳಿಯಿಟ್ಟನು. ಆಗ ಅಲ್ಲಿ ಆಳುತ್ತಿದ್ದ ಪಾತಾಳಮಲ್ಲನ ಸಹೋದರನಾದ ವಜ್ಜಳದೇವನನ್ನು ಖೆಡ್ಡಗ ಎಂಬಲ್ಲಿ ಎದುರಿಸಿ ಅವರ ಶಕ್ತಿಯನ್ನಡಗಿಸಿದನು. ನಂತರ ಚಾಮುಂಡರಾಯನು ಬಯಲೂರು ಎಂಬಲ್ಲಿ ನಡೆದ ಕದನದಲ್ಲಿ ತ್ರಿಭುವನವೀರನನ್ನು ಕೊಂದು ಕೋಟೆಯನ್ನು ವಶಪಡಿಸಿಕೊಂಡನು[೯೮]. ಇದಾದ ನಂತರ ಚಾಮುಂಡರಾಯನು ಗಂಗರ ದಂಗೆಯೆದ್ದ ಸಾಮಂತರಾದ ರಾಜ, ಬಾಸ, ಶಿವರ ಮತ್ತು ಪುನಂಕರನ್ನು ಸೋಲಿಸಿ ಹತೋಟಿಯಲ್ಲಿಟ್ಟನು[೯೯].

**ರಕ್ಕಸಗಂಗ (ಕ್ರಿ.ಶ.೯೮೫-೧೦೨೪)[೧೦೦]:**

ನಾಲ್ಕನೆಯ ರಾಜಮಲ್ಲನ ಸಹೋದರನಾದ ರಕ್ಕಸಗಂಗನು ಆತನ ನಂತರ ಆಳಿದನು. ಈತನು ಗಂಗರ ಸಾಮ್ರಾಜ್ಯವನ್ನಾಳಿದ ಕೊನೆಯ ದೊರೆಯಾಗಿದ್ದಾನೆ. ಕ್ರಿ.ಶ. ೧೦೦೪ರಲ್ಲಿ ಚೋಳರ ಪಾಲಾಗುವದರೊಂದಿಗೆ ಗಂಗ ಸಾಮ್ರಾಜ್ಯವು ತನ್ನ ಉಚ್ಛ್ರಾಯತೆಯನ್ನು ಕಳೆದುಕೊಂಡು, ಮುಂದೆ ಗಂಗವಾಡಿಯನ್ನು ಅಷ್ಟೇ ಅವರು ನಂಬಿಕೊಂಡಿರುವಂತಾಯ್ತು. ಕೆಲಕಾಲ ಗಂಗರು ಚೋಳರ ಸಾಮಂತರಾಗಿ ಬದುಕಬೇಕಾಯ್ತು. ಅವನಣ್ಣನ

ಕೊನೆಗಾಲದಲ್ಲಿ ಈತನು ಕೊಡಗು ಜಿಲ್ಲೆಯ ಪೆದ್ದೂರ್ರೆಯ ದಂಡೆಯ ಮೇಲಿನ ಪ್ರಾಂತ್ಯವೊಂದರ ಅಧಿಕಾರಿಯಾಗಿದ್ದನು. ಜೊತೆಗೆ 'ಅಣ್ಣನಭಂಟ'ನೆಂಬ ಬಿರುದು ಈತನಿಗಿತ್ತು[೨೦೧]. ಜೊತೆಗೆ ಈತನು ಗಂಗನಾರಾಯಣ, ಗಂಗಚೂಡಾಮಣಿ, ರಾಜಾಧಿರಾಜ ಮತ್ತು ವೀರಮಾರ್ತಾಂಡದೇವ ಎಂಬ ಬಿರುದುಗಳನ್ನು ಹೊಂದಿದ್ದನು[೨೦೨]. ಕ್ರಿ.ಶ. ೯೯೦ರಲ್ಲಿ ಚಾಮುಂಡರಾಯನು ಮರಣಿಸಿದನು.

ಕ್ರಿ.ಶ. ೯೯೨ ರಲ್ಲಿ ಚೋಳರಾಜರಾಜನ ಆಳ್ವಿಕೆಯ ಏಳನೆಯ ವರ್ಷದಲ್ಲಿ ಗಂಗರ ಉತ್ತರದ ಪ್ರದೇಶಗಳು ಚೋಳರ ಆಳ್ವಿಕೆಗೆ ಒಳಪಟ್ಟಿದ್ದ ವಿಷಯವನ್ನು ಕೋಲಾರ ಜಿಲ್ಲೆಯ ಶಾಸನವೊಂದು ತಿಳಿಸುತ್ತದೆ. ಶಾಸನ ಹೇಳುವಂತೆ ಚೋಳರು ಕೊಡಗು ಮತ್ತು ಪಶ್ಚಿಮ ಘಟ್ಟಗಳ ಪ್ರದೇಶಗಳನ್ನು ವಶದಲ್ಲಿಟ್ಟುಕೊಂಡಂತೆ ತಿಳಿಯುತ್ತದೆ[೨೦೩]. ಹೀಗೆ ಚೋಳರಾಜರಾಜನು ಚಾಲುಕ್ಯ ಮತ್ತು ಗಂಗರನ್ನು ತನ್ನ ರಾಜ್ಯವಿಸ್ತಾರದ ಮಾರ್ಗದಿಂದ ತೆಗೆದುಹಾಕುವ ನೀತಿಯನ್ನು ಮುಂದುವರೆಸಿದನು. ಸಹಜವಾಗಿಯೇ ಬಲಹೀನರಾಗಿದ್ದ ಗಂಗರು ಅದಕ್ಕೆ ಬಲಿಯಾದರು. ಕ್ರಿ.ಶ. ೯೯೭ರಲ್ಲಿ ರಾಜರಾಜನು ಹೊಸಕೋಟೆಯ ಬಳಿ ತನ್ನ ಶಿಬಿರವನ್ನು ಸ್ಥಾಪಿಸಿದನು[೨೦೪]. ಕ್ರಿ.ಶ. ೧೦೦೪ರಲ್ಲಿ ರಾಜರಾಜಚೋಳನ ಮಗ ಮತ್ತು ಸಮರ್ಥ ಸೇನಾಪತಿಯಾದ ರಾಜೇಂದ್ರಚೋಳನ ನೇತೃತ್ವದಲ್ಲಿ ತಲಕಾಡು ಯುದ್ಧ ಸಂಭವಿಸಿತು. ಈ ಯುದ್ಧದಲ್ಲಿ ಎರಡೂ ಕಡೆಗೆ ಅಪಾರ ಪ್ರಮಾಣದ ಸೈನ್ಯ ಭಾಗವಹಿಸಿತ್ತು. ಕೊನೆಗೆ ರಾಜೇಂದ್ರಚೋಳನು ಗಂಗರ ಬಲವನ್ನು ಸೋಲಿಸಿ ಅವರ ರಾಜಧಾನಿ ತಲಕಾಡನ್ನು ಹಿಡಿದುಕೊಂಡನು. ಅಲ್ಲದೇ ಗಂಗೈಕೊಂಡ ಚೋಳ ಎಂಬ ಬಿರುದನ್ನು ಧರಿಸಿದನು. ಗಂಗರ ಅನೇಕ ಪ್ರಮುಖ ಪ್ರದೇಶಗಳಾದ ಅರಕಲಗೂಡು, ಶ್ರೀರಂಗಪಟ್ಟಣ, ನೆಲಮಂಗಲ ಮತ್ತು ನಿಡುಗಲ್ಲು ಮುಂತಾದ ಪ್ರದೇಶಗಳು ಚೋಳರ ಕೈವಶವಾದವು[೨೦೫].

ದಕ್ಷಿಣದ ಗಂಗವಾಡಿ ಪ್ರದೇಶವನ್ನು ಮುಡಿಗೊಂಡ ಚೋಳಮಂಡಲ, ಪೂರ್ವದ ಗಂಗವಾಡಿ ಭಾಗಗಳನ್ನು ವಿಕ್ರಮಚೋಳಮಂಡಲ ಮತ್ತು ನಿಗರಾಲಿ ಚೋಳಮಂಡಲಂ ಎಂದು ಪುನರ್ನಾಮಕರಣ ಮಾಡಲಾಯ್ತಲ್ಲದೇ, ತಲಕಾಡನ್ನು ರಾಜರಾಜಪುರವೆಂದು ಕರೆಯಲಾಯ್ತು. ಶ್ರೀನಿವಾಸಪುರ ತಾಲೂಕು, ಹಳೇಬೂದ್ನೂರು, ಕೋಲಾರ ಮತ್ತು ಚಾಮರಾಜನಗರದ ಶಾಸನ[೨೦೬]ಗಳ ಮೂಲಕ ತಿಳಿದುಬರುವಂತೆ, ಕ್ರಿ.ಶ.೧೦೦೪ ರಿಂದ ರಕ್ಕಸಗಂಗನು ಕ್ರಿ.ಶ.೧೦೨೪ ರವರೆಗೆ ತನ್ನ ಮರಣದ ಸಮಯದವರೆಗೂ ರಾಜೇಂದ್ರಚೋಳನ ಸಾಮಂತನಾಗಿ ಮುಂದುವರೆದನು.

ಅರುಮುಳಿದೇವ:

ರಕ್ಕಸಗಂಗನ ನಂತರ ಅವನ ಸಹೋದರ ಅರುಮುಳಿದೇವನು ಅಳಿದುಳಿದ ಗಂಗವಾಡಿಯ ಭಾಗಕ್ಕೆ ಚೋಳರ ಸಾಮಂತನಾಗಿ ಆಳ್ವಿಕೆ ಮಾಡಿದನು[೨೦೭]. ಕಾರಣ ರಕ್ಕಸಗಂಗನಿಗೆ ಮಕ್ಕಳಿರಲಿಲ್ಲವಾದ್ದರಿಂದ ಅವನು ಅರುಮುಳದೇವನ ಮಗನಾದ ಲೋಕವಿದ್ಯಾಧರನನ್ನು ದತ್ತಕ್ಕೆ ತೆಗೆದುಕೊಂಡಿದ್ದನು. ಅರುಮುಳಿದೇವನ ಬಗೆಗೆ ನಮಗೆ ಹೆಚ್ಚಿನ ವಿವರಗಳು ತಿಳಿದುಬರುವದಿಲ್ಲವಾದರೂ, ನಗರ ಶಾಸನವು ಆತನನ್ನು ಕುರಿತು ಉಲ್ಲೇಖಿಸಿದೆ[೨೦೮]. ನಂತರ ಆಳಿದ ಲೋಕವಿದ್ಯಾಧರನ

ಆಳ್ವಿಕೆಯ ಬಗ್ಗೆಯೂ ನಮಗೆ ಯಾವುದೇ ವಿವರಗಳು ತಿಳಿದುಬರುವದಿಲ್ಲ. ಈತನು ದಾನವನ್ನು ನೀಡಿದ ವಿಷಯ ಮಾತ್ರ ಅವನ ಶಾಸನಗಳಿಂದ ನಮಗೆ ತಿಳಿದುಬರುತ್ತದೆ[೨೯೯]. ನಂಜನಗೂಡು ತಾಲೂಕಿನ ಶಾಸನಗಳಲ್ಲಿಯೂ ಈತನ ಬಗ್ಗೆ ನಮಗೆ ತಿಳಿದುಬರುತ್ತದೆ. ಆದರೆ ಅದರಿಂದ ಹೆಚ್ಚಿನ ವಿವರಗಳೇನೂ ಗೊತ್ತಾಗುವದಿಲ್ಲ[೨೦೦].

ಹೀಗೆ ಗಂಗರು ಗಂಗವಾಡಿಯ ಕೆಲಭಾಗಗಳನ್ನು ಚೋಳರ ಸಾಮಂತರಾಗಿ ಆಳುತ್ತಿದ್ದು ಕೆಲಕಾಲದ ನಂತರ ಚೋಳ ಮತ್ತು ಹೊಯ್ಸಳರ ನಡುವೆ ಕಲಹಗಳು ಆರಂಭವಾದಾಗ ತಲಕಾಡಿನಿಂದ ಕೋಲಾರದ ಕಡೆಗೆ ಹೊರಟುಬಂದು ಹೊಯ್ಸಳರ ಅಧಿಕಾರಿಗಳಾಗಿ ಆಳ್ವಿಕೆ ಮಾಡಿರಬಹುದೆಂದು ಗೋಚರಿಸುತ್ತದೆ. ನಂತರ ಹೊಯ್ಸಳ ವಿಷ್ಣುವರ್ಧನನ ಕಾಲದಲ್ಲಿ ಈ ಗಂಗವಾಡಿಯ ಮೇಲೆ ಅವನ ಪ್ರಸಿದ್ಧ ದಂಡನಾಯಕ ಗಂಗರಾಜನು ಯುದ್ಧ ಕೈಕೊಂಡನು. ಆಗ ಕ್ರಿ.ಶ. ೧೧೧೪ ರಲ್ಲಿ ನಡೆದ ತಲಕಾಡು ಯುದ್ಧದಲ್ಲಿ ಚೋಳರಿಂದ ಅದನ್ನು ಮರಳಿಪಡೆದುಕೊಂಡನು. ಈ ಯುದ್ಧದಲ್ಲಿ ಆದ ಜಯದ ಸ್ಮರಣಾರ್ಥವಾಗಿ ವಿಷ್ಣುವರ್ಧನನು ತಲಕಾಡುಗೊಂಡ ಎಂಬ ಬಿರುದನ್ನು ಧರಿಸಿದನು.

## ೨) ಸವದತ್ತಿಯ ರಟ್ಟರು:

ಕರ್ನಾಟಕ ಇತಿಹಾಸದಲ್ಲಿ ರಟ್ಟರು ಮತ್ತೊಬ್ಬ ಪ್ರಮುಖ ಮಹಾಮಂಡಳೇಶ್ವರರಾಗಿದ್ದಾರೆ. ಇವರು ತಮ್ಮನ್ನು ರಾಷ್ಟ್ರಕೂಟರಂತೆಯೇ ಲಟ್ಟನೂರು ಪುರವರಾಧೀಶ್ವರರೆಂದು ಕರೆದುಕೊಂಡಿದ್ದಾರೆ. ಕ್ರಿ.ಶ. ೧೦ನೆಯ ಶತಮಾನದಿಂದ ೧೩ನೆಯ ಶತಮಾನದವರೆಗೆ ಆಳಿದ ರಟ್ಟರು ರಾಷ್ಟ್ರಕೂಟ, ಕಲ್ಯಾಣಿ ಚಾಲುಕ್ಯ ಮತ್ತು ಕಲಚೂರಿಗಳ ಸಾಮಂತ, ಮಹಾಸಾಮಂತ, ಮಹಾಮಂಡಳೇಶ್ವರರಾಗಿ, ನಂತರ ಕೆಲಕಾಲ ಸ್ವತಂತ್ರರಾಗಿ ಆಳ್ವಿಕೆಯನ್ನು ನಡೆಸಿದ್ದಾರೆ. ಇವರು ಆಳ್ವಿಕೆ ಮಾಡಿದ ಪ್ರದೇಶ ಕೂಹುಂಡಿ-೩೦೦೦ವಾಗಿದೆ. ಇದನ್ನು ಶಾಸನಗಳು ಕೂಹುಂಡಿ ನಾಡು, ಕೂಹುಂಡಿ ಮಂಡಲ ಹಾಗೂ ಕೂಂಡಿ ಎಂದು ಕರೆದಿವೆ. ಈ ಕೂಹುಂಡಿ ನಾಡಿನ ಮುಖ್ಯಸ್ಥಳ ಸುಗಂಧವರ್ತಿ-೧೨ (ಸವದತ್ತಿ) ಇವರ ರಾಜಧಾನಿಯಾಗಿತ್ತು. ಶಾಸನಗಳಲ್ಲಿ ಸವದತ್ತಿಯನ್ನು ಮುನಿಚಂದ್ರದೇವರಾಳ್ಕೆವಾಡ ಎಂದು ಕರೆಯಲಾಗಿದೆ[೨೦೧]. ಕೆಲಕಾಲ ಇವರು ನೇಸರಗಿ ಹಾಗೂ ಬೆಳಗಾವಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆನಡೆಸಿದ್ದಾರೆ. ಕೂಹುಂಡಿ ನಾಡು ಇಂದಿನ ಅಥಣಿ, ಖಾನಾಪೂರ ಮತ್ತು ಸಂಪಗಾಂವ ತಾಲೂಕಿನ ದಕ್ಷಿಣ ಭಾಗಗಳನ್ನು ಹೊರತುಪಡಿಸಿ, ಇಡೀ ಬೆಳಗಾವಿ ಜಿಲ್ಲೆಯನ್ನು ವ್ಯಾಪಿಸಿತ್ತು.

### ಮೊದಲನೆಯ ಶಾಖೆ:

### ಮೇರದ:

ರಟ್ಟರ ಮನೆತನದಲ್ಲಿ ಎರಡು ಶಾಖೆಗಳಿದ್ದವು. ಅದರಲ್ಲಿ ಮೊದಲನೆಯ ಶಾಖೆಯ ಮೂಲಪುರುಷ ಮೇರದನಾಗಿದ್ದಾನೆ[೨೦೨]. ಶಾಸನವೊಂದರಲ್ಲಿ ಈತನು ಪೃಥ್ವೀರಾಮನ ಮಗನೆಂದು ಉಲ್ಲೇಖಿಸಲ್ಪಟ್ಟಿದ್ದಾನೆ[೨೦೩].

**ಪೃಥ್ವೀರಾಮ:**

ಮೇರದನ ಮಗ ಪೃಥ್ವೀರಾಮನು ರಾಷ್ಟ್ರಕೂಟ ಮೂರನೆಯ ಕೃಷ್ಣನ ಕಾಲದಲ್ಲಿ ಅವನ ಸಾಮಂತನಾಗಿದ್ದನೆಂದು ತಿಳಿದುಬರುತ್ತದೆ[೨೧೪]. ಈ ಪೃಥ್ವೀರಾಮನು ಮೈಲಾಪತೀರ್ಥನೆಂಬ ಜೈನಗುರು ಸ್ಥಾಪಿಸಿದ ಕಾರೇಯ ಪಂಥದವನಾಗಿದ್ದನು. ಅಲ್ಲದೇ ಈತನು ತನ್ನ ಶೌರ್ಯ ಪರಾಕ್ರಮದಿಂದ ಮಹಾಸಾಮಂತ ಪದವಿಯನ್ನು ಪಂಚಮಹಾಶಬ್ದದ ಗೌರವದೊಂದಿಗೆ ಮೂರನೆಯ ಕೃಷ್ಣನಿಂದ ಪಡೆದುಕೊಂಡಿದ್ದನು. ಇವನು ಸುಗಂಧವರ್ತಿಯಲ್ಲಿ ಜೈನದೇಗುಲವೊಂದನ್ನು ನಿರ್ಮಿಸಿದಂತೆ ತಿಳಿದುಬರುತ್ತದೆ[೨೧೫].

**ಪಿತ್ತುಗ:**

ಪಿತ್ತುಗ ಅಥವಾ ಪಿಟ್ಟಗನು ಪೃಥ್ವೀರಾಮನ ಮಗ ಮತ್ತು ಉತ್ತರಾಧಿಕಾರಿಯಾಗಿದ್ದನು. ಈತನು ಅಜವರ್ಮನೆಂಬುವನೊಡನೆ ಹೋರಾಡಿ ಅವನನ್ನು ಸೋಲಿಸಿ ಅವನಿಂದ ಅಪಾರ ಪ್ರಮಾಣದ ಸಂಪತ್ತು, ಆನೆಗಳು ಮತ್ತು ಅವನ ಆಸ್ಥಾನದಲ್ಲಿರುವ ನೃತ್ಯಗಾತಿಯರು ಹಾಗೂ ಪರಿಚಾರಕಿಯರನ್ನು ಕಸಿದು ತಂದನೆಂದು ಶಾಸನದಿಂದ ತಿಳಿದುಬರುತ್ತದೆ. ಆದರೆ ಅಜವರ್ಮನು ಯಾರು ಎಂಬುದು ಇನ್ನೂ ತಿಳಿದುಬಂದಿಲ್ಲ[೨೧೬].

**ಶಾಂತಿವರ್ಮ:**

ಪಿತ್ತುಗನ ನಂತರ ಆಳ್ವಿಕೆಗೆ ಬಂದ ಶಾಂತಿವರ್ಮನು ಅವನ ಮಗನಾಗಿದ್ದನು. ಇವನು ಕ್ರಿ.ಶ. ೯೮೦ರಲ್ಲಿ ಚಾಲುಕ್ಯ ಎರಡನೆಯ ತೈಲಪನ ಸಾಮಂತನಾಗಿ ಆಳ್ವಿಕೆ ಮಾಡಿದನು. ಈತನಿಗೆ ಪಂಚಮಹಾಶಬ್ದದ ಗೌರವದ ಜೊತೆಗೆ ಮಹಾಸಾಮಂತ ಪದವಿಯೂ ದೊರೆತಿತ್ತು[೨೧೭]. ಶಾಂತಿವರ್ಮನು ಸುಗಂಧವರ್ತಿಯಲ್ಲಿ ಜೈನದೇಗುಲವೊಂದನ್ನು ನಿರ್ಮಿಸಿದ್ದನೆಂದು ತಿಳಿದುಬರುತ್ತದೆಯಲ್ಲದೇ, ಇವನಿಗೆ ಚಂಡಿಕಬ್ಬೆ ಎಂಬ ರಾಣಿಯಿದ್ದಳು[೨೧೮].

**ಎರಡನೆಯ ಶಾಖೆ:**

**ನನ್ನ:**

ರಟ್ಟರ ಎರಡನೆಯ ಶಾಖೆಯು ನನ್ನ ಎಂಬ ಮೂಲಪುರುಷನಿಂದ ಆರಂಭವಾಗುವದು. ಇವನಿಂದ ಆರಂಭವಾದ ಈ ಶಾಖೆಯು ಕ್ರಿ.ಶ. ೧೩ನೆಯ ಶತಮಾನದವರೆಗೂ ಮುಂದುವರೆಯಿತು. ಈ ನನ್ನನ ಶಾಸನಗಳು ಯಾವವೂ ದೊರೆಯದ್ದರಿಂದ ಇವನ ಬಗ್ಗೆ ಹೆಚ್ಚಿನ ವಿವರಗಳು ತಿಳಿದುಬಂದಿಲ್ಲ.

**ಒಂದನೆಯ ಕಾರ್ತವೀರ್ಯ:**

ನನ್ನನ ನಂತರ ಆತನ ಮಗನಾದ ಒಂದನೆಯ ಕಾರ್ತವೀರ್ಯನು ಆಳ್ವಿಕೆಗೆ ಬಂದನು. ಇವನಿಗೆ ಕತ್ತನೆಂಬ ಇನ್ನೊಂದು ಹೆಸರಿದ್ದು, ಈತನು ೯೭೫ರಲ್ಲಿ ಆಳ್ವಿಕೆಗೆ ಬಂದಿರಬಹುದು[೨೧೯]. ಕ್ರಿ.ಶ. ೯೮೦ರ ಸೊಗಲದ ಶಾಸನದ ಪ್ರಕಾರ

ಕಾರ್ತವೀರ್ಯನು ಎರಡನೆಯ ತೈಲನ ಸಾಮಂತನಾಗಿ ಕುಂಡಿ-೩೦೦೦ವನ್ನು ಆಳುತ್ತಿದ್ದನೆಂದು ತಿಳಿಯುತ್ತದೆ. ಅಲ್ಲದೇ ಶಾಸನ ಈತನನ್ನು ಭುಜಬಲ-ಚಕ್ರವರ್ತಿ ಎಂದು ಕರೆದಿದೆ[೨೨೦]. ಒಂದನೆಯ ಕಾರ್ತವೀರ್ಯನು ಕುಂಡಿ ದೇಶದ ಮೇರೆಗಳನ್ನು ನಿರ್ದಿಷ್ಟಪಡಿಸಿದವನೆಂದು ಅವನ ನಂತರದ ಶಾಸನವೊಂದು ಹೇಳಿದೆ[೨೨೧]. ಈ ಕಾರ್ತವೀರ್ಯನು ಪ್ರಸಿದ್ಧ ಕನ್ನಡ ಕವಿಯಾದ ಕಮಲಾದಿತ್ಯನಿಗೆ ತನ್ನ ಆಸ್ಥಾನದಲ್ಲಿ ಆಶ್ರಯವನ್ನು ನೀಡಿದ್ದಂತೆ ತೋರುತ್ತದೆ. ಕ್ರಿ.ಶ. ೯೮೦ರ ಸೊಗಲ ಶಾಸನವನ್ನು ಈ ಕಮಲಾದಿತ್ಯನೇ ಬರೆದಿದ್ದಾನೆ[೨೨೨].

**ದಾಯಿಮ:**

ಕಾರ್ತವೀರ್ಯನ ನಂತರ ರಟ್ಟರ ದೊರೆಯಾಗಿ ದಾಯಿಮನು ಆಳ್ವಿಕೆಗೆ ಬಂದನು. ಈತನಿಗೆ ಶಾಸನದಲ್ಲಿ ದಾವರಿ ಎಂದು ಇನ್ನೊಂದು ಹೆಸರು ಉಲ್ಲೇಖವಾಗಿದೆ[೨೨೩]. ಈತನ ಆಳ್ವಿಕೆಯ ವಿವರ ತಿಳಿಯಲು ನಮಗೆ ಯಾವುದೇ ಶಾಸನಗಳು ಸಿಗುವದಿಲ್ಲ. ಆದರೆ ಎರಡನೆಯ ಕಾರ್ತವೀರ್ಯನ ಸವದತ್ತಿ ಶಾಸನದಲ್ಲಿ ಈತನನ್ನು ರಟ್ಟರ ಮೇರು ಎಂದು ಕರೆಯಲಾಗಿದೆ[೨೨೪]. ಅಲ್ಲದೇ ಈತನ ಕಾಲದಲ್ಲಿ ಆಡಳಿತವು ಸಮರ್ಥವಾಗಿತ್ತು ಮತ್ತು ರಾಜ್ಯದ ಜನರು ಒಳ್ಳೆಯ ರಾಜನನ್ನು ಹೊಂದಿ ಸುಖವಾಗಿದ್ದರೆಂದು ಶಾಸನವೊಂದರಿಂದ ತಿಳಿಯುತ್ತದೆ[೨೨೫].

**ಒಂದನೆಯ ಕಣ್ಣಕೈರ:**

ಮುಂದೆ ಕುಂಡಿನಾಡಿನ ಉತ್ತರಾಧಿಕಾರಿಯಾಗಿ ಕಾರ್ತವೀರ್ಯನ ಸಹೋದರ ಕಣ್ಣ ಅಥವಾ ಎರಡನೆಯ ಕಣ್ಣಕೈರನು ಆಳ್ವಿಕೆಗೆ ಬಂದನು. ಕಣ್ಣಕೈರನು ಧೀರನೂ, ಉದಾರಿಯೂ ಎಂದು ಶಾಸನದಿಂದ ತಿಳಿದುಬರುತ್ತದೆ[೨೨೬]. ಆದರೆ ಈತನ ಬಗ್ಗೆ ಹೆಚ್ಚಿನ ವಿವರಗಳೇನೂ ದೊರೆಯುವದಿಲ್ಲ.

**ಎರಗ:**

ಕಣ್ಣಕೈರನ ನಂತರ ಆತನ ಮಗ ಎರಗ ಅಥವಾ ಎರೆಗನು ಆಳ್ವಿಕೆಗೆ ಬಂದನು[೨೨೭]. ಕ್ರಿ.ಶ. ೧೦೪೦ರ ಮಂಟೂರು ಶಾಸನದ ಪ್ರಕಾರ ಎರಗನು ಚಾಲುಕ್ಯರ ಎರಡನೆಯ ಜಯಸಿಂಹನ ಸಾಮಂತನಾಗಿದ್ದನು. ಅಲ್ಲದೇ ಶಾಸನವು ಈತನನ್ನು ರಟ್ಟನಾರಾಯಣ, ರಟ್ಟಮಾರ್ತಾಂಡ, ಸಿಂಗನ-ಗರುಡ ಎಂದು ಕರೆದಿದೆ[೨೨೮]. ಈ ಶಾಸನದಲ್ಲಿ ಈತನಿಗೆ ಸರಸ್ವತಿಕರ್ಣಕುಂಡಲವವ್ ಎಂದು ಕರೆಯಲಾಗಿದೆ. ಸವದತ್ತಿಯ ಶಾಸನದಲ್ಲಿ ಈತನು ಸಂಗೀತಶಾಸ್ತ್ರ ಪ್ರವೀಣನಾಗಿದ್ದನೆಂದು ಉಲ್ಲೇಖಿಸಲಾಗಿದೆ[೨೨೯].

**ಅಂಕ:**

ಎರಗನ ಮರಣದ ನಂತರ ಅವನ ಮಗ ಒಂದನೆಯ ಸೇನ ಅಪ್ರಾಪ್ತವಯಸ್ಕನಾಗಿದ್ದರಿಂದ ಎರಗನ ಸಹೋದರ ಅಂಕ ಅಥವಾ ಅಂಕಪಾಲನು ಆಳ್ವಿಕೆಗೆ ಬಂದನು[೨೩೦]. ಕ್ರಿ.ಶ. ೧೧೪೯ರಲ್ಲಿ ಈತನು ರಾಜಧಾನಿ ಸುಗಂಧವರ್ತಿ

ನೆಲೆವೀಡಿನಿಂದ ಒಂದನೆಯ ಸೋಮೇಶ್ವರನ ಸಾಮಂತನಾಗಿ ಆಳ್ವಿಕೆ ನಡೆಸುತ್ತಿದ್ದನೆಂದು ತಿಳಿಯುತ್ತದೆ. ಅಲ್ಲದೇ ಈತನು ಯುದ್ಧ ಪರಾಕ್ರಮಿಯಾಗಿದ್ದು, ಒಂದನೆಯ ಜಯಸಿಂಹನ ಅನೇಕ ಯುದ್ಧಗಳಲ್ಲಿ ಭಾಗವಹಿಸಿದ್ದ ವಿಷಯ ಶಾಸನಗಳಲ್ಲಿನ ಈತನ ಪರಾಕ್ರಮದ ವರ್ಣನೆಗಳಿಂದ ತಿಳಿದುಬರುತ್ತದೆ[೨೩೧].

**ಒಂದನೆಯ ಸೇನ:**

ಎರಗನ ಮಗ ಒಂದನೆಯ ಸೇನನು ಅಂಕನ ನಂತರ ಆಳ್ವಿಕೆಗೆ ಬಂದನು. ಇವನಿಗೆ ಶ್ರೀಕಾಳಸೇನ ಎಂಬ ಇನ್ನೊಂದು ಹೆಸರಿದ್ದುದಾಗಿ ತಿಳಿಯುತ್ತದೆ[೨೩೨]. ಈತನ ಆಳ್ವಿಕೆಯ ಕಾಲದ ಯಾವುದೇ ಶಾಸನಗಳು ದೊರೆಯುವದಿಲ್ಲ. ಈತನು ಒಂದನೆಯ ಸೋಮೇಶ್ವರ ಮತ್ತು ಎರಡನೆಯ ಸೋಮೇಶ್ವರರ ಸಾಮಂತನಾಗಿದ್ದನು. ಅಲ್ಲದೇ ಇವನಿಗೆ ಮೈಲಳದೇವಿ ಎಂಬ ರಾಣಿಯಿದ್ದಳು[೨೩೩].

**ಎರಡನೆಯ ಕಣ್ಣಕೈರ:**

ಸೇನನ ನಂತರ ಕಣ್ಣ ಅಥವಾ ಎರಡನೆಯ ಕಣ್ಣಕೈರನು ಆಳ್ವಿಕೆಗೆ ಬಂದನು. ಈತನು ತನ್ನ ಸಹೋದರ ಎರಡನೆಯ ಕಾರ್ತವೀರ್ಯನೊಡನೆ ಒಟ್ಟಿಗೆ ಆಳ್ವಿಕೆ ನಡೆಸಿದನು. ಕ್ರಿ.ಶ. ೧೦೮೨ರ ತಿಡಗುಂದಿ ತಾಮ್ರಪಟಗಳ ಪ್ರಕಾರ ಈತನು ಆರನೆಯ ವಿಕ್ರಮಾದಿತ್ಯನ ಮಹಾಸಾಮಂತನೆಂದು ಉಲ್ಲೇಖಗೊಂಡಿದ್ದಾನೆ. ಅದೇ ಶಾಸನದಲ್ಲಿ ಇವನು ಲಾಟೀಕುಚತಟಸ್ಪರ್ಶಿಚರಂ ಎಂದು ಕರೆಯಲಾಗಿದೆ[೨೩೪]. ಇದರಿಂದ ಈತನು ಲಾಟದೊರೆಗಳ ಮಗಳನ್ನು ಮದುವೆಯಾಗಿದ್ದುದಾಗಿ ತಿಳಿದುಬರುತ್ತದೆ. ಮುಂದೆ ಕ್ರಿ.ಶ. ೧೦೮೭ರ ಕೊಣ್ಣೂರು ಶಾಸನದಿಂದ ತಿಳಿದುಬರುವಂತೆ ಈತನು ಆರನೆಯ ವಿಕ್ರಮಾದಿತ್ಯನ ಮಹಾಮಂಡಳೇಶ್ವರನಾಗಿದ್ದನು[೨೩೫]. ಮಹಾಮಂಡಳೇಶ್ವರ ಎಂಬ ಬಿರುದನ್ನು ಧರಿಸಿದ ರಟ್ಟರ ದೊರೆಗಳಲ್ಲಿಯೇ ಈತನು ಮೊಟ್ಟಮೊದಲಿಗನಾಗಿದ್ದಾನೆ. ಇದರಿಂದ ರಟ್ಟರು ಕ್ರಮೇಣ ತಮ್ಮ ಪರಾಕ್ರಮವನ್ನು ವೃದ್ಧಿಸಿಕೊಂಡದ್ದು ತಿಳಿಯುತ್ತದೆ.

**ಎರಡನೆಯ ಕಾರ್ತವೀರ್ಯ:**

ಎರಡನೆಯ ಕಾರ್ತವೀರ್ಯ ಅಥವಾ ಕತ್ತನು ಮೊದಲು ಸೋಮೇಶ್ವರನ ಮಹಾಮಂಡಳೇಶ್ವರನಾಗಿ ಕ್ರಿ.ಶ. ೧೦೬೯ರಲ್ಲಿ ಕೂಂಡಿದೇಶವನ್ನಾಳುತ್ತಿದ್ದನೆಂದು ಸವದತ್ತಿಯ ಶಾಸನದಿಂದ ತಿಳಿದುಬರುತ್ತದೆ[೨೩೬]. ಅಲ್ಲದೇ ಕ್ರಿ.ಶ. ೧೦೯೬ರ ಶಾಸನವೊಂದರಲ್ಲಿ ಈತನು ಆರನೆಯ ವಿಕ್ರಮಾದಿತ್ಯನ ಸಾಮಂತನಾಗಿ ಆಳ್ವಿಕೆ ನಡೆಸಿದ ವಿವರ ತಿಳಿದುಬರುತ್ತದೆ[೨೩೭]. ಅಲ್ಲದೇ ಶಾಸನದಲ್ಲಿ ಈತನನ್ನು ಪಂಚಮಹಾಶಬ್ದ, ಲಟ್ಟನೂರಪುರವರೇಶ್ವರ, ಸೇನನಸಿಂಗ ಎಂದು ಮುಂತಾಗಿ ಕರೆಯಲಾಗಿದೆ[೨೩೮]. ಭಾಗಲಾಂಬಿಕಾ ಅಥವಾ ಭಾಗಲದೇವಿ ಎಂಬುವಳು ಈತನ ರಾಣಿಯಾಗಿದ್ದಳು[೨೩೯].

## ಎರಡನೆಯ ಸೇನ:

ಎರಡನೆಯ ಕಣ್ಣಕೈರನಿಗೆ ಮಕ್ಕಳಿಲ್ಲದ್ದರಿಂದ ಎರಡನೆಯ ಕಾರ್ತವೀರ್ಯನ ಮಗ ಎರಡನೆಯ ಸೇನನು ಆಳ್ವಿಕೆಗೆ ಬಂದನು[೨೪೦]. ಕ್ರಿ.ಶ. ೧೦೯೬ರ ಸವದತ್ತಿಯ ಶಾಸನವೊಂದರಿಂದ ತಿಳಿದುಬರುವಂತೆ ಇವನು ಆರನೆಯ ವಿಕ್ರಮಾದಿತ್ಯನ ಸಾಮಂತನಾಗಿದ್ದನು[೨೪೧]. ಕೊಣ್ಣೂರು ಶಾಸನ ತಿಳಿಸುವಂತೆ ಈತನು ಆರನೆಯ ವಿಕ್ರಮಾದಿತ್ಯನ ಮಗನಾದ ಜಯಕರ್ಣನ ಆಧೀನನಾಗಿ ಕುಂಡಿ-೩೦೦೦ ನಾಡನ್ನು ಆಳುತ್ತಿದ್ದನು[೨೪೨]. ಜಯಕರ್ಣನು ಆಡಳಿತಾಧಿಕಾರಿಯಾಗಿ ಇವನ ಮೇಲಾಳ್ವಿಕೆ ನಡೆಸುತ್ತಿದ್ದನು. ಕಲ್ಹೊಳಿ ಶಾಸನದ ಪ್ರಕಾರ ಇವನಿಗೆ ಲಕ್ಷ್ಮೀದೇವಿ ಎಂಬ ರಾಣಿಯಿದ್ದಳು.

## ಮೂರನೆಯ ಕಾರ್ತವೀರ್ಯ:

ಇಮ್ಮಡಿ ಸೇನನ ನಂತರ ಅವನ ಮಗ ಮೂರನೆಯ ಕಾರ್ತವೀರ್ಯನು ಆಳ್ವಿಕೆ ಬಂದನು. ಮೊದಲಿಗೆ ಈತನು ಮೂರನೆಯ ಸೋಮೇಶ್ವರ ಮತ್ತು ಎರಡನೆ ಜಗದೇಕಮಲ್ಲರ ಸಾಮಂತನಾಗಿ ಆಳ್ವಿಕೆ ನಡೆಸಿದ್ದುದನ್ನು ಶಾಸನಗಳು ಉಲ್ಲೇಖಿಸಿವೆ[೨೪೩]. ಇದೇ ವೇಳೆಗೆ ಚಾಲುಕ್ಯರನ್ನು ಬದಿಗೊತ್ತಿ ಕಲಚೂರಿಗಳು ಆಳ್ವಿಕೆಗೆ ಮುಂದಾದಾಗ ಮೂರನೆಯ ಕಾರ್ತವೀರ್ಯನು ಈತನು ಸ್ವತಂತ್ರನಾಗಲು ಯತ್ನಿಸಿರಬಹುದು. ಅಲ್ಲದೇ ತನ್ನ ಎರಡನೆಯ ರಾಜಧಾನಿಯನ್ನಾಗಿ ನೇಸರಿಗೆಯನ್ನು ಮಾಡಿಕೊಂಡು ಆಳುತ್ತಿದ್ದನೆಂದು ಕ್ರಿ.ಶ. ೧೧೬೨ರ ನೇಸರಿಗೆ ಶಾಸನದಿಂದ ತಿಳಿದುಬರುತ್ತದೆ[೨೪೪]. ಆದರೆ ಈತನ ಪ್ರಯತ್ನ ಫಲಿಸದೆ ಇವನು ಕ್ರಿ.ಶ. ೧೧೬೫ರಲ್ಲಿ ಕಲಚೂರಿ ಬಿಜ್ಜಳನ ಮಹಾಮಂಡಳೇಶ್ವರನಾಗಿ ಆಳ್ವಿಕೆ ಮಾಡುತ್ತಿದ್ದ ವಿವರ ತಿಳಿದುಬರುತ್ತದೆ[೨೪೫]. ಕ್ರಿ.ಶ. ೧೧೭೦ರ ಕೊಣ್ಣೂರಿನ ತಟಾಕೇಶ್ವರ ದೇವಾಲಯದ ಶಾಸನದಿಂದ ತಿಳಿದುಬರುವದೇನೆಂದರೆ ಮೂರನೆಯ ಕಾರ್ತವೀರ್ಯನು ಬಿಜ್ಜಳನ ಮಗ ಸೋವಿದೇವನ ಮಹಾಮಂಡಳೇಶ್ವರನಾಗಿ ಕೂಹುಂಡಿ-೩೦೦೦ವನ್ನು ಆಳುತ್ತಿದ್ದನು[೨೪೬]. ಇವನ ರಾಣಿ ಪದ್ಮಲಾದೇವಿಯಾಗಿದ್ದು, ಇವಳನ್ನು ಶಾಸನದಲ್ಲಿ ಜೈನದೇವತೆಯಾದ ಪದ್ಮಾವತಿಗೆ ಹೋಲಿಸಿ ಎರಡನೆಯ ಪದ್ಮಾವತಿ ಎಂದು ಕರೆಯಲಾಗಿದೆ[೨೪೭].

## ಲಕ್ಷ್ಮೀದೇವ:

ಇವನು ಮೂರನೆಯ ಕಾರ್ತವೀರ್ಯನ ಮಗನಾಗಿದ್ದು, ಅವನ ನಂತರ ಆಳ್ವಿಕೆಗೆ ಬಂದು ಕೆಲವೇ ದಿನಗಳವರೆಗೆ ಆಳ್ವಿಕೆ ನಡೆಸಿದನು. ಹಣ್ಣಿಕೇರಿ ಶಾಸನದ ಪ್ರಕಾರ ಈತನು ಕೂಹುಂಡಿ-೩೦೦೦ನ್ನು ತನ್ನ ರಾಜಧಾನಿ ವೇಣುಗ್ರಾಮದಿಂದ ಆಳುತ್ತಿದ್ದನೆಂದು ತಿಳಿದುಬರುತ್ತದೆ[೨೪೮]. ಈತನು ಚಾಲುಕ್ಯ ನಾಲ್ಕನೆಯ ಸೋಮೇಶ್ವರನ ಸಾಮಂತನಾಗಿದ್ದನು. ಈತನ ಕಾಲದಲ್ಲಿ ಪ್ರಸಿದ್ಧ ಕವಿಗಳಾದ ಕರ್ಣಪಾರ್ಯ ಮತ್ತು ನೇಮಿಚಂದ್ರರೆಂಬುವರು ಇವನ ಆಶ್ರಯದಲ್ಲಿದ್ದು ಕೆಲ ಗ್ರಂಥಗಳನ್ನು ರಚಿಸಿದರೆಂದು ತಿಳಿಯುವುದು[೨೪೯]. ಈತನಿಗೆ ಚಂದಲಾದೇವಿ ಅಥವಾ ಚಂದ್ರಿಕಾದೇವಿ ಎಂಬ ಹೆಸರಿನ ರಾಣಿಯಿದ್ದಳು. ಇವಳು ಹಗರಟಗಿಯ ಯದುವಂಶ ಮಹಾಮಂಡಳೇಶ್ವರನಾದ ರಾಜನ ಮಗಳಾಗಿದ್ದಳೆಂದು ಕಂಡುಬರುತ್ತದೆ[೨೫೦]. ಈತನು ತನ್ನ ತಂದೆಯ ಸ್ಮರಣಾರ್ಥವಾಗಿ ಸವದತ್ತಿಯ ಹೊರವಲಯದಲ್ಲಿರುವ ನಾಗರಕೆರೆಯ ಬಳಿ ಮಲ್ಲಿನಾಥ ದೇಗುಲವೊಂದನ್ನು ನಿರ್ಮಿಸಿದ್ದನೆಂದು ಪರಸಗಡದ ಶಾಸನದಿಂದ ತಿಳಿದುಬರುತ್ತದೆ[೨೫೧].

## ನಾಲ್ಕನೆಯ ಕಾರ್ತವೀರ್ಯ ಮತ್ತು ಮಲ್ಲಿಕಾರ್ಜುನ:

ಲಕ್ಷ್ಮೀದೇವನ ನಂತರ ಆತನ ಮಕ್ಕಳಾದ ನಾಲ್ಕನೆಯ ಕಾರ್ತವೀರ್ಯ ಮತ್ತು ಮಲ್ಲಿಕಾರ್ಜುನರು ರಾಜ-ಯುವರಾಜರೆಂದು ಜೊತೆಗೂಡಿ ಆಳ್ವಿಕೆ ನಡೆಸಿದರು[೨೨]. ಬೆಳಗಾವಿಯ ಎರಡು ಶಾಸನಗಳು ಉಲ್ಲೇಖಿಸುವಂತೆ ನಾಲ್ಕನೆಯ ಕಾರ್ತವೀರ್ಯನು ವೇಣುಗ್ರಾಮ ರಾಜಧಾನಿಯಿಂದ ತನ್ನ ಸಾಮ್ರಾಜ್ಯವನ್ನು ಪರಿಪಾಲಿಸುತ್ತಿದ್ದನೆಂದೂ ಆಗ ಅವನ ಸಹೋದರ ಮಲ್ಲಿಕಾರ್ಜುನನು ಯುವರಾಜನಾಗಿದ್ದನೆಂದು ತಿಳಿಯುತ್ತದೆ[೨೩]. ಭೋಜದ ಕ್ರಿ.ಶ. ೧೨೦೮ರ ಶಾಸನದಲ್ಲಿ ಮಲ್ಲಿಕಾರ್ಜುನನನ್ನು ಯುವರಾಜನೆಂದು ಕರೆಯಲಾಗಿದೆ[೨೪]. ಬೆಳಗಾವಿಯು ನಾಲ್ಕನೆಯ ಕಾರ್ತವೀರ್ಯನ ಕಾಲಕ್ಕೆ ಅತ್ಯಂತ ಸಂಪದ್ಭರಿತವಾದ, ಪ್ರಮುಖ ಪಟ್ಟಣವಾಗಿತ್ತೆಂದು ಅಲ್ಲಿನ ಕ್ರಿ.ಶ. ೧೨೦೧ರ ಶಾಸನದಿಂದ ತಿಳಿದುಬರುತ್ತದೆ[೨೫]. ಅಲ್ಲದೇ ಬೆಳಗಾವಿಯು ಲಾಟ, ಕೇರಳ ಮುಂತಾದ ದೇಶಗಳಿಂದ ವ್ಯಾಪಾರಿಗಳನ್ನು ಆಕರ್ಷಿಸುತ್ತಿತ್ತು ಎಂದು ಶಾಸನವೊಂದು ಉಲ್ಲೇಖಿಸಿದೆ[೨೬]. ಮೂರನೆಯ ಕಾರ್ತವೀರ್ಯನ ಕಾಲದಲ್ಲಿ ಸಾಮ್ರಾಜ್ಯದ ಉತ್ತರದ ಕಡೆಯ ಭಾಗಗಳು ನಷ್ಟವಾಗಿದ್ದವು. ಆದರೆ ಅದನ್ನು ಮರಳಿಪಡೆಯಲು ನಾಲ್ಕನೆಯ ಕಾರ್ತವೀರ್ಯನು ಪ್ರಯತ್ನ ನಡೆಸಿ ಯಶಸ್ವೀಯಾದನೆಂದು ತಿಳಿಯುತ್ತದೆ. ಅವನು ಮರಳಿಗಳಿಸಿದ ಆ ಭಾಗವು ಕೊರವಲ್ಲಿ ಕಂಪಣ ಪ್ರದೇಶವಾಗಿತ್ತು[೨೭]. ರಟ್ಟರು ಈ ಕಾಲದಲ್ಲಿ ಪೂರ್ಣ ಸ್ವತಂತ್ರರಾಗಿ ಆಳ್ವಿಕೆ ನಡೆಸುತ್ತಿದ್ದರೆಂದು ಅವರ ಶಾಸನಗಳು ಹೇಳುತ್ತವೆ[೨೮]. ಇವನ ಆಸ್ಥಾನದಲ್ಲಿ ಪ್ರಸಿದ್ಧ ಕವಿಗಳಾದ ಬಾಲಚಂದ್ರ ಮತ್ತು ಪಾರ್ಶ್ವನಾಥ ಪಂಡಿತರು ಆಶ್ರಯ ಪಡೆದಿದ್ದರೆಂದು ತಿಳಿಯುತ್ತದೆ. ಈತನಿಗೆ ಕವಿಕುಲತಿಲಕನೆಂಬ ಬಿರುದಿತ್ತು ಅಲ್ಲದೇ ಇವನು ಪಾರ್ಶ್ವನಾಥ ಪುರಾಣ ಎಂಬ ಕೃತಿಯನ್ನು ರಚಿಸಿದ್ದಾನೆ[೨೯]. ಈತನಿಗೆ ಏಚಲದೇವಿ ಹಾಗೂ ಮಾದೇವಿ ಎಂಬ ಇಬ್ಬರು ರಾಣಿಯರಿದ್ದರು[೩೦].

## ಎರಡನೆಯ ಲಕ್ಷ್ಮೀದೇವ:

ನಾಲ್ಕನೆಯ ಕಾರ್ತವೀರ್ಯನ ನಂತರ ಆಳ್ವಿಕೆಗೆ ಬಂದ ಈತ, ಕಾರ್ತವೀರ್ಯ ಮತ್ತು ಮಾದೇವಿಯರ ಮಗನಾಗಿದ್ದನು[೩೧]. ಯುವರಾಜನಾಗಿ ತಂದೆಯ ಆಡಳಿತದಲ್ಲಿ ಈತನು ಭಾಗವಹಿಸಿ, ತುಂಬಾ ಸಹಾಯವನ್ನು ಮಾಡಿರಬೇಕು. ಕಾರಣ ಈತನಿಗೆ ಶಾಸನದಲ್ಲಿ ಬೊಪ್ಪನ-ಸಿಂಗ ಎಂದು ಕರೆಯಲಾಗಿದೆ[೩೨]. ಎರಡನೆಯ ಲಕ್ಷ್ಮೀದೇವನು ಕ್ರಿ.ಶ.೧೨೨೮ರಲ್ಲಿ ಸ್ವತಂತ್ರನಾಗಿ ಬೆಳಗಾವಿಯಿಂದ ಕುಂಡಿ-೩೦೦೦ನ್ನು ಆಳುತ್ತಿದ್ದನೆಂದು ತಿಳಿದುಬರುತ್ತದೆ[೩೩]. ಕ್ರಿ.ಶ. ೧೨೨೨ರ ಮನೋಳಿಯ ಯಾದವ ಎರಡನೆಯ ಸಿಂಘಣನ ಶಾಸನದ ಪ್ರಕಾರ ಈ ಹೊತ್ತಿಗೆ ರಟ್ಟರ ಸಾಮ್ರಾಜ್ಯದ ಪೂರ್ವಭಾಗದ ಕೆಲ ಪ್ರದೇಶಗಳು ದೇವಗಿರಿ ಯಾದವರ ಪಾಲಾಗಿದ್ದವು[೩೪]. ಮುಂದೆ ಯಾದವರು ಕ್ರಿ.ಶ. ೧೨೩೩ರ ಹೊತ್ತಿಗೆ ಲಕ್ಷ್ಮೀದೇವನನ್ನು ಸೋಲಿಸಿದರು. ನಂತರ ಕ್ರಿ.ಶ. ೧೨೩೭-೩೮ರಲ್ಲಿ ಯಾದವ ಎರಡನೆಯ ಸಿಂಘಣನ ಸಮರ್ಥ ಸೇನಾಪತಿಯಾದ ವೀಚಣನು ಸಂಪೂರ್ಣವಾಗಿ ರಟ್ಟರನ್ನು ಸೋಲಿಸಿದನೆಂದು ಹರಳಹಳ್ಳಿ ಶಾಸನದಿಂದ ತಿಳಿಯುತ್ತದೆ[೩೫]. ಇವನ ನಂತರ ನಮಗೆ ಯಾವುದೇ ರಟ್ಟ ದೊರೆಯ ಉಲ್ಲೇಖ ಕಂಡುಬರುವದಿಲ್ಲ.

## ೩) ಚಲ್ಲಕೇತನರು:

ಚಲ್ಲಕೇತನರು ಬನವಾಸಿ ಪನ್ನಿರ್ಚ್ಛಾಸಿರವನ್ನೊಳಗೊಂಡು ಒಟ್ಟು ೩೧,೧೦೨ ಗ್ರಾಮಗಳ ಆಳ್ವಿಕೆಯನ್ನು ಮಾಡುತ್ತಿದ್ದರೆಂದು ಕೊಣ್ಣೂರಿನ ಶಾಸನ ತಿಳಿಸುತ್ತದೆ [೨೬]. ಇಷ್ಟು ವಿಶಾಲವಾದ ಪ್ರದೇಶದ ಆಳ್ವಿಕೆ ಕೈಕೊಂಡ ಇವರಿಗೆ ಬಂಕಾಪುರವು ರಾಜಧಾನಿಯಾಗಿತ್ತು. ಕ್ರಿ.ಶ. ೮೫೦ ರಿಂದ ೯೪೫ ರ ವರೆಗೆ ಸ್ವಸ್ತಿ ಸಮಧಿಗತ ಪಂಚಮಹಾಶಬ್ದ ಮಹಾಸಾಮಂತರೆಂಬ ಅಭಿದಾನ ಹೊತ್ತು ರಾಷ್ಟ್ರಕೂಟರ ಆಳ್ವಿಕೆಯ ಉದ್ದಕ್ಕೂ ಬಹುನಿಷ್ಠೆಯಿಂದ ಕಾರ್ಯನಿರ್ವಹಿಸಿದರು.

ಚಲ್ಲಕೇತನ ಮನೆತನದ ಹೆಸರನ್ನುಕುರಿತು ಈವರೆಗೆ ಅನೇಕ ಚರ್ಚೆಗಳು ನಡೆದಿದ್ದು ಶಾಸನಗಳಲ್ಲಿ ಚಲ್ಲಕೇತನ, ಸೆಲ್ಲಕೇತನಃ,[೨೭] ಮತ್ತು ಕೊಣ್ಣೂರಿನ ಶಾಸನದಲ್ಲಿ ಮುಕುಲಕುಲೇ ಚಲ್ಲವತಾಕ [೨೮] ಮುಂತಾದ ಹೆಸರುಗಳಿಂದ ಕರೆಯಲಾಗಿದೆ. ಡಾ. ಪಾಠಕರ ಪ್ರಕಾರ **ಚಲ್ಲ** ಎಂದರೆ ಬಟ್ಟೆ **ಕೇತನ** ಎಂದರೆ ಧ್ವಜ, ಅಂದರೆ ಬಟ್ಟೆಯ ಧ್ವಜ ಎಂದರ್ಥ. ಇದಕ್ಕೆ ಅವರು ಕೊಡುವ ಆಧಾರ ಸಂಸ್ಕೃತದ ಚೆಲಾ, ಕನ್ನಡದಲ್ಲಿ ಸೇಲೆ ಅಥವಾ ಬಟ್ಟೆ ಎಂದು ರೂಪಾಂತರಗೊಂಡಿದೆ[೨೯]. ಡಾ. ಕೀಲ್‌ಹಾರ್ನ ಅವರು ಕೊಣ್ಣೂರಿನ ಶಾಸನವನ್ನು ಸಂಪಾದಿಸುತ್ತಾ ಸೆಲ್ಲ ಎಂಬುದು ಒಂದು ಆಯುಧ ಸೂಚಕ ಪದ, ಅದೇ ಸಲ್ಲವಿದ್ಯಾಧರ ಎಂದರೆ ಭರ್ಚಿಯಿಂದ ಆಯುಧ ಧರಿಸಿರುವವ ಎಂದು ಅರ್ಥೈಸಿರುವರು ಈ ಹಿನ್ನೆಲೆಯಲ್ಲಿ ಸೆಲ್ಲವೆಡಂಗ ಪದ ಗಮನಿಸಬೇಕು ಎಂಬುದು ಅವರ ಹೇಳಿಕೆ[೩೦]. ಹಳೇರಿತ್ತಿ ಶಾಸನದಲ್ಲಿ[೩೧] ಚಲ್ಲಕೇತ ಪದವನ್ನು ಪ್ರತ್ಯಯದ ನ ವನ್ನು ಬಿಡಿಸಿ ಬರೆದುದನ್ನು ಗಮನಿಸಬಹುದು. ಇದನ್ನು ಮನಗಂಡರೆ ಚಲ್ಲಕೇತನೆಂಬುವವನು ಈ ಮನೆತನದ ಮೂಲ ಪುರುಷನಾಗಿರಬಹುದು.

ಚಲ್ಲಕೇತನ ಮನೆತನಕ್ಕೆ ಕರುದೇವಯ್ಯರಾನ್ವಯ ಎಂಬ ಬೇರೊಂದು ಹೆಸರು ಇದ್ದುದಾಗಿ ಬದಂಳಿಕೆ ಶಾಸನದಿಂದ[೩೨] ಕಂಡುಬರುತ್ತದೆ. ಇಲ್ಲಿನ ಇನ್ನೊಂದು ಶಾಸನದಲ್ಲಿ ಕಲಿವಿಟ್ಟರಸನು ಬನವಾಸಿ ಪನ್ನಿರ್ಚ್ಛಾಸಿರ ಆಳುತ್ತಿದ್ದ ಉಲ್ಲೇಖವಿದ್ದು, ಈ ಕಲಿವಿಟ್ಟನೂ ಕಾರ್ಕಿದೇವಯ್ಯನ ಅನ್ವಯದವನೆಂದಿದೆ[೩೩]. ಈ ಶಾಸನಗಳ ಆಧಾರದಿಂದ ಚಲ್ಲಕೇತನ ವಂಶದ ಮೂಲಪುರುಷ ಕರುದೇವಯ್ಯ ಅಥವಾ ಕಾರ್ಕಿದೇವಯ್ಯ ಎಂಬುವನಾಗಿದ್ದಾನೆ. ಚಲ್ಲಕೇತನೆಂಬುವ ಈ ಮನೆತನದ ಅಭಿವೃದ್ಧಿಗೆ ಕಾರಣವಾಗಿರಬೇಕು.

**ಎರಕೋರಿ:**

ಕ್ರಿ.ಶ.೮೬೦ರ ಕೊಣ್ಣೂರು ಶಾಸನದಿಂದ ತಿಳಿದುಬರುವಂತೆ ಎರಕೋರಿಯು ಕರುದೇವಯ್ಯನ ನಂತರ ನಮಗೆ ಕಂಡುಬರುವ ಅರಸನಾಗಿದ್ದಾನೆ. ಈತನು ಈ ಮನೆತನದ ಪ್ರಥಮ ಐತಿಹಾಸಿಕ ವ್ಯಕ್ತಿಯಾಗಿದ್ದಾನೆ[೩೪].

**ದೋರ:**

ನಂತರ ಬಂದವನು ಏರಕೋರಿಯ ಮಗ ಮೊದಲನೆಯ ಧೋರ. ಧೋರನನ್ನು ಶಾಸನವು ಕುಲಾಧಾರನೆಂದು ಕರೆದಿದೆಯಲ್ಲದೇ, ಈತನು ಕೊಳನೂರಿನ ಅಧಿಪತಿಯಾಗಿದ್ದನೆಂದು ತಿಳಿದುಬರುತ್ತದೆ. ಇವನು ರಾಷ್ಟ್ರಕೂಟರ

ಸೇನಾನಾಯಕನಾಗಿದ್ದ. ಆನೇಕ ಹೋರಾಟಗಳಲ್ಲಿ ಭಾಗವಹಿಸಿ ಆವರ ಪ್ರೀತಿ ವಿಶ್ವಾಸಕ್ಕೆ ಪಾತ್ರನಾಗಿದ್ದನು. ಈತನ ಮಡದಿ ವಿಜಯಾಂಕಾ ಮತ್ತು ಬಂಕೇಯ ಈತನ ಮಗನಾಗಿದ್ದನು[೨೬೫].

**ಬಂಕೇಶ:**

ಧೋರನ ಮಗನಾದ ಬಂಕೇಶನು ಅವನ ನಂತರ ಆಳ್ವಿಕೆಗೆ ಬಂದವನಾಗಿದ್ದು, ರಾಷ್ಟ್ರಕೂಟ ಆಮೋಘವರ್ಷ ನೃಪತುಂಗನ ಸಾಮಂತನಾಗಿದ್ದನು. ಸಮರ್ಥ ಸೇನಾನಿ, ದಂಡನಾಯಕ, ಆಪ್ರತಿಮಶೂರ, ಆಸಾಧಾರಣ ಸಾಹಸಿ, ರಾಜನ ಬಲಗೈಬಂಟನಾಗಿ ಕಾರ್ಯನಿರ್ವಹಿಸಿದ ಬಂಕೇಶನನ್ನು ಶಾಸನಗಳು ಬಂಙ್ಕರಾಜ, ಬಙ್ಕೇದೇವ, ಬಙ್ಕೇಯರಸ, ಬಂಕೇಶ, ಬಂಕೇಯ[೨೬೬], ಬಂಕೇಯರಸ[೨೬೭], ಬಂಕೇಯರಾಜ ಎಂಬ ವಿವಿಧ ಹೆಸರುಗಳಿಂದ ಉಲ್ಲೇಖಿಸಿವೆ. ಈತನು ಬನವಾಸಿ-೧೨೦೦೦, ಬೆಳ್ಗಲಿ-೩೦೦, ಕುಂದರ್ಗೆ-೭೦, ಕುಂದೂರು-೫೦೦, ಪುಲಿಗೆರೆ-೩೦೦ ಪ್ರದೇಶಗಳನ್ನು ಆಳುತ್ತಿದ್ದನೆಂದು ನಿಡಗುಂದಿ ಶಾಸನ ಉಲ್ಲೇಖಿಸಿದೆ[೨೬೮].

ಎರಡನೆಯ ಕೃಷ್ಣನು ತಂದೆಯ ವಿರುದ್ದವಾಗಿ ದಂಗೆಎದ್ದಾಗ ಬಂಕೇಶನು ಕೃಷ್ಣನನ್ನು ಸರಿದಾರಿಗೆ ತರುವಲ್ಲಿ ಪ್ರಮುಖಪಾತ್ರ ವಹಿಸಿದನು. ಇಂತಹ ಬಂಕೇಶನನ್ನು ಆಮೋಘವರ್ಷನು ಬನವಾಸಿ-೧೨೦೦೦ದ ಸಾಮಂತಾಧಿಕಾರದ ಜೊತೆಯಲ್ಲಿ ಪ್ರೀತಿಯ ಕಾಣಿಕೆಯಾಗಿ ಪುಲಗೆರಿ-೩೦೦, ಕುಂದರಗೆ-೭೦, ಕುಂದುರ-೫೦೦ ,ಮತ್ತು ಪುಲಗೇರೆ-೩೦೦ ಗಳ ಮೇಲೆ ಆಡಳಿತ ನಡೆಸಲು ನೇಮಕಮಾಡಿದನು ಎಂದು ಕ್ರಿ.ಶ.೮೭೪-೭೫ ರ ಶಿಗ್ಗಾಂವ ಶಾಸನದಿಂದ ತಿಳಿದು ಬರುತ್ತದೆ[೨೬೯]. ಇವನು ಕ್ರಿ.ಶ. ೮೫೫ ರಿಂದ ಕ್ರಿ.ಶ.೯೨೮ರ ವರೆಗೆ ಬನವಾಸಿ ನಾಡಿನ ಪ್ರಾಂತಾಧಿಕಾರಿಯಾಗಿ ಆಡಳಿತ ಮಾಡಿದನು. ಬಂಕೇಶನ ದೀರ್ಘ ಅವಧಿಯನ್ನು ಕುರಿತು ಆರಿಷಿಣಗುಪ್ಪಿ[೨೭೦], ಕೊಣ್ಣೂರ[೨೭೧], ಚಿಂಚಲಿ[೨೭೨], ಶಿಗ್ಗಾಂವ[೨೭೩], ನಿಡಗುಂದಿ[೨೭೪], ಚಿಲ್ಲೂರ[೨೭೫], ಶಾಸನಗಳು ಉಲ್ಲೇಖಿಸುತ್ತವೆ.

ಕ್ರಿ.ಶ. ೮೧೪ರಲ್ಲಿ ರಾಷ್ಟ್ರಕೂಟ ಆಮೋಘವರ್ಷನು ಚಿಕ್ಕವನಾಗಿದ್ದು ಪಟ್ಟಕ್ಕೆ ಬಂದನು. ಈ ಸದವಕಾಶವನ್ನು ಪಡೆದುಕೊಂಡ ಅನೇಕ ಸಾಮಂತರೂ, ಮತ್ತು ಸುತ್ತಲಿನ ಸಾಮ್ರಾಜ್ಯಗಳ ಅರಸರುಗಳು ರಾಷ್ಟ್ರಕೂಟರ ಮೇಲೆ ಧಾಳಿಯಿಟ್ಟರು. ಈ ಸಮಯದಲ್ಲಿ ಬಂಕೇಯನು ಗಂಗರ ಮೇಲೆ ದಿಗ್ವಿಜಯವನ್ನು ಕೈಕೊಂಡು ಅತಿದುಲ್ಲಂಘ್ಯವಾದ ಕೇದಾಳದುರ್ಗಕ್ಕೆ ಮುತ್ತಿಗೆಹಾಕಿ ಗಂಗರಾಜನನ್ನು ತಲವನಪುರದಿಂದ ಓಡಿಸಿ, ಶತ್ರುರಾಜ್ಯವನ್ನು ಸ್ವಾಧೀನಪಡಿಸಿಕೊಂಡಿದ್ದ. ಅಲ್ಲದೇ ಕಾವೇರಿಯನ್ನು ದಾಟಿ ಗಂಗಾರಣ್ಯವನ್ನು ನಾಶಗೊಳಿಸುವಲ್ಲಿ ಮಗ್ನನಾಗಿದ್ದ. ಆ ವೇಳೆಗಾಗಲೇ ಅಮೋಘವರ್ಷನ ಯುವರಾಜ ಕೃಷ್ಣ, ಗುಜರಾತದ ಮಾಂಡಲಿಕ ಅರಸನಾದ ಕರ್ಕನ ಮಗ ಧೃವರುಗಳು ಸೇರಿ ಅಮೋಘವರ್ಷನ ವಿರುದ್ಧ ಬಂಡಾಯವನ್ನೆಬ್ಬಿಸಿದ್ದರು. ಆಗ ಅಮೋಘವರ್ಷನು ಈತನನ್ನು ಮರಳಿ ಕರೆಯಿಸಿಕೊಂಡನೆಂದು ಶಾಸನ ತಿಳಿಸುತ್ತದೆ[೨೭೬].

ಹೀಗೆ ರಾಷ್ಟ್ರಕೂಟ ಅಮೋಘವರ್ಷನಿಗೆ ಅವನ ಎಲ್ಲಾ ಯುದ್ಧಗಳಲ್ಲಿ ಸಹಾಯ ನೀಡಿ ಅವನ ಬೆಂಗಾವಲಾಗಿದ್ದ ಈತನನ್ನು ಕುರಿತು ಅಮೋಘವರ್ಷನು ಮದೀಯೊ ವಿತತ ಜ್ಯೋತಿರ್ನ್ನಿಶಿತೋ ಸಿರಿವಾಪರಃ ಅಂದರೆ, ಜಳಜಳಿಸುವ ಇನ್ನೊಂದು ಖಡ್ಗ ಎಂದು ಕರೆದಿದ್ದಾನೆ[87]. ಲೋಕಾಪೂರ ಚಾವಡಿಯ ಮುಂದಿನ ಶಾಸನವೊಂದರಲ್ಲಿ ಈತನ ಪತ್ನಿ ತೈಲಕಬ್ಬೆಯ ಉಲ್ಲೇಖವಿದೆ. ಅಲ್ಲದೇ ಈ ಬಂಕೇಯನಿಗೆ ಐವರು ಮಕ್ಕಳಿದ್ದು, ಅವರು ಕುಂದಟ್ಟೆ, ಲೋಕಟೆ, ಧೋರ, ಬಂಕ, ಧೋಂಡರಾಗಿದ್ದಾರೆ[88]. ಇದರಲ್ಲಿ ಕುಂದಟ್ಟೆಯು ತಂದೆ ಬಂಕೇಯನ ಕಾಲದಲ್ಲಿ ಚಿಂಚಿಲ-೫೦ ಮತ್ತು ನಿಡಗುಂದಿಗೆ-೧೨ರ ಅಧಿಕಾರಿಯಾಗಿದ್ದನೆಂದು ತಿಳಿದುಬರುತ್ತದೆ.

**ಕುಂದಟೆ:**

ಕುಂದಟೆಯು ಬಂಕೇಯ ಮತ್ತು ತೈಲಕಬ್ಬೆಯರ ಮಗನಾಗಿದ್ದನು ಇವನನ್ನು ಶಾಸನಗಳು ಕುನ್ದಿಯಶೆಟ್ಟಿ[89]. ಕುಂದಟ್ಟೆ[90], ಕುನ್ದಟ್ಟೆ ಎಂದು ಕರೆದಿವೆ. ತಂದೆಯ ಕಾಲದಲ್ಲಿ ಕುಂದಟೆಯು ಚಿಂಚಿಲಿ-೫೦ ರ ಆಡಳಿತವನ್ನು ನೋಡಿಕೋಳ್ಳುತ್ತಿದ್ದನೆಂದು ಅಲ್ಲಿರುವ ಕ್ರಿ.ಶ. ೮೬೬ರ ಶಾಸನ ತಿಳಿಸುತ್ತದೆ[91]. ಮುಂದೆ ಅವನು ನಿಡಗುಂದಿ-೧೨ ಅಧಿಕಾರಿಯಾಗಿ ತಂದೆಗೆ ಆಡಳಿತದಲ್ಲಿ ಸಹಾಯ ಮಾಡುತ್ತಿದ್ದಂತೆ ಕ್ರಿ.ಶ. ೮೭೪-೭೫ ರ ನಿಡಗುಂದಿ ಶಾಸನ ಉಲ್ಲೇಖಿಸುತ್ತದೆ[92]. ತನ್ನ ತಂದೆಗೆ ಪುಣ್ಯವಾಗಲೆಂದು ಅವನು ನಿಡಗುಂದಿಗೆಯ ಕುಪ್ಪಣನ ದೇಗುಲದ ಮಹಾದೇವರಿಗೆ ಭೂದಾನ ಮಾಡಿದನ್ನು ಶಿಗ್ಗಾಂವ ಶಾಸನವು ಹೇಳಿದೆ[93]. ಅಂಧ್ರಪ್ರದೇಶದ ಅನಂತಪುರ ಜಿಲ್ಲೆಯ ಮಡಿಕೆಸಿರಾ ತಾಲೂಕಿನ ಹೆಂಜೇರಿನ ಕೆರೆಯ ಮಧ್ಯದಲ್ಲಿ ನಿಲ್ಲಿಸಿರುವ ಶಿಲ್ಪದ ಮೇಲೆ ಕೀಳ್ಗುಂಟೆ ಶಾಸನವೊಂದಿದ್ದು ಅದರಲ್ಲಿ ಬಂಕೇಯನ ಮಗನಾದ ಕುಂದಟೆಯು ಸನ್ಯಸನ ವಿಧಿಯಿಂದ ಸಮಾಧಿಮರಣ ಹೊಂದಿದ್ದನ್ನು ತಿಳಿಸುತ್ತದೆ[94]. ಬಂಕೇಯ ತೈಲಕಬ್ಬೆಯರಿಗೆ ನಾಲ್ಕು ಜನ ಮಕ್ಕಳಾದ ಧೋರ, ಧೊಂಡ, ಬಂಕ ಮತ್ತು ಲೋಕಟೆಯರ ಹೆಸರುಗಳನ್ನು ಲೋಕಾಪುರದ ಶಾಸನವು[95] ಉಲ್ಲೇಖಿಸಿದರೆ, ಹಿರಿಯ ಕುಂದಟ್ಟೆಯ ಹೆಸರನ್ನು ಹೇಳಿಲ್ಲದ ಕಾರಣ ಕುಂದಟ್ಟೆಯು ಆಗಲೇ ಸಮಾಧಿಮರಣವನ್ನು ಹೊಂದಿದ್ದರಿಂದ ಅವನ ಹೆಸರನ್ನು ಪ್ರಸ್ತಾಪಿಸದೇ ಬಿಟ್ಟು ಬಿಟ್ಟಿರಬಹುದು.

**ಲೋಕಾದಿತ್ಯ:**

ಲೋಕಟೆಯು ಕುಂದಟೆಯ ನಂತರ ಆಳ್ವಿಕೆಗೆ ಬಂದನು. ರಾಷ್ಟ್ರಕೂಟರ ಎರಡನೆಯ ಕೃಷ್ಣನ ಸಮಕಾಲಿನನಾಗಿ ಅವನ ಸಾಮಂತನಾಗಿ ಪ್ರಮುಖಪಾತ್ರವನ್ನು ವಹಿಸಿದನು. ಲೋಕಟೆಯನ್ನು ಲೋಕಡೆ[96], ಲೋಕಟೆಯರಸರ್[97], ಲೋಕಟ್ಟೆ[98], ಲೋಕಟೆ[99], ಲೋಕಯ್ಯ[100] ಮತ್ತು ಲೋಕಾದಿತ್ಯ ಎಂದು ಕರೆದಿವೆ. ಬಂದಳಿಕೆಯ ಕ್ರಿ.ಶ. ೯೫೨ರ ಶಾಸನವು[101] ಈತನನ್ನು ಸಮಧಿಗತ ಪಞ್ಚಮಹಾಶಬ್ದ ಮಹಾಸಾಮನ್ತ ಕರುದೇವಯ್ಯರನ್ವಯದೋಳ್ ಬಙ್ಕೇಯರಸರ ಮಗಂ ಶ್ರೀ ಲೋಕಟೆಯರಸರ್ ಎಂಬ ಪ್ರಶಸ್ತಿಯಿಂದ ಉಲ್ಲೇಖಿಸಿದೆ. ಕುಣಿಮೆಳಳ್ಳಿಯ ಶಾಸನವು ಸ್ವಸ್ತಿ ಸಮಧಿಗತ ಪಂಚಮಹಾಶಬ್ದ ಮಹಾಸಾಮಂತಾಧಿಪತಿ ಲೋಕಟೆ ಎನ್ನುವುದರ ಮೂಲಕ ಅವನು ಮಹಾಸಾಮಂತನಾಗಿದ್ದುದನ್ನು ಸ್ಪಷ್ಟಪಡಿಸಿದೆ[102].

ಇವನ ಮೊದಲ ಶಾಸನವು ಕ್ರಿ. ಶ. ೮೯೫ರ ಕುಣಿಮೆಳಳ್ಳಿ ಶಾಸನವಾದರೆ ಕ್ರಿ.ಶ. ೯೫೨ ಬಂದಳಿಕೆಯ ಶಾಸನವು ಕೊನೆಯದಾಗಿದೆ. ಇದರಿಂದ ಇವನು ಸುಮಾರು ೫೭ ವರ್ಷಗಳ ಕಾಲ ರಾಜ್ಯಭಾರ ಮಾಡಿದನೆಂದು ಅಭಿವ್ಯಕ್ತವಾಗುತ್ತದೆ. ಪ್ರಾರಂಭದ ಶಾಸನಗಳಲ್ಲಿ ಇವನು ಬನವಾಸಿ-೧೨೦೦೦ ಆಡಳಿತಾಧಿಕಾರಿಯಾಗಿ ಆಳ್ವಿಕೆ ಮಾಡಿದ್ದನ್ನು ಕಂಡರೆ[೩೦೩], ಕೊನೆಯಲ್ಲಿ ಅವನು ಎರಡನೆಯ ಕೃಷ್ಣನ ಸಾಮಂತನಾಗಿ ಬನವಾಸಿ-೧೨೦೦೦, ಪಲಸಿಗೆ-೧೨೦೦೦, ಮಾನ್ಯಖೇಟ-೬೦೦೦, ತರ್ದವಾಡಿ-೧೦೦೦, ಕೊಳನೂರು-೩೦, ಲೋಕಾಪುರ-೧೨, ತೊರಗಲೆ-೬೦ ಹೀಗೆ ಒಟ್ಟು೩೧,೧೧೨ ಗ್ರಾಮಗಳನ್ನು ಆಳುತ್ತಿದ್ದನೆಂದು ಬಂದಳಿಕೆಯ ಶಾಸನ ಹೇಳುತ್ತದೆ[೩೦೪]. ಲೋಕಾಪುರ ಶಾಸನವು ಲೋಕಟೆಯನ್ನು ರಾಷ್ಟ್ರಕೂಟ ಕೃಷ್ಣನ ಮೈದುನನೆಂದಿದೆ[೩೦೫], ಅಲ್ಲದೇ ಆವನು ಕೃಷ್ಣನ ಆಜ್ಞೆಯ ಪ್ರಕಾರ ಮಾಂಡಲಿಕರಿಂದ ಕಪ್ಪ ಕಾಣಿಕೆಗಳನ್ನು ವಸೂಲ ಮಾಡಿದ ವಿಷಯವನ್ನೂ ಶಾಸನ ಉಲ್ಲೇಖಿಸಿದೆ. ಇದರ ಆಧಾರದ ಮೇಲೆ ಕೃಷ್ಣನು ಬಂಕೇಯನ ಮಗಳನ್ನು ಮದುವೆಯಾಗಿ ಅವರೊಂದಿಗೆ ರಕ್ತಸಂಭಂದವನ್ನು ಬೆಳೆಸಿರಬಹುದು.

ಸಿಡಿಯನೂರಿನ ಶಾಸನದಲ್ಲಿ[೩೦೬] "ಲೋಕಟೆಯು ಪೊಮ್ಬುಳ್ಚದ ಮೇಲೆಳ್ದುಕೋಟೆಯ ಕೊಳ್ವನ್ದು" ಎಂದು ಹೇಳಲಾಗಿದೆ. ಇದರಿಂದ ಲೋಕಟೆಯು ಪೊಂಬುಳ್ಚದ ಮೇಲೆ ಧಾಳಿಯನ್ನು ಕೈಕೊಂಡನೆಂದು ತಿಳಿದುಬರುತ್ತದೆ. ಲೋಕಟೆಯ ಸಹೋದರನೊಬ್ಬನು ಕುಂದೂರ-೩೦ರ ಆಡಳಿತವನ್ನು ನಿರ್ವಹಿಸುತ್ತಿದ್ದ ಉಲ್ಲೇಖವನ್ನು ಶಾಸನವೊಂದು ಹೇಳುತ್ತದೆ[೩೦೭]. ಅಲ್ಲದೇ ಈತನ ಮಗನಾದ ಕಲಿವಿಟ್ಟನು ಇವನ ಕಾಲದಲ್ಲಿ ಪುನ್ನವಂತಿ-೧೨ರ ಆಡಳಿತವನ್ನು ನೋಡಿಕೊಳ್ಳುತ್ತಿದ್ದ ವಿಷಯವು ಹೊನ್ನತ್ತಿ ಶಾಸನ ತಿಳಿಸುತ್ತದೆ.

**ಎರಡನೆಯ ಧೋರ:**

ಬಂಕೇಯ ಹಾಗೂ ತೈಲಕಬ್ಬೆಯರ ಮೂರನೆಯ ಮಗನಾದ ಎರಡನೆಯ ಧೋರನು ಸಹೋದರ ಕಲಿವಿಟ್ಟನ ಕಾಲದಲ್ಲಿ ಅವನಿಗೆ ಸಹಾಯಕಾರಿಯಾಗಿದ್ದಂತೆ ತೋರುತ್ತದೆ. ಇವನನ್ನು ಕ್ರಿ.ಶ. ೯೦೮ರ ಹಾವೇರಿ ತಾಲೂಕಿನ ದೇವಿಹೊಸೂರಿನ ಶಾಸನವು ಧೋರಂ ಬನವಾಸಿ ಆರು ಸಾಸಿರವಂ . . . ಎಂದು ಉಲ್ಲೇಖಿಸಿದರೆ[೩೦೮], ಕ್ರಿ.ಶ. ೯೧೫-೧೬ರ ಇಟಗಿ ಶಾಸನ ಇನ್ದರಬಲ್ಲಹಂ ಪೃಥುವೀ ರಾಜ್ಯಙ್ಗೆಯ್ಯೆ ಧೋರಮ್ಬನವಾಸಿ ನಾಡನಾಳೆ ಎಂದು ಉಲ್ಲೇಖಿಸಿದೆ[೩೦೯]. ನರಗುಂದ ತಾಲೂಕಿನ ದಂಡಾಪುರದ ಕಣ್ಣಮಗೆರೆ ಚೆಲ್ಲಕೇತನ ಎರಡನೆಯ ಧೋರನ ಕಾಲದಲ್ಲಿ ರಚಿತವಾದದ್ದೆಂದು ಅಲ್ಲಿನ ಶಾಸನದಿಂದ ತಿಳಿದುಬರುತ್ತದೆ[೩೧೦].

**ಎರಡನೆಯ ಬಂಕೇಯರಸ:**

ನಂತರ ನಮಗೆ ಕಂಡುಬರುವ ಆರಸ ಧೋರನ ಸಹೋದರನಾದ ಮೂರನೆಯ ಬಂಕೇಯರಸನಾಗದ್ದಾನೆ. ಈತನು ಕೂಡ ಬಂಕೇಯರಸ ಮತ್ತು ತೈಲಕಬ್ಬೆಯರ ಮಗನಾಗಿದ್ದ. ಕ್ರಿ.ಶ.೯೧೫ರ ಬಂಕಾಪುರ ತಾಲೂಕಿನ ಬಿಸನಳ್ಳಿಯ

ಶಾಸನ ಈತನನ್ನು ತತ್ಪಾದಪದ್ಮೋಪಜೀವಿ ಸಮಧಿಗತ ಪಂಚಮಹಾಶಬ್ದ ಮಹಾಸಾಮಂತ ಬಂಕೇಯರಸರ್ ಬನವಾಸಿ ಮಂಡಲ ಮೂವತ್ತಿರ್ಚ್ಛಾಸಿರಮನ್ ಆಳುತ್ತಿರೆ ಎಂದು ಹೇಳಿದೆ[೩೧೧]. ಕ್ರಿ.ಶ.೯೧೫ ರ ರಾಷ್ಟ್ರಕೂಟ ಇಂದ್ರವಲ್ಲಭನ ಆಳ್ವಿಕೆಯ ಕಾಲದ ಶಾಸನವೊಂದರಲ್ಲಿಯೂ ಈ ಬಂಕೇಯರಸ ಆಳುತ್ತಿದ್ದ ವಿಷಯ ತಿಳಿಯುತ್ತದೆ. ಅಲ್ಲದೇ ಈ ಶಾಸನ ಅಲ್ಲಿ ನಡೆದ ಚಿತ್ರಗೋಸಾಸಕ್ಕೆ ಸಾಕ್ಷಿಯಾಗಿದೆ[೩೧೨]. ಕ್ರಿ.ಶ. ೯೧೮ರ ಹಾನಗಲ್ಲ ತಾಲೂಕಿನ ಹಾವಣಗಿಯ ರಾಷ್ಟ್ರಕೂಟ ನಾಲ್ಕನೆಯ ಇಂದ್ರವಲ್ಲಭನ ಶಾಸನದಲ್ಲಿಯೂ ಈ ಬಂಕೇಯ ಕಾಣಿಸಿಕೊಂಡಿದ್ದಾನೆ. ಕ್ರಿ.ಶ. ೯೧೯ರ ಶಿಗ್ಗಾಂವ ಶಾಸನ ರಾಷ್ಟ್ರಕೂಟ ನಿತ್ಯವರ್ಷನ ಆಳ್ವಿಕೆಯಲ್ಲಿ ತತ್ಪಾದಜೀವಿ ಮಹಾಸಾಮಂತ ಶ್ರೀಮತು ಬಂಕೇಯರ ಬನವಾಸಿ ಮೂವತ್ತಿರ್ಚ್ಛಾಸಿರ ಆಳುತ್ತಿದ್ದ ಉಲ್ಲೇಖವಿದೆ[೩೧೩]. ಕ್ರಿ.ಶ. ೯೩೮ರ ಸೊರಬ ತಾಲೂಕಿನ ಜೂಟೂರಿನ ಶಾಸನ ಈ ಬಂಕೇಯನನ್ನು ಉಲ್ಲೇಖಿಸುತ್ತದೆ[೩೧೪]. ಇದೇ ವೇಳೆಗೆ ಹಾನಗಲ್ಲ ತಾಲೂಕಿನ ಲಕ್ಷ್ಮೇಪುರದ ಶಾಸನ ನಮಗೆ ಈ ಬಂಕೇಯರಸನ ಬಗ್ಗೆ ವಿಚಿತ್ರವಾದ ಹೇಳಿಕೆಯನ್ನು ನೀಡುತ್ತದೆ. ಕ್ರಿ.ಶ. ೧೦ನೆಯ ಶತಮಾನದ ಲಕ್ಷ್ಮೇಪುರ ಶಾಸನ ಬನವಾಸಿ ಪನ್ನಿರ್ಚ್ಛಾಸಿಮುಮನೆರಡು ಭಾಗಂ ಮಾಡಿ ಬಂಕೇಯ ನ ಜ . . . ರಗಣ್ಡ ನಾಮಾಲೂತ್ತಿರೆ ಎಂದಿದೆ. ಇದರಿಂದ ರಾಷ್ಟ್ರಕೂಟ ಇಂದ್ರನು ಬನವಾಸಿ ಪನ್ನಿರ್ಚ್ಛಾಸಿರವನ್ನು ಇಭ್ಭಾಗ ಮಾಡಿ ಒಂದು ಭಾಗವನ್ನು ಬಂಕೇಯನಿಗೂ ಇನ್ನೊಂದು ಭಾಗವನ್ನು ಶಂಕರಗಂಡನಿಗೆ ಕೊಟ್ಟಿರುವುದು ತಿಳಿದುಬರುತ್ತದೆ[೩೧೫]. ಎರಡನೆಯ ಬಂಕೇಯರಸನ ಸಾಮರ್ಥ್ಯತೆಯನ್ನು ಇದು ಪ್ರಶ್ನಿಸುವಂತಾಗಿದೆ.

**ದೋಂಡ:**

ಬಂಕೇಯರಸ ತೈಲಕಬ್ಬೆಯರ ಕೊನೆಯ ಮಗನಾದ ಧೋಂಡ ಲೋಕಾಪುರ ಶಾಸನದಲ್ಲಿಪ್ರಥಮ ಬಾರಿಗೆ ಕಾಣಿಸಿಕೋಳ್ಳುತ್ತಾನೆ. ಆದರೆ ಈ ದೋಂಡನು ಎಲ್ಲಿ ಆಳುತ್ತಿದ್ದನೆಂಬುವುದರ ಬಗ್ಗೆ ಸ್ಪಷ್ಟವಾದ ಶಾಸನದ ಉಲ್ಲೇಖವಿಲ್ಲ. ಗುಡ್ಡದ ಚೆನ್ನಾಪುರದ ಶಾಸನದಲ್ಲಿ ಲೋಕಟೆಗೆ ಸಹೋದರನೊಬ್ಬನಿದ್ದು ಆವನು ಕುಂದೂರ -೩೦ ರ ಅಧಿಕಾರಿಯಾಗಿದ್ದನೆಂದು ಹೇಳುತ್ತದೆ[೩೧೬]. ಬಹುಷಃ ಇವನೇ ಧೋಂಡನಾಗಿರಬೇಕು.

**ಒಂದನೆಯ ಕಲಿವಿಟ್ಟ:**

ಒಂದನೆಯ ಕಲಿವಿಟ್ಟನು ಲೋಕಟೆಯನ ಮಗನಾಗಿದ್ದ. ಇವನು ಮೂರನೆಯ ಅಮೋಘವರ್ಷ ಹಾಗೂ ಮೂರನೆಯ ಕೃಷ್ಣನ ಸಾಮಂತನಾಗಿ ಅವರಿಗೆ ಸೇವೆಯನ್ನು ಸಲ್ಲಿಸಿದ್ದಾನೆ. ಕ್ರಿ.ಶ. ೯೦೪-೯೦೫ ರಲ್ಲಿ ಈತನು ತನ್ನ ತಂದೆಯ ಕಾಲದಲ್ಲಿ ಪುನ್ನವಂತಿ-೧೨ (ಹೊನ್ನತ್ತಿ)ರ ಅಧಿಕಾರಿಯಾಗಿದ್ದನೆಂದು ತಿಳಿದುಬರುತ್ತದೆ[೩೧೭]. ಕ್ರಿ.ಶ. ೯೧೪ರ ಸೊರಬ ತಾಲೂಕಿನ ಕುಂಸಿಯ ಶಾಸನದಲ್ಲಿ ಈತನನ್ನು ಸಮಧಿಗತ ಪಂಚಮಹಾಶಬ್ದ ಮಾಸಾಮನ್ತ ಚೆಲ್ಲಧ್ವಜ ರಣದುತ್ತರಜ್ಞನೆನ್ತುಮೊಳ್ಳಿದಂ ಎಂದು ಉಲ್ಲೇಖಿಸಲಾಗಿದೆ[೩೧೮]. ಇದೇ ಶಾಸನದಲ್ಲಿ ಕಲಿವಿಟ್ಟನ ಆಧೀನನಾದ ಜಿಡ್ಡುಳಿಗೆ-೭೦ರ ನಾಳ್ಗಾವುಂಡ ಈತನಿಗೆ ವಿರೋಧವಾಗಿ ಗಂಗವಾಡಿಗೆ ತಪ್ಪಿಸಿಕೊಂಡು ಹೋಗುವಾಗ, ಕಲಿವಿಟ್ಟನ

ಅಪ್ಪಣೆಯ ಮೇರೆಗೆ ಅವನನ್ನು ಕುಂಭಿಸೆಯಲ್ಲಿ ಬಂಧಿಸಲಾಯಿತು ಎಂದು ಉಲ್ಲೇಖವಿದೆ. ಶಿವಮೊಗ್ಗ ಜಿಲ್ಲೆಯ ಬಂದಳಿಕೆಯ ಕ್ರಿ.ಶ. ೯೧೮ ರ ಶಾಸನವು ಕಲಿವಿಟ್ಟನನ್ನು ಉಲ್ಲೇಖಿಸುತ್ತಾ ಸ್ವಸ್ತಿ ಸಮಧಿಗತ ಪಂಚಮಹಾಶಬ್ದ ಮಹಾಸಾಮನ್ತಂ ಕಾಷ್ಕಿದೇವಯ್ಯರನ್ವಯದೋಳ್ ಕಲಿವಿಟ್ಟರಸಬ್ಬನವಾಸಿ ಪನ್ನಿಚ್ಛಾಸಿರಮನಾಳುತ್ತಿರೆ ಎಂದಿದೆ[೨೯].

ಮಲಗುಂದದ ಶಾಸನ ಕಲಿವಿಟ್ಟರಸನು ಬನವಾಸಿ ನಾಡನ್ನಾಳುತ್ತಿರುವಾಗ ವ್ಯಕ್ತಿಯೊಬ್ಬನ ವೀರಮರಣವನ್ನು ಸೂಚಿಸಿದೆ[೩೦]. ಸೊರಬ ತಾಲೂಕಿನ ಚಿಕ್ಕಚಿವುಟಿ ಶಾಸನ ಕಲಿವಿಟ್ಟರಸ ಬನವಾಸಿಯನ್ನಾಳುತ್ತಿರಲು ಗೋವುಗಳನ್ನು ಬೇಡಕಳ್ಳರು ಕದ್ದೊಯ್ಯುತ್ತಿರಲು ಅಲ್ಲಿ ತುರುಗೋಳ್ ನಡೆದ ವಿಷಯ ತಿಳಿಸಿದೆ[೩೧]. ರಾಷ್ಟ್ರಕೂಟ ಕೃಷ್ಣನ ಕಾಲದ ಶಾಸನದಲ್ಲಿ ಕಲಿವಿಟ್ಟನು ಬನವಾಸಿ ಆಳ್ವಿಕೆ ಮಾಡುತ್ತಿರುವಾಗ, ತುರುಗೋಳ್ ಪ್ರಸಂಗದಲ್ಲಿ ನಾಗಯ್ಯನೆಂಬುವ ವೀರತ್ವ ಮೆರೆದು ವೀರಸ್ವರ್ಗ ಪಡೆದಿರುವನು[೩೨]. ಅಮೋಘವರ್ಷನ ಕ್ರಿ.ಶ. ೯೨೮-೨೯ರ ಶೀರುಂಜದ ಶಾಸನದ ಕಾಲದಲ್ಲಿಯ ಕಲಿವಿಟ್ಟರಸನು ಬನವಾಸಿ  ಪನ್ನಿಚ್ಛಾಸಿರದ ಹೊರತಾಗಿ ಬೆಳ್ವಲ-೩೦೦ನ್ನು ಆಳುತ್ತಿದ್ದುದು ತಿಳಿಯುತ್ತದೆ[೩೩]. ಈ ಶಾಸನವೂ ಕೂಡ ತುರುಗೋಳ್ ಪ್ರಸಂಗವೊಂದನ್ನು ತಿಳಿಸುತ್ತದೆ. ಇಲ್ಲಿ ನಡೆದ ತುರುಗೋಳ್ ಪ್ರಸಂಗಗಳನ್ನು ಗಮನಿಸಿದರೆ ಆ ಕಾಲದಲ್ಲಿ ಅನೇಕ ಕದನಗಳಾಗಿರುವ ಸಾಧ್ಯತೆ ನಮಗೆ ತಿಳಿದುಬರುತ್ತದೆ. ಅವನ್ನು ಕಲಿವಿಟ್ಟನು ಯಶಸ್ವೀಯಾಗಿ ಹಿಮ್ಮೆಟ್ಟಿಸಿರಬಹುದು.

**ಮೂರನೆಯ ಧೋರ:**

ಲೋಕಟೆಯ ಮಗನಾದ ಮೂರನೆಯ ಧೋರನು ಕ್ರಿ.ಶ. ೯೧೪ರಲ್ಲಿ ಬನವಾಸಿ ಪ್ರಾಂತ್ಯವನ್ನಾಳುತ್ತಿದ್ದನು[೩೪]. ಕ್ರಿ.ಶ. ೯೧೮ರ ಶಾಸನವು ಧೋರನ ಬನವಾಸಿ ವಿಭಾಗದ ಆಳ್ವಿಕೆಯಲ್ಲಿ ಅವನ ಕೈಕೆಳಗೆ ಮಹಾಸಾಮಂತ ಬಂಕೇಯನು ಎಡೆವೊಳಲು-೭೦ರ ಸುಂಕವೆರ್ಗಡೆಯಾಗಿದ್ದನು ಎಂದು ತಿಳಿಸಿದೆ[೩೫]. ಇದರಿಂದ ಮೂರನೆಯ ಧೋರ ಹಾಗೂ ಮೂರನೆಯ ಬಂಕೇಯರು ಏಕಕಾಲದಲ್ಲಿ ಬನವಾಸಿಯ ಅಧಿಕಾರದಲ್ಲಿದ್ದುದು ಸ್ಪಷ್ಟವಾಗುತ್ತದೆ. ಅಲ್ಲದೇ ಈ ಶಾಸನದಲ್ಲಿ ಚೆಲ್ಲಕೇತನ ವಂಶವನ್ನು ಮುಗುಳ ಕುಲವೆಂದು ಕರೆಯಲಾಗಿದೆ.

**ಮೂರನೆಯ ಬಂಕೇಯರಸ:**

ಲೋಕಟೆಯ ಮೂರನೆಯ ಮಗ ಬಂಕೇಯನನ್ನು ಶಾಸನ ಸ್ವಸ್ತಿ ಸಮಧಿಗತ ಪಂಚಮಹಾಶಬ್ದ ಮಹಾಸಾಮಂತ ಎಂದು ಕರೆದಿದ್ದು. ಈತನು ಕೂಡ ಬನವಾಸಿ ಪನ್ನಿಚ್ಛಾಸಿರದ ಆಳ್ವಿಕೆಯನ್ನು ಮಾಡುತ್ತಿದ್ದಂತೆ ಶಾಸನಗಳಲ್ಲಿ ವಿವರಣೆಯಿದೆ. ಕ್ರಿ. ಶ. ೯೨೯ ಹಳೇರಿತ್ತಿಯ ತ್ರುಟಿತ ಶಾಸನವೊಂದು ಮಹಾಸಾಮಂತ ಬಂಕೇಯ ಆಳ್ವಿಕೆಯ ಕಾಲದಲ್ಲಿ ಗೋಸಹಸ್ರ ದಾನ ಮಾಡಿದ ವಿಷಯ ತಿಳಿಸಿದೆ[೩೬].

**ಎರಡನೆಯ ಕಲಿವಿಟ್ಟರಸ:**

ಕ್ರಿ.ಶ. ೯೪೫ರ ಕ್ಯಾಸನೂರ ಶಾಸನದಲ್ಲಿ ಕಲಿವಿಟ್ಟರಸನನ್ನು ಸ್ವಸ್ತಿ ಸಮಧಿಗತ ಪಂಚಮಹಾಶಬ್ದ ಮಹಾಸಾಮಂತ ಚಲ್ಲಕೇತನ ವಂಶೋದ್ಭವಂ ಕಲಿವಿಟಂ ಬನವಾಸಿ ನಾಡಾಳುತ್ತಿರೆ ಎಂಬುವುದರಿಂದ ಇವನು ಮೂರನೆಯ ಕೃಷ್ಣನ ಮಹಾಸಾಮಂತನಾಗಿದ್ದನೆಂದು ತಿಳಿದುಬರುತ್ತದೆ[೨೭]. ಶೀರುಂಜದ ಶಾಸನದಲ್ಲಿ ಈತನು ಬೆಳ್ವೊಲ-೩೦೦ನ್ನು ಆಳುತ್ತಿದ್ದ ಉಲ್ಲೇಖವಿದೆ[೨೮]. ಮಲಗುಂದದ ಶಾಸನ ಕಲಿವಿಟ್ಟರಸನ ಬನವಾಸಿಯ ಆಳ್ವಿಕೆಯನ್ನು ಕೈಕೊಂಡಿದ್ದಾಗ ಅಲ್ಲಿ ನಡೆದ ವೀರಮರಣದ ವಿವರ ನೀಡುತ್ತದೆ[೨೯]. ಮಂಟೂರಿನ ವಲ್ಲಭೇಶ್ವರ ದೇವಾಲಯದ ಹಿಂದಿರುವ ಹನುಮಂತನ ಗುಡಿಯಲ್ಲಿ ಕಲಿವಿಟ್ಟನ ವೀರಮರಣವನ್ನು ಉಲ್ಲೇಖಿಸುವ ದಾಖಲೆ ದೊರೆಯುತ್ತದೆ[೩೦]. ಈತನು ರಾಷ್ಟ್ರಕೂಟರಿಗೆ ಸಾಮಂತರಾಗಿ ನಿಷ್ಠೆಯಿಂದ ಸೇವೆಸಲ್ಲಿಸಿದ ಚೆಲ್ಲಕೇತನರಲ್ಲಿ ಕೊನೆಯವನಾಗಿದ್ದಾನೆ, ಇವನ ನಂತರ ಕ್ರಿ.ಶ. ೯೪೫ರಿಂದ ಗಭಿಂದನನೆಂಬುವನು ಬನವಾಸಿ ಆಡಳಿತವನ್ನು ಮುಂದುವರೆಸಿರುವುದನ್ನು ಹಿರೇಮಾಗಡಿಯ ಶಾಸನದಿಂದ ತಿಳಿದುಬರುತ್ತದೆ.

ಹೀಗೆ ಕ್ರಿ.ಶ. ೮೩೦ರಿಂದ ೯೪೫ ರವರೆಗೆ ಸಾಮಂತರಾಗಿ ವಂಶಪರಂಪರಾಗಿ ಮುಂದುವರೆದ ಚಲ್ಲಕೇತನ ಮನೆತನದ ಪ್ರಸ್ತಾಪವು ಮುಂದಿನ ಶಾಸನಗಳಲ್ಲಿ ಕಂಡು ಬರುವುದಿಲ್ಲ.

## ೪) ಶಿಲಹಾರರು:

ಕರ್ನಾಟಕದ ಇತಿಹಾಸದಲ್ಲಿ ಕ್ರಿ.ಶ.೮ರಿಂದ ೧೩ನೆಯ ಶತಮಾನದವರೆಗೆ ನಮಗೆ ಕಂಡುಬರುವ ಇನ್ನೊಂದು ಪ್ರಮುಖ ಸಾಮಂತ ಅರಸು ಮನೆತನವೆಂದರೆ ಶಿಲಹಾರರದ್ದು. ಇವರು ಉತ್ತರಕೊಂಕಣ, ದಕ್ಷಿಣ ಕೊಂಕಣ, ಕೊಲ್ಹಾಪೂರ ಮತ್ತು ಬಿಜಾಪೂರ ಪ್ರದೇಶಗಳಲ್ಲಿ ಅನೇಕ ಶಾಖೆಗಳನ್ನಾಗಿ ಮಾಡಿಕೊಂಡು ಆಳ್ವಿಕೆಯನ್ನು ನಡೆಸಿದ್ದಾರೆ. ಈ ಮನೆತನಗಳು ಕ್ರಮವಾಗಿ ರಾಷ್ಟ್ರಕೂಟ, ಕಲ್ಯಾಣಿ ಚಾಲುಕ್ಯ, ಕಲಚೂರಿ ಮತ್ತು ಸೇವುಣರ ಆಧೀನರಾಗಿ ಆಳ್ವಿಕೆ ನಡೆಸಿದ್ದು ತಿಳಿದುಬರುತ್ತದೆ. ಈ ಶಿಲಹಾರರು ತಮ್ಮನ್ನು ವಿದ್ಯಾಧರ ರಾಜ ಜೀಮೂತವಾಹನನೆಂಬುವವನು ತಮ್ಮ ವಂಶದ ಮೂಲಪುರುಷನೆಂದು, ತಗರಪುರಾಧೀಶ್ವರ ಅಥವಾ ತಗರನಗರಾಧೀಶ್ವರ, ಕೂಪಣಪುರಾಧೀಶ್ವರ ಮತ್ತು ವಿಜಯಪುರವರಾಧೀಶ್ವರರೆಂದು ಕರೆದುಕೊಂಡಿದ್ದಾರೆ. ಶಾಸನಗಳಲ್ಲಿ ಈ ಮನೆತನವನ್ನು ಸೇಳರ, ಸಿಳಾರ, ಸಿಯಳಾರ, ಸಿಲಾಹಾರ ಮತ್ತು ಸಿಲಾರ ಎಂದು ಮುಂತಾಗಿ ಕರೆಯಲಾಗಿದೆ.

### ದಕ್ಷಿಣ ಕೊಂಕಣದ ಶಿಲಹಾರರು:

ಶಿಲಾಹಾರ ವಂಶದ ಈ ಶಾಖೆಯವರು ತಾವು ಸಿಂಹಳ ರಾಜರ ಸಂತತಿಯವರೆಂದು ಹೇಳಿಕೊಂಡಿರುವ ಕಾರಣ ಗೋವೆಯಿಂದ ಬಂದವರಾಗಿರಬೇಕು ಎಂದು ಡಾ.ಮಿರಾಶಿಯವರು ಅಭಿಪ್ರಾಯಪಟ್ಟಿದ್ದಾರೆ[೩೧]. ದಕ್ಷಿಣ ಕೊಂಕಣವು

ಕೊಂಕಣ-೯೦೦ ಎಂಬ ವಿಭಾಗವಾಗಿದ್ದು, ಇದು ಇಂದಿನ ಗೋವಾ ಮತ್ತು ರತ್ನಾಗಿರಿ ಜಿಲ್ಲೆಗಳನ್ನೊಳಗೊಂಡಿತ್ತು. ರಟ್ಟರಾಜ ಎಂಬ ಕೊನೆಯ ರಾಜನ ಖಾರೇಪಟ್ಟಣ ಶಾಸನದಿಂದ ಈ ಶಾಖೆ ಮೊದಲಸಲ ಬೆಳಕಿಗೆ ಬಂದಿತು. ಈ ಶಾಖೆಯ ಪ್ರಥಮ ದೊರೆಯಾದ ಸಣಪುಲ್ಲ ಎಂಬುವನು ರಾಷ್ಟ್ರಕೂಟ ಒಂದನೆಯ ಕೃಷ್ಣನ ಪ್ರೀತಿಗೆ ಪಾತ್ರನಾಗಿದ್ದನು. ಆವನ ನಂತರದ ಆರಸರ ವಂಶಾವಳಿಯನ್ನು ಖಾರೇ ಪಟ್ಟಣ ತಾಮ್ರಶಾಸನದಿಂದ ಮಿರಾಶಿಯವರು ಹೀಗೆ ಗುರ್ತಿಸಿದ್ದಾರೆ[೧೩೨]. ಅವರು ಸಣಪುಲ್ಲ(ಕ್ರಿ.ಶ.೭೫೪-೭೮೨), ದಮ್ಮಿಯರ, ಆಯ್ಯಪರಾಜ, ಒಂದನೆಯ ಆವಸರ, ಆದಿತ್ಯವರ್ಮ, ಎರಡನೆಯ ಆವಸರ, ಇಂದ್ರರಾಜ, ಭೀಮ, ಮೂರನೆಯ ಆವಸರ ಮತ್ತು ರಟ್ಟ ಎಂದು ಕಂಡುಬರುತ್ತಾರೆ[೧೩೩].

## ಉತ್ತರ ಕೊಂಕಣದ ಶಿಲಹಾರರು:

ಮಹಾರಾಷ್ಟ್ರದ ಕೋಲಾಬಾ, ಥಾನಾ ಜಿಲ್ಲೆಗಳು ಉತ್ತರಕೊಂಕಣ ವಿಭಾಗವನ್ನು ಒಳಗೊಂಡಿದ್ದವು. ಮೂಲತಃ ಇದನ್ನು ೧೪೦೦ ಗ್ರಾಮಗಳ ವಿಭಾಗವೆಂದು ಗುರುತಿಸಲಾಗಿದೆ. ಪುರಿ ನಗರವು ಇದರ ರಾಜಧಾನಿಯಾಗಿತ್ತು. ನಂತರದಲ್ಲಿ ಈ ಶಿಲಹಾರರು ಸ್ಥಾನಕಕ್ಕೆ ( ಇಂದಿನ ಠಾಣಾ) ತಮ್ಮ ರಾಜಧಾನಿಯನ್ನು ವರ್ಗಾಯಿಸಿಕೊಂಡರೆಂದು, ಕೆಲಕಾಲ ಶೂರ್ಪಾರಕ ( ಇಂದಿನ ಸೋಪಾರ)ವು ಕೂಡ ಇವರ ರಾಜಧಾನಿಯಾಗಿತ್ತೆಂದು ತಿಳಿಯುತ್ತದೆ.

ಉತ್ತರ ಕೊಂಕಣದಲ್ಲಿ ಶಿಲಾಹಾರ ಮನೆತನವನ್ನು ಸ್ಥಾಪಿಸಿದವನು ಮೊದಲನೆಯ ಕಪರ್ದಿ ಇವನ ಹೆಸರಿನಿಂದಾಗಿ ಈ ವಿಭಾಗಕ್ಕೆ ಕಾಪರ್ದಿಕದ್ವೀಪ ಅಥವಾ ಕವಡಿದ್ವೀಪ ಎಂದು ಹೆಸರಾಯಿತೆಂದು ತಿಳಿದುಬರುತ್ತದೆ. ಡಾ. ಮಿರಾಶಿಯವರು ಈ ಉತ್ತರ ಕೊಂಕಣದ ಶಿಲಾಹಾರರ ವಂಶಾವಳಿಯನ್ನು ಹೀಗೆ ನೀಡಿದ್ದಾರೆ[೧೩೪]. ಒಂದನೆಯ ಕಪರ್ದಿ(ಕ್ರಿ.ಶ. ೮೦೦-೮೨೫), ಆತನ ಮಗ ಪುಲ್ಲಶಕ್ತಿ(ಕ್ರಿ.ಶ. ೮೨೫-೮೫೦), ಆತನ ಮಗ ಎರಡನೆಯ ಕಪರ್ದಿ(ಕ್ರಿ.ಶ. ೮೫೦-೮೮೦), ಆತನ ಮಗ ವಪ್ಪುವನ್ನ(ಕ್ರಿ.ಶ. ೮೮೦- ೯೧೦), ಆತನ ಮಗ ಜಝ್ಝ(ಕ್ರಿ.ಶ. ೯೧೦-೯೩೦), ಇವನ ಸಹೋದರ ಗೊಗ್ಗಿ(ಕ್ರಿ.ಶ. ೯೩೦-೪೫), ಈತನ ಮಗ ಒಂದನೆಯ ವಜ್ಜಡ(ಕ್ರಿ.ಶ. ೯೪೫-೯೬೫), ಆತನ ಸಹೋದರ ಛದ್ವೈದೇವ(ಕ್ರಿ.ಶ. ೯೬೫-೭೫), ವಜ್ಜಡನ ಮಗ ಒಂದನೆಯ ಅಪರಾಜಿತ(ಕ್ರಿ.ಶ. ೯೭೫-೧೦೧೦), ಆತನ ಮಗ ಎರಡನೆಯ ವಜ್ಜಡ(ಕ್ರಿ.ಶ.೧೦೧೦-೧೫), ಅವನ ಸಹೋದರ ಅರಿಕೇಸರಿ ಅಥವಾ ಕೇಶಿದೇವ(ಕ್ರಿ.ಶ.೧೦೧೫-೨೨), ಈತನ ಮಗ ಚಿತ್ತರಾಜ(ಕ್ರಿ.ಶ.೧೦೨೨-೩೫), ಈತನ ಸಹೋದರ ನಾಗಾರ್ಜುನ (ಕ್ರಿ.ಶ.೧೦೩೫-೪೫), ಇವನ ಸಹೋದರ ಮುಮ್ಮುಣಿ(ಕ್ರಿ.ಶ.೧೦೪೫-೭೦), ನಾಗಾರ್ಜುನನ ಮಗ ಒಂದನೆಯ ಅನಂತದೇವ(ಕ್ರಿ.ಶ.೧೦೭೦-೧೧೨೫), ಇವನ ಮಗ ಒಂದನೆಯ ಅಪರಾದಿತ್ಯ(ಕ್ರಿ.ಶ.೧೧೨೭-೪೮), ಈತನ ಮಗ ಹರಿಪಾಲದೇವ(ಕ್ರಿ.ಶ.೧೧೪೫-೫೫), ಇವನ ಮಗ ಮಲ್ಲಿಕಾರ್ಜುನ(ಕ್ರಿ.ಶ.೧೧೫೫-೭೦), ಇವನ ಮಗ ಎರಡನೆಯ ಅಪರಾದಿತ್ಯ (ಕ್ರಿ.ಶ.೧೧೭೦-೯೭), ಬಹುಷಃ ಅವನ ಮಗ ಎರಡನೆಯ ಅನಂತದೇವ(ಕ್ರಿ.ಶ.೧೧೯೮-೧೨೦೦), ಆತನ ಸಹೋದರ ಎರಡನೆಯ ಕೇಶಿದೇವ(ಕ್ರಿ.ಶ.೧೨೦೦-೪೫), ಎರಡನೆಯ ಅನಂತದೇವನ ಮಗ ಮೂರನೆಯ

ಅನಂತದೇವ(ಕ್ರಿ.ಶ.೧೨೪೫-೫೮), ಇವನ ಸಹೋದರ ಸೋಮೇಶ್ವರ(ಕ್ರಿ.ಶ.೧೨೫೫-೬೫). ಹೀಗೆ ಕ್ರಮವಾಗಿ ಆಳ್ವಿಕೆಯನ್ನು ಮಾಡಿದರು.

**ಕೊಲ್ಹಾಪೂರ ಶಿಲಾಹಾರರು:**

ಇವರನ್ನು ಕರಾಡದ ಶಿಲಹಾರರೆಂದು ಕರೆಯಲಾಗಿದೆ. ಇವರು ಆಳ್ವಿಕೆ ಮಾಡಿದ ಪ್ರದೇಶ ಕರಹಾಟವಿಷಯವಾಗಿದ್ದು, ಇದು ಇಂದಿನ ಮಹಾರಾಷ್ಟ್ರದ ಸಾತಾರ, ಸಾಂಗ್ಲಿ, ಕೊಲ್ಹಾಪೂರ ಪ್ರದೇಶಗಳನ್ನು ಮತ್ತು ಕರ್ನಾಟಕದ ಬೆಳಗಾವಿ ಜಿಲ್ಲೆಯ ಕೆಲ ಭಾಗಗಳನ್ನು ಒಳಗೊಂಡಿತ್ತು. ಕರಾಡ, ಪನ್ಹಾಳ ಮತ್ತು ಕೊಲ್ಹಾಪೂರಗಳು ಇವರ ರಾಜಧಾನಿಗಳಾಗಿದ್ದವು. ಕೊಲ್ಹಾಪೂರ ಮಹಾಲಕ್ಷ್ಮೀಯು ಇವರ ಕುಲದೇವತೆಯಾಗಿದ್ದು, ಸುವರ್ಣವೃಷಭ ಲಾಂಛನ ಇವರದಾಗಿತ್ತು. ಅಲ್ಲದೇ ಇವರು ತಮ್ಮನ್ನು ತಗರಪುರವರೇಶ್ವರರೆಂದು ಕರೆದುಕೊಂಡಿದ್ದಾರೆ. ಈ ಮನೆತನದಲ್ಲಿ ಕ್ರಮವಾಗಿ ಒಂದನೆಯ ಜಟಿಗ, ಅವನ ಮಗ ನಾಯಿವರ್ಮ, ಅವನ ಮಗ ಚಂದ್ರ, ಅವನ ಮಗ ಎರಡನೆಯ ಜಟಿಗ(ಕ್ರಿ.ಶ.೧೦೦೦-೧೦೨೦), ಅವನ ಮಗ ಒಂದನೆಯ ಗೊಂಕ(ಕ್ರಿ.ಶ.೧೦೨೦-೧೦೫೦), ಅವನ ಮಗ ಮಾರಸಿಂಹ(ಕ್ರಿ.ಶ.೧೦೫೦-೧೦೭೫), ಅವನ ಮಗ ಎರಡನೆಯ ಗೂಹಲ(ಕ್ರಿ.ಶ.೧೦೭೫-೧೧೦೦), ಇವನ ಸಹೋದರ ಬಲ್ಲಾಳ (ಕ್ರಿ.ಶ.೧೧೦೦-೧೧೦೮), ಆತನ ಸಹೋದರ ಗಂಡರಾದಿತ್ಯ(ಕ್ರಿ.ಶ.೧೧೦೮-೩೮), ಇವನ ಮಗ ಒಂದನೆಯ ವಿಜಯಾದಿತ್ಯ(ಕ್ರಿ.ಶ.೧೧೩೮-೧೧೭೫), ಇವನ ಮಗ ಎರಡನೆಯ ಭೋಜ(ಕ್ರಿ.ಶ.೧೧೭೫-೧೨೧೨)ರುಗಳು ಆಳ್ವಿಕೆಯನ್ನು ಮಾಡಿದರು[೩೫].

**ಬಿಜಾಪೂರ ಪ್ರದೇಶದ ಶಿಲಹಾರರು:**

ಬಿಜಾಪೂರ ಜಿಲ್ಲೆ ಅದಕ್ಕೆ ಹೊಂದಿಕೊಂಡಿರುವ ಗುಲ್ಬರ್ಗಾ ಜಿಲ್ಲೆಯ ಅಫಜಲಪುರ ತಾಲೂಕು ಮತ್ತು ಮಹಾರಾಷ್ಟ್ರ ರಾಜ್ಯದ ಸೋಲಾಪೂರ ಜಿಲ್ಲೆಯ ಅಕ್ಕಲಕೋಟಗಳಲ್ಲಿ ದೊರೆಯುವ ಶಾಸನಗಳಲ್ಲಿ ಬರುವ ಶಿಲಹಾರ ಮನೆತನಗಳ ಅಧ್ಯಯನ ಕೈಕೊಂಡಾಗ ನಮಗೆ ಈ ಪ್ರದೇಶದಲ್ಲಿ ಅನೇಕ ಶಿಲಹಾರ ಮನೆತನಗಳು ಕಂಡುಬರುತ್ತವೆ. ಅವುಗಳ ನೆಲೆವೀಡುಗಳು ಬೇರೆಬೇರೆಯಾಗಿದ್ದು, ಅವುಗಳನ್ನು ಅಕ್ಕಲಕೋಟ, ಆಗರಖೇಡ, ತರ್ದವಾಡಿ, ಎಳಮೇಲ, ಸಾಲೋಟಗಿ ಮತ್ತು ಮುತ್ತಿಗೆಯ ಶಾಖೆಗಳೆಂದು ಡಾ.ಬಿ.ಆರ್.ಗೋಪಾಲರು ಗುರುತಿಸಿದ್ದಾರೆ[೩೬]. ಈ ಪ್ರದೇಶದ ಶಾಸನಗಳನ್ನು ಅಧ್ಯಯನ ಮಾಡಿದಾಗ ಈ ಶಿಲಹಾರ ಮನೆತನಗಳು ಮೂಲತಃ ಒಂದೇ ವಂಶಕ್ಕೆ ಸಂಭಂದಿಸಿದ್ದು ಕಾಲಕಳೆದಂತೆ ಬೇರೆಬೇರೆ ಶಾಖೆಗಳಾಗಿ ಕವಲೊಡೆದವೆಂದು ತಿಳಿದುಬರುತ್ತದೆ. ಪ್ರಸ್ತುತ ಈ ಎಲ್ಲ ಶಾಖೆಗಳನ್ನು ಒಂದುಗೂಡಿಸಿ ಅವರ ಇತಿಹಾಸವನ್ನು ಒಟ್ಟಾರೆಯಾಗಿ ಬಿಜಾಪೂರ ಪ್ರದೇಶದ ಶಿಲಹಾರರೆಂದು ಅಧ್ಯಯನ ಕೈಕೊಳ್ಳಲಾಗಿದೆ.

**ಪಿಟ್ಟಮ:**

ಶಿಲಹಾರ ವಂಶದ ಪ್ರಥಮ ವ್ಯಕ್ತಿಯಾಗಿ ನಮಗೆ ಪಿಟ್ಟಮನು ಕ್ರಿ.ಶ. ೭೩೫ರಲ್ಲಿ ಕಾಣಿಸಿಕೊಳ್ಳುತ್ತಾನೆ[೩೩೭]. ಈ ಪ್ರದೇಶದಲ್ಲಿ ದೊರೆಯುವ ಶಾಸನಗಳಲ್ಲಿಯೂ ಕೂಡ ಪಿಟ್ಟಮನು ಪ್ರಥಮ ವ್ಯಕ್ತಿಯಾಗಿ ಕಾಣಿಸಿಕೊಳ್ಳುತ್ತಾನಾದರೂ ಅವನು ಇಲ್ಲಿ ಆಳ್ವಿಕೆ ಮಾಡಿದಂತೆ ಉಲ್ಲೇಖವಿಲ್ಲ[೩೩೮].

**ಎರಡನೆಯ ಧನಸಂಗ್ರಹ:**

ಬಿಜಾಪೂರ ಪ್ರದೇಶದ ಶಿಲಹಾರ ವಂಶಗಳಲ್ಲಿ ನಮಗೆ ಕಂಡುಬರುವ ಪ್ರಥಮ ವ್ಯಕ್ತಿ ಎರಡನೆಯ ಧನಸಂಗ್ರಹನಾಗಿದ್ದಾನೆ. ಅಗರಖೇಡ ಶಾಸನದ ವಂಶಾವಳಿಯಂತೆ ಎರಡನೆಯ ಧನಸಂಗ್ರಹ ಈ ಮನೆತನದ ಪ್ರಥಮ ವ್ಯಕ್ತಿಯಾಗಿದ್ದಾನೆ[೩೩೯]. ಇಂಡಿ ತಾಲೂಕಿನ ರೂಗಿ ಶಾಸನದ ಪ್ರಕಾರ ಈತನಿಗೆ ಧನಸಂಗ್ರಹಯ್ಯನೆಂದು ಕರೆದಿದ್ದರೆ, ಸೆಳರಮಾರ್ತ್ತಾಂಡ, ಕೂಪಣಪುರವರೇಶ್ವರ ಎಂಬ ಪ್ರಶಸ್ತಿಗಳನ್ನು ಉಲ್ಲೇಖಿಸಲಾಗಿದೆ. ಅಲ್ಲದೇ ಈತನು ಬಾದಾಮಿ ಚಾಲುಕ್ಯರ ಎರಡನೆಯ ಜಗದೇಕಮಲ್ಲನ ಸಾಮಂತನಾಗಿ ತರ್ದವಾಡಿ-೧೦೦೦ ವಿಭಾಗದ ಮುಖ್ಯಸ್ಥನಾಗಿ ಕ್ರಿ.ಶ. ೧೦೯೦ರಲ್ಲಿ ಆಳುತ್ತಿದ್ದಂತೆ ತಿಳಿಸುತ್ತದೆ[೩೪೦].

**ಗೋವಣರಸ:**

ಎರಡನೆಯ ಧನಸಂಗ್ರಹನ ನಂತರ ಈ ಮನೆತನದಲ್ಲಿ ನಮಗೆ ಕಂಡುಬರುವ ವ್ಯಕ್ತಿಯೆಂದರೆ ಮಹಾಮಂಡಳೇಶ್ವರ ಗೋವಣರಸನಾಗಿದ್ದಾನೆ. ಈತನು ಎರಡನೆಯ ಧನಸಂಗ್ರಹನ ಸಹೋದರನಾದ ಮೂರನೆಯ ಕವಿಲಾಸನ ಮೊಮ್ಮಗನಾಗಿದ್ದು, ಡಾಕರಸನ ಮಗನಾಗಿದ್ದಾನೆ. ಕ್ರಿ.ಶ. ೧೧೦೯ರ ಖೇಡ ಶಾಸನದಲ್ಲಿ ಈತನಿಗೆ ತಗರನಗರಾಧೀಶ್ವರ, ಶಿಳಾರಕುಳಕಮಳಮಾರ್ತ್ತಾಂಡ, ಶನಿವಾರಸಿದ್ಧಿ ಎಂದು ಮುಂತಾಗಿ ಪ್ರಶಸ್ತಿಸಲಾಗಿದೆಯಲ್ಲದೇ ಈತನು ತರ್ದವಾಡಿ-೧೦೦೦ ನಾಡಿನ ಆಡಳಿತಾಧಿಕಾರಿಯಾಗಿದ್ದನೆಂದು ತಿಳಿದುಬರುತ್ತದೆ. ಮತ್ತು ಖೇಡ-೧೨ರ ಮೊದಲ ಗ್ರಾಮವಾದ ಖೇಡದ ದೇಗುಲಕ್ಕೆ ದಾನ ನೀಡಿದ್ದು ತಿಳಿಯುತ್ತದೆ[೩೪೧]. ಚಟ್ಟರಕಿಯ ಶಾಸನದಲ್ಲಿ ವಿರೋಧಿಮಂಡಳೀಕ . . . . . . . (ನಾನ)ಯ ಪದ . . . ಸೆಳರಕುಳಕಮಲಮಾರ್ತ್ತಾಂಡ, ಕದನಪ್ರಚಂಡ, ಮನ್ನೆಯವಲ್ಲಭ, ಶನಿವಾರಸಿದ್ಧಿ, ಸಾಹಸೋತ್ತುಂಗ, ಶ್ರೀಮನ್ಮಹಾಮಂಡಳೇಶ್ವರ ಎಂದು ಮುಂತಾಗಿ ಕರೆಯಲಾಗಿದೆ. ಶಾಸನದಿಂದ ಈತನು ಆರನೆಯ ವಿಕ್ರಮಾದಿತ್ಯನ ಸಾಮಂತನಾಗಿ ಕಣ್ಣವಳ್ಳಿ ನೆಲೆವೀಡಿನಿಂದ ತರ್ದವಾಡಿ-೧೦೦೦ನ್ನು ಆಳುತ್ತಿದ್ದುದಾಗಿ ತಿಳಿದುಬರುತ್ತದೆ. ಚಟ್ಟರಕಿಯಲ್ಲಿ ಗೋವಣರಸನು ತನ್ನ ದಾಯಾದಿಗಳೊಂದಿಗೆ ಯುದ್ಧ ಕೈಕೊಂಡ ವಿಷಯವನ್ನು ಶಾಸನ ಉಲ್ಲೇಖಿಸಿದೆ. ಮತ್ತು ಈ ಯುದ್ಧದಲ್ಲಿ ಈತನಿಗೆ ಅಲ್ಲಿನ ಮಹಾಜನರು ಸಹಾಯ ನೀಡಿದ ವಿಷಯ ಕೂಡಾ ತಿಳಿಯುತ್ತದೆ[೩೪೨]. ಆದರೆ ಅವನ ಜೊತೆಗೆ ಯುದ್ಧ ಮಾಡಿದ ದಾಯಾದಿಗಳ ಹೆಸರು ಮತ್ತು ಯುದ್ಧದ ಕಾರಣಗಳು ಶಾಸನದಲ್ಲಿ ಕಂಡುಬರುವದಿಲ್ಲ.

**ಮೂರನೆಯ ಇಂದರಸ:**

ಈತನ ನಂತರ ನಮಗೆ ಕಂಡುಬರುವ ಅರಸನೆಂದರೆ ಅಕ್ಕಲಕೋಟ ಶಾಸನದ ವಂಶಾವಳಿಯ ಪ್ರಕಾರ ಕಂಡುಬರುವ ಮೂರನೆಯ ಇಂದರಸನಾಗಿದ್ದಾನೆ. ಕ್ರಿ.ಶ. ೧೧೧೪ರ ಅಕ್ಕಲಕೋಟ ಶಾಸನದ ಪ್ರಕಾರ ಈತನು ಆರನೆಯ ವಿಕ್ರಮಾದಿತ್ಯನ ಸಾಮಂತನಾಗಿದ್ದನು[೩೪೩]. ಕ್ರಿ.ಶ. ೧೧೨೨ರ ಅಕ್ಕಲಕೋಟದ ಇನ್ನೊಂದು ಶಾಸನದ ಪ್ರಕಾರ ಈ ಇಂದರಸನು ಚಾಲುಕ್ಯ ಆರನೆಯ ವಿಕ್ರಮಾದಿತ್ಯನ ಸಾಮಂತನಾಗಿದ್ದು, ಅಂಕುಲಗೆನಾಡು ಮತ್ತು ಆನಂದೂರು-೩೦೦ರ ಮನ್ನೆಯನಾಗಿ ಆಡಳಿತ ನಡೆಸುತ್ತಿದ್ದನು[೩೪೪].

**ಡಾಕರಸ ಮತ್ತು ಅಹುಮಲ್ಲರಸ:**

ನಂತರ ಕಂಡುಬರುವವರೆಂದರೆ ಡಾಕರಸ ಮತ್ತು ಅಹುಮಲ್ಲರಸರಾಗಿದ್ದಾರೆ. ಇವರು ಇಂದರಸನ ಮಕ್ಕಳಾಗಿದ್ದು, ಪಿರಿಯಗೋವಣರಸ ಮೊಮ್ಮಕ್ಕಳಾಗಿದ್ದರೆಂದು ತಿಳಿಯುತ್ತದೆ. ಇದರಲ್ಲಿ ಡಾಕರಸನೊಬ್ಬನೇ ಆಳ್ವಿಕೆಮಾಡಿದಂತೆ ತೋರುತ್ತದೆ. ಹಿರೇಬೇವಿನೂರ ಶಾಸನ ಇವನನ್ನು ಸಮರಪ್ರಚಂಡ, ಕದನಮಹೇಶ್ವರ, ಕುಶಧಾರಾಗ್ರಬುದ್ಧಿ ಎಂದು ಉಲ್ಲೇಖಿಸಿದೆ. ಶಾಸನ ಹೇಳುವಂತೆ ,ಮಹಾಮಂಡಳೇಶ್ವರ ಡಾಕರಸನು ಕ್ರಿ.ಶ. ೧೧೨೪ರಲ್ಲಿ ಆರನೆಯ ವಿಕ್ರಮಾದಿತ್ಯನ ಸಾಮಂತನಾಗಿದ್ದುಕೊಂಡು, ತರ್ದವಾಡಿ-೧೦೦೦ದ ಆಡಳಿತಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದನು[೩೪೫].

ಕ್ರಿ.ಶ. ೧೧೪೭ರ ಮುತ್ತಗಿ ಶಾಸನವೊಂದರ ಪ್ರಕಾರ ಶಿಲಹಾರ ಡಾಕರಸನೆಂಬುವನು ಚಾಲುಕ್ಯ ಎರಡನೆಯ ಜಯಸಿಂಹನ ಸಾಮಂತನಾಗಿ ಆಳ್ವಿಕೆನಡೆಸುತ್ತಿದ್ದನೆಂದು ತಿಳಿದುಬರುತ್ತದೆ[೩೪೬]. ಆದರೆ ಹಿರೇಬೇವಿನೂರ ಶಾಸನದ ಡಾಕರಸ ಮತ್ತು ಇವನು ಭಿನ್ನಭಿನ್ನ ವ್ಯಕ್ತಿಗಳಾಗಿದ್ದಂತೆ ತೋರುತ್ತದೆ.

**ಚಾವುಂಡರಸ:**

ನಂತರ ಕ್ರಿ.ಶ. ೧೧೬೮ರ ಇಂಡಿ ತಾಲೂಕಿನ ಹಲಸಂಗಿ ಶಾಸನದ ಪ್ರಕಾರ ಶಿಲಾಹಾರನರೇಂದ್ರ, ಸಾಹಸೋತ್ತುಂಗ, ಸನಿವಾರಸಿದ್ಧಿ ಎಂಬ ಬಿರುದುಗಳನ್ನು ಹೊಂದಿದ್ದ, ಚಾವುಂಡರಸನೆಂಬುವನು ಆಳ್ವಿಕೆನಡೆಸಿದ ವಿವರ ತಿಳಿದುಬರುತ್ತದೆ[೩೪೭]. ಆದರೆ ಈ ಶಾಸನ ಹಾಳಾಗಿದ್ದರಿಂದ ದಾನ ನೀಡಿದ ಉಲ್ಲೇಖವನ್ನು ಬಿಟ್ಟರೆ ಈತನ ಆಳ್ವಿಕೆಯ ಇತರೇ ವಿವರಗಳು ತಿಳಿದುಬರುವದಿಲ್ಲ. ಅದೇ ಇಂಡಿ ತಾಲೂಕಿನ ಸಾಲೋಟಗಿ ಶಾಸನದ ಪ್ರಕಾರ ಧನಸಂಗ್ರಹನ ವಂಶದವನೆಂದು ಹೇಳಿಕೊಳ್ಳುವ ಚಾವುಂಡರಸನ ಉಲ್ಲೇಖ ಬರುತ್ತದೆ[೩೪೮].

**ಎರಡನೆಯ ಗೋವಣರಸ ಅಥವಾ ಗೋಣರಸ:**

ಇಂಡಿ ತಾಲೂಕಿನ ಸಾಲೋಟಗಿ ಶಾಸನವೊಂದು ಉಲ್ಲೇಖಿಸುವಂತೆ ಈ ಚಾವುಂಡರಸನಿಗೆ ಗೋವಣರಸನೆಂಬ ಮಗನಿದ್ದನು[೩೪೯]. ಕ್ರಿ.ಶ. ೧೧೯೨ರ ಸಿಂದಗಿ ತಾಲೂಕಿನ ಹಿಪ್ಪರಗಿ ಶಾಸನವೊಂದರ ಪ್ರಕಾರ ಸಳರಕುಳಕಮಳಮಾರ್ತ್ತಾಂಡ,

ಶ್ರೀಮನುಮಹಾಮಂಡಳೇಶ್ವರ ಗೋಣರಸನು ಸೇವುಣ ಐದನೆಯ ಭಿಲ್ಲಮನ ಮಹಾಮಂಡಳೇಶ್ವರನಾಗಿ ತರ್ದವಾಡಿ ನಾಡನ್ನು ಆಳುತ್ತಿದ್ದನೆಂದು ತಿಳಿದುಬರುತ್ತದೆ[೩೫೦].

**ಎರಡನೆಯ ಬಂದರಸ:**

ಈ ಗೋವಣರಸನ ನಂತರ ಆತನ ಮಗ ಎರಡನೆಯ ಬಂದರಸನು ಆತನ ಉತ್ತರಾಧಿಕಾರಿಯಾದನು. ಕ್ರಿ.ಶ. ೧೧೯೨ರ ಸಾಲೋಟಗಿ ಶಾಸನದಿಂದ ತಿಳಿಯುವಂತೆ ಎರಡನೆಯ ಬಂದರಸನು ಹಲವಾರು ಯುದ್ಧಗಳನ್ನು ಜಯಿಸಿದವನೆಂದು ಉಲ್ಲೇಖಿತನಾಗಿದ್ದಾನೆ[೩೫೧]. ಆದರೆ ಅವನು ಮಾಡಿದ ಯುದ್ಧಗಳ ವಿವರ ತಿಳಿದುಬರುವದಿಲ್ಲ. ಗೋವಣರಸನಿಗೆ ಬಂದರಸನೆಂಬ ಸಹೋದರನೊಬ್ಬನಿದ್ದು ಆತನು ಆಳ್ವಿಕೆ ಮಾಡಿದಂತೆ ತೋರುವದಿಲ್ಲ.

**ಮೂರನೆಯ ಧನಸಂಗ್ರಹ:**

ಈ ಶಾಖೆಯಲ್ಲಿ ನಮಗೆ ದೊರೆಯುವ ಕೊನೆಯ ಅರಸನ ಹೆಸರೆಂದರೆ ಧನಸಂಗ್ರಹನದ್ದಾಗಿದೆ. ಕ್ರಿ.ಶ. ೧೨೮೮-೮೯ರ ಚಿನ್ನಳ್ಳಿ ಶಾಸನ ಉಲ್ಲೇಖಿಸುವಂತೆ ಧನಸಂಗ್ರಹನು ತರ್ದವಾಡಿ ನಾಡಿನ ಆಡಳಿತಾಧಿಕಾರಿಯಾಗಿದ್ದನು. ಈತನು ಅತ್ತನೂರು ಕೋಟೆಯಿಂದ ಆಳ್ವಿಕೆ ನಡೆಸುತ್ತಿದ್ದನೆಂದು ತಿಳಿದುಬರುತ್ತದೆ[೩೫೨].

ಬಿಜಾಪೂರ ಜಿಲ್ಲೆಯ ಸಿಂದಗಿ ತಾಲೂಕಿನ ಆಲಮೇಲವನ್ನು ಕೇಂದ್ರಸ್ಥಾನವನ್ನಾಗಿಟ್ಟುಕೊಂಡು ಶಿಲಹಾರ ಮನೆತನವೊಂದು ಆಳ್ವಿಕೆ ನಡೆಸಿದಂತೆ ತಿಳಿದುಬರುತ್ತದೆ. ಇವರೂ ಸಹ ಈ ಮೇಲೆ ಉಲ್ಲೇಖಿಸಿದ ಶಿಲಹಾರ ಮನೆತನದ ಮೂಲದವರಾಗಿದ್ದು, ಅವರಿಂದ ಬೇರ್ಪಟ್ಟು ಈ ಶಾಖೆಯನ್ನು ಸ್ಥಾಪಿಸಿ ಮಹಾಮಂಡಳೇಶ್ವರರುಗಳಾಗಿ ಆಳ್ವಿಕೆ ನಡೆಸಿದ್ದಾರೆ.

**ನಾಯಿಗ:**

ಈ ಮನೆತನದಲ್ಲಿ ಸಿಗುವ ಮೊದಲ ವ್ಯಕ್ತಿ ನಾಯಿಗನೆಂಬುವವನಾಗಿದ್ದಾನೆ. ಕ್ರಿ.ಶ. ೧೦೪೪ರ ಆಲಮೇಲದ ಶಾಸನದಲ್ಲಿ ಸ್ವಸ್ತಿ ಸಮಧಿಗತ ಪಂಚಮಹಾಶಬ್ದ ಮಹಾಸಾಮನ್ತಂ. . . . . . ತಗರನಗರಾಧೀಸ್ವರಂ. . . . . ವೈರಿನೃಪಾಳಿ . . . . ಎಂದು ಇವನನ್ನು ಪ್ರಶಸ್ತಿಸಲಾಗಿದೆ. ಈತನು ಚಾಲುಕ್ಯ ಒಂದನೆಯ ಸೋಮೇಶ್ವರನ ಸಾಮಂತನಾಗಿ ಆಳ್ವಿಕೆಯನ್ನು ಮಾಡುತ್ತಿದ್ದುದಾಗಿ ಅದೇ ಶಾಸನದಿಂದ ತಿಳಿದುಬರುತ್ತದೆ[೩೫೩]. ಶಾಸನದಲ್ಲಿ ಆಲಮೇಲವನ್ನು ಎಳಮೇಲ ಎಂದು ಉಲ್ಲೇಖಿಸಲಾಗಿದೆ. ಆದರೆ ಈ ಅರಸನ ಆಳ್ವಿಕೆಯ ವಿವರಗಳನ್ನು ಶಾಸನದಿಂದ ತಿಳಿಯಲಾಗಿಲ್ಲ.

**ಸಿಂಗರಸ ಮತ್ತು ಉದಯಾದಿತ್ಯ:**

ಇವನ ನಂತರ ಇವನ ಮಕ್ಕಳಾದ ಸಿಂಗರಸ ಮತ್ತು ಉದಯಾದಿತ್ಯರು ಈ ಮನೆತನಕ್ಕೆ ಉತ್ತರಾಧಿಕಾರಿಗಳಾಗಿ ಕಂಡುಬರುತ್ತಾರೆ. ಇವರನ್ನು ಶಾಸನಗಳು ವೀರಶ್ರೀಕಾಂತಂ, ತಗರನಗರಾಧೀಶ್ವರಂ, ಸುಭಟಮಹೇಶ್ವರಂ,

ಶಿಯಳಾರವಂಶೋದ್ಭವಂ, ಸಮರೈಕಭೀಷಣಂ, ನಾಯಿಗನಂಚಕಾರ ಎಂದು ಮುಂತಾಗಿ ಕರೆದಿವೆ. ಕ್ರಿ.ಶ. ೧೦೭೭ರ ಕುಳೇಕುಮಟಗಿ ಶಾಸನದಲ್ಲಿ ಸಿಂಗರಸನು ಚಾಲುಕ್ಯ ಆರನೆಯ ವಿಕ್ರಮಾದಿತ್ಯನ ಸಾಮಂತನಾಗಿ ಆಳ್ವಿಕೆನಡೆಸಿದ ವಿಷಯ ತಿಳಿದುಬರುತ್ತದೆ[೩೫೪]. ಆದರೆ ಇಲ್ಲಿ ಇವನ ಇತರೇ ವಿವರಗಳು ತಿಳಿಯುವದಿಲ್ಲ. ಅದೇ ಸ್ಥಳದ ಕ್ರಿ.ಶ. ೧೦೮೨ರ ಶಾಸನವೊಂದರಿಂದಲೂ ಇವರಿಬ್ಬರ ಆಳ್ವಿಕೆಯ ವಿವರಗಳು ತಿಳಿಯುತ್ತವೆ. ಅದರಲ್ಲಿ ಉದಯಾದಿತ್ಯನು ಆಳ್ವಿಕೆ ನಡೆಸುತ್ತಿದ್ದಂತೆ ತಿಳಿದುಬರುತ್ತದೆ[೩೫೫]. ಗಮನಿಸಬಹುದಾದ ವಿಷಯವೆಂದರೆ ಈ ಎರಡೂ ಶಾಸನಗಳಲ್ಲಿ ಇವರಿಬ್ಬರನ್ನೂ ಒಟ್ಟಾಗಿ ಉಲ್ಲೇಖಿಸುವದರಿಂದ, ಇವರು ಜೊತೆಯಾಗಿ ಆಳ್ವಿಕೆ ನಡೆಸುತ್ತಿದ್ದರೆಂದು ಊಹಿಸಬಹುದು.

**ಎರಡನೆಯ ಸಿಂಗರಸ:**

ನಂತರ ಕಂಡುಬರುವ ಅರಸನೆಂದರೆ ಉದಯಾದಿತ್ಯನ ಮಗ ಎರಡನೆಯ ಸಿಂಗರಸನಾಗಿದ್ದಾನೆ. ಕ್ರಿ.ಶ. ೧೧೨೦ರ ಬಿಜಾಪೂರ ಮ್ಯೂಸಿಯಂ ಶಾಸನ ಈತನನ್ನು ಉದಿಗನ ಅಂಕಕಾರ ಎಂದು ಕರೆದಿದೆ. ಅಲ್ಲದೇ ಇವನು ಆರನೆಯ ವಿಕ್ರಮಾದಿತ್ಯನ ಸಾಮಂತನಾಗಿದ್ದು, ಅವನ ಉತ್ತರ ಮತ್ತು ದಕ್ಷಿಣದ ದಂಡಯಾತ್ರೆಗಳಲ್ಲಿ ಭಾಗವಹಿಸಿದ್ದ ವಿಷಯ ಕೂಡ ತಿಳಿಯುತ್ತದೆ. ಇವನು ಮಾಳ್ವ ಮತ್ತು ಚೋಳರ ರಾಜರುಗಳನ್ನು ಎದುರಿಸಿದ ವಿಷಯ ಚೋಳಕುಳವಿಳಯಕಾಳಂ, ಮಾಳವರಾಜಕಸೂಳಂ ಎಂದು ಉಲ್ಲೇಖಿತವಾಗಿದೆ[೩೫೬]. ಶಾಸನವೊಂದು ಈತನನ್ನು ಆರನೆಯ ವಿಕ್ರಮಾದಿತ್ಯನ ರಾಣಿಯಾದ ಕೇತಲದೇವಿಯ ಗನ್ಧವಾರಣಂ ಎಂದು ಕರೆದಿದೆ[೩೫೭]. ಇದರಿಂದ ಈತನು ಕೇತಲದೇವಿಯ ಆಪ್ತಸೇವಕನಾಗಿದ್ದನೆಂದು ತಿಳಿಯುತ್ತದೆ.

**ಸೋವರಸ:**

ಎರಡನೆಯ ಸಿಂಗರಸನ ನಂತರ ಆತನ ಮಗನಾದ ಸೋವರಸನು ಆಳ್ವಿಕೆಗೆ ಬಂದನು. ಸಿಂದಗಿ ತಾಲೂಕಿನ ಮಲಘಾಣ ಶಾಸನದಲ್ಲಿ ಇವನನ್ನು ಮಹಾಮಂಡಳೇಶ್ವರ ಕುಮಾರ ಸೋವರಸನೆಂದು ಕರೆಯಲಾಗಿದೆ[೩೫೮]. ಕ್ರಿ.ಶ. ೧೧೪೦ರ ಸಿಂದಗಿ ತಾಲೂಕಿನ ದೇವರನಾವದಗಿ ಶಾಸನದಿಂದ ಈತನು ಸಿಂಹಭೂಪ (ಎರಡನೆಯ ಸಿಂಗರಸ) ಮತ್ತು ಬಾಚಲದೇವಿಯರ ಮಗನಾಗಿದ್ದನೆಂದು ತಿಳಿದುಬರುತ್ತದೆ. ಅಲ್ಲದೇ ಶಾಸನವು ಇವನು ಚಾಲುಕ್ಯ ಎರಡನೆಯ ಜಗದೇಕಮಲ್ಲನ ಪಾದಪದ್ಮೋಪಜೀವಿಯಾಗಿ ಎಳಮೇಲ-೩೦ರ ಮನ್ನೆಯನಾಗಿದ್ದನೆಂದು ಉಲ್ಲೇಖಿಸಿದೆ[೩೫೯]. ಕ್ರಿ.ಶ. ೧೧೪೭ರ ಸಿಂದಗಿ ತಾಲೂಕಿನ ಯಾರಗಲ್ ಶಾಸನದಲ್ಲಿಯೂ ಈತನು ಎರಡನೆಯ ಜಗದೇಕಮಲ್ಲನ ಮಹಾಮಂಡಳೇಶ್ವರನಾಗಿ ಆಳ್ವಿಕೆಯನ್ನು ಮುಂದುವರೆಸಿದ್ದು ತಿಳಿಯುತ್ತದೆ[೩೬೦].

**ಮೂರನೆಯ ಸಿಂಗರಸ:**

ಮೂರನೆಯ ಸಿಂಗರಸನು ಸೋವರಸನ ನಂತರ ಕಂಡುಬರುತ್ತಾನೆ. ಕ್ರಿ.ಶ. ೧೧೫೭ರಲ್ಲಿ ಚಾಲುಕ್ಯ ರಾಜ್ಯವನ್ನು ಕಸಿದುಕೊಂಡು ಬಿಜ್ಜಳನು ಆಳ್ವಿಕೆಗೆ ಬಂದನು. ಆಗ ಚಾಲುಕ್ಯರ ಅನೇಕ ಸಾಮಂತರುಗಳು ಕಲಚೂರಿಗಳ ಪರ ವಾಲಿದರು.

ಆ ವೇಳೆಗೆ ಈ ಶಿಲಹಾರ ಅರಸನೂ ಕೂಡ ಕಲಚೂರಿಗಳ ಸಾಮಂತನಾಗಿ ಆಳ್ವಿಕೆ ಮಾಡಿದ್ದಾನೆ. ಕ್ರಿ.ಶ. ೧೧೫೮ರ ಸಿಂದಗಿ ತಾಲೂಕಿನ ಕಡ್ಲೇವಾಡದ ಶಾಸನದ ಪ್ರಕಾರ ಈತನು ಕಲಚೂರಿ ಬಿಜ್ಜಳನ ಸಾಮಂತನಾಗಿ ಆಳುತ್ತಿದ್ದನೆಂದು ತಿಳಿದುಬರುತ್ತದೆ[೩೬೧]. ಕ್ರಿ.ಶ. ೧೧೬೮ರ ಅದೇ ಸ್ಥಳದ ಶಾಸನವೊಂದರ ಪ್ರಕಾರ ಮೂರನೆಯ ಸಿಂಗರಸನು ಕಲಚೂರಿ ಸೋವಿದೇವನ ಮಹಾಮಂಡಳೇಶ್ವರನಾಗಿ ಎಳಮೇಲದಿಂದ ಆಳುತ್ತಿದ್ದುದಾಗಿ ತಿಳಿಯುತ್ತದೆ. ಈತನನ್ನು ಶಾಸನವು ಸೋಮನಅಂಕಕಾರ ಎಂದು ಕರೆದಿದೆ[೩೬೨]. ಕ್ರಿ.ಶ. ೧೧೭೨ರ ಶಾಸನವೊಂದು ಹೇಳುವಂತೆ ಈತನು ಆಗಿನ ಪ್ರಸಿದ್ಧ ಘಟಿಕಾಸ್ಥಾನವಾದ ಕಡ್ಲೇವಾಡಕ್ಕೆ ಭೇಟಿ ನೀಡಿದ್ದನೆಂದು ತಿಳಿಯುತ್ತದೆ[೩೬೩]. ಕ್ರಿ.ಶ. ೧೧೭೬ ರ ವರೆಗೆ ಈತನು ರಾಯಮುರಾರಿ ಸೋವಿದೇವನ ಮಹಾಮಂಡಳೇಶ್ವರನಾಗಿ ಆಳ್ವಿಕೆಮಾಡಿದುದಾಗಿ ಕಡ್ಲೇವಾಡದ ಮತ್ತೊಂದು ಶಾಸನದಿಂದ ತಿಳಿಯುತ್ತದೆ[೩೬೪].

**ಆನೆಮರಸ:**

ಸಿಂಗರಸನ ಮಗ ಆನೆಮರಸನು ಈತನ ನಂತರ ಪಟ್ಟಕ್ಕೆ ಬಂದನು. ಕ್ರಿ.ಶ. ೧೧೮೬ರ ಕಡ್ಲೇವಾಡ ಶಾಸನವು ಈತನು ಚಾಲುಕ್ಯರ ನಾಲ್ಕನೆಯ ಸೋಮೇಶ್ವರನ ಮಹಾಮಂಡಳೇಶ್ವರನಾಗಿ ಎಳಮೇಲದ ಆಡಳಿತವನ್ನು ನಿರ್ವಹಿಸುತ್ತಿದ್ದನೆಂದು ಕಂಡುಬರುತ್ತದೆ. ಶಾಸನದಲ್ಲಿ ಈತನನ್ನು ಸಿಂಗನಅಂಕಕಾರ ಎಂದು ಕರೆದಿದೆ[೩೬೫].

ಹೀಗೆ ಶಿಲಹಾರ ಮನೆತನಗಳು ದಕ್ಷಿಣ ಭಾರತದ ಇತಿಹಾಸದಲ್ಲಿ ಅದರಲ್ಲಿಯೂ ಕರ್ನಾಟಕದ ಇತಿಹಾಸದಲ್ಲಿ ಪ್ರಮುಖ ಪಾತ್ರವನ್ನು ವಹಿಸಿವೆ.

## ೫) ಹಾನಗಲ್ಲ ಕದಂಬರು:

ಬನವಾಸಿ ಕದಂಬರ ನಂತರ ಹುಟ್ಟಿಕೊಂಡ ಅನೇಕ ಕದಂಬ ಮನೆತನಗಳಲ್ಲಿ ಹಾನಗಲ್ಲ ಶಾಖೆಯೂ ಒಂದಾಗಿದೆ. ಇವರು ತಮ್ಮನ್ನು ಬನವಾಸಿಪುರವಾಧೀಶ್ವರರೆಂದು ಕರೆದುಕೊಂಡಿದ್ದಾರೆ. ಪಾನುಂಗಲ್ಲ-೫೦೦ ಇವರ ಆಡಳಿತದ ಕೇಂದ್ರವಾಗಿದ್ದು ಹಾನಗಲ್ಲ ಇವರ ರಾಜಧಾನಿಯಾಗಿತ್ತು. ಹಾನಗಲ್ಲ-೫೦೦ ಇಂದಿನ ಧಾರವಾಡ, ಹಾವೇರಿ, ಉತ್ತರಕನ್ನಡ ಮತ್ತು ಶಿವಮೊಗ್ಗ ಜಿಲ್ಲೆಗಳಲ್ಲಿ ಹರಡಿಕೊಂಡಿತ್ತು. ಇವರದು ಸಿಂಹಲಾಂಛನ, ರಾಜವಾದ್ಯ ಪೆರ್ಮಟ್ಟಿ, ಶಾಖಾಚರೇಂದ್ರ ಧ್ವಜ, ಕುಲದೇವತೆ ಜಯಂತಿ ಮಧುಕೇಶ್ವರ.

ಹಾನಗಲ್ಲ ಕದಂಬರ ಮೂಲಪುರುಷ ಚಟ್ಟಯ್ಯನೆಂದು ಅವರ ವಂಶಾವಳಿಯನ್ನು ನೀಡಿದ ಕರಿಗುದರಿಯ ಶಾಸನ[೩೬೬] ವಿವರಿಸಿದೆ. ಶಾಸನದಲ್ಲಿ ವಂಶಾವಳಿಯು ಬನವಾಸಿ ಕದಂಬರ ಮಯೂರವರ್ಮನಿಂದ ಆರಂಭವಾಗಿದೆ.

**ಚತ್ತಯ್ಯದೇವ:**

ಆದಿತ್ಯವರ್ಮನ ಪುತ್ರ ಮತ್ತು ಕೀರ್ತಿವರ್ಮನ ಸಹೋದರನಾದ ಚತ್ತಯ್ಯನು ಪ್ರಥಮವಾಗಿ ಈ ಹಾನಗಲ್ಲ ಮನೆತನದ ಆಳ್ವಿಕೆಯನ್ನು ಮಾಡಿದನು. ಕ್ರಿ.ಶ. ೯೬೮ರಲ್ಲಿ ರಾಷ್ಟ್ರಕೂಟ ಖೊಟ್ಟಿಗದೇವನ ಪೆರ್ಗಡೆಯಾಗಿ ಆಳ್ವಿಕೆ ನಡೆಸಿದ

ಶಾಸನವು ದೊರೆಯುತ್ತದೆ[೩೧೭]. ಆದರೆ ಈತ ಮುಂದೆ ಕ್ರಿ.ಶ. ೯೭೨ರಿಂದ ಕ್ರಿ.ಶ. ೧೦೧೫ರ ವರೆಗೆ ಬನವಾಸಿ-೧೨೦೦೦ ಮತ್ತು ಸಾಂತಳಿಗೆ-೧೦೦೦ಗಳನ್ನಾಳುತ್ತಿದ್ದನೆಂದು ತಿಳಿಯುತ್ತದೆ. ಕ್ರಿ.ಶ. ೯೭೨ರ ಹರೀಶಿಶಾಸನ ಚಟ್ಟಯ್ಯನು ರಾಷ್ಟ್ರಕೂಟರ ಸಾಮಂತನಾಗಿ ಬನವಾಸಿ ಪನ್ನಿರ್ಚ್ಛಾಸಿರವನ್ನು ಆಳುತ್ತಿದ್ದುದಾಗಿ ಉಲ್ಲೇಖಿಸಿದೆ[೩೧೮]. ಕ್ರಿ.ಶ. ೯೭೯-೮೦ರ ಅವಧಿಯ ಯಸಳೆಯ ಶಾಸನದಲ್ಲಿ ಈತನು ಚಾಲುಕ್ಯ ಎರಡನೆಯ ತೈಲಪನ ಮಾಂಡಳೀಕನೆಂದು ಹೇಳಿಕೊಂಡಿರುವನು[೩೧೯]. ಅದೇ ರೀತಿ ಕ್ರಿ.ಶ. ೧೦೦೬ರ ದೇವತೆಮನೆ ಶಾಸನದಲ್ಲಿಯೂ ಕೂಡ ಈತನು ಚಾಲುಕ್ಯ ಸತ್ಯಾಶ್ರಯನ ಆಧೀನನೆಂದು ಹೇಳಿಕೊಂಡಿದ್ದಾನೆ[೩೨೦]. ಚತ್ತಯ್ಯನಿಗೆ ಬನವಾಸಿಪುರವರೇಶ್ವರ, ಚಂಪಕಾಮೋದ ರುದ್ರಾವತಾರಿ, ಬಂಧುಜನಾಧಾರ, ಶತ್ರುನಿಕ್ಷತ್ರಂ ಸಮರಪ್ರಚಂಡಂ ಮುಳಿವರಗಂಡಂ ಎಂದು ಪ್ರಶಸ್ತಿಸಲಾಗಿದೆ.

ಕ್ರಿ.ಶ. ೧೦೧೫ರಲ್ಲಿ ಚಾಲುಕ್ಯ ಜಯಸಿಂಹ ಸಿಂಹಾಸನವನ್ನು ಏರಿದ ಕೂಡಲೇ ಯುದ್ಧಭೂಮಿಯಲ್ಲಿ ವೈರಿಗಳನ್ನು ಎದುರಿಸಬೇಕಾಯಿತು. ದಕ್ಷಿಣದ ರಾಜೇಂದ್ರ ಚೋಳನು ಭೋಜ ಪರಮಾರ ದೊರೆ ಮತ್ತು ಕಲಚೂರಿ ದೊರೆ ಗಾಂಗೇಯರೊಂದಿಗೆ ಒಕ್ಕೂಟ ಸಾಧಿಸಿ ಜಯಸಿಂಹನ ಮೇಲೆರಗಿ ಮಾನ್ಯಖೇಟವನ್ನು ಲೂಟಿ ಮಾಡಿದನು. ಈ ಕಾಲಕ್ಕೆ ಈತನು ಮಾಳವರನ್ನು ಹಿಮ್ಮೆಟ್ಟಿಸಿ ಗೌತಮಗಂಗೆ ಗೋದಾವರಿಯನ್ನು ದಾಟುವದರಲ್ಲಿ ಯಶಸ್ವಿಯಾದುದಕ್ಕೆ ಚಾಲುಕ್ಯ ದೊರೆಯು ಇವನಿಗೆ ಕಟಕದ ಗೋವ ಅಂದರೆ ಸೇನಾಪಡೆಯ ಶಿಬಿರಪಾಲಕ ಎಂದು ಬಿರುದಿತ್ತನು[೩೨೧]. ಕ್ರಿ.ಶ. ೯೮೨ ರ ಹುಲೇಕಲ್ ಶಾಸನದಿಂದ ತಿಳಿಯುವಂತೆ ಈತನು ಬನವಾಸಿ-೧೨೦೦೦ ಮತ್ತು ಸಾಂತಳಿಗೆ-೧೦೦೦ಗಳನ್ನು ಆಳುತ್ತಿದ್ದನು[೩೨೨]. ಕ್ರಿ.ಶ. ೯೮೬ರಲ್ಲಿ ಚತ್ತಯ್ಯದೇವನು ಬನವಾಸಿಯಿಂದ ಆಳ್ವಿಕೆ ಮಾಡುತ್ತಿದ್ದ ಕಾಲದಲ್ಲಿ ನಾಗರಖಂಡ-೭೦ ಬನವಾಸಿ ಪ್ರಾಂತದ ಭಾಗವಾಗಿದ್ದು ಅದನ್ನು ಖೋಡಯ್ಯನೆಂಬುವನು ಆಳುತ್ತಿದ್ದನು. ಆಗ ಕದಂಬ ಚತ್ತಯ್ಯನು ನಾಗರಖಂಡದ ಮೇಲೆ ಧಾಳಿಯನ್ನು ಕೈಕೊಂಡ ವಿಷಯ ತಿಳಿದುಬರುತ್ತದೆ[೩೨೩]. ಉತ್ತರ ಕೊಂಕಣ ಶಿಲಹಾರರು ಈತನ ಜೊತೆಗೆ ರಕ್ತಸಂಬಂಧ ಬೆಳೆಸಿದಂತಿದೆ. ಥಾನೆಯ ವಾಚಯ್ಯನ ಮಗಳಾದ ಕುಂಡಲಾದೇವಿ ಹಾನಗಲ್ಲ ಕದಂಬರಸನಾದ ಚತ್ತಯ್ಯನನ್ನು ವರಿಸಿದ್ದಳೆಂದು ಹಾನಗಲ್ಲ ಶಾಸನದಿಂದ ತಿಳಿದುಬರುತ್ತದೆ. ಈ ವಾಚಯ್ಯನು ಶಿಲಹಾರ ಇಮ್ಮಡಿ ವಜ್ಜಡನಾಗಿದ್ದಾನೆ. ಕ್ರಿ.ಶ. ೯೯೦ರ ಲಕ್ಷ್ಮೀಪುರ ಶಾಸನದ ಪ್ರಕಾರ ಈತನಿಗೆ ಚತ್ತಬ್ಬರಸಿ ಎಂಬ ಇನ್ನೊಬ್ಬ ರಾಣಿಯಿದ್ದಳೆಂದು ತಿಳಿದುಬರುತ್ತದೆ[೩೨೪]. ಕೀರ್ತಿವರ್ಮನ ಬನವಾಸಿ ಮತ್ತು ಎರಡನೆಯ ತೈಲಪನ ಕರಿಗುದರಿ ಶಾಸನಗಳಿಂದ ಈತನಿಗೆ ಜಯಸಿಂಹನೆಂಬ ಮಗನಿದ್ದುದಾಗಿ ತಿಳಿದುಬರುತ್ತದೆ[೩೨೫].

**ಜಯಸಿಂಹ:**

ಚತ್ತಯ್ಯನ ನಂತರ ಆತನ ಮಗ ಜಯಸಿಂಹನು ಅಧಿಕಾರಕ್ಕೆ ಬಂದನು. ಈತನ ಆಳ್ವಿಕೆಗೆ ಸಂಬಂಧಿಸಿದಂತೆ ಶಾಸನಗಳಾವವೂ ದೊರಕಿಲ್ಲ. ಆದರೆ ಕೀರ್ತಿವರ್ಮನ ಶಾಸನಗಳಿಂದ ಆತನು ಪರಾಕ್ರಮಿ, ವೈರಿಯ ಗಜಪಡೆಯನ್ನು ಧೂಳಿಪಟ ಮಾಡಿದವನೆಂದು ತಿಳಿದುಬರುತ್ತದೆ. ಇದರಿಂದ ಚಾಲುಕ್ಯ ಸಾಮಂತನಾದ ಈತನು ಚಾಲುಕ್ಯ-ಚೋಳರ

ಹೋರಾಟಗಳಲ್ಲಿ ಚಾಲುಕ್ಯರ ಪರವಾಗಿ ಭಾಗವಹಿಸಿರಬೇಕು. ಶಾಸನಗಳಿಂದ ತಿಳಿದುಬರುವಂತೆ ಈತನಿಗೆ ಮಾವುಲಿ, ಒಂದನೆ ತೈಲ, ಎರಡನೆಯ ಶಾಂತಿವರ್ಮ, ಚೋಕಿ ಮತ್ತು ವಿಕ್ರಮರೆಂಬ ಐವರು ಪುತ್ರರಿದ್ದರು[೩೭೬].

**ಮೊದಲನೆಯ ಕೀರ್ತಿವರ್ಮ:**

ಒಂದನೆಯ ಕೀರ್ತಿವರ್ಮನು ಜಯಸಿಂಹನ ನಂತರ ಕಂಡುಬರುತ್ತಾನೆ. ಶಾಸನಗಳಲ್ಲಿ ಈತನನ್ನು ಸಮಧಿಗತ ಪಂಚಮಹಾಶಬ್ದ ಮಹಾಮಂಡಲೇಶ್ವರ ಕಾದಂಬ ಚಕ್ರೇಶ್ವರ ಸರಸಿಜಾಮೋದ ಮೂವಡಿಗಂಡರ ಜೂಜು ಬನವಾಸಿಪುರಾಧೀಶ್ವರ ಶಾಖಾಚರೇಂದ್ರಧ್ವಜ ವಿರಾಜಮಾನ ಸಿಂಹಲಾಂಛನ ಪೆರ್ಮ್ಮಟ್ಟಿ ಪರೆಘೋಷಣ ಅಜ್ಜಾದೇವಿ ಲಬ್ಧವರಪ್ರಸಾದ ತೈಲನಸಿಂಗ ಎಂದು ವರ್ಣಿಸಲಾಗಿದೆ[೩೭೭]. ಈತನು ಬನವಾಸೆ-೧೨೦೦೦ವನ್ನು ಏಕಛತ್ರಛಾಯೆಯಿಂದ ಚಾಲುಕ್ಯ ಆರನೆಯ ವಿಕ್ರಮಾದಿತ್ಯನ ಮಹಾಮಂಡಳೇಶ್ವರನಾಗಿ ಆಳುತ್ತಿದ್ದನೆಂದು ತಿಳಿದುಬರುತ್ತದೆ[೩೭೮]. ಶಾಸನ ಈತನನ್ನು ಕೀರ್ತಿದೇವಂ ಪೆರ್ಮಾಡಿದೇವನಂಪಿಡಿದು ರಾಜ್ಯದೊಳ್ನಿರಿಸಿದಂದೆ ಎಂದು ಉಲ್ಲೇಖಿಸಿದೆ. ಈ ವೇಳೆಯಲ್ಲಿ ಚಾಲುಕ್ಯ ಮನೆತನದಲ್ಲಿ ನಡೆದ ಒಳಜಗಳದಲ್ಲಿ ಈತ ಭಾಗವಹಿಸಿ ಆರನೆಯ ವಿಕ್ರಮಾದಿತ್ಯನ ಪರವಾಗಿ ನಿಂತು ಅವನಿಗೆ ಜಯಸಂಪಾದಿಸಿ ಕೊಡುತ್ತಾನೆ. ಅಂದರೆ ಇವನು ಆರನೆಯ ವಿಕ್ರಮಾದಿತ್ಯನ ಪರವಾಗಿ ನಿಂತು ಬನವಾಸಿಯಲ್ಲಿ ಅವನಿಗೆ ಆಶ್ರಯವಿತ್ತುದಕ್ಕೆ ಚಕ್ರವರ್ತಿ ಸೋಮೇಶ್ವರನು ತನ್ನ ೧೨ ಜನ ಸಾಮಂತರ ದಂಡನ್ನು ಉದಯಾದಿತ್ಯನ ನೇತೃತ್ವದಲ್ಲಿ ಬನವಾಸಿಯನ್ನು ಮುತ್ತಲು ಕಳಿಸಿದನು. ಈ ಯುದ್ಧದಲ್ಲಿ ಕೀರ್ತಿದೇವ ಮತ್ತು ಚತ್ತಯ್ಯರು ಪ್ರಮುಖ ಪಾತ್ರ ನಿರ್ವಹಿಸಿದರು[೩೭೯].

ಇವನಿಗೆ ಮಾಳಲದೇವಿ ಹಾಗೂ ಕಾಳಲದೇವಿಯರೆಂಬ ಇಬ್ಬರು ಪತ್ನಿಯರಿದ್ದರೆಂದು ತಿಳಿದುಬರುತ್ತದೆ. ಅಲ್ಲದೇ ಈ ಮಾಳಲದೇವಿ ಜೈನಮತೀಯಳಾಗಿದ್ದರೆ, ಕಾಳಲದೇವಿಯು ಶೈವಮತೀಯಳಾಗಿದ್ದಳು[೩೮೦].

**ಎರಡನೆಯ ಚತ್ತಯ್ಯ:**

ಕೀರ್ತಿವರ್ಮನ ನಂತರ ಇವನು ಆಳ್ವಿಕೆಗೆ ಬಂದನು. ಇವನನ್ನು ಶಾಸನಗಳಲ್ಲಿ ಸಮಧಿಗತ ಪಂಚಮಹಾಶಬ್ದ ಮಹಾಮಂಡಳೇಶ್ವರ ಬನವಾಸಿ ಪುರವೇಶ್ವರ ಈಶ್ವರ ವರಪ್ರಸಾದ ಚಂಪಕಾಮೋದ ರುದ್ರಾವತಾರ, ಬುಧಜನಾಧಾರ, ಶತ್ರುನಿಕ್ಷತ್ರ, ಸಮರಪ್ರಚಂಡ, ಮುಳಿವರಗಂಡ ಎಂದು ಮುಂತಾಗಿ ಪ್ರಶಸ್ತಿಸಲಾಗಿದೆ. ಕೀರ್ತಿವರ್ಮದೇವನು ಬನವಾಸಿ ಪನ್ನಿಚ್ಛಾಸಿರವನ್ನು ಆಳುತ್ತಿರುವಾಗ ಆತನ ತಮ್ಮನಾದ ಚತ್ತಯ್ಯದೇವನು ಅದೇ ಕಾಲದಲ್ಲಿ ಬನವಾಸಿಯಲ್ಲಿ ರಾಜ್ಯವಾಳುತ್ತಿದ್ದನೆಂದು ತಿಳಿದುಬರುತ್ತದೆ[೩೮೧]. ಇದರಿಂದ ನಮಗೆ ಈತನು ಅಣ್ಣನಿಗೆ ಸಹಾಯಕನಾಗಿ ಬನವಾಸಿ ಪಟ್ಟಣದ ಆಡಳಿತಗಾರನಾಗಿದ್ದ ವಿಷಯ ತಿಳಿಯುತ್ತದೆ. ಮುಂದೆ ಕ್ರಿ.ಶ. ೧೦೭೨ರಲ್ಲಿ ಈತನು ಕಲ್ಯಾಣಿ ಚಾಲುಕ್ಯ ಎರಡನೆಯ ಸೋಮೇಶ್ವರನ ಮಹಾಮಂಡಳೇಶ್ವರನಾಗಿ ಬನವಾಸಿ-೧೨೦೦೦ವನ್ನು ಆಳುತ್ತಿದ್ದ ವಿಷಯ ತಿಳಿಯುತ್ತದೆ[೩೮೨]. ಇವನಾಳ್ವಿಕೆಯ ಇನ್ನೊಂದು ಪ್ರಮುಖ ವಿಷಯವೆಂದರೆ, ಈತನ ಸಹೋದರನಾದ ತೈಲಪದೇವನು ಇವನ ವಿರುದ್ಧ

ಬಂಡಾಯಕ್ಕೆದ್ದಿದ್ದು. ಇವನಾಳ್ವಿಕೆಯನ್ನು ಸಹಿಸದೆ ಬಹುಷಃ ಆತನು ಇವನ ಮೇಲೆ ಯುದ್ಧ ಕೈಕೊಂಡಿರಬೇಕು. ಶಾಸನದಲ್ಲಿ ತೈಲಪದೇವನು ಚತ್ತಯ್ಯದೇವನ ಮೇಲೆ ಏರಿಬಂದು ಸಿರಿಸೆಯ ಬಯಲಿನಲ್ಲಿ ಹೋರಾಟ ಮಾಡಿದ ವಿಷಯ ತಿಳಿಯುತ್ತದೆ[೩೮೩].

**ಎರಡನೆಯ ಶಾಂತಿವರ್ಮ:**

ಚತ್ತಯ್ಯನ ನಂತರ ಆಳ್ವಿಕೆಗೆ ಬಂದ ಈತನನ್ನು ಕುರಿತು ಕರಿಗುದರಿ ಶಾಸನ ಕದಂಬ ಕಂಠೀರವ ಬನವಾಸಿಪುರವರಾಧೀಶ್ವರ ಮಯೂರವರ್ಮ ಮಹಾಮಹೀಪಾಳ ಕುಳಭೂಷಣ ಪೆರ್ಮ್ಮಟ್ಟಿತೂರ್ಯ ನಿರ್ಘೋಷಣ ಶಾಖಾಚರೇಂದ್ರಧ್ವಜ ಸಿಂಹಲಾಂಛನ ಮಾರ್ಕ್ಕೊಳ್ವರಗಂಡ ಸಮರಮಾರ್ತಾಂಡ ಅಣ್ಣನ ಗಂಧವಾರಣ ಎಂದು ಪ್ರಶಸ್ತಿಸಿದೆ[೩೮೪]. ಈತನು ಚಾಲುಕ್ಯ ಸೋಮೇಶ್ವರ ಮತ್ತು ಆರನೆಯ ವಿಕ್ರಮಾದಿತ್ಯರ ಸಾಮಂತನಾಗಿದ್ದನು. ಕ್ರಿ.ಶ. ೧೦೭೯ರಲ್ಲಿ ಈತನು ಗೋವೆಯ ಕದಂಬ ಗೂವಲದೇವನಿಗೆ ಆಧೀನನಾಗಿ ಪಾನುಂಗಲ್ಲ-೫೦೦ ಮತ್ತು ಕೊಂತಕೂಲಿ-೩೦ಗಳನ್ನು ಆಳುತ್ತಿದ್ದನು[೩೮೫]. ನಾಗರಖಂಡ ಕದಂಬರ ಬೊಪ್ಪರಸನಿಗೆ ತನ್ನ ಮಗಳು ಶ್ರೀದೇವಿಯನ್ನು ಕೊಟ್ಟು ಅವರೊಂದಿಗೆ ಬಾಂಧವ್ಯ ಬೆಳೆಸಿದ್ದನು[೩೮೬].

**ಎರಡನೆಯ ತೈಲಪದೇವ:**

ಶಾಂತಿವರ್ಮನ ನಂತರ ಅಧಿಕಾರಕ್ಕೆ ಬಂದ ಎರಡನೆಯ ತೈಲಪದೇವನು ಕಲ್ಯಾಣ ಚಾಲುಕ್ಯರ ಮಹಾಮಂಡಳೇಶ್ವರರಲ್ಲಿಯೇ ಅಗ್ರಗಣ್ಯನಾಗಿದ್ದಾನೆ. ಈತ ಆರನೆಯ ವಿಕ್ರಮಾದಿತ್ಯನ ಮಹಾಮಂಡಳೇಶ್ವರನಾಗಿದ್ದನು. ಇವನನ್ನು ಶಾಸನಗಳಲ್ಲಿ ಜಯಂತಿಪುರೇಶ ಮಧುಕೇಶ ಜಗಜನವಂದ್ಯ, ಮಧುಕೇಶಪದ ಸರೋಜಾರ್ಚನ, ಸಮರಲೋಲ ಎಂದು ಕರೆಯಲಾಗಿದೆ. ಇವನು ಶಾಂತಭೂಪಾಳ ಮತ್ತು ಸಿರಿಯಾದೇವಿಯರ ಮಗನೆಂದು ಲಕ್ಷ್ಮೇಶ್ವರ ಶಾಸನದಲ್ಲಿ ಉಲ್ಲೇಖಿಸಲಾಗಿದೆ[೩೮೭]. ಕ್ರಿ.ಶ. ೧೦೮೨ರ ಶೇಷಗಿರಿ ದಾಖಲೆಯಲ್ಲಿ ಶಾಂತಿವರ್ಮನ ಮಗ ತೈಲಪನ ಉಲ್ಲೇಖವಿದ್ದು ಈತ ಬನವಾಸಿ ಹಾಗೂ ಹಾನುಗಲ್ಲ ಪ್ರಾಂತ್ಯಗಳ ಅಧಿಕಾರಿಯಾಗಿದ್ದನೆಂದು ತಿಳಿಸುತ್ತದೆ[೩೮೮]. ಕ್ರಿ.ಶ. ೧೦೮೯-೯೦ರ ವೇಳೆಗೆ ಈತನು ತಂದೆ ಶಾಂತಿವರ್ಮನ ಉತ್ತರಾಧಿಕಾರಿಯಾಗಿ ಅಧಿಕಾರ ಕೈಕೊಂಡಿದ್ದು ತಿಳಿದುಬರುತ್ತದೆ[೩೮೯]. ಮಹಾಮಂಡಳೇಶ್ವರ ಎರಡನೆಯ ತೈಲಪದೇವನು ಚಕ್ರವರ್ತಿ ವಿಕ್ರಮಾದಿತ್ಯನ ಪಾದಪದ್ಮೋಪಜೀವಿಯಾಗಿ ಪಾನುಂಗಲ್ಲ-೫೦೦ರನ್ನು ಉಭಯಸ್ವಾಮ್ಯದಿಂದ ಆಳುತ್ತಿದ್ದುದಾಗಿ ನಿಡಗುಂದಿ ಶಾಸನ ತಿಳಿಸಿದೆ[೩೯೦]. ಲಕ್ಷ್ಮೇಶ್ವರ ಶಾಸನದಲ್ಲಿ ಇದೇ ಪಾನುಂಗಲ್ಲ-೫೦೦ರನ್ನು ಪಾನುಂಗಲ್ಲ ನೆಲೆವೀಡಿನಿಂದ ತ್ರಿಭೋಗವಾಗಿ ಆಳುತ್ತಿದ್ದನೆಂದು ತಿಳಿದುಬರುತ್ತದೆ[೩೯೧]. ನಂತರದಲ್ಲಿ ಈತನು ಕ್ರಿ.ಶ. ೧೧೦೮-೦೯ರ ಸುಮಾರಿಗೆ ಈತನು ಬನವಾಸಿ-೧೨೦೦೦, ಪಾನುಂಗಲ್ಲ-೫೦೦, ಕೊನ್ತಕುಳಿ-೩೦ಗಳನ್ನು ಆಳುತ್ತಿದ್ದನು[೩೯೨]. ಇದನ್ನು ಗಮನಿಸಿದರೆ ಈ ವೇಳೆಗೆ ಈತನಿಗೆ ಬನವಾಸಿ-೧೨೦೦೦ರ ಅಧಿಕಾರ ದೊರೆತಿದ್ದಂತೆ ತೋರುತ್ತದೆ.

ಇದೇ ಸಮಯದಲ್ಲಿ ಆರನೆಯ ವಿಕ್ರಮಾದಿತ್ಯ ಹೊಯ್ಸಳರ ಪ್ರಭಾವವನ್ನು ಹತ್ತಿಕ್ಕಲು ತನ್ನೆಲ್ಲ ಸಾಮಂತರನ್ನು ಒಗ್ಗೂಡಿಸುವ ಕಾರ್ಯದಲ್ಲಿ ತೊಡಗಿದ್ದ. ಆದರ ಫಲವಾಗಿ ಕೆಲ ಸಾಮಂತರಾಜರುಗಳಿಗೆ ವಿಶೇಷ ಪ್ರೋತ್ಸಾಹ ದೊರೆಯಿತು. ಇದರಿಂದಾಗಿ ಕ್ರಿ.ಶ. ೧೧೧೬ರಲ್ಲಿ ಸಾಂತಳಿಗೆ-೧೦೦೦ ಕೂಡ ಈತನಾಳ್ವಿಕೆಗೆ ಒಳಪಟ್ಟಿತ್ತು[೩೯೩]. ಚಾಲುಕ್ಯರಿಂದ ಸ್ವತಂತ್ರನಾಗಲು ಇಚ್ಛಿಸಿದ್ದ ವಿಷ್ಣುವರ್ಧನನು, ಅವರ ಅನೇಕ ಪ್ರದೇಶಗಳನ್ನು ಒಂದೊಂದಾಗಿ ವಶಪಡಿಸಿಕೊಳ್ಳುವದರಲ್ಲಿ ತೊಡಗಿದನು. ಇದರಲ್ಲಿ ಅವರ ಅನೇಕ ಸಾಮಂತರುಗಳನ್ನು ತನ್ನ ಆಧೀನಗೊಳಿಸಿಕೊಳ್ಳುವಲ್ಲಿಯೂ ಯಶಸ್ವಿಯಾದನು. ಹೀಗಾಗಿ ಚಾಲುಕ್ಯರ ಸಾಮಂತರಾಗಿದ್ದ ಹಾನಗಲ್ಲ ಕದಂಬರ ಮೇಲೆ ಈತನು ಕ್ರಿ.ಶ. ೧೧೧೮ರಿಂದ ೧೧೩೮ರ ವರೆಗೆ ಅನೇಕ ಯುದ್ಧಗಳನ್ನು ಕೈಕೊಂಡದ್ದು ತಿಳಿಯುತ್ತದೆ. ಕ್ರಿ.ಶ. ೧೧೧೮ ರಿಂದ ಕದಂಬರಾಜ್ಯದ ಮೇಲೆ ವಿಷ್ಣುವರ್ಧನನು ಆಕ್ರಮಣ ಮಾಡಿರಲು, ಕ್ರಿ.ಶ. ೧೧೨೨ರಲ್ಲಿ ಚಾಲುಕ್ಯರು ಈತನನ್ನು ಸೋಲಿಸಿ ಹಿಂದಕ್ಕಟ್ಟಿದ್ದರು. ನಂತರ ವಿಷ್ಣುವರ್ಧನನ ಆದೇಶದ ಮೇರೆಗೆ ಕ್ರಿ.ಶ. ೧೧೨೫ರಲ್ಲಿ ಬಿದನೂರಿನ ಮರುವನಹಿಸ ಎಂಬುವನು ಹಾನಗಲ್ಲ ಕೋಟೆಗೆ ಧಾಳಿಯಿಟ್ಟಿದ್ದ[೩೯೪]. ಅಲ್ಲದೇ ಅದೇ ವರ್ಷ ವಿಷ್ಣುವರ್ಧನನೇ ಸ್ವತಃ ಹಾನಗಲ್ಲ ಕೋಟೆಯನ್ನು ಮುತ್ತಿದ್ದ ವಿಷಯ ತಿಳಿಯುತ್ತದೆ. ಕ್ರಿ.ಶ. ೧೧೩೦ರಲ್ಲಿ ಮತ್ತೆ ವಿಷ್ಣುವರ್ಧನ ಹಾನಗಲ್ಲಿನ ಮೇಲೆ ಮತ್ತೊಮ್ಮೆ ದಂಡೆತ್ತಿ ಬಂದ. ಆದರೆ ಧೀರ್ಘಕಾಲ ಮುತ್ತಿಗೆ ಹಾಕಿದರೂ ಹಾನಗಲ್ಲನ್ನು ವಶಪಡಿಸಿಕೊಳ್ಳಲಾಗಿಲಿಲ್ಲ. ಅದಕ್ಕಾಗಿ ಈತನು ಬನವಾಸಿಯನ್ನು ಮೊದಲು ಹಿಡಿಯಲು ಉಪಾಯ ಹಾಕಿದ. ಅದರ ಫಲವಾಗಿ ಬಂಕಾಪೂರದಲ್ಲಿ ಹೊಯ್ಸಳರಿಗೂ ಕದಂಬರಿಗೂ ಸಂಗ್ರಾಮ ಜರುಗಿತು[೩೯೫]. ಬಲಾಢ್ಯರಾದ ಹೊಯ್ಸಳರ ಎದುರು ಹಾನಗಲ್ಲ ಕದಂಬ ಪಡೆ ನಿಲ್ಲದಾಯಿತು. ಈ ಘನಘೋರ ಹೋರಾಟದಲ್ಲಿ ವಿಷ್ಣುವರ್ಧನನು ತೈಲಪನನ್ನು ಸೆರೆಹಿಡಿದು ಅವನ ಶಿರಚ್ಛೇದನಗೊಳಿಸಿದನೆಂದು ತಿಳಿದುಬರುತ್ತದೆ[೩೯೬]. ಈ ಘಟನೆ ನಡೆದದ್ದು ಚಾಲುಕ್ಯ ವಿಕ್ರಮ ವರ್ಷದ ಸಾಧಾರಣ ಕಾರ್ತಿಕ ಶುದ್ಧ ಸೋಮವಾರ ಅಂದರೆ ಕ್ರಿ.ಶ. ೧೧೩೦ರ ಅಕ್ಟೋಬರ ೬ರಂದು[೩೯೭].

ಪಾಂಡ್ಯ ರಾಜಕುಮಾರಿಯರಾದ ಬಾಚಲದೇವಿ ಮತ್ತು ಚಾಮಲದೇವಿಯರು ಈತನ ಪತ್ನಿಯರಾಗಿದ್ದರೆಂದು ತಿಳಿದುಬರುತ್ತದೆ[೩೯೮]. ಈತನಿಗೆ ಮಯೂರವರ್ಮ, ಮಲ್ಲಿಕಾರ್ಜುನ ಮತ್ತು ಮೂರನೆಯ ತೈಲಪ ಎಂಬ ಮೂರುಜನ ಮಕ್ಕಳಿದ್ದರು.

**ಎರಡನೆಯ ಮಯೂರವರ್ಮ:**

ಎರಡನೆಯ ತೈಲನ ನಂತರ ಆತನ ಹಿರಿಯ ಮಗನಾದ ಎರಡನೆಯ ಮಯೂರವರ್ಮನು ಕ್ರಿ.ಶ. ೧೧೩೦ರಲ್ಲಿ ಆಳ್ವಿಕೆಗೆ ಬಂದನು[೩೯೯]. ಕ್ರಿ.ಶ. ೧೧೨೫ರಲ್ಲಿ ಈತನು ಬನವಾಸಿ ಪನ್ನಿರ್ಚ್ಛಾಸಿರವನ್ನು ಪಾನುಗಲ್ಲಿನಿಂದ ಆಳುತ್ತಿರುವಾಗ, ನರೆಗಲ್‌ದ ಮೂಲಸ್ಥಾನದೇವರಿಗೆ ದಾನ ನೀಡಿದ್ದನ್ನು ಶಾಸನವೊಂದು ವಿವರಿಸುತ್ತದೆ[೪೦೦]. ಇದರಿಂದ ತಂದೆಯ ಕಾಲದಲ್ಲಿ ಅವನಿಗೆ ಆಡಳಿತದಲ್ಲಿ ಮಯೂರವರ್ಮನು ಸಹಾಯಕನಾಗಿದ್ದಿರಬಹುದು. ಕ್ರಿ.ಶ. ೧೧೩೧ರಲ್ಲಿ ಈತ ಚಾಲುಕ್ಯ

ಮೂರನೆಯ ಸೋಮೇಶ್ವರನ ಮಹಾಮಂಡಳೇಶ್ವರನಾಗಿ ಬನವಾಸಿ-೧೨೦೦೦, ಪಾನುಂಗಲ್ಲ-೫೦೦ ಮತ್ತು ಸಾಂತಳಿಗೆ-೧೦೦೦ ವಿಭಾಗಗಳ ಆಡಳಿತವನ್ನು ನಿರ್ವಹಿಸುತ್ತಿದ್ದುದು ತಿಳಿದುಬರುತ್ತದೆ[೪೦೧]. ಕ್ರಿ.ಶ. ೧೧೩೧ರ ಹಾವಣಿಗೆಯ ಶಾಸನವೊಂದು ಈತನು ಬನವಾಸಿ-೧೨೦೦೦ನ್ನು ಆಳುತ್ತಿದ್ದುದಾಗಿ ಉಲ್ಲೇಖಿಸಿದರೆ[೪೦೨], ಅದೇ ವರ್ಷದ ಹಿರೇಕೆರೂರಿನ ಶಾಸನದಲ್ಲಿ ಈತನು ಬನವಾಸಿ-೧೨೦೦೦, ಪಾನುಂಗಲ್ಲ-೫೦೦, ಸಾಂತಳಿಗೆ-೧೦೦೦ ಹಾಗೂ ಹಲಸಿಗೆ-೧೨೦೦೦ ವಿಭಾಗಗಳನ್ನು ಆಳುತ್ತಿದ್ದುದಾಗಿ ಉಲ್ಲೇಖಿಸಲಾಗಿದೆ[೪೦೩]. ಆದರೆ ಗೋವೆಯ ಕದಂಬರಿಗೆ ಸೇರಿದ್ದ ಹಲಸಿಗೆ-೧೨೦೦೦ ಪ್ರದೇಶವು ಈ ಕಾಲಕ್ಕೆ ಇವನ ಆಳ್ವಿಕೆಗೆ ಹೇಗೆ ಬಂದಿತೆಂಬ ವಿಷಯ ಮಾತ್ರ ಸ್ಪಷ್ಟವಾಗುವದಿಲ್ಲ.

**ಮಲ್ಲಿಕಾರ್ಜುನ:**

ಎರಡನೆಯ ಮಯೂರವರ್ಮನ ನಂತರ ಆಳ್ವಿಕೆಗೆ ಬಂದವನು ಅವನ ಸಹೋದರನಾದ ಮಲ್ಲಿಕಾರ್ಜುನ. ಕ್ರಿ.ಶ. ೧೧೩೨ರ ಸುಮಾರಿಗೆ ಈತನು ಆಳ್ವಿಕೆಗೆ ಬಂದನು. ಈತನು ಚಾಲುಕ್ಯ ಮೂರನೆಯ ಸೋಮೇಶ್ವರನ ಮಹಾಮಂಡಳೇಶ್ವರನಾಗಿ ಆಳ್ವಿಕೆ ನಡೆಸಿದ್ದಾನೆ. ಮಲ್ಲಿಕಾರ್ಜುನನ ಕಾಲದಲ್ಲಿ ಕ್ರಿ.ಶ. ೧೧೩೫ರಲ್ಲಿ ಹಾನಗಲ್ಲಿನ ಮೇಲೆ ಹೊಯ್ಸಳರು ದಂಡಯಾತ್ರೆ ಕೈಕೊಂಡಿದ್ದ ವಿಷಯ ತಿಳಿದುಬರುತ್ತದೆ. ಆಗ ಈತನು ಬನವಾಸಿ-೧೨೦೦೦ ಮತ್ತು ಪಾನುಂಗಲ್ಲ-೫೦೦ ವಿಭಾಗಗಳನ್ನು ಆಳುತ್ತಿದ್ದನು[೪೦೪]. ಕ್ರಿ.ಶ. ೧೧೩೭-೩೮ರ ಗಣಜೂರ ಶಾಸನ ಹೇಳುವಂತೆ ಚಾಲುಕ್ಯ ಮೂರನೆಯ ಸೋಮೇಶ್ವರನ ಮಹಾಮಂಡಳೇಶ್ವರನಾದ ಈತನು ಲೊಕ್ಕಿಗುಂಡಿಯ ಕೋಟೆಯನ್ನು ಮುತ್ತಿದ್ದ ವಿಷಯ ತಿಳಿಯುತ್ತದೆ[೪೦೫]. ಇದರಿಂದ ಸ್ಪಷ್ಟವಾಗುವದೇನೆಂದರೆ, ಈತನ ಕಾಲದಲ್ಲಿ ಮೇಲಿಂದ ಮೇಲೆ ಹೊಯ್ಸಳರೊಡನೆ ನಿರಂತರ ಕಾಳಗಗಳು ನಡೆದಿದ್ದವು.

**ಮೂರನೆಯ ತೈಲಪ:**

ಮಲ್ಲಿಕಾರ್ಜುನನ ನಂತರ ಈತನು ಕ್ರಿ.ಶ. ೧೧೪೬ರಲ್ಲಿ ಆಳ್ವಿಕೆಗೆ ಬಂದನು. ಈತನು ಕ್ರಿ.ಶ. ೧೧೪೬ರಲ್ಲಿ ಪಾನುಂಗಲ್ಲ-೫೦೦ ವಿಭಾಗವನ್ನು ಆಳುತ್ತಿದ್ದುದಾಗಿ ಉಲ್ಲೇಖಿಸಲ್ಪಟ್ಟಿದ್ದಾನೆ. ಅಲ್ಲದೇ ಈತನ ಆಳ್ವಿಕೆಯ ಕಾಲದಲ್ಲಿ ಹೊಯ್ಸಳ, ಚಾಲುಕ್ಯ, ಕಲಚೂರಿ ಮತ್ತು ಸೇವುಣರ ಮಧ್ಯೆ ಸಾಮ್ರಾಜ್ಯಕ್ಕಾಗಿ ನಿರಂತರವಾಗಿ ಕಾಳಗಗಳು ನಡೆಯುತ್ತಿದ್ದವು. ಇದರಿಂದಾಗಿ ಹಾನಗಲ್ ಕದಂಬರೂ ಕೂಡ ತುಂಬಾ ತೊಂದರೆಗಳನ್ನು ಎದುರಿಸಬೇಕಾಯ್ತು.

**ಎರಡನೆಯ ಕೀರ್ತಿದೇವ:**

ಮೂರನೆಯ ತೈಲನ ನಂತರ ಆತನ ಮಗ ಎರಡನೆಯ ಕೀರ್ತಿದೇವನು ಆಳ್ವಿಕೆಗೆ ಬಂದನು. ಈತನ ಆಳ್ವಿಕೆಯ ಕಾಲದಲ್ಲಿ ಚಾಲುಕ್ಯರನ್ನು ಬದಿಗೊತ್ತಿ ಕಲಚೂರಿಗಳು ಕಲ್ಯಾಣದ ಚಕ್ರವರ್ತಿಗಳಾಗಿದ್ದರಿಂದ, ಕಲ್ಯಾಣ ಚಾಲುಕ್ಯರ ಸಾಮಂತರಾಗಿದ್ದ ಕದಂಬರು ಕಲಚೂರಿಗಳ ಆಧೀನತ್ವವನ್ನು ಒಪ್ಪಿಕೊಳ್ಳುವಂತಾಯ್ತು. ಅದರಂತೆ ಕೀರ್ತಿದೇವನು ಕ್ರಿ.ಶ.

೧೧೬೩ರಲ್ಲಿ ಬನವಾಸಿ ಹಾಗೂ ಹಾನಗಲ್ಲಗಳನ್ನು ಆಳುತ್ತಿದ್ದಂತೆ ತಿಳಿದುಬರುತ್ತದೆ. ಕ್ರಿ.ಶ. ೧೧೭೪ರ ಶಾಸನವೊಂದರಿಂದ ಕಲಚೂರಿ ರಾಯಮುರಾರಿ ಸೋವಿದೇವನ ಸಾಮಂತನಾಗಿ ಈತನು ಬನವಾಸಿ ಮತ್ತು ಹಾನಗಲ್ಲುಗಳ ಆಳ್ವಿಕೆ ಕೈಕೊಂಡಿದ್ದ ವಿಷಯ ತಿಳಿಯುತ್ತದೆ[೯೬]. ಕ್ರಿ.ಶ. ೧೧೬೫ರಲ್ಲಿ ಮಹಾಮಂಡಳೇಶ್ವರ ಕೀರ್ತಿದೇವರಸನು ಜಗದೇವರಸನೆಂಬುವವನ ಮೇಲೆ ದಂಡು ಎದ್ದಿದ್ದನ್ನು ಮೂಡಿ ಶಾಸನ ಉಲ್ಲೇಖಿಸಿದೆ[೯೭]. ಕ್ರಿ.ಶ. ೧೧೬೫ರ ಹಿರೇಇಡಗೋಡು ಶಾಸನ ಇವನು ಬನವಾಸಿ-೧೨೦೦೦ ವಿಭಾಗವನ್ನು ಆಳುತ್ತಿದ್ದನೆಂದು ಉಲ್ಲೇಖಿಸಿದೆ[೯೮]. ದ್ಯಾವನಹಳ್ಳಿಯ ದಿನಾಂಕವಿಲ್ಲದ ವೀರಗಲ್ಲೊಂದು ಕೀರ್ತಿದೇವರಸ ಮತ್ತು ಜಗದೇವನ ಧಾಳಿಯನ್ನು ಕುರಿತು ಹೇಳಿದೆ[೯೯]. ಅಲ್ಲದೇ ಮಂಡಳೇಶ್ವರ ಕೀರ್ತಿದೇವನು ಗಿಣ್ಣಲಗುಂಡಿಯ ಕೋಟೆಯನ್ನು ಮುತ್ತಿ ಧಾಳಿಯಿಟ್ಟ ವಿವರ ಶಾಸನವೊಂದರಲ್ಲಿದೆ[೧೦೦]. ಭೈರೇಕೊಪ್ಪದ ಶಾಸನವು ಮಹಾಮಂಡಳೇಶ್ವರ ಕೀರ್ತಿದೇವ ಮತ್ತು ಮಹಾಪ್ರಧಾನ ಕುಮಾರ ಮಣ್ಡಳಿಕ ಬಮ್ಮರಸರು ಗುತ್ತಿಯನ್ನು ಮುತ್ತಿದ ವಿಷಯ ತಿಳಿಸುತ್ತದೆ[೧೦೧]. ಹೀಗೆ ಈತನ ಕಾಲದಲ್ಲಿ ನಡೆದ ಅನೇಕ ಕಾಳಗಗಳನ್ನು ಶಾಸನಗಳು ಮತ್ತು ವೀರಗಲ್ಲುಗಳು ತಿಳಿಸಿದರೂ ಕೂಡ, ಆ ಕಾಳಗಗಳು ಯಾರೊಡನೆ? ಯಾತಕ್ಕಾಗಿ? ನಡೆದವೆಂಬ ವಿವರಗಳು ತಿಳಿದುಬರುವದಿಲ್ಲ.

**ಮಾವುಲಿ ತೈಲ:**

ಎರಡನೆಯ ಕೀರ್ತಿದೇವನ ನಂತರ ಮಾವುಲಿ ತೈಲನು ಆಳ್ವಿಕೆಗೆ ಬಂದನು. ಈತನು ಕ್ರಿ.ಶ. ೧೧೫೧-೫೨ರಲ್ಲಿ ನೆರೆಯಂಗಲ್ಲಿನಲ್ಲಿ ಆಳ್ವಿಕೆ ನಡೆಸುತ್ತಿದ್ದುದನ್ನು ಶಾಸನಗಳು ಸ್ಪಷ್ಟಪಡಿಸುತ್ತವೆ[೧೦೨]. ಈತನು ಕದಂಬ ಎರಡನೆಯ ತೈಲನ ಮೊಮ್ಮಗನಾಗಿದ್ದನೆಂದು ಶಾಸನವೊಂದರಿಂದ ತಿಳಿದುಬರುತ್ತದೆ[೧೦೩]. ಆದರೆ ಈತನಾಳ್ವಿಕೆಯ ಕಾಲದ ಹೆಚ್ಚಿನ ವಿವರಗಳೇನೂ ನಮಗೆ ದೊರೆತಿಲ್ಲ.

**ಕಾಮದೇವ:**

ಕದಂಬ ತೈಲಪನ ಹಿರಿಯ ಮಗನಾದ ಕಾಮದೇವನು ಕ್ರಿ.ಶ. ೧೧೮೧-೮೨ರ ಸುಮಾರಿಗೆ ಆಳ್ವಿಕೆಗೆ ಬಂದಿರಬೇಕು. ಈತ ಚಾಲುಕ್ಯ ನಾಲ್ಕನೆಯ ಸೋಮೇಶ್ವರನ ಮಂಡಳೇಶ್ವರನಾಗಿ ಬನವಾಸಿ-೧೨೦೦೦, ಪಾನುಂಗಲ್ಲು-೫೦೦, ಪುಲಿಗೆರೆ-೩೦೦ ನಾಡುಗಳನ್ನು ಆಳುತ್ತಿದ್ದನೆಂದೂ, ಮಲೆನಾಡು, ತುಳುವನಾಡು, ಕೊಂಕಣ ಮತ್ತು ಪಶ್ಚಿಮಘಟ್ಟದ ಪ್ರದೇಶಗಳನ್ನು ತನ್ನ ಕೈವಶಪಡಿಸಿಕೊಂಡಿದ್ದನೆಂದು ತಿಳಿದುಬರುತ್ತದೆ[೧೦೪]. ತಾರಕೇಶ್ವರದ ವೀರಗಲ್ಲಿನಿಂದ ಕದಂಬ ಕಾಮದೇವನು ಪಾನುಂಗಲ್ಲ-೫೦೦ ವಿಭಾಗವನ್ನು ಆಳುತ್ತಿರುವಾಗ ಹೊಯ್ಸಳ ವೀರಬಲ್ಲಾಳನು ಅವನ ಮೇಲೆ ದಂಡೆತ್ತಿ ಬಂದ ವಿಷಯ ಸ್ಪಷ್ಟವಾಗುತ್ತದೆ[೧೦೫]. ಅಲ್ಲದೇ ಕ್ರಿ.ಶ. ೧೧೯೬ರ ವೀರಗಲ್ಲಿನಿಂದ ಹೊಯ್ಸಳದೊರೆ ಎರಡನೆಯ ವೀರಬಲ್ಲಾಳನು ಹಾನಗಲ್ಲಿನ ಪಶ್ಚಿಮ ಭಾಗದಲ್ಲಿರುವ ಆನೆಕೆರೆ ತಟಾಕದ ಬಳಿಯಲ್ಲಿ ಬೀಡುಬಿಟ್ಟು ಪಾನುಂಗಲ್ಲ ಕೋಟೆಗೆ ಮುತ್ತಿಗೆ ಹಾಕಿದ್ದನ್ನು ಕಾಣಬಹುದು[೧೦೬]. ಮುಂದೆ ಮತ್ತೊಮ್ಮೆ ಹೊಯ್ಸಳ ವೀರಬಲ್ಲಾಳನು ಇವನ ಮೇಲೆ

ಧಾಳಿಯಿಟ್ಟು ಈತನನ್ನು ಸಂಪೂರ್ಣವಾಗಿ ಸೋಲಿಸಿದನೆಂದು ಕಂಡುಬರುತ್ತದೆ[೧೧೭]. ಆದರೆ ಮುಂದೆ ಕ್ರಿ.ಶ. ೧೨೦೩ರಲ್ಲಿ ಕಾಮದೇವ ಮತ್ತೆ ಹೊಯ್ಸಳರ ಮೇಲೆ ಧಾಳಿಯಿಟ್ಟು ತನ್ನ ಸೋಲಿನ ಸೇಡು ತೀರಿಸಿಕೊಳ್ಳಲು ಹವಣಿಸಿದ ಆದರೆ ಜಯ ಯಾರಿಗಾಯ್ತೆಂದು ತಿಳಿದುಬರುವದಿಲ್ಲ. ನಾಗರಖಂಡದ ಮಾಂಡಲೀಕ ಸೋಯಿದೇವನು ಕದಂಬರ ಸಾಮಂತನಾಗಿ ಆಳ್ವಿಕೆ ನಡೆಸುತ್ತಿದ್ದು, ಕದಂಬ ದೊರೆ ಶಾಂತಿವರ್ಮನ ಕಾಲದಲ್ಲಿ ಅವನ ಮಗಳು ಶ್ರೀದೇವಿಯನ್ನು ವಿವಾಹವಾಗಿದ್ದನೆಂದು ತಿಳಿದುಬರುತ್ತದೆ[೧೧೮]. ಆದರೆ ಈ ಸುಮಧುರ ಬಾಂಧವ್ಯ ಮೂರನೆಯ ತೈಲಪನ ಕಾಲದಲ್ಲಿ ಹದಗೆಟ್ಟಿತ್ತೆಂದು ತಿಳಿಯುತ್ತದೆ. ಆಗ ತೈಲಪನು ನಾಗರಖಂಡದಲ್ಲಿನ ಹಿರೇಚೌಟಿಯ ತುರುಗಳನ್ನು ಸೆರೆಹಿಡಿದಿದ್ದ ವಿಷಯ ಅಲ್ಲಿನ ತುರುಗೋಳ್ ಶಾಸನವೊಂದರಿಂದ ತಿಳಿಯುತ್ತದೆ. ಅಲ್ಲದೇ ಕಾಮದೇವನು ನಾಗರಖಂಡದ ಸಾಮಂತರಾದ ಕೋಣವತ್ತಿಯ ಸಾಮಂತ ಅರಸರುಗಳ ಮೇಲೆ ಧಾಳಿಯಿಟ್ಟ ವಿಷಯ ತಿಳಿದುಬರುತ್ತದೆ[೧೧೯]. ಕಾಮದೇವನಿಗೆ ಕಾಳಲದೇವಿ ಎಂಬ ರಾಣಿಯಿದ್ದಳಲ್ಲದೇ, ಇವನಿಗೆ ಬರ್ಮ, ಸೋಮ ಮತ್ತು ಮಲ್ಲ ಎಂಬ ಮೂವರು ಮಕ್ಕಳಿದ್ದರೆಂದು ತಿಳಿದುಬರುತ್ತದೆ[೧೨೦]. ಇವರಲ್ಲಿ ಬರ್ಮನು ಅಕಾಲಮರಣಕ್ಕೆ ತುತ್ತಾದ ಕಾರಣ ನಂತರ ಸೋವಿದೇವನು ಆಳ್ವಿಕೆ ನಡೆಸಿದನು.

**ಸೋಯಿದೇವ:**

ಕ್ರಿ.ಶ. ೧೧೮೦ರ ಹಾನಗಲ್ಲ ಶಾಸನ ಕಾಮದೇವನ ನಂತರ ಕೀರ್ತಿದೇವನೆಂಬುವನು ಆಳ್ವಿಕೆಗೆ ಬಂದದ್ದನ್ನು ತಿಳಿಸುತ್ತದೆ. ಅದೇ ಶಾಸನದಲ್ಲಿ ಕದಂಬ ಮನೆತನದ ವೀರಸೋಯಿದೇವನೆಂಬುವನೂ ಕೂಡ ಕಾಣಿಸಿಕೊಳ್ಳುತ್ತಾನೆ[೧೨೧]. ಶಾಸನದಲ್ಲಿ ಇವನಾಳ್ವಿಕೆಯ ಐದನೆಯ ವರ್ಷವೆಂದು ಉಲ್ಲೇಖವಿರುವದರಿಂದ, ಈತನು ಕ್ರಿ.ಶ. ೧೧೭೫-೭೬ರ ವೇಳೆಗೆ ಆಳ್ವಿಕೆಯನ್ನಾರಂಭಿಸಿರಬೇಕೆಂದು ಊಹಿಸಬಹುದಾಗಿದೆ. ಅಲ್ಲದೇ ಕ್ರಿ.ಶ. ೧೧೭೭-೭೮ರ ಆಂದಲಗಿ ಶಾಸನವು ಈತನಾಳ್ವಿಕೆಯ ಮೂರನೆಯ ವರ್ಷವನ್ನು ಸೂಚಿಸುತ್ತಿದ್ದು ಇವನಿಗೆ ಕದಂಬ ಚಕ್ರವರ್ತಿ ಎಂದು ಸಂಬೋಧಿಸಿದೆ[೧೨೨]. ಕುಂತಳವೆನಿಪ್ಪ ಪಾಂತಿಪುರ ಬಳಿಯ ಬಾಡವ್ವೆನೂರಮುಮಂ ಸನ್ತಸುಖ ರಾಜ್ಯಂಗೆಯ್ಯೆ ನಿರಂತದಿ ಗುತಿಯಲಿ ಸೋಮನ್ನಿಪಾಳನು ಎಂದು ಅಕ್ಕಿ ಆಲೂರಿನ ಶಾಸನ ಉಲ್ಲೇಖಿಸಿದೆ[೧೨೩]. ಸೊರಬ ತಾಲೂಕಿನ ಬೆಣ್ಣೆಗೆರೆ ಶಾಸನದಲ್ಲಿ ಈತನು ಕಲಚೂರಿ ಬಿಜ್ಜಳನ ಮಹಾಮಂಡಳೇಶ್ವರನಾಗಿ ಬನವಾಸಿ ಪನ್ನಿರ್ಚ್ಛಾಸಿರವನ್ನಾಳುತ್ತಿದ್ದ ಉಲ್ಲೇಖ ಸಿಗುತ್ತದೆ[೧೨೪]. ಸೊರಬ ತಾಲೂಕಿನ ಹುರುಳಿ ಗ್ರಾಮದಲ್ಲಿ ದೊರೆತ ಶಾಸನ ಈತನು ಬನವಾಸಿ ಪನ್ನಿರ್ಚ್ಛಾಸಿರವನ್ನು ಆಳುತ್ತಿದ್ದು, ಈತನಿಗೆ ಕದಂಬ ಸೋಯಿದೇವ ಭೂಪತಿ ತಿಳಕ ಎಂದು ಕರೆದಿದೆಯಲ್ಲದೇ, ಈತನು ಮಹಾಪ್ರತಾಪಿಯೆಂದೂ ಬಣ್ಣಿಸಿದೆ[೧೨೫]. ಆದರೆ ಕ್ರಿ.ಶ. ೧೧೭೫ರಲ್ಲಿ ಆಳ್ವಿಕೆಗೆ ಬಂದ ಈತನು ನಂತರ ಕಾಮದೇವನ ಜೊತೆಜೊತೆಗೆ ಆಳ್ವಿಕೆಯನ್ನು ನಡೆಸಿದ್ದನ್ನು ಕಾಣಬಹುದು. ಆದರೆ ಈತನು ಕಾಮದೇವನ ಮಗನೋ? ಸಹೋದರನೋ? ಅಥವಾ ಬೇರೆ ಯಾರೋ? ಎಂಬ ವಿವರಗಳು ಸ್ಪಷ್ಟವಾಗುವದಿಲ್ಲ.

**ಮಲ್ಲಿದೇವ:**

ಕಾಮದೇವನ ಮಗನಾದ ಮಲ್ಲಿದೇವನು ನಂತರ ಆಳ್ವಿಕೆಗೆ ಬಂದವನಾಗಿದ್ದಾನೆ. ಈತನು ಕ್ರಿ.ಶ. ೧೨೩೧ರಲ್ಲಿ ಬನವಾಸಿ ಮತ್ತು ಹಾನುಗಲ್ಲುಗಳನ್ನು ಆಳುತ್ತಿದ್ದುದಾಗಿ ಶಾಸನವೊಂದರಿಂದ ತಿಳಿದುಬರುತ್ತದೆ. ಅಲ್ಲದೇ ಆ ಶಾಸನವು ಈತನಾಳ್ವಿಕೆಯ ೧೫ನೆಯ ವರ್ಷದಲ್ಲಿ ಹೊರಡಿಸಿದುದಾಗಿದೆ[೧೨೬]. ಇದರಿಂದಾಗಿ ಈತನು ತಂದೆಯ ಕಾಲದಲ್ಲಿ ಆಡಳಿತದಲ್ಲಿ ಭಾಗವಹಿಸುತ್ತಿದ್ದನೆಂದು ತಿಳಿದುಬರುತ್ತದೆ. ಹಾನಗಲ್ಲಿನ ವೀರಗಲ್ಲೊಂದರ ಪ್ರಕಾರ ಇವನನ್ನು ಮಹಾಮಂಡಳೇಶ್ವರ ಬನವಾಸಿಪುರವರಾಧೀಶ್ವರ ಜಯಂತೀ ಮಧುಕೇಶ್ವರ ದೇವಲಬ್ಧವರಪ್ರಸಾದ ಸಾಹಸೋತ್ತುಂಗ ಸತ್ಯಾಶ್ರಯ ಶರಣಾಗತ ವಜ್ರಪ್ರಕಾರ ಕಾದಂಬ ಕುಳಕಮಳ ಮಾರ್ತ್ತಾಂಡ ಕಲಿಗಳಂಕುಸಂ ಶ್ರೀವೀರಮಲ್ಲಿದೇವರಸರುಂ ಎಂದು ವರ್ಣಿಸಲಾಗಿದೆ[೧೨೭]. ಕ್ರಿ.ಶ. ೧೨೨೫ರ ಗದುಗಿನ ಶಾಸನವೊಂದರ ಪ್ರಕಾರ ಮಹಾಮಂಡಳೇಶ್ವರ ಮಲ್ಲಿದೇವರಸರು ಆಳ್ವಿಕೆ ಕೈಕೊಂಡಿದ್ದು ಆತನ ಪ್ರಧಾನಿ ಘೋಡೆಯರಾಯನು ಪಟ್ಟಸಾಹಣಿಯಾಗಿದ್ದನೆಂದು ತಿಳಿದುಬರುತ್ತದೆ[೧೨೮]. ಕ್ರಿ.ಶ. ೧೨೩೧ರ ಶಾಸನವೊಂದು ಕದಂಬ ವೀರ ಮಲ್ಲಿದೇವರಸ ಮತ್ತು ತ್ರಿಭುವನಮಲ್ಲರ ನಡುವೆ ನಡೆದ ಯುದ್ಧವನ್ನು ತಿಳಿಸುತ್ತದೆ[೧೨೯]. ಹಾನಗಲ್ಲಿನ ಶಾಸನವೊಂದು ಉಲ್ಲೇಖಿಸುವಂತೆ ಪದ್ಮಲಮಹಾದೇವಿಯು ಈತನ ಪಟ್ಟಮಹಾದೇವಿ ಮತ್ತು ಪಿರಿಯರಸಿಯಾಗಿದ್ದಳು[೧೩೦].

**ಕಾವದೇವ:**

ಮಲ್ಲಿದೇವನ ನಂತರ ಕಾವದೇವನು ಅಧಿಕಾರಕ್ಕೆ ಬಂದನು. ಶಾನವೊಂದರಿಂದ ಈತನು ಕ್ರಿ.ಶ. ೧೨೬೦ರಲ್ಲಿ ಆಳ್ವಿಕೆ ಮಾಡುತ್ತಿದ್ದುದಾಗಿ ತಿಳಿಯುತ್ತದೆ[೧೩೧]. ಆದರೆ ಶಾಸನ ತುಂಬಾ ಹಾಳಾಗಿಹೋಗಿರುವದರಿಂದ ಈತನ ಆಳ್ವಿಕೆ ಬಗ್ಗೆ ಹೆಚ್ಚಿನ ವಿವರಗಳೇನೂ ತಿಳಿಯುವದಿಲ್ಲ. ಅಲ್ಲದೇ ಇವನಿಗೂ ಮತ್ತು ಮೇಲಿನ ಕದಂಬ ಅರಸರಿಗೂ ಇದ್ದಂತಹ ಸಂಬಂಧವೂ ಸ್ಪಷ್ಟವಾಗುವದಿಲ್ಲ. ಆದರೆ ವಿದ್ವಾಂಸರು ಈತನನ್ನು ಮಲ್ಲಿದೇವನ ಮಗನಾಗಿರಬಹುದೆಂದು ಊಹಿಸಿದ್ದಾರೆ.

**ಪುರಂದರರಾಯ:**

ಕಾವದೇವನ ನಂತರ ಈತನು ಆಳ್ವಿಕೆ ಮಾಡಿದನೆಂದು ಕೆಲ ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಈತನು ಕ್ರಿ.ಶ. ೧೩೧೫ ರಿಂದ ೧೩೪೭ರ ವರೆಗೆ ಆಳ್ವಿಕೆ ಮಾಡಿದನೆಂದು ತಿಳಿದುಬರುತ್ತದೆ[೧೩೨].

**ಬಂಕಾಪುರದ ಕದಂಬರು:**

ಹಾನಗಲ್ಲ ಕದಂಬರ ಒಂದು ಪ್ರಮುಖ ಶಾಖೆ ಬಂಕಾಪುರ ಕದಂಬರದು. ಪೊಳಲ್‌ಪಟ್ಟಣ (ಬಂಕಾಪುರ)ವು ಇವರ ರಾಜಧಾನಿಯಾಗಿತ್ತು. ಈ ಮನೆತನ ಮೂಲಪುರುಷ ಯಾರು ಎಂಬುದರ ಬಗ್ಗೆ ನಿಖರವಾದ ದಾಖಲೆಗಳಿಲ್ಲ. ಆದರೆ ಇಲ್ಲಿ ನಮಗೆ ಪ್ರಥಮವಾಗಿ ಕಂಡು ಬರುವವನೆಂದರೆ ಮೊದಲನೆಯ ಮಯೂರವರ್ಮನಾಗಿದ್ದಾನೆ.

**ಮೊದಲನೆಯ ಮಯೂರವರ್ಮ:**

ಈತನ ಮೊದಲ ಶಾಸನವಾದ ಕ್ರಿ.ಶ. ೧೦೩೪-೩೫ರ ಆಡೂರು ಶಾಸನದಲ್ಲಿ ಇವನನ್ನು ಬನವಾಸಿಪುರವರಾಧೀಶ್ವರ ಮತ್ತು ಪಾಂತಿಪುರವರಾಧೀಶ್ವರನೆಂದು ಕರೆಯಲಾಗಿದೆ[೧೩೩]. ಅಲ್ಲದೇ ಕ್ರಿ.ಶ. ೧೦೩೭ರ ಹೊಟ್ಟೂರು ಶಾಸನದಲ್ಲಿ ಮಹಾಮಂಡಳೇಶ್ವರ ಮಯೂರವರ್ಮ ಬನವಾಸಿ ಪನ್ನಿರ್ಚ್ಛಾಸಿರಮುಮಂ ಪಾನುಂಗಲ್ಲೈನ್ನೂರು ಮನೇಕಾಯತ ಪದಿನಾಳ್ಕುಂ ಸುಖಸಂಕಥಾವಿನೋದದೊಳಿಕಿ ಎಂದು ಉಲ್ಲೇಖಿಸಲಾಗಿದೆ[೧೩೪]. ಕ್ರಿ.ಶ. ೧೦೪೪-೪೫ರ ಆಡೂರಿನ ಶಾಸನದಲ್ಲಿಯೂ ಕೂಡ ಈತನು ಬನವಾಸಿ-೧೨೦೦೦ ಹಾಗೂ ಪಾನುಂಗಲ್ಲ-೫೦೦ಗಳ ಆಡಳಿತವನ್ನು ನಿರ್ವಹಿಸಿದ್ದುದು ಕಂಡುಬರುತ್ತದೆ[೧೩೫]. ಆನಂತರ ಕ್ರಿ.ಶ. ೧೦೪೭ರಲ್ಲಿ ಈತನು ಮನ್ನೆಯ ಸಾಮ್ಯದ ಅಧಿಕಾರವನ್ನು ಪಡೆದು ಆ ಪ್ರದೇಶಗಳನ್ನು ಆಳುತ್ತಿದ್ದುದಾಗಿ ತಿಳಿದುಬರುತ್ತದೆ[೧೩೬]. ಅದೇ ವರ್ಷದ ಮತ್ತೊಂದು ಶಾಸನವೊಂದರಲ್ಲಿ ಈತನು ಬನವಾಸಿ-೧೨೦೦೦ ಮತ್ತು ಪಾನುಂಗಲ್ಲುನಾಡುಗಳ ಆಡಳಿತ ನೋಡುತ್ತಿದ್ದ ಉಲ್ಲೇಖ ದೊರೆಯುತ್ತದೆ[೧೩೭]. ಈ ಎಲ್ಲಾ ದಾಖಲೆಗಳ ಆಧಾರದ ಮೇಲೆ ಮೊದಲಬಾರಿಗೆ ಕದಂಬರು ಪಾನುಂಗಲ್ಲ-೫೦೦ರ ಆಡಳಿತವನ್ನು ಮಾಡಿದ್ದುದು ತಿಳಿದುಬರುತ್ತದೆ.

ಮೊರೆಸ್‌ರು ಕದಂಬ ಚಟ್ಟಯ್ಯನ ಮಗ ಜಯಸಿಂಹನಿಗೆ ಚಾಲುಕ್ಯ ಐದನೆಯ ವಿಕ್ರಮಾದಿತ್ಯನ ಸೋದರಿ ಅಕ್ಕಾದೇವಿಯನ್ನು ನೀಡಿ ಮದುವೆಮಾಡಲಾಗಿತ್ತು ಎಂದು ಹೇಳಿದ್ದಾರೆ[೧೩೮]. ಆದರೆ ಕ್ರಿ.ಶ. ೧೦೩೭ರ ಚಾಲುಕ್ಯ ಜಯಸಿಂಹನ ಹೊಟ್ಟೂರು ಶಾಸನದಲ್ಲಿ ಅಕ್ಕಾದೇವಿಯರ್ ವಾನವಾಸೆ ಪನ್ನಿರ್ಚ್ಛಾಸಿರಮುಮಂ ಸುಖಸಂಕಥಾವಿನೋದದಿಂ ಆಳುತ್ತಮಿರೆ ಎಂದು ಹೇಳುತ್ತಾ, ಮುಂದೆ ಬನವಾಸಿಪುರವರೇಶ್ವರಂ . . . . . . . ಹರಿಕಾಂತನಸಿಂಗ ಶ್ರೀಮನ್ ಮಯೂರವರ್ಮದೇವರು ಬನವಾಸಿ ಪನ್ನಿರ್ಚ್ಛಾಸಿರಮುಮಂ ಪಾನುಗಲ್ಲೈನೂರುಮನ್ ಏಕಾಯತ ಪದಿನಾಳ್ಕುಂ ಎಂದು ಉಲ್ಲೇಖಿಸಲಾಗಿದೆ. ಈ ಶಾಸನಕ್ಕೆ ಮುನ್ನುಡಿ ಬರೆದ ಬಾರ್ನೆಟ್‌ರು ಅಕ್ಕಾದೇವಿ ಮತ್ತು ಮಯೂರವರ್ಮರಲ್ಲಿದ್ದುದು ಗಂಡಹೆಂಡತಿಯ ಸಂಬಂಧವಾಗಿತ್ತು ಎನ್ನುವದನ್ನು ಸ್ಪಷ್ಟಪಡಿಸಿದ್ದಾರೆ[೧೩೯]. ಹೀಗೆ ಕದಂಬರು ಚಾಲುಕ್ಯರ ಮಹಾಮಂಡಳೇಶ್ವರರಾಗಿ ಅವರ ಆಧೀನದಲ್ಲಿದ್ದರೂ ತಮ್ಮ ಸಾಮರ್ಥ್ಯದಿಂದಾಗಿ ಅವರೊಡನೆ ರಕ್ತಸಂಬಂಧವನ್ನು ಬೆಳೆಸಿದ್ದುದು ಕಂಡುಬರುತ್ತದೆ.

**ಹರಿಕೇಸರಿ:**

ಮಯೂರವರ್ಮ ಮತ್ತು ಅಕ್ಕಾದೇವಿಯರ ಮಗನಾದ ಈತನ ಕುರಿತು ಕ್ರಿ.ಶ. ೧೦೪೯ ರಿಂದ ೧೦೫೫ ರವರೆಗೆ ನಮಗೆ ದಾಖಲೆಗಳು ದೊರೆಯುತ್ತವೆ. ಈ ಕಾಲದಲ್ಲಿ ಈತನು ಆಳ್ವಿಕೆಯನ್ನು ಮಾಡುತ್ತಿದ್ದನೆಂದು ಹೇಳಬಹುದು. ಈತನನ್ನು ಶಾಸನಗಳಲ್ಲಿ ಹರಿಕೇಸರಿ, ಅರಿಕೇಸರಿ, ಅರಿಗ ಮತ್ತು ಹರಿಗ ಎಂಬ ಭಿನ್ನಭಿನ್ನ ಹೆಸರುಗಳಿಂದ ಉಲ್ಲೇಖಿಸಲಾಗಿದೆ. ಕ್ರಿ.ಶ. ೧೦೪೯ರ ಬೆಳವತ್ತಿ ದಾಖಲೆಯ ಪ್ರಕಾರ ಈತನು ಮನ್ನೆಯ ಅಧಿಕಾರದಿಂದ ಬನವಾಸಿ ಮತ್ತು

ಹಾನುಗಲ್ಲ ವಿಭಾಗಗಳನ್ನು ಆಳುತ್ತಿದ್ದುದಾಗಿ ತಿಳಿದುಬರುತ್ತದೆ[೪೪೦]. ಕ್ರಿ.ಶ. ೧೦೫೩ರ ಶಾಸನವೊಂದರಲ್ಲಿಯೂ ಕೂಡ ಈತನು ಈ ಪ್ರದೇಶಗಳನ್ನಾಳುತ್ತಿದ್ದ ಉಲ್ಲೇಖ ದೊರೆಯುತ್ತದೆ[೪೪೧]. ಕ್ರಿ.ಶ. ೧೦೫೫ರ ಶಿಗ್ಗಾಂವಿ ಶಾಸನ ಸ್ವಸ್ತಿ ಸಮಧಿಗತ ಪಂಚಮಹಾಶಬ್ದ ಮಹಾಮಂಡಳೇಶ್ವರಂ ಬನವಾಸಿಪುರವರೇಶ್ವರಂ . . . . . ಶ್ರೀ ಮನ್ಮಹಾಮಂಡಳೇಶ್ವರಂ ಬನವಾಸಿ ಪನ್ನಿರ್ಚ್ಛಾಸಿರಮರಸುಗೈಯುತ್ತಿರೆ ಎಂದು ಉಲ್ಲೇಖಿಸಿದೆ[೪೪೨]. ಈತನು ಆರನೆಯ ವಿಕ್ರಮಾದಿತ್ಯನು ಬನವಾಸಿ ಮತ್ತು ಗಂಗವಾಡಿಯ ಪ್ರತಿನಿಧಿಯಾಗಿ ಆಳುತ್ತಿದ್ದಾಗ ಆತನ ಕೈಕೆಳಗೆ ಮಹಾಮಂಡಳೇಶ್ವರನಾಗಿ ಆಳುತ್ತಿದ್ದುದಾಗಿ ತಿಳಿದುಬರುತ್ತದೆ[೪೪೩]. ಈತನ ರಾಣಿ ಲಚ್ಚಲದೇವಿಯಾಗಿದ್ದು, ಇವಳು ಹಾನಗಲ್ ತಾಲೂಕಿನ ಬೆಳವತ್ತಿಯ ಉರಾಳ್ವಿಕೆ ಮಾಡುತ್ತಿದ್ದ ಭೀಮದೇವನ ಮಗಳಾಗಿದ್ದಳು. ಮತ್ತು ಮುಂದೆ ಇವಳೂ ಕೂಡ ಬೆಳವತ್ತಿಯ ಊರಾಳ್ವಿಕೆಯನ್ನು ನೋಡಿಕೊಳ್ಳುತ್ತಿದ್ದಳು ಎಂದು ತಿಳಿದುಬರುತ್ತದೆ[೪೪೪]. ಅಲ್ಲದೇ ಅವಳ ಚಿಕ್ಕಪ್ಪನಾದ ಮಾರಸಿಂಗಯ್ಯ ಹರಿಕೇಸರಿಯ ಪ್ರಧಾನ ಮಹಾಮಾತ್ಯನಾಗಿದ್ದನು[೪೪೫].

**ತೋಯಿಮದೇವ:**

ಮಯೂರವರ್ಮ ಮತ್ತು ಆಕ್ಕಾದೇವಿಯರ ಮಗನಾಗಿದ್ದ ಈತ ತಂದೆಯ ಮರಣದ ಸಮಯದಲ್ಲಿ ಚಿಕ್ಕ ವಯಸ್ಸಿನ ಬಾಲಕನಾಗಿದ್ದಿರಬಹುದು. ಕಾರಣ ಸೋದರ ಹರಿಕೇಸರಿಯು ಆಳ್ವಿಕೆಯನ್ನು ಕೈಕೊಂಡಿದ್ದನ್ನು ನಾವು ಮೇಲೆ ನೋಡಿದ್ದೇವೆ. ಕ್ರಿ.ಶ. ೧೦೬೭ರ ಬಂಕಾಪೂರದ ಶಾಸನವೊಂದು ತಿಳಿಸುವಂತೆ ತೋಯಿಮದೇವ ಬನವಾಸಿ-೧೨೦೦೦ ಮತ್ತು ಪಾನುಂಗಲ್ಲು-೫೦೦ಗಳನ್ನು ಆಳುತ್ತಿದ್ದನು[೪೪೬]. ಕ್ರಿ.ಶ. ೧೧೬೬ರ ಶಾಸನದ ಪ್ರಕಾರವೂ ಕೂಡ ಈ ತೋಯಿಮದೇವನು ಚಾಲುಕ್ಯ ಸೋಮೇಶ್ವರನ ಸಾಮಂತನಾಗಿ ಮೇಲಿನ ವಿಭಾಗಗಳನ್ನು ಆಳುತ್ತಿದ್ದುದಾಗಿ ತಿಳಿದುಬರುತ್ತದೆ. ಅಲ್ಲದೇ ಶಾಸನದಲ್ಲಿ ಈತನನ್ನು ಹರಿಗನ ಕೇಸರಿ ಎಂದು ಉಲ್ಲೇಖಿಸಲಾಗಿದೆ. ಮತ್ತು ಇವನಿಗೆ ಮಯಿಳಲಾದೇವಿ ಎಂಬ ರಾಣಿಯಿದ್ದುದಾಗಿ ತಿಳಿಸುತ್ತದೆ[೪೪೭].

**ಹರಿಕಾಂತದೇವ:**

ತೋಯಿಮದೇವನ ತರುವಾಯ ಹರಿಕಾಂತದೇವನೆಂಬುವನು ಆಳ್ವಿಕೆಗೆ ಬಂದ ವಿವರ ತಿಳಿದುಬರುತ್ತದೆ. ಈತನ ಉಲ್ಲೇಖ ನಮಗೆ ಕ್ರಿ.ಶ. ೧೦೭೧ರ ನಂತರ ಶಾಸನಗಳಲ್ಲಿ ಕಂಡುಬರುತ್ತದೆ. ಕ್ರಿ.ಶ. ೧೧೭೧ರ ಹಿರೇಕಣಗಿ[೪೪೮] ಮತ್ತು ಕ್ರಿ.ಶ. ೧೦೭೨ರ ಗುಡಗುಡಿ[೪೪೯] ಶಾಸನಗಳ ಪ್ರಕಾರ ಈತನು ಬನವಾಸಿ-೧೨೦೦೦ ಮತ್ತು ಪಾನುಂಗಲ್ಲ-೫೦೦ಗಳ ಮಹಾಮಂಡಳೇಶ್ವರನಾಗಿ ಆಳ್ವಿಕೆ ಕೈಕೊಂಡ ವಿಷಯ ತಿಳಿದುಬರುತ್ತದೆ. ಕಾಗಿನೆಲ್ಲಿ[೪೫೦] ಮತ್ತು ಹಿರೇಕಣಗಿ[೪೫೧] ಶಾಸನಗಳು ಈತನನ್ನು ಪರಿಕಾಂತದೇವನೆಂದು ಕರೆದಿವೆ. ಜೊತೆಗೆ ಕಾಗಿನೆಲ್ಲಿ ಶಾಸನ ಇವನನ್ನು ತೋಯಿಗನ ಕೇಸರಿ ಎಂದು ಉಲ್ಲೇಖಿಸಿದೆ[೪೫೨]. ಇದರಿಂದಾಗಿ ಈತನು ತೋಯಿಗನ ಸಹೋದರನಾಗಿದ್ದ ವಿಷಯ ಸ್ಪಷ್ಟಗೊಳ್ಳುತ್ತದೆ. ಅಲ್ಲದೇ ದಿನಾಂಕವಿಲ್ಲದ ಮಂಟಗಿ ಶಾಸನದಲ್ಲಿ ಹರಿಕೇಸರಿ, ತೋಯಿಮದೇವ ಮತ್ತು ಹರಿಕಾಂತದೇವ ಮೂವರೂ ಸೇರಿ ಒಟ್ಟಾಗಿ

ಕೆಲ ಬಸದಿಗಳನ್ನು ಜೀರ್ಣೋದ್ಧಾರ ಕೈಕೊಂಡಿದ್ದ ವಿಷಯ ತಿಳಿಯುತ್ತದೆ[೪೫೩]. ಇದರಿಂದಾಗಿ ಈ ಮೂವರೂ ಮಯೂರವರ್ಮನ ಮಕ್ಕಳಾಗಿದ್ದು ಒಬ್ಬರ ನಂತರ ಒಬ್ಬರು ಆಳ್ವಿಕೆ ಕೈಕೊಂಡಿದ್ದ ವಿಷಯ ಸ್ಪಷ್ಟವಾಗುತ್ತದೆ. ಹೀಗೆ ಸುಮಾರು ೧೫೦ ವರ್ಷಗಳ ಕಾಲ ಬಂಕಾಪುರದ ಕದಂಬರು ಆಳ್ವಿಕೆಯನ್ನು ನಿರ್ವಹಿಸಿದರು.

ಹೀಗೆ ಸುಮಾರು ನಾಲ್ಕು ಶತಮಾನಗಳ ಕಾಲ ಸಾಮಂತರಾಗಿದ್ದುಕೊಂಡು ಆಳ್ವಿಕೆ ನಡೆಸಿದ ಕದಂಬ ಮನೆತನ ಕೊನೆಗಾಲದಲ್ಲಿ ಯಾದವ, ಹೊಯ್ಸಳ ಹಾಗೂ ಮುಸ್ಲಿಂರ ಹೋರಾಟಗಳಲ್ಲಿ ಸಿಲುಕಿ ಅವನತಿ ಹೊಂದಿತು.

## ೬) ಸಿಂದರು:

### ಅ) ಬಾಗಡಗೆಯ ಸಿಂದರು:

ಬಾಗಡಗೆ ದೇಶ್ಯ, ಬಾಗಡಗೆ ನಾಡು ಎಂಬ ಆಡಳಿತ ವಿಭಾಗ ಇಂದಿನ ಬಾಗಲಕೋಟೆ ಜಿಲ್ಲೆಯ ಮುಖ್ಯ ಕೇಂದ್ರ ಪಟ್ಟಣವಾದ ಬಾಗಲಕೋಟೆಯ ಸುತ್ತಲಿನ ಪ್ರದೇಶವಾಗಿತ್ತು. ಇದು ಈ ಸಿಂದರು ಆಳ್ವಿಕೆ ಮಾಡಿದ ಪ್ರಮುಖ ಪ್ರದೇಶವಾಗಿತ್ತು. ಅಲ್ಲದೇ ಇವರ ಆಳ್ವಿಕೆಯಲ್ಲಿ ಕಿಸುಕಾಡು-೭೦ ಕೂಡ ಸೇರಿತ್ತೆಂದು ತಿಳಿದುಬರುತ್ತದೆ[೪೫೪]. ಆರಂಭದಲ್ಲಿ ಇವರು ಕಲ್ಯಾಣ ಚಾಲುಕ್ಯರ ಸಾಮಂತರಾಗಿ, ಮಹಾಸಾಮಂತರಾಗಿ ಮತ್ತು ಮುಂದೆ ಮಹಾಮಂಡಳೇಶ್ವರರಾಗಿ ಇವರು ಆಳ್ವಿಕೆಮಾಡಿದ್ದಾರೆ.

**ನಿಡುದೋಳ್ ಸಿಂದ:**

ಇವರ ಮೂಲಪುರುಷ ನಿಡುದೋಳ್ ಸಿಂದನೆಂದು ತಿಳಿಸುವ ಭೈರನಮಟ್ಟಿ ಶಾಸನದ ವಿವರಣೆ ಹೀಗಿದೆ: ಧರಣೇಂದ್ರಾಧೀಶ್ವರ ಒಮ್ಮೆ ಭೂಲೋಕವನ್ನು ಸಂಚರಿಸಲು ತನ್ನ ಪತ್ನಿಯೊಡನೆ ಬಂದಾಗ, ಅವಳು ಗರ್ಭವತಿಯಾಗಿ ಅಹಿಚ್ಛತ್ರದಲ್ಲಿ ಅವರಿಗೆ ಒಂದು ಮಾನವರೂಪಿ ಮಗು ಜನಿಸಿತು. ಅವನೇ ಮುಂದೆ ನಿಡುದೋಳ್ ಸಿಂಧನಾದ ಎಂದಿದೆ[೪೫೫]. ರಂಜೋಲದ ಸಿಂದರ ಶಾಸನ ಲಲಾಟಲೋಚನದ ಮಯೂರವರ್ಮನ ಬಗ್ಗೆ ಹೇಳಿ, ಲಲಾಟಲೋಚನದ ಉರಿಯನ್ನು ಆರಿಸಲು ಸಿಂಧನು ಚಾಚಿದ ತೋಳಿನಿಂದ ನಿಡುದೋಳ್ ಸಿಂದನಾದನು ಎಂದಿದೆ[೪೫೬]. ಮುಂದುವರಿದು ಇದೇ ಶಾಸನವು ಕದಂಬ ಮಯೂರವರ್ಮನ ಮಗಳೊಡನೆ ರಕ್ತಸಂಬಂಧವನ್ನು ಬೆಳೆಸಿದ ವಿವರ ಹೀಗೆ ನೀಡಿದೆ. ಮಯೂರವರ್ಮನು ಇವನ ಪರಾಕ್ರಮವನ್ನು ಕೇಳಿ, ತನ್ನ ಮಗಳಾದ ಲಕ್ಷ್ಮೀಮತಿಯನ್ನು ನೀಡಿ ವಿವಾಹಮಾಡಿದನೆಂದೂ, ಅವರಿಬ್ಬರಿಗೆ ನಾಲ್ಕು ಮಕ್ಕಳಾದವೆಂದೂ, ಮುಂದೆ ಅವರು ಶಸ್ತ್ರಶಾಸ್ತ್ರ ವಿದ್ಯಾಪಾರಂಗತರಾಗಿ ದಕ್ಷಿಣಕ್ಕೆ ಬಂದರು. ಅವರಲ್ಲಿ ಪ್ರಭುಸೇವ್ಯನು ಬಾಗಡಗೆ ಪ್ರದೇಶದಲ್ಲಿ ನಿಂತು ರಾಜ್ಯಭಾರ ಮಾಡಿದನೆಂದು ತಿಳಿಸಿದೆ[೪೫೭].

ಇದಾದ ನಂತರ ೩೧ಜನ ಅರಸರು ಈ ಮನೆತನದಲ್ಲಿ ಆಳ್ವಿಕೆ ಮಾಡಿದ್ದರೂ ಯಾವುದೇ ದಾಖಲೆಗಳಿಂದ ಅವರ ಹೆಸರುಗಳಾಗಲೀ ಆಳ್ವಿಕೆಮಾಡಿದ ವಿವರಗಳಾಗಲೀ ತಿಳಿದುಬರುವದಿಲ್ಲ.



**ಸಿಂದರಸ:**

ಇವನನ್ನು ಬೈರನಮಟ್ಟಿಶಾಸನದಲ್ಲಿ ಸೇವ್ಯಂ ಕಂತು ಸಮಾನಂ, (ನಿಡುದೋಳ್ ಸಿಂದ)ನಂತಗುಣಂನೆಗರ್ದ್ದ ಎಂದು ಉಲ್ಲೇಖಿಸಲಾಗಿದೆ[೪೫೮]. ಮಹಾಕೂಟ ಶಾಸನದಲ್ಲಿಯೂ ಇವನ ಉಲ್ಲೇಖ ಬರುತ್ತದೆ[೪೫೯]. ಆದರೆ ಇವನ ನಂತರ ಇವನ ಮಗನಾಳಿದ ಉಲ್ಲೇಖವಿಲ್ಲ. ಗಮನಿಸಬಹುದಾದ ಅಂಶವೆಂದರೆ, ಇವನ ಮಗಳ ಮಗ ಇವನ ಉತ್ತರಾಧಿಕಾರಿಯಾಗಿದ್ದನು.

**ಕಮ್ಮರಸ:**

ಸಿಂದರಸನ ತರುವಾಯ ಆಡಳಿತಕ್ಕೆ ಬಂದ ಈತನು ಅವನ ಮೊಮ್ಮಗನಾಗಿದ್ದನು. ಇದನ್ನು ಮಹಾಕೂಟ ಶಾಸನ ಸ್ಪಷ್ಟವಾಗಿ ಹೇಳಿದೆ. ಭೈರನಮಟ್ಟಿ ಶಾಸನವು ಇವನನ್ನು ಕಮ್ಮರ, ಕಮ್ಮಯ್ಯ, ಕಮ್ಮರಸ ಮತ್ತು ಕಮ್ಮಯ್ಯರಸ ಎಂದು ಕರೆಯುತ್ತಾ, ಇವನ ಪತ್ನಿ ವಿಧಿತಗುಣ ಗಣ ಶೀಲಾಭರಣ ಭೂಷಿತಳಾಗಿದ್ದಳೆಂದೂ, ಇವರಿಗೆ ಪುಲಿಕಾಲನೆಂಬ ಮಗ ಜನಿಸಿದನೆಂದು ಹೇಳಿದೆ[೪೬೦].

**ಪುಲಿಕಾಲ:**

ಇವನ ಕಾಲ ಕ್ರಿ.ಶ. ೯೯೦ ರಿಂದ ಕ್ರಿ.ಶ. ೧೦೧೫ರವರೆಗೆ. ಇವನ ಕಾಲದಿಂದ ಇವರ ಆಡಳಿತದ ಸ್ಪಷ್ಟ ಚಿತ್ರಣ ನಮಗೆ ದೊರೆಯುತ್ತದೆ. ಇವನಿಗೆ ಅರಿನೃಪತಿ ಕರಿಕುಂಭಿ ಕುಂಭಸ್ಥಲ, ಸಮರ ಸಂಘಟ್ಟನ ವೀರ, ವಿಜಯರಾಜ್ಯ ಲಕ್ಷ್ಮೀ ವಕ್ಷಸ್ಥಲ ದೃಷ್ಟಿ, ವಿಷಕುಳ ತಿಳಕ, ನಾಗಧ್ವಜ ಪ್ರತಾಪ, ನನ್ನಿಗ ಆಶ್ರಯ, ರಣರಂಗ ಕೇಸರಿ, ಸಿಂಧನಾರಾಯಣ, ನಲ್ಲಗ್ಗ್ನಲ್ಲ ಡಾಮರಮಲ್ಲ, ಮುಂತಾಗಿ ಶಾಸನದಲ್ಲಿ ಪ್ರಶಸ್ತಿಸಲಾಗಿದೆ[೪೬೧]. ಇವನು ಕಲ್ಯಾಣ ಚಾಲುಕ್ಯ ಎರಡನೆಯ ತೈಲಪನ ಸಾಮಂತನಾಗಿ ಬಾಗಡೆಗೆ ನಾಡಿನ ರಾಜ್ಯಭಾರವನ್ನು ಮಾಡುತ್ತಿದ್ದನು. ಈತನ ರಾಣಿ ರೇಕಬ್ಬರಸಿಯಲ್ಲಿ ಇವನಿಗೆ ನಾಗಾದಿತ್ಯನೆಂಬ ಮಗನು ಜನಿಸಿದನು[೪೬೨].

**ನಾಗಾದಿತ್ಯ:**

ಇವನು ಕ್ರಿ.ಶ. ೧೦೧೫ ರಿಂದ ಕ್ರಿ.ಶ. ೧೦೪೦ರವರೆಗೆ ಆಡಳಿತವನ್ನು ಮಾಡಿದನು. ಶಾಸನಗಳು ಇವನಿಗೆ ಮಹಾಸಾಮಂತನೆಂದೂ, ನಾಗತಿ, ನಾಗತಿಯರಸ, ನಾಗಾದಿತ್ಯ ಎಂದೂ ಅನೇಕ ಹೆಸರಿನಿಂದ ಉಲ್ಲೇಖಿಸಿವೆ[೪೬೩]. ಅಲ್ಲದೇ ಇವನಿಗೆ ವಿನಿರ್ಗತ ಕರವಾಸ ಶೋಭಿತ, ದಕ್ಷಿಣದೋರ್ದಂಡ, ಉಭಯ ಬಳಗಂಡ, ಅರಿನೃಪತಿ ಸಂಹಾರಕಾರಣ, ವನಿತಾಜನ ಕಂದ, ಅಕಳಂಕ ಸಿಂದ, ಸಿಂದಕುಳತಿಳಕ ಮುಂತಾದ ಬಿರುದುಗಳಿದ್ದವು[೪೬೪]. ಇವನು ಚಾಲುಕ್ಯ ಎರಡನೆಯ ಜಯಸಿಂಹನ ಸಾಮಂತನಾಗಿದ್ದನು. ಹಳ್ಳೂರು ಶಾಸನದಲ್ಲಿಯೂ ಕೂಡ ಇವನನ್ನು ಮಹಾಸಾಮಂತ ನಾಗತಿಯರಸ ಎಂದು ಕರೆಯಲಾಗಿದೆ[೪೬೫]. ಇವನ ರಾಣಿ ಪೊಲೆಯಬ್ಬರಸಿ, ಅವಳಿಗೆ ಪೊಲಸಿಂದನೆಂಬ ಮಗ ಜನಿಸಿದನು. ಇವನ

ಇನ್ನೊಬ್ಬ ರಾಣಿಯಿಂದ ಏಳು ಜನ ಮಕ್ಕಳು ಜನಿಸಿದರು ಅವರು ಯಲಬುರ್ಗಿ ಸಿಂದ ಮನೆತನಕ್ಕೆ ಒಡೆಯರಾದರು. ಅವರಿಗೆ ನಾಗಾದಿತ್ಯನು ತಾನು ಗೆದ್ದುಕೊಂಡಿದ್ದ ಯಲಬುರ್ಗಿ ಮತ್ತು ಅದರ ಸುತ್ತಲಿನ ಪ್ರದೇಶಗಳನ್ನು ಬಿಟ್ಟುಕೊಟ್ಟನೆಂದು ದಿನಕರ ದೇಸಾಯಿಯವರು ಅಭಿಪ್ರಾಯಪಟ್ಟಿದ್ದಾರೆ[೪೬೬]. ಇದರಿಂದಾಗಿ ಬಾಗಡಿಗೆ ಸಿಂದ ಮನೆತನ ಈ ಕಾಲಕ್ಕೆ ಕವಲೊಡೆಯಿತು.

**ಪೊಲಸಿಂದ:**

ಈತನು ತನ್ನ ತಂದೆಯ ತರುವಾಯ ಕ್ರಿ.ಶ. ೧೦೪೦ರಲ್ಲಿ ಪಟ್ಟಕ್ಕೆ ಬಂದು ಕ್ರಿ.ಶ. ೧೦೬೫ರವರೆಗೆ ಆಳ್ವಿಕೆಯನ್ನು ನಡೆಸಿದನು. ಇವನಿಗೆ ಸಿಂದವಂಶ ತಿಲಕ, ನಾಗರಾಜ ಚರಿತ, ಫಣಿಕೇತನ, ಅನ್ನರಾಜವೇದಂಡ, ಶ್ರೀರಕ್ಷ ಮಂಡನ ಮುಂತಾದ ಬಿರುದುಗಳನ್ನು ಧರಿಸಿದ್ದನು. ಈತನೂ ಸಹ ಚಾಲುಕ್ಯ ಎರಡನೆಯ ಜಯಸಿಂಹನ ಸಾಮಂತನಾಗಿದ್ದನು. ಈತನು ಖಾಂಡವ ಮಂಡಳೇಶ್ವರನ ಮಗಳಾದ ಬಿಜ್ಜಲದೇವಿಯನ್ನು ಮದುವೆಯಾಗಿದ್ದನು. ಇವರಿಗೆ ಸೇವ್ಯರಸನೆಂಬ ಮಗ ಜನಿಸಿದನು[೪೬೭].

**ಸೇವ್ಯರಸ:**

ಶಾಸನಗಳು ಇವನನ್ನು ಮಹಾಮಂಡಳೇಶ್ವರ, ಪಂಚಮಹಾಶಬ್ದ ಮುಂತಾಗಿ ಕರೆದಿವೆ. ಇವನಿಗೆ ಸಿಂದಮಾರ್ತಾಂಡ, ದಕ್ಷಿಣ ಭುಜಾದಂಡ, ಅನೇಕ ಶಸ್ತ್ರಶಾಸ್ತ್ರ ಪಾರಾವಾರ ಪಾರಾಯಣ, ಮೂರ್ತಿನಾರಾಯಣ, ಹರಚರಣಸಮರಣಪರಿಣತ ಅಂತಃಕರಣ, ಪರಮಮಾಹೇಶ್ವರ, ರಿಪುಮಂಡಳೀಕ ದೈತ್ಯ, ಭುಜಬಲಭೀಮ, ಸಕಳಕಳಾಕಳಿತಾ, ಸಾಹಿತ್ಯ ವಿದ್ಯಾವಿವೇಕ ವಿರಿಂಚನ, ಪಾತಾಳ ಚಕ್ರವರ್ತಿ, ವಿದ್ಯಾಸಹದೇವ, ಕಟಕದ ಗೋವ, ಸಿಂದವಂಶೋತ್ತಂಸ ಮುಂತಾದ ಬಿರುದುಗಳಿದ್ದದ್ದು ತಿಳಿದುಬರುತ್ತದೆ[೪೬೮]. ಇವನು ಧರಿಸಿದ್ದ ಈ ಬಿರುದುಗಳನ್ನು ನೋಡಿದಾಗ ಸೇವ್ಯರಸನು ಅತ್ಯಂತ ಬಲಶಾಲಿಯೂ, ಸಾಹಿತ್ಯ ವಿದ್ಯಾ ವಿವೇಕಿಯೂ ಆಗಿದ್ದನೆಂದು ಕಂಡುಬರುತ್ತದೆ. ಇವನು ಚಾಲುಕ್ಯ ಎರಡನೆಯ ಸೋಮೇಶ್ವರನ ಮಹಾಮಂಡಳೇಶ್ವರನಾಗಿದ್ದನೆಂದು ತಿಳಿದುಬರುತ್ತದೆ[೪೬೯]. ಇವನ ನಂತರ ಈ ವಂಶ ಕಣ್ಮರೆಯಾಗಿ ಯಲಬುರ್ಗಿ ಸಿಂದರ ಆಡಳಿತಕ್ಕೆ ಈ ಪ್ರದೇಶ ಸೇರಿ ಹೋಯಿತು.

## ಬ) ಕುರುಗೋಡು ಸಿಂದರು:

ನೊಳಂಬವಾಡಿ-೩೨೦೦೦ ನಾಡಿನ ಸ್ವತಂತ್ರ ಉಪವಿಭಾಗವಾದ ಬಲ್ಲಕುಂದೆ-೩೦೦ನ್ನು ಆಳಿದ ಸಿಂದರು ಬಲ್ಲಕುಂದೆಯಿಂದ ತಮ್ಮ ಆಳ್ವಿಕೆಯನ್ನು ಆರಂಭಿಸಿ ನಂತರದಲ್ಲಿ ಕುರುಗೋಡನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ರಾಜ್ಯಭಾರವನ್ನು ನಡೆಸಿದ್ದರಿಂದ ಅವರನ್ನು ಕುರುಗೋಡು ಸಿಂದರು ಎಂದು ಕರೆಯಲಾಗಿದೆ[೪೭೦]. ಇತರ ಸಿಂದರ ಶಾಖೆಗಳಂತೆ ಇವರು ತಮ್ಮ ಮೂಲಪುರುಷ ಯಾರೆಂದು ಹೇಳಿಕೊಂಡಿಲ್ಲವಾದರೂ ಕುರುಗೋಡು ಶಾಸನದಲ್ಲಿ ಮ್ರಿಡನ

ನಿಡುದೋಳಬಾಳಿನ ಕಡುಮೊಗರಿನ ಪೊಳಪನುರಹಿಗೆತ್ತುರಗೇಂದ್ರ ಸ್ತುಡರ್ದಲ್ಲಿ ಭಾವರತಿಯಿಂದೊಡನೊಗೆದಂ ಸಿಂದನಿಖಿಳ ಭುವನಾನಂದಂ ಅನನ್ತೆ ಸಿಂದಭೂಪನ ಸಂತತಿಯಡುಗುನ್ತಿ ಪೆರ್ಚ್ಚೆ ಪೆರ್ಚ್ಚೆದಂತೆ ನಡೆದು ಬಂದಿದೆ ಎಂದು ಉಲ್ಲೇಖಿಸಲಾಗಿದೆ[೭೦]. ಈ ಹೇಳಿಕೆಯ ಪ್ರಕಾರ ಈ ವಂಶದ ಮೂಲಪುರುಷ ನಿಡುದೋಳ್ ಸಿಂದನೇ ಎಂದು ಸ್ಪಷ್ಟವಾಗಿ ತಿಳಿಯುವುದಿಲ್ಲವಾದರೂ, ಇದು ಇತರ ಸಿಂದಶಾಖೆಯವರು ನೀಡುವ ವಿವರಣೆಯನ್ನೇ ಹೋಲುತ್ತದೆ. ಹೀಗಾಗಿ ಇವರ ಮೂಲಪುರುಷ ಕೂಡ ನಿಡುದೋಳ್ ಸಿಂದನೇ ಆಗಿರಬೇಕು.

**ಬುಧಸೇವ್ಯ:**

ರಂಜೋಲ ಗ್ರಾಮದ ಶಾಸನದ ಪ್ರಕಾರ ನಿಡುದೋಳ್ ಸಿಂದನ ನಾಲ್ಕುಜನ ಮಕ್ಕಳಲ್ಲಿ ಬುಧಸೇವ್ಯನು ಬಳ್ಳರೆನಾಡಿನ ಅಧಿಪತಿಯಾಗಿದ್ದನು[೭೧]. ಈ ಶಾಸನದ ಕಾಲಕ್ಕೆ ಬಾಗಡೆ ಪಳಿಯಂಡಕ್ಷಿತಿಮಂಡಲ ಮತ್ತು ಬಳ್ಳರೆನಾಡಿನಲ್ಲಿ ಸಿಂದರ ಶಾಖೆಗಳಿದ್ದುದು ಸ್ಪಷ್ಟವಾಗುತ್ತದೆ. ಹೀಗಾಗಿ ಬುಧಸೇವ್ಯನು ಕುರುಗೋಡು ಸಿಂದಶಾಖೆಯ ಮೊದಲ ಅರಸನೆಂದು ಒಪ್ಪಿಕೊಳ್ಳಬಹುದು.

ಬುಧಸೇವ್ಯನ ಆಳ್ವಿಕೆಯ ನಂತರ ಈ ಮನೆತನ ಕೆಲಕಾಲದವರೆಗೆ ಕಂಡುಬರುವದಿಲ್ಲ. ಬಹುಷಃ ಕದಂಬ ಚಕ್ರವರ್ತಿಗಳು ತಮ್ಮ ಅವನತಿಯನ್ನು ತಡೆಯದಾದುದರಿಂದ ಅವರ ಸಾಮಂತ ಮನೆತನಗಳೂ ಕೂಡ ಉಳಿಯದಾದವು. ನಂತರ ಕ್ರಿ.ಶ. ೧೦ನೆಯ ಶತಮಾನದಲ್ಲಿ ಮತ್ತೆ ಈ ವಂಶ ಅಸ್ತಿತ್ವಕ್ಕೆ ಬಂದಿತು.

**ಅರಿಬಲ್ಲದಾಗ್ರ:**

ಕುರುಗೋಡು ಸಿಂದವಂಶದಲ್ಲಿ ಕಂಡುಬರುವ ಮೊದಲ ಐತಿಹಾಸಿಕ ವ್ಯಕ್ತಿ ಈತನಾಗಿದ್ದಾನೆ. ರಾಷ್ಟ್ರಕೂಟ ಮೂರನೆಯ ಕೃಷ್ಣನ ಆಳ್ವಿಕೆಯಲ್ಲಿನ ಕ್ರಿ.ಶ. ೧೧೪೭ರ ಕುಡಿತಿನಿ ಶಾಸನ[೭೨]ದಲ್ಲಿ ಇವನನ್ನು ಉಲ್ಲೇಖಿಸಲಾಗಿದ್ದು, ಅಲ್ಲಿ ಈತನಿಗೆ ಶ್ರೀಮದರಿಬಲ್ಲದಾಗ್ರನುಂ ಕುರುಗೋಡ ಮೂನೂರ್ವ್ವರ್ವರ್ಮ- ಹಾಜನರು ಪೊಡೆತಿರ್ದು ಎಂದು ಉಲ್ಲೇಖಿಸಲಾಗಿದೆ. ಹೀಗಾಗಿ ಈತನು ರಾಷ್ಟ್ರಕೂಟ ಮೂರನೆಯ ಕೃಷ್ಣನ ಕಾಲದಲ್ಲಿ ಅವನ ಮಹಾಸಾಮಂತನಾಗಿ ಆಳ್ವಿಕೆ ನಡೆಸುತ್ತಿದ್ದನು. ಅಲ್ಲದೇ ಬಲ್ಲಕುಂದೆ ನಾಡಿನ ರಾಜಧಾನಿಯು ಆಗಲೇ ಕುರುಗೋಡಿಗೆ ಸ್ಥಳಾಂತರ ಹೊಂದಿತ್ತೆಂದು ತಿಳಿಯುತ್ತದೆ. ಆದರೆ ಈತನ ಆಳ್ವಿಕೆಯ ವಿವರಗಳು ನಮಗೆ ತಿಳಿದುಬರುವದಿಲ್ಲ. ಅಲ್ಲದೇ ಕ್ರಿ.ಶ. ೯೬೭ರ ಬಲ್ಲಕುಂದೆಯ ಶಾಸನವೊಂದು [ದೇಮ]ಪಯ್ಯ ನನ್ನಿನೊಳ[ಂ]ಬ ಮಾತಕೇಳ್ದು ಪೆರ್ಗಡೆ [ಜ]ನಮಯ್ಯ ಸಿನ್ದರ[ಬಲ್ಲದಾಗ್ರ]ನ ತಾಗಿಕೊನ್ದು ಸ್ವರ್ಗಸ್ಥನಾದ ಎಂದು ಹೇಳಿದೆ[೭೩]. ಬಹುಷಃ ನೊಳಂಬರಿಗೂ ಸಿಂದರಿಗೂ ಯುದ್ಧ ನಡೆದು ಅದರಲ್ಲಿ ಈ ಅರಿಬಲ್ಲದಾಗ್ರನು ಮರಣಿಸಿರಬಹುದು. ಆದರೆ ನೊಳಂಬರಿಗೂ ಸಿಂದರಿಗೂ ಯುದ್ಧ ನಡೆದದ್ದು ಯಾವ ಕಾರಣಕ್ಕಾಗಿ ಎಂದು ಇಲ್ಲಿ ಸ್ಪಷ್ಟವಾಗುವದಿಲ್ಲ.

ಅರಿಬಲ್ಲದಾಗ್ರನಿಗೆ ವಿಜಯಪಹಟ ವಿಶೇಷ, ಫಣೀಂದ್ರಕುಲ ಸಂಭವ, ಅಹೀಂದ್ರ ಮಕರಧ್ವಜ ಎಂಬ ಬಿರುದುಗಳಿದ್ದವು. ಅಲ್ಲದೇ ಇವನು ಕುಟುಂಬ ಮತ್ತು ಮಕ್ಕಳ ವಿವರಗಳು ದೊರೆಯುವದಿಲ್ಲ.

ಈತನ ನಂತರ ಮತ್ತೆ ಈ ಮನೆತನ ಸುಮಾರು ೭೮ ವರ್ಷಗಳ ಕಾಲ ಕಣ್ಮರೆಯಾಗಿದ್ದು ಕಂಡುಬರುತ್ತದೆ. ಬಹುಷಃ ರಾಷ್ಟ್ರಕೂಟರ ನಂತರ ಆಳ್ವಿಕೆಗೆ ಬಂದ ಚಾಲುಕ್ಯರನ್ನು ಇವರು ಬೆಂಬಲಿಸದಿದ್ದುದೇ ಕಾರಣವಾಗಿರಬಹುದು. ಹೀಗಾಗಿ ರಾಷ್ಟ್ರಕೂಟರಿಗೆ ನಿಷ್ಟರಾಗಿದ್ದ ಇವರನ್ನು ಕಡೆಗಣಿಸಿ ನೊಳಂಬವಾಡಿಯ ಒಡೆತನವನ್ನು ಚಾಲುಕ್ಯರು ನೊಳಂಬರಿಗೆ ನೀಡಿದ್ದ ವಿಷಯ ತಿಳಿದುಬರುತ್ತದೆ[೬೫]. ಮುಂದೆ ಕ್ರಿ.ಶ. ೧೦೪೫ರ ವೇಳೆಗೆ ಮತ್ತೆ ಚಾಲುಕ್ಯರ ಸಾಮಂತರಾದ ನೊಳಂಬಪಲ್ಲವರ ಪಾದಪದ್ಮೋಪಜೀವಿಗಳಾಗಿ ಬಲ್ಲಕುಂದೆ ನಾಡಿನಲ್ಲಿ ಕಾಣಿಸಿಕೊಳ್ಳುತ್ತಾರೆ.

**ಉದಯಾದಿತ್ಯ:**

ಕ್ರಿ.ಶ. ೧೦೪೫ರ ವೇಳೆಗೆ ನೊಳಂಬಪಲ್ಲವರ ಪಾದಪದ್ಮೋಪಜೀವಿಯಾಗಿ ಈತನು ಕಂಡುಬರುತ್ತಾನೆ. ಕ್ರಿ.ಶ. ೧೦೪೫ರ ಹಾವಿನಾಳ ಶಾನವು ಈತನು ಕಲಿಯುಗ ರೇವಂತ, ನನ್ನಿಗಾಶ್ರಯ, ಸಮರಮಹೇಶ್ವರ, ಮತ್ತಗಜ ಮ . . . ., . . . . . . ನೀಕಮನುಂಡ, ಬಿರುದರಜವ, ಬಿರುದಮನ್ನೆಯ ವೇಶ್ಯಾಭುಜಂಗ ಎಂದು ಮೊದಲಾದ ಅನೇಕ ಬಿರುದುಗಳನ್ನು ಹೊಂದಿದ್ದನ್ನು ಉಲ್ಲೇಖಿಸಿದೆ[೬೬]. ಆದರೆ ಈತನ ರಾಣಿ ಮತ್ತು ಮಕ್ಕಳ ವಿವರಗಳು ಜೊತೆಗೆ ಆಡಳಿತದ ವಿವರಗಳೂ ತಿಳಿದುಬರುವದಿಲ್ಲ.

**ಚೋಕರಸ:**

ಈತನು ಬಹುಷಃ ಉದಯಾದಿತ್ಯನ ಮಗನಾಗಿರಬೇಕು. ಕಾರಣ ಕ್ರಿ.ಶ. ೧೦೯೨ರಲ್ಲಿ ಮನ್ನೆಯ ಚೋಕರಸನು ಬಲ್ಲಕುಂದೆನಾಡನ್ನು ಆಳುತ್ತಿದ್ದುದಾಗಿ ಸಿರಗುಪ್ಪದ ಶಾಸನ ಉಲ್ಲೇಖಿಸುತ್ತದೆ[೬೭]. ಶಾಸನ ವಿವರಿಸುವಂತೆ ಇವನು ಚಾಲುಕ್ಯ ಆರನೆಯ ವಿಕ್ರಮಾದಿತ್ಯನ ರಾಣಿ ಪಿರಿಯಕೇತಲದೇವಿಯ ಪಾದಪದ್ಮೋಪಜೀವಿಯಾಗಿ ಬಲ್ಲಕುಂದೆನಾಡನ್ನು ಆಳುತ್ತಿದ್ದನು. ಆದರೆ ಈತನ ಬಗೆಗೆ ಹೆಚ್ಚಿನ ವಿವರಗಳೇನೂ ತಿಳಿಯುವದಿಲ್ಲ. ಈತನು ವಿಜಯಲಕ್ಷ್ಮೀಕಾಂತ, ವೀರಮಹೇಶ್ವರ, ಸೌಚಾಂಜನೇಯ, ನುಡಿದಂತೆಗಂಡ, ತೊಡ . . . . ಲು ಗಂಡ, ವಿದಗ್ಧ ಗಣಿಕಾಜನ ಹೃದಯ ಸೂರೆಕಾರ, ಅಯ್ಯನಂಕಕಾರ, ಅಯ್ಯನಸಿಂಗ, ಸತ್ಯಕಾನೀನ ಮುಂತಾದ ಬಿರುದುಗಳನ್ನು ಧರಿಸಿದ್ದನು.

**ಒಂದನೆಯ ಭೀಮ:**

ಈತನು ಚೋಕರಸನ ಮಗನಾಗಿದ್ದು ಅವನ ನಂತರ ಆಳ್ವಿಕೆಗೆ ಬಂದನು. ಈತನು ಶಾಸನಗಳಲ್ಲಿ ಬೀಮದೇವ, ಭೀವದೇವ್[೬೮], ಭೀವರಸ್[೬೯] ಎಂದು ಉಲ್ಲೇಖಿಸಲ್ಪಟ್ಟಿದ್ದಾನೆ. ಡಾ.ದಿನಕರ ದೇಸಾಯಿಯವರು ಕ್ರಿ.ಶ. ೧೧೪೭ರ ಕೋಳೂರು ಶಾಸನದಲ್ಲಿ ಉಲ್ಲೇಖಿಸಲಾದ ಎರಡನೆಯ ಭೀಮನ ಆಧಾರದ ಮೇಲಿಂದ ಇವನಿಗಿಂತ ಮೊದಲು ಇನ್ನೊಬ್ಬ

ಭೀಮನೆಂಬ ಅರಸನು ಆಳಿರಬೇಕೆಂದು ಅಭಿಪ್ರಾಯಪಟ್ಟಿದ್ದರು[೪೮೦]. ಅವರ ಈ ಅಭಿಪ್ರಾಯವನ್ನು ಸಮರ್ಥಿಸಲು ಈಗ ಕೊಂಚಗೆರೆಯ ಶಾಸನಗಳಿಂದ ಸಾಧ್ಯವಾಗಿದೆ. ಅದರಲ್ಲಿ ಈ ಭೀವರಸನ ಆಳ್ವಿಕೆಯ ಉಲ್ಲೇಖ ದೊರೆಯುತ್ತದೆ[೪೮೧]. ಪ್ರಥಮ ಬಾರಿಗೆ ಈತನಾಳ್ವಿಕೆಯನ್ನು ಉಲ್ಲೇಖಿಸುವ ಶಾಸನವು ಕ್ರಿ.ಶ. ೧೧೦೨ರ ಸಿರಗುಪ್ಪ ಶಾಸನವಾಗಿದೆ[೪೮೨]. ಈತನಿಗೆ ಮಾಕಣಾಂಬಿಕೆ ಎಂಬ ರಾಣಿಯಿದ್ದುದಾಗಿಯೂ, ಅವರಿಬ್ಬರಿಗೆ ಸೋವಿದೇವನೆಂಬ ಮಗನಿದ್ದುದಾಗಿಯೂ ತಿಳಿದುಬರುತ್ತದೆ[೪೮೩]. ಕ್ರಿ.ಶ. ೧೧೨೧ರಲ್ಲಿ ಈತನ ಮಗ ಸೋವಿದೇವನಾಳ್ವಿಕೆಯನ್ನು ಶಾಸನ ಉಲ್ಲೇಖಿಸುತ್ತದೆಯಾದ್ದರಿಂದ ಆ ವೇಳೆಗಾಗಲೇ ಈತ ಮರಣಿಸಿರಬಹುದು.

**ಸೋವಿದೇವ:**

ಒಂದನೆಯ ಭೀಮನ ಮಗನಾದ ಸೋವಿದೇವನು ಕ್ರಿ.ಶ. ೧೧೨೧ರ ವೇಳೆಗಾಗಲೇ ಆಳ್ವಿಕೆಯನ್ನು ನಡೆಸುತ್ತಿದ್ದನು[೪೮೪]. ಕುರುಗೋಡು ಸಿಂದ ಮನೆತನದ ಕೀರ್ತಿ ಪ್ರತಿಷ್ಠೆಯನ್ನು ಉನ್ನತಿಗೇರಿಸಿದ ಕೀರ್ತಿಯು ಇವನಿಗೆ ಸಲ್ಲುತ್ತದೆ. ಇಲ್ಲಿಯವರೆಗೆ ಪ್ರಾಂತೀಯ ಅರಸರುಗಳ ಕೈಕೆಳಗೆ ಮನ್ನೆಯ, ಮಹಾಸಾಮಂತರುಗಳಾಗಿ ಆಳ್ವಿಕೆ ನಡೆಸಿಕೊಂಡಿದ್ದ ಸಿಂದವಂಶದವರು, ಅವರಿಂದ ಮುಕ್ತರಾಗಿ ನೇರವಾಗಿ ರಾಜಮನೆತನದವರ ಕೈಕೆಳಗೆ ಮಹಾಮಂಡಳೇಶ್ವರರಾಗಿ ಈತನ ಕಾಲದಲ್ಲಿ ಆಳ್ವಿಕೆ ಮಾಡತೊಡಗಿದ್ದನ್ನು ಕಾಣುತ್ತೇವೆ. ಆರನೆಯ ವಿಕ್ರಮಾದಿತ್ಯನ ನಂತರ ಬಂದ ಅರಸರುಗಳು ದುರ್ಬಲರಾಗಿದ್ದರಿಂದ ಅವರ ಮೇಲೆ ಹೊಯ್ಸಳರು ಮತ್ತು ಇತರೇ ಸಾಮಂತರುಗಳು ಧಾಳಿಯನ್ನು ಮಾಡತೊಡಗಿದ್ದುದು ಕಂಡುಬರುತ್ತದೆ. ಈ ವೇಳೆಯಲ್ಲಿ ಚಾಲುಕ್ಯ ಸಾಮ್ರಾಜ್ಯವನ್ನು ರಕ್ಷಿಸುವಲ್ಲಿ ಅನೇಕ ಅವರ ಸಾಮಂತರುಗಳು ಪ್ರಯತ್ನಿಸಿರುವದನ್ನು ನಾವು ಕಾಣುತ್ತೇವೆ. ಅಂತಹ ಪ್ರಯತ್ನದ ಫಲದಲ್ಲಿ ಸೋವಿದೇವನೂ ಕೂಡ ತನ್ನ ಪರಾಕ್ರಮವನ್ನು ಮೆರೆದಿರಬಹುದು. ಇದು ಅವನು ಧರಿಸಿದ್ದ ಬಿರುದುಗಳಿಂದ ಸ್ಪಷ್ಟವಾಗುತ್ತದೆ. ಅಲ್ಲದೇ ಈತ ಕ್ರಿ.ಶ. ೧೧೩೧ರ ವೇಳೆಗಾಗಲೇ[೪೮೫] ಕೇವಲ ೧೦ವರ್ಷಗಳ ಆಳ್ವಿಕೆಯ ಅವಧಿಯಲ್ಲಿಯೇ ಮರಣಿಸಿದ್ದರಿಂದ ಅವನು ಸಹಜವಾಗಿ ಈ ಯುದ್ಧಗಳಲ್ಲಿ ಭಾಗವಹಿಸಿ ವೀರಮರಣ ಹೊಂದಿರಬಹುದು.

ಸೋವಿದೇವನು ಸಿಂದಕುಳಕಮಳ ಮಾರ್ತಾಂಡ, ಸಮರಪ್ರಚಂಡ, ವಿಮಳಯಶೋದ್ಭವ, ವಿಜಯ ಪಟುಪಟಹಘೋಷಣ, ಗುಣರತ್ನಭೂಷಣ, ನುಡಿದಂತೆಗಂಡ, ಸಾಹಸೋತ್ತುಂಗ, ಗಾಶಳರಾಯಿಗ ಮೃಗಬೇಟೆಕಾರ, ಸತ್ಯವಿಖ್ಯಾತ, ಆಹವವೀರ, ವೈರಿಮದಾಮೋದ, ಉದ್ವೃತ್ತಾರಾತಿ ಮಂಡಳೀಕತಾರಕ ಷಡಾನನ, ಸಾಹಸ ಪಂಚಾನನ, ಮನುಜ ಮನೋಜಮೂರ್ತಿ, ಪಾತಾಳಚಕ್ರವರ್ತಿ, ಪರನಾರಿದೂರ ಮೊದಲಾದ ಬಿರುದುಗಳನ್ನು ಧರಿಸಿದ್ದನು. ಈತನ ರಾಣಿಯ ವಿವರಗಳು ದೊರೆಯುವದಿಲ್ಲ. ಆದರೆ ಈತನಿಗೆ ಇಮ್ಮಡಿಭೀಮ, ಒಂದನೆಯ ರಾಚಮಲ್ಲ, ದೋವರ(ದೇವರಾಜ), ದೇವ ಮತ್ತು ಫಣಿರಾಜರೆಂಬ ಐವರು ಮಕ್ಕಳಿದ್ದರೆಂದು ಕೊಂಚಗೆರೆ ಶಾಸನದಿಂದ ತಿಳಿದುಬರುತ್ತದೆ[೪೮೬].

**ಎರಡನೆಯ ಭೀಮ:**

ಸೋವಿದೇವನ ನಂತರ ಆತನ ಹಿರಿಯ ಮಗನಾದ ಭೀಮನು ಆಳ್ವಿಕೆಗೆ ಬಂದನು. ಇವನನ್ನು ಶಾಸನಗಳು ಭೀಮ[೮೭], ಭೀವರಸ[೮೮], ಭೀಮದೇವ[೮೯] ಎಂದು ಕರೆದಿವೆ. ಬೈಲೂರು ಶಾಸನದಲ್ಲಿ ಈತನಿಗೆ ಸಿಂದರ ಯಾವುದೇ ಪ್ರಶಸ್ತಿಗಳನ್ನು ಉಲ್ಲೇಖಿಸಿಲ್ಲ. ಅಲ್ಲಿ ಕೇವಲ ಮಹಾಮಂಡಳೇಶ್ವರ ಬಳ್ಳಾರೆಯ ಬೀವರಸ ಎಂದು ಉಲ್ಲೇಖಿಸಲಾಗಿದೆ. ಆದಕಾರಣ ಡಾ.ದಿನಕರ ದೇಸಾಯಿಯವರು ಈತನನ್ನು ಕುರುಗೋಡು ಸಿಂದರ ವಂಶದಲ್ಲಿ ಸೇರಿಸಿರುವದಿಲ್ಲ. ಆದರೆ ಕ್ರಿ.ಶ. ೧೧೪೨ರ ಕೊಂಚಗೆರೆ ಶಾಸನವು[೯೦] ಈ ಬೀವರಸನು ಕುರುಗೋಡು ವಂಶಕ್ಕೆ ಸೇರಿದವನೆಂದು ಸ್ಪಷ್ಟಪಡಿಸುತ್ತದೆ. ಬಳ್ಳಾರೆಯು ಬಲ್ಲಕುಂದೆ ನಾಡಿಗೆ ಸೇರಿದ ಗ್ರಾಮವಾಗಿರಬೇಕು. ಶಾಸಾನದ ಕಾಲಕ್ಕೆ ದತ್ತಿ ಬಿಡುವಾಗ ಈತನು ಬಳ್ಳಾರೆಯಲ್ಲಿದ್ದರಬೇಕು. ಹೀಗಾಗಿ ಅಲ್ಲಿ ಬಳ್ಳಾರೆ ಬೀವರಸ ಎಂದು ಶಾಸನ ಕರೆದಿದೆ. ಅಲ್ಲದೇ ಈತನ ತಮ್ಮನಾದ ಒಂದನೆಯ ರಾಚಮಲ್ಲನನ್ನು ಕೂಡ ಸಿಂದಗೆರೆಯ ಶಾಸಸನದಲ್ಲಿ ಬಳ್ಳಾರೆಯ ರಾಚಮಲ್ಲ ಎಂದು ಕರೆಯಲಾಗಿದೆ[೯೧]. ಹೀಗಾಗಿ ಭೀವರಸನು ಕುರುಗೋಡು ಸಿಂದರ ಎರಡನೆಯ ಭೀಮರಸನೇ ಆಗಿದ್ದಾನೆ. ಕೋಳೂರು ಶಾಸನದ ಪ್ರಕಾರ "ಅನಾಡಿಂಗಧಿನಾಥಂ ಶ್ರೀನಾರೀಕಾಂತನಮಳಗುಣಗಣನಿಳಯಂ ಭಾನುರುಚಿಸದೃಶತೇಜಂ ತಾನೆನೆ ಸಿಂದಕುಲತಿಲಕನಿರ್ಮಡಿ ಭೀಮಂ ಎಂದೂ, ಮುಂದೆ ಭೀಮನೃಪ ರಾಚಮಲ್ಲತ್ಯಾಗಮುತ್ಸಾಹದಿಂ ಧರಿತ್ರಿಯಂ ಪಾಳಿಸು"ತ್ತಿದ್ದಂತೆ ಎಂದು ಉಲ್ಲೇಖಿಸಲಾಗಿದೆ[೯೨]. ಹೀಗಾಗಿ ಎರಡನೆಯ ಭೀಮ ಮತ್ತು ರಾಚಮಲ್ಲರು ಜೊತೆಯಾಗಿಯೇ ಆಳ್ವಿಕೆ ನಡೆಸುತ್ತಿದ್ದಂತೆ ತಿಳಿದುಬರುತ್ತದೆ. ಆದರೆ ಸಿಂದಿಗೆರೆಯ ಎರಡು ಶಾಸನಗಳು[೯೩]ಈ ರಾಚಮಲ್ಲನನ್ನು ಸ್ವತಂತ್ರವಾಗಿ ಉಲ್ಲೇಖಿಸುತ್ತವೆ. ಕಾರಣ ಡಾ.ದಿನಕರ ದೇಸಾಯಿಯವರು ಎರಡನೆಯ ಭೀಮನು ಹೆಸರಿಗೆ ಮಾತ್ರ ಅರಸನಾಗಿದ್ದು, ಆಡಳಿತವೆಲ್ಲ ರಾಚಮಲ್ಲನ ಕೈಯಲ್ಲಿತ್ತೆಂದು ಅಭಿಪ್ರಾಯಪಟ್ಟಿದ್ದಾರೆ[೯೪]. ಇದಕ್ಕೆ ಆಧಾರವಾಗಿ ಕೊಂಚಗೆರೆಯ ಶಾಸನವೂ ಕೂಡ ಆ ರಾಚಮಲ್ಲದೇವಂ ಶ್ರೀಮತ್ತಂನ ಪಿರಿಯರಸಿ ಮಾಕಲದೇವಿಯುಂ ತಾನುಂ ರಾಜ್ಯಂಗೆಯ್ಯುತ್ತಮಿರೆ ಎಂದು ಸ್ಪಷ್ಟವಾಗಿಯೇ ಆತನಾಳ್ವಿಕೆಯನ್ನು ಉಲ್ಲೇಖಿಸಿದೆ[೯೫]. ಎರಡನೆಯ ಭೀಮನ ಕೊನೆಯ ಉಲ್ಲೇಖವು ಕ್ರಿ.ಶ. ೧೧೪೭ರ ಕೋಳೂರು ಶಾಸನ[೯೬]ದಲ್ಲಿ ಬರುವದರಿಂದ, ಇವನು ಕ್ರಿ.ಶ. ೧೧೪೭ರ ನಂತರ ಮರಣಿಸಿರಬೇಕು. ಅಲ್ಲಿಯವರೆಗೆ ಆತನು ಬದುಕಿದ್ದರೂ ಅವನ ತಮ್ಮನ ಕೈಯಲ್ಲಿಯೇ ಆಡಳಿತದ ಸಕಲ ಜವಾಬ್ದಾರಿಯಿತ್ತೆಂದು ತಿಳಿದುಬರುತ್ತದೆ.

ಈತನಿಗೆ ಫಣಿವಂಶ ಕಮಳದಿನಪ, ಫಣಿವಂಶಾಂಭೋಧಿ ವರ್ಧಮಾನ ಶಶಾಂಕ, ಫಣಿವಂಶ ಕುಮುದಚಂದ್ರ, ಫಣಿವಂಶ ಲಲಾಟತಿಲಕ, ಅಮಳಗುಣನಿಲಯ, ಭಾನುರುಚಿಸದೃಶತೇಜ ಮುಂತಾದ ಬಿರುದುಗಳಿದ್ದವು. ಇವನಿಗೆ ಮಕ್ಕಳಿದ್ದ ಬಗ್ಗೆ ಉಲ್ಲೇಖ ದೊರೆಯುವದಿಲ್ಲ.

**ಒಂದನೆಯ ರಾಚಮಲ್ಲ:**

ಎರಡನೆಯ ಭೀಮನ ಸಹೋದರನಾದ ಒಂದನೆಯ ರಾಚಮಲ್ಲನು ಅಣ್ಣನಾಳ್ವಿಕೆಯಲ್ಲಿಯೇ ರಾಜ್ಯಭಾರ ಕೈಕೊಂಡಿದ್ದನ್ನು ಶಾಸನಗಳು ಉಲ್ಲೇಖಿಸಿವೆ. ಈತನು ಕ್ರಿ.ಶ. ೧೧೪೯ ರಿಂದ ಕ್ರಿ.ಶ. ೧೧೭೩ರವರೆಗೆ ಆಳ್ವಿಕೆಮಾಡಿದ್ದು ಶಾಸನಗಳಿಂದ ತಿಳಿದುಬರುತ್ತದೆ[೧೯೭]. ಈತನನ್ನು ಬಳ್ಳಾರೆಯ ರಾಚಮಲ್ಲ[೧೯೮], ಬಳ್ಳಾರೆಯ . . .ಲ ದೇವರು[೧೯೯], ರಾಜಮಲ್ಲ[೨೦೦], ಪಿರಿಯ ರಾಚಮಲ್ಲ[೨೦೧], ರಾಚಮಲ್ಲ[೨೦೨], ಎಂದು ಬಲ್ಲಕುಂದೆ ನಾಡಿನ ಶಾಸನಗಳು ಉಲ್ಲೇಖಿಸಿವೆ. ಇವನು ಕುರುಗೋಡು ಸಿಂದಮನೆತನದ ಪ್ರಸಿದ್ಧ ಅರಸರುಗಳಲ್ಲಿ ಒಬ್ಬನಾಗಿದ್ದಾನೆ. ಕ್ರಿ.ಶ.೧೧೮೪ರ ಓರುವಾಯಿ ಶಾಸನ[೨೦೩]ದಲ್ಲಿ ಎರಡನೆಯ ರಾಚಮಲ್ಲನ ಉಲ್ಲೇಖವಿರುವದನ್ನು ಗುರುತಿಸಿ, ಡಾ. ದಿನಕರ ದೇಸಾಯಿಯವರು ಒಂದನೆಯ ರಾಚಮಲ್ಲನು ಕ್ರಿ.ಶ. ೧೧೪೬-೪೮ರ ಮಧ್ಯದಲ್ಲಿ ಮರಣಿಸಿರಬೇಕೆಂದು ಅಭಿಪ್ರಾಯಪಟ್ಟಿದ್ದಾರೆ[೨೦೪]. ಆದರೆ ಕ್ರಿ.ಶ. ೧೧೭೬ ಮತ್ತು ಕ್ರಿ.ಶ. ೧೧೭೭ರ ಕುರುಗೋಡಿನ ಶಾಸನ[೨೦೫]ಗಳಲ್ಲಿ ಈತನಾಳ್ವಿಕೆಯ ಉಲ್ಲೇಖಬರುವದರಿಂದ, ಈತನು ಕ್ರಿ.ಶ. ೧೧೭೭ರವರೆಗೆ ಬದುಕಿದ್ದು ಅಲ್ಲಿಯವರೆಗೆ ಆಳ್ವಿಕೆಯನ್ನು ಮಾಡಿದ್ದಾನೆಂದು ಹೇಳಬಹುದು. ರಾಚಮಲ್ಲನ ಆಳ್ವಿಕೆಯ ಕಾಲದಲ್ಲಿ ಕರ್ನಾಟಕದ ರಾಜಕೀಯ ಮತ್ತು ಧಾರ್ಮಿಕ ಕ್ಷೇತ್ರಗಳಲ್ಲಿ ಬದಲಾವಣೆಗಳುಂಟಾದವು. ಚಾಲುಕ್ಯ ಮೂರನೆಯ ತೈಲಪನನ್ನು ಸೋಲಿಸಿ ಕಲಚೂರಿ ಚಕ್ರವರ್ತಿ ಬಿಜ್ಜಳನು ತಾನೇ ಸ್ವಯಂ ಚಕ್ರವರ್ತಿ ಎಂದು ಘೋಷಿಸಿಕೊಂಡು ಕಲ್ಯಾಣದಿಂದ ಆಳ್ವಿಕೆಯನ್ನಾರಂಭಿಸಿದನು. ಹೀಗಾಗಿ ಇವನೂ ಕೂಡ ಅವರಿಗೆ ತನ್ನ ಬೆಂಬಲವನ್ನು ಸೂಚಿಸಿರಬಹುದು. ಅಲ್ಲದೇ ಈತನು ವೀರಶೈವ ಧರ್ಮವನ್ನು ಸ್ವಿಕರಿಸಿ ಕಲ್ಯಾಣದ ಶರಣರಿಗೆ ಬೆಂಗಾವಲಾಗಿ ನಿಂತನೆಂದು ಶಾಸನಗಳಿಂದ ವಿಧಿತವಾಗುತ್ತದೆ[೨೦೬]. ಕಲ್ಯಾಣದ ಕ್ರಾಂತಿಯ ಸಂದರ್ಭದಲ್ಲಿ ಪುರೋಹಿತವರ್ಗದವರಿಗೂ ಹಾಗೂ ವೀರಶೈವರಿಗೂ ಘರ್ಷಣೆಗಳು ನಡೆದಾಗ ಗಂಡಗತ್ತರಿ ನಾಚಯ್ಯ ಮತ್ತು ಕುರುಗೋಡು ರಾಚಮಲ್ಲರು ಮರಣಿಸಿದರೆಂದು ತಿಳಿದುಬರುತ್ತದೆ[೨೦೭].

ರಾಚಮಲ್ಲನು ಅನೇಕ ನಾಗಕುಳಸಂಸ್ತುತ್ಯ, ಗೋತ್ರವಾತ್ಸೈಕಗಾತ್ರ, ವಿಶುದ್ಧಸಿಂದುಕುಳಕೈರವ, ವನದಿವಾಕರ, ಪ್ರಚಂಡಮಂಡಳಿಕ ಮನೋವರ್ಗ ಪರ್ವತಭ್ಯೇದನ ವಜ್ರದಂಡ, ವಿದ್ವಿಷ್ಟ ವೀರಾದಾತಿ ಮಂಡಳಿಕ ಸುಂಡಾಳ ಪಂಚಾನನ, ಮಹೇಶ್ವರ ಪದಪದ್ಮಿನೀರಾಜಹಂಸ, ಕದನತ್ರಿಣೇತ್ರ, ವೈರಿಕೃತಾಂತ, ಸಿಂದಗೋವಿಂದ, ಸಿತಗರಗಂಡ, ಪಾತಾಳಚಕ್ರವರ್ತಿ, ಕಲಿಕಾಲನಂದಿಕೇಶ್ವರ[೨೦೮], ಸಿಂದಕುಲ ದಿನಕರ[೨೦೯], ಶತೃಭೂಬ್ರಿಜ್ವಯ ಪಟುಪಟಾಹ ಘೋಷಣ, ವಿಸ್ತೀರ್ಣೋರ್ವಿತಳೇಶ, ನೃಪಕುಳತಿಳಕ, ಉತ್ಸವಕರಂಡನ, ಕದನಪ್ರಚಂಡ, ಆಶ್ರಿತಸುರಭೂಜನ, ಉಜ್ವಳತೇಜ, ಅನೂನಸುಖೈಕ ಭಾಜನ, ಅಹವವಿನೋದ, ಆಶೇಷಜನ ಪ್ರಮೋದನ, ಅನತರಿಪುಮಂಡಳೇಶ್ವರ ನಿಳೇಶ್ವರ[೨೧೦], ಮದವದ್ವೈರಿ, ಕರೀಂದ್ರಕೇಸರಿ[೨೧೧] ಮುಂತಾದ ಬಿರುದುಗಳನ್ನು ಧರಿಸಿದ್ದನು.

ಒಂದನೆಯ ರಾಚಮಲ್ಲನಿಗೆ ಪಿರಿಯರಸಿ ಮಾಕಲದೇವಿ[೫೧೨] ಮತ್ತು ಸೋವಲದೇವಿ[೫೧೩] ಎಂಬ ಇಬ್ಬರು ರಾಣಿಯರಿದ್ದರು. ಇದರಲ್ಲಿ ಮಾಕಲದೇವಿಗೆ ಮಕ್ಕಳಿದ್ದಂತೆ ತೋರುವದಿಲ್ಲ. ಆದರೆ ಸೋವಲದೇವಿಗೆ ಇರುಂಗೋಳನೆಂಬ ಮಗನಿದ್ದುದು ತಿಳಿಯುತ್ತದೆ.

**ಇರುಂಗೋಳ:**

ರಾಚಮಲ್ಲ ಹಾಗೂ ಸೋವಲದೇವಿಯರ ಮಗನಾದ ಇರುಂಗೋಳನನ್ನು ಕುರುಗೋಡಿನ ಶಾಸನದಲ್ಲಿ[೫೧೪] ಯಶಶ್ರೀವರ ನತ್ರಿ್ಗಳ್ಗೆರಗಿದ ಪೊಂಗಳನಿಷ್ಟಕರಂಗಳಂ ಸಮಸ್ತಾವನಿಬ್ರತ್ಸ ಮಂಗಲ ಎಂದು ಕರೆಯಲಾಗಿದೆ. ಅಲ್ಲದೇ ಓರುವಾಯಿ ಶಾಸನದಲ್ಲಿ ಭುವನಖ್ಯಾತಿಯೊಳೆಸೆದಿರ್ದ ನಳನು ನಹುಷನ ಪ್ರಿಥಮಾಂಧಾತರ ದೊರೆಯೆನಿಸಿದನನ್ವಿತ ನಿರುಂಗೋಳ ದೇವನುರ್ಬಿಪಾಳಂ ಎಂದು ಉಲ್ಲೇಖಿಸಲಾಗಿದೆ. ಒಂದನೆಯ ರಾಚಮಲ್ಲನ ನಂತರ ಈತನೇ ಕುರುಗೋಡಿನ ಆಳ್ವಿಕೆಯನ್ನು ಕೈಕೊಳ್ಳಬೇಕಿತ್ತಾದರೂ, ಕ್ರಿ.ಶ. ೧೧೪೮ರ ಓರುವಾಯಿ ಶಾಸನ ಇವನ ಮಗ ಎರಡನೆಯ ರಾಚಮಲ್ಲ ಅಜ್ಜನೊಂದಿಗೆ ನಾಡಾಳಿತದಲ್ಲಿ ತೊಡಗಿದ್ದನ್ನು ಸೂಚಿಸಿದೆ[೫೧೫]. ಹೀಗಾಗಿ ಈತನು ಅಕಾಲ ಮರಣಕ್ಕೀಡಾಗಿರಬೇಕು. ಆದರೆ ಡಾ.ದಿನಕರ ದೇಸಾಯಿಯವರು ಈತನ ಆಳ್ವಿಕೆಯ ಅವಧಿ ಅತೀ ಕಡಿಮೆ ಅವಧಿಯದ್ದಾಗಿತ್ತೆಂದು ಅದಕ್ಕಾಗಿ ಈತನ ಶಾಸನಗಳು ಕಂಡುಬರುವದಿಲ್ಲವೆಂದು ಹೇಳುತ್ತಾ, ಬಹುಷಃ ಈತನು ೩ವರ್ಷಗಳ ಕಾಲ ಆಳಿರಬಹುದೆಂದು ಊಹಿಸಿದ್ದಾರೆ[೫೧೬]. ಇರುಂಗೋಳನಿಗೆ ಬಲದೇವಿಯೆಂಬ ರಾಣಿಯಿದ್ದು ಅವಳಿಗೆ ರಾಚಮಲ್ಲ ಮತ್ತು ಸೋಮಭೂಪಾಲರೆಂಬ ಮಕ್ಕಳು ಜನಿಸಿದರೆಂದು ಕುರುಗೋಡಿನ ಒಂದು ಶಾಸನ ತಿಳಿಸಿದರೆ[೫೧೭], ಅಲ್ಲಿಯದೇ ಇನ್ನೊಂದು ಶಾಸನ ಇರುಂಗೋಳನಿಗೆ ಏಚಲದೇವಿಯೆಂಬ ರಾಣಿಯಿದ್ದು ಅವಳಿಗೆ ರಾಚಮಲ್ಲನೆಂಬ ಮಗನಿದ್ದುದಾಗಿ ತಿಳಿಸುತ್ತದೆ[೫೧೮]. ಆದರೆ ಡಾ.ದಿನಕರ ದೇಸಾಯಿಯವರು ಬಹುಷಃ ಈ ಎರಡೂ ಹೆಸರುಗಳು ಒಬ್ಬಳಿಗೇ ಇದ್ದಿರಬಹುದು, ಒಂದು ಶಾಸನದಲ್ಲಿ ಅವಳ ಒಬ್ಬ ಮಗನನ್ನು ಮಾತ್ರ ಉಲ್ಲೇಖಿಸಿರಬಹುದೆಂದು ಅಭಿಪ್ರಾಯಪಟ್ಟಿದ್ದಾರೆ[೫೧೯]. ಕುರುಗೋಡ ಉಜಾಳೇಶ್ವರ ದೇಗುಲದ ಅಂತರಾಳದ ದ್ವಾರಶಾಖೆಗಳ ಕೆಳಭಾಗದಲ್ಲಿರುವ ಮೂರ್ತಿಗಳ ಕೆಳಗೆ ಕೆತ್ತಲಾದ ಒಂದೆ ಸಾಲಿನ ಶಾಸನ ಈ ಏಚಲದೇವಿಯನ್ನು ಶ್ರೀಲೋಕಾಪುರದೇಚಲದೇವಿ ಎಂದು ಉಲ್ಲೇಖಿಸುತ್ತದೆ[೫೨೦]. ಆದರೆ ಈ ಲೋಕಾಪುರ ಯಾವುದೆಂದು ಸ್ಪಷ್ಟವಾಗುವದಿಲ್ಲ.

**ಎರಡನೆಯ ರಾಚಮಲ್ಲ:**

ಇರುಂಗೋಳನ ಮಗನಾದ ಎರಡನೆಯ ರಾಚಮಲ್ಲನು ಅವನ ನಂತರ ಆಳ್ವಿಕೆಗೆ ಬಂದನು. ಈತನು ತನ್ನ ಅಜ್ಜ ಒಂದನೆಯ ರಾಚಮಲ್ಲನ ಆಳ್ವಿಕೆಯ ಕಾಲದಲ್ಲಿಯೇ ಬಲ್ಲಕುಂದೆ ನಾಡಿನ ನಾಡಾಳಿತದಲ್ಲಿ ತೊಡಗಿದ್ದನ್ನು ಕ್ರಿ.ಶ. ೧೧೪೮ರ ಓರುವಾಯಿ ಶಾಸನ ಉಲ್ಲೇಖಿಸಿದೆ. ಅಲ್ಲದೇ ಶಾಸನದಲ್ಲಿ ಸ್ಥಿರಸತ್ಯವದಿಮ್ಮಡಿ ಬಂಧು ದುರತರದಾನಾದಿ ನಿಕಳಗುಣ ದಿಮ್ಮಡಿಯಿಂ ದೊರೆವೆತ್ತುದು ಪೆಸರಿಂತೀ ಧರೆಗಿಮ್ಮಡಿ ರಾಚಮಲ್ಲದೇವನೊಳೆಸನಂ ಎಂದು

ಹೇಳಲಾಗಿದೆ[೨೨೧]. ಹೀಗೆ ಅಜ್ಜನ ಕಾಲದಲ್ಲಿಯೇ ಆಡಳಿತದಲ್ಲಿ ಅನುಭವ ಹೊಂದಿದ ಈತನು, ಈ ಮನೆತನದ ಮತ್ತೊಬ್ಬ ಪ್ರಸಿದ್ಧ ಅರಸನಾಗಿದ್ದಾನೆ. ಕುರುಗೋಡು ಶಾಸನದಲ್ಲಿ ಪೊಡವಿಯ ಸಮಸ್ತ ಭಕ್ತರ ನಡುವೆ ಮೃಡನಂ ಮೆಚ್ಚಿ . ನಿಚ್ಚಾವರವಂ ಕುಡಲಿರ್ಮಡಿ ರಾಚಮಲ್ಲದೇವಂ ಪಡೆದಂ ನಿತ್ಯಪ್ರಾಸಾದ ರಾಜ್ಯಶ್ರೀಯಂ ಎಂದು ಬಣ್ಣಿಸಲಾಗಿದೆ[೨೨೨]. ಕುರುಗೋಡದ ಇನ್ನೊಂದು ಶಾಸನವು ಈತನನ್ನು ಕ್ಷತ್ರಚಾರಿತ್ರಸಂಪದನೆಂದು ಹೊಗಳಿದೆ[೨೨೩]. ಚಾಲುಕ್ಯ ನಾಲ್ಕನೆಯ ಸೋಮೇಶ್ವರನು ಮತ್ತೆ ಕಲ್ಯಾಣಿಯ ಕಲಚೂರಿಗಳನ್ನು ಹತ್ತಿಕ್ಕಿ ಚಾಲುಕ್ಯರ ಆಳ್ವಿಕೆಯನ್ನು ಪುನರಾರಂಭಿಸಿದನು. ಹೀಗಾಗಿ ಮತ್ತೆ ಸಿಂದರು ಕಲ್ಯಾಣಿ ಚಾಲುಕ್ಯರ ಸಾಮಂತರಾದರು. ಕ್ರಿ.ಶ. ೧೧೮೧-೮೨ರ ಕುರುಗೋಡು ಶಾಸನದಲ್ಲಿ ಚಾಲುಕ್ಯ ನಾಲ್ಕನೆಯ ಸೋಮೇಶ್ವರನ ಮಹಾಮಂಡಳೇಶ್ವರರೆಂದು ಇವರನ್ನು ಕರೆಯಲಾಗಿದೆ[೨೨೪]. ಆದರೆ ಚಾಲುಕ್ಯ ಸಾಮ್ರಾಜ್ಯವು ಹೊಯ್ಸಳ ಮತ್ತು ಸೇವುಣರ ಧಾಳಿಗಳ ಮುಂದೆ ಬಹುಕಾಲ ನಿಲ್ಲದೇ ಕ್ರಿ.ಶ. ೧೧೯೮ರ ವೇಳೆಗೆ ಅವನತಿಯಾಯ್ತು[೨೨೫]. ಚಾಲುಕ್ಯರ ಪತನದ ನಂತರ ಅವರ ಇತರ ಮಾಂಡಳಿಕರಂತೆ ಕುರುಗೋಡು ಸಿಂದ ಮನೆತನವೂ ಸ್ವತಂತ್ರತೆಯನ್ನು ಘೋಷಿಸಿಕೊಂಡಿತು. ಕಾರಣ ನಂತರದ ಇವರ ಶಾಸನಗಳು ಸ್ವತಂತ್ರವಾಗಿ ಯಾವ ಅರಸರುಗಳ ಉಲ್ಲೇಖವಿಲ್ಲದೇ ದೊರೆಯುತ್ತವೆ[೨೨೬]. ಇಮ್ಮಡಿ ರಾಚಮಲ್ಲನ ಕೊನೆಯ ಉಲ್ಲೇಖ ಕ್ರಿ.ಶ. ೧೧೯೫ರ ಓರುವಾಯಿ ಶಾಸನವಾಗಿದೆ[೨೨೭]. ಹೀಗಾಗಿ ಈತನು ಕ್ರಿ.ಶ. ೧೧೯೫ರ ನಂತರದಲ್ಲಿ ಮೃತನಾಗಿರಬಹುದು.

ಇವನು ಸಿಂದಕುಳಕಮಳ ಮಾರ್ತಾಂಡ, ಸಿತಗರಗಂಡ, ಸಮುದ್ಧಂಡ ಮಂಡಳೀಕ ಭಯಂಕರ, ಚತುರಂಗಾನೀಕ, ದಶ-ದಿಶಾವರ್ತಿತ ಧವಳಕೀರ್ತಿ, ಪಾತಾಳಚಕ್ರವರ್ತಿ, ಸಂಗಡದ ಮಂಡಳೀಕರ ತಲೆಯಂಕಾವನೆ ಎಂದು ಮುಂತಾಗಿ ಬಣ್ಣಿಸಲ್ಪಟ್ಟಿದ್ದಾನೆ[೨೨೮]. ಇದರಿಂದ ಈತನು ಚಾಲುಕ್ಯರ ಇತರ ಸಾಮಂತರುಗಳಿಗಿಂತ ಬಲಿಷ್ಟನೂ, ಪ್ರಭಾವಶಾಲಿಯೂ ಆಗಿದ್ದನೆಂದು ತಿಳಿಯುತ್ತದೆ. ಇವನಿಗೆ ವೀರಕಲಿದೇವರಸನೆಂಬ ಮಗನಿದ್ದುದಾಗಿ ತಿಳಿಯುತ್ತದೆ. ಆದರೆ ಈತನ ರಾಣಿಯ ಉಲ್ಲೇಖವು ದೊರೆಯುವದಿಲ್ಲ.

**ವೀರಕಲಿದೇವರಸ:**

ಈತನು ಇಮ್ಮಡಿ ರಾಚಮಲ್ಲನ ಮಗನಾಗಿದ್ದು, ಕ್ರಿ.ಶ. ೧೧೯೯ರಲ್ಲಿ ಬಲ್ಲಕುಂದೆ ನಾಡನ್ನಾಳುತ್ತಿದ್ದನೆಂದು ಹಂಪೆಯ ಶಾಸನದಿಂದ ತಿಳಿದುಬರುತ್ತದೆ[೨೨೯]. ಆದರೆ ಈ ವೇಳೆಗಾಗಲೇ ಹೊಯ್ಸಳರ ಧಾಳಿ ಆರಂಭವಾಗಿದ್ದರಿಂದ ಈತನಿಗೆ ಕುರುಗೋಡನ್ನು ರಕ್ಷಿಸಿಕೊಳ್ಳಲಾಗಲಿಲ್ಲ. ಕ್ರಿ.ಶ. ೧೨೦೭ರಿಂದ ಬಲ್ಲಕುಂದೆ ನಾಡಿನ ಶಾಸನಗಳು ಹೊಯ್ಸಳ ವೀರಬಲ್ಲಾಳನ ಆಳ್ವಿಕೆಯನ್ನು ಉಲ್ಲೇಖಿಸುತ್ತವೆ[೨೩೦]. ಕ್ರಿ.ಶ. ೧೨೦೫ರ ವೇಳೆಗಾಗಲೇ ಸಿಂದ ವೀರಕಲಿದೇವರಸನು ಹೊಯ್ಸಳರಿಂದ ಸೋಲನ್ನನುಭವಿಸಿರಬೇಕು. ಹೊಯ್ಸಳ ವೀರಬಲ್ಲಾಳನ ಸಾಮಂತ ವೀರಗೋಮರಸನು ಸಿಂದಸಿಗುಣಾನ್ವಯ ಎಂಬ ಬಿರುದನ್ನು ಧರಿಸಿದ್ದನ್ನು ಕುರುವತ್ತಿ ಶಾಸನ ತಿಳಿಸಿದೆ[೨೩೧]. ಹೀಗಾಗಿ ಗೋಮರಸನಿಂದ ವೀರಕಲಿದೇವರಸನು ಹತನಾಗಿರಬಹುದಾದ ಸಾಧ್ಯತೆಯಿದೆ. ಅಲ್ಲದೇ ಕ್ರಿ.ಶ. ೧೨೨೪ರ ಹರಿಹರ ಶಾಸನವು ಎರಡನೆಯ

ಬಲ್ಲಾಳನು ಕುರುಗೋಡು ಕೋಟೆಯನ್ನು ಗೆದ್ದುಕೊಂಡನೆಂದು ತಿಳಿಸುತ್ತದೆ. ಕಲಿದೇವರಸನ ನಂತರ ನಮಗೆ ಈ ಮನೆತನದ ಯಾವುದೇ ವ್ಯಕ್ತಿಯ ಉಲ್ಲೇಖವು ದೊರೆಯುವದಿಲ್ಲವಾದ್ದರಿಂದ, ಇವನ ನಂತರ ಈ ಮನೆತನ ಇತಿಹಾಸದಿಂದ ಕಣ್ಮರೆಯಾಯಿತು.

## ಕ) ಯಲಬುರ್ಗಿಯ ಸಿಂದರು:

ಬಾಗಡೆಗೆ ಸಿಂದರ ನಾಗಾದಿತ್ಯನ ಇನ್ನೊಬ್ಬ ರಾಣಿಯಿಂದ ಏಳು ಜನ ಮಕ್ಕಳು ಜನಿಸಿದರು ಅವರು ಯಲಬುರ್ಗಿ ಸಿಂದ ಮನೆತನಕ್ಕೆ ಒಡೆಯರಾದರು. ಅವರಿಗೆ ನಾಗಾದಿತ್ಯನು ತಾನು ಗೆದ್ದುಕೊಂಡಿದ್ದ ಯಲಬುರ್ಗಿ ಮತ್ತು ಅದರ ಸುತ್ತಲಿನ ಪ್ರದೇಶಗಳನ್ನು ಬಿಟ್ಟುಕೊಟ್ಟನೆಂದು ದಿನಕರ ದೇಸಾಯಿಯವರು ಅಭಿಪ್ರಾಯಪಟ್ಟಿದ್ದಾರೆ[೧೩೨]. ಆ ಏಳು ಜನ ಸಹೋದರರೆಂದರೆ ಒಂದನೆಯ ಆಚುಗಿ, ನಾಕ, ಒಂದನೆಯ ಸಿಂಘಣ, ದಾಸ, ದಾಮ, ಒಂದನೆಯ ಚಾವುಂಡ ಮತ್ತು ಚಾವ.

**ಒಂದನೆಯ ಆಚುಗಿ:**

ಯಲಬುರ್ಗಿ ಸಿಂದರ ವಂಶಾವಳಿಯನ್ನು ನೀಡುವ ಶಾಸನಗಳು ನಮಗೆ ಒಂದನೆಯ ಆಚುಗಿಯೇ ಅವರ ಮನೆತನದ ಮೂಪುರುಷನೆಂದು ತಿಳಿಸುತ್ತವೆ. ನಿಡಗುಂದಿ[೧೩೩] ಮತ್ತು ಸೂಡಿ[೧೩೪] ಶಾಸನಗಳು ಅವನನ್ನು ಆದಿಮಂಡಲಕ ಎಂದು ಬಣ್ಣಿಸಿವೆ. ಶಾಸನಗಳಲ್ಲಿ ಆಚುಗಿ, ಆಚುಗಿದೇವ, ಆಚರಸ ಮುಂತಾಗಿ ಉಲ್ಲೇಖಗೊಂಡಿದ್ದಾನೆ. ಈತನು ಪರನೃಪ ಮರ್ದನ, ಸುಭಟ, ಅನುಪಮ ವೈರಿ ಮಂಡಳಿಕ, ಸಿಂದಕುಲತಿಳಕ ಮುಂತಾದ ಬಿರುದುಗಳನ್ನು ಧರಿಸಿದ್ದನು. ಈತನು ಎರಡನೆಯ ಸೋಮೇಶ್ವರನ ಆಳ್ವಿಕೆಯಲ್ಲಿ ಆತನ ತಮ್ಮನಾದ ಆರನೆಯ ವಿಕ್ರಮಾದಿತ್ಯನ ನಂಬಿಗಸ್ಥ ಭಂಟನಾಗಿದ್ದನು. ಶಾಸನಗಳಲ್ಲಿ ಇವನನ್ನು ಮೊನೆಯೊಳುರ್ಪಂ ತೋರುತ್ತವನುವರದೊಳು ಬಲದೊಳು ಮರುತಂ ತ್ರಿಭುವನಮಲ್ಲನ ಕಟ್ಟಿದಲಗಿನಂತೆಸೆದ(ನು) ಆಚರಸ ಮಂಡಳೇಶ್ವರಂ ಭೂತಳದೊಳು ಎಂದು ಕರೆಯಲಾಗಿದೆ[೧೩೫]. ಹೀಗಾಗಿ ಈತನು ಆರನೆಯ ವಿಕ್ರಮಾದಿತ್ಯನ ಕಾಲದಲ್ಲಿ ಶೌರ್ಯ-ಸಾಹಸಗಳಿಂದ ಅವನ ಪರವಾಗಿ ಅನೇಕ ಯುದ್ಧಗಳಲ್ಲಿ ಭಾಗವಹಿಸಿದ್ದು ತಿಳಿದುಬರುತ್ತದೆ. ಅಲ್ಲದೇ ಮುಂದೆ ವಿಕ್ರಮಾದಿತ್ಯನು ಚಕ್ರವರ್ತಿಯಾದಾಗ ಯಲಬುರ್ಗಿ ಮತ್ತು ಆದರ ಸುತ್ತಮುತ್ತಲಿನ ಪ್ರದೇಶಗಳ ಆಡಳಿತವನ್ನು ಈತನಿಗೆ ವಹಿಸಿರಬೇಕೆಂದು ವಿದ್ವಾಂಸರ ಅಭಿಪ್ರಾಯವಾಗಿದೆ[೧೩೬]. ಸೂಡಿಯ ಶಾಸನದಲ್ಲಿ ಕೂಡ ಈತನು ಹಲವಾರು ಯುದ್ಧಗಳಲ್ಲಿ ಭಾಗವಹಿಸಿದ ವಿವರಗಳು ದೊರೆಯುತ್ತವೆ[೧೩೭]. ಈತನಿಗೆ ಬೊಮ್ಮ ಮತ್ತು ಸಿಂಗ ಎಂಬ ಇಬ್ಬರು ಮಕ್ಕಳಿದ್ದರು.

**ಒಂದನೆಯ ಸಿಂಘಣ:**

ಒಂದನೆಯ ಆಚುಗಿಯ ಮರಣದ ನಂತರ, ಆತನ ಮಕ್ಕಳು ಅಪ್ರಾಪ್ತವಯಸ್ಕರಾಗಿದ್ದರಿಂದ ಅವನ ನಂತರ ಅವನ ತಮ್ಮನಾದ ಒಂದನೆಯ ಸಿಂಘಣನು ಆಳ್ವಿಕೆಗೆ ಬಂದನು. ಆದರೆ ಆಚುಗಿಯ ನಂತರ ಈ ವಂಶದಲ್ಲಿ ಯಾರು

ಪಟ್ಟಕ್ಕೆ ಬಂದರೆಂಬುದರ ಬಗ್ಗೆ ವಿದ್ವಾಂಸರಲ್ಲಿ ವಾದವಿವಾದಗಳಿವೆ. ಡಾ.ದಿನಕರ ದೇಸಾಯಿಯವರು ಫ್ಲೀಟರಂತೆ ಆಚುಗಿಯ ನಂತರ ಆತನ ಹಿರಿಯ ಮಗ ಬೊಮ್ಮನೇ ಆಳ್ವಿಕೆ ಮಾಡಿದ್ದಾನೆಂದಿದ್ದಾರೆ[೫೩೮]. ಅವರು ನಿಡಗುಂದಿಯ ಶಾಸನದಲ್ಲಿ ಬರುವ ಸಿಂಘಣನು ಬೊಮ್ಮನ ತಮ್ಮ ಎರಡನೆಯ ಸಿಂಘಣನಾಗಿದ್ದಾನೆಂದಿದ್ದಾರೆ[೫೩೯]. ಆದರೆ ಈ ಸಿಂಘಣನು ಕ್ರಿ.ಶ. ೧೦೭೬ರಲ್ಲಿ ಕಿಸುಕಾಡು-೭೦[೫೪೦]ನ್ನು ಆಳುತ್ತಿದ್ದುದರಿಂದ ನಿಡಗುಂದಿಯ ಶಾಸನದಲ್ಲಿ ಬರುವ ಸಿಂಘಣನು ಬಹುಷಃ ಆಚುಗಿಯ ತಮ್ಮನಾದ ಸಿಂಘಣನಾಗಿರಬಹುದು ಎಂದು ಊಹಿಸಬಹುದು. ಆದರೆ ಇವನು ಸಿಂದರ ಯಾವುದೇ ಪ್ರಶಸ್ತಿಗಳನ್ನು ಧರಿಸಿಲ್ಲವಾದ್ದರಿಂದ ಈತನನ್ನು ವಿದ್ವಾಂಸರು ಉಪೇಕ್ಷಿಸಿರಬಹುದು[೫೪೧].

**ಚಾವುಂಡ ಮತ್ತು ಆತನ ಸಹೋದರು:**

ಸಪ್ತಸಹೋದರರಲ್ಲಿ ಆಚುಗಿಯ ನಂತರ ಸಿಂಘಣನು ಆಳ್ವಿಕೆಯನ್ನು ಕೈಕೊಂಡಿದ್ದರೆ[೫೪೨], ಉಳಿದವರು ಅವನಿಗೆ ಸಹಾಯಕರಾಗಿ ಆಡಳಿತದಲ್ಲಿ ನೆರವಾಗಿದ್ದಾರೆ. ನಾಕ, ಸಿಂಘ, ದಾಸ, ದಾಮ, ಚಾವುಂಡ ಮತ್ತು ಚಾವರುಗಳನ್ನು ಶಾಸನಗಳು ಗುಣೋನ್ನತರು, ಅಪ್ರತಿಮ ಭೂಪಾಳಚಳ ವಜ್ರದಂಡರು[೫೪೩], ಭೂಭ್ರೂಭಭುಜರು[೫೪೪], ಸಜ್ಜನನುತವಲ್ಲಿ[೫೪೫] ಎಂದು ಮುಂತಾಗಿ ಹೊಗಳಿವೆ. ಅಲ್ಲದೇ ಇವರು ತಮ್ಮ ವಿಶಿಷ್ಟ ಗುಣಗಳಿಂದಾಗಿ ನೃಪ, ಭೂಭುಜ, ಮಹೀಪ, ಧಾರಿಣೀಶ, ನರೇಂದ್ರ, ಭೂಮಿಪತಿ ಎಂದು ಮುಂತಾಗಿ ಸ್ತುತಿಸಲ್ಪಟ್ಟಿದ್ದಾರೆ[೫೪೬]. ಕ್ರಿ.ಶ. ೧೧೬೯ರ ಹಿರೇಮಣ್ಣೂರು ಶಾಸನದಲ್ಲಿ ಚಾವುಂಡನನ್ನು ಅಹಿತೋದ್ಯದ್ಭಳ ಚಾಳುಕಂ ಕದನದೊಳು ಮಾರಾಂತು ತಾಗಲು ಮಹಾಮಹಿಮಂ . . . . ಕೋಪದೋದವಿಂ ಕೊಂದಿಕ್ಕಿ ವಿದ್ದಿವಷ್ಟರಂ ಮಹಿಯೊಳು ತಾಳ್ದಿ . . . . ಮಹನೀಯಂ ಕಲಿಚಾವುಂಡ ಭೂಪನೆಸೆದಂ ಶ್ರೀ ಸಿಂದವಶೋದ್ಭವಂ ಎಂದು ಬಣ್ಣಿತನಾಗಿದ್ದಾನೆ[೫೪೭]. ಹೀಗೆ ಈ ಸಹೋದರರು ಆಚುಗಿಯ ನಂತರ ಆವನ ಮಗ ಬೊಮ್ಮನು ವಯಸ್ಕನಾಗುವವರೆಗೂ ಆಡಳಿತವನ್ನು ನೋಡಿಕೊಂಡಿದ್ದಾರೆ.

**ಬೊಮ್ಮ:**

ಆಚುಗಿಯ ಹಿರಿಯ ಮಗನಾದ ಈತನು ಸಿಂಘಣನ ನಂತರ ಆಳ್ವಿಕೆ ಕೈಕೊಂಡನು. ಇವನಿಗೆ ಅಧಿಕಪ್ರತಾಪನಿಧಿ, ಜಯಲಕ್ಷ್ಮೀರಮಣ, ಕೀರ್ತಿವಿಳಾಸ, ಸಿಂದವಾರ್ಧಿವರ್ದನಚಂದ್ರ ಎಂಬ ಬಿರುದುಗಳಿದ್ದವು[೫೪೮]. ಈತನ ಮೊದಲ ಉಲ್ಲೇಖವು ಕ್ರಿ.ಶ. ೧೦೮೫ರ ಸವಡಿಯ ಶಾಸನದಲ್ಲಿ ಬರುತ್ತದೆ[೫೪೯]. ಆರನೆಯ ವಿಕ್ರಮಾದಿತ್ಯನ ಮಹಾಮಂಡಳೇಶ್ವರನಾಗಿದ್ದ ಈತನು ತನ್ನ ಶೌರ್ಯ-ಸಾಹಸಗಳಿಂದ ಅವನಿಂದ ಅಪಾರ ಪ್ರಮಾಣದ ಸಿರಿಸಂಪತ್ತನ್ನು ಪಡೆದಿದ್ದನಲ್ಲದೇ, ತನ್ನ ಬಾಹುಸಾಮರ್ಥ್ಯದಿಂದ ಸ್ವರ್ಗವನ್ನು ನಾಚಿಸಿದ್ದನು. ಮತ್ತು ಪಂಡಿತನೂ, ಗುಣಸಾಗರನೂ ಆಗಿದ್ದನು[೫೫೦]. ಕ್ರಿ.ಶ. ೧೧೦೪-೦೫ರ ನರೇಗಲ್ಲ ಶಾಸನದಲ್ಲಿ ಈತನನ್ನು ಮಹಾಮಂಡಳೇಶ್ವರ ಬೊಮ್ಮರಸ ಎಂದು ಉಲ್ಲೇಖಿಸಲಾಗಿದೆ. ಈತನಿಗೆ ಪುತ್ರ ಸಂತಾನವಿಲ್ಲದ್ದರಿಂದ ಇವನ ನಂತರ ಇವನ ಸಹೋದರ ಎರಡನೆಯ ಸಿಂಗನು ಆಳ್ವಿಕೆಗೆ ಬಂದನು.

**ಎರಡನೆಯ ಸಿಂಗ:**

ಬೊಮ್ಮನ ನಂತರ ಆಳ್ವಿಕೆಗೆ ಬಂದ ಈತನನ್ನು ಶಾಸನದಲ್ಲಿ ಸಿಂಗ, ಸಿಂಹ, ಸಿಂಗರಸ, ಸಿಂಗದೇವ ಮುಂತಾಗಿ ಕರೆಯಲಾಗಿದೆ[೫೫೧]. ಕೆಲವು ಶಾಸನಗಳಲ್ಲಿ ಇವನನ್ನು ಬೊಮ್ಮನ ನಂತರ ಕಾಣಿಸಲಾಗಿದೆ. ಆದರೆ ಅನೇಕ ಶಾಸನಗಳಲ್ಲಿ ಈತನನ್ನು ಬೊಮ್ಮನ ತಮ್ಮಂ ಸಿಂಗಮಹೀತಳಪತಿ ಸಂಭವಂ ಆಚರಸಂ ಎಂದು ಹೇಳಲಾಗಿದೆ[೫೫೨]. ಈ ಉಲ್ಲೇಖವನ್ನು ಕಂಡಾಗ ನಮಗೆ ಈತನು ರಾಜ್ಯಪರಿಪಾಲನೆಯನ್ನು ಮಾಡಿರುವ ಸಂಭವ ಕಡಿಮೆಯೆಂದೆನಿಸುತ್ತದೆ. ಬಹುಷಃ ಈತನು ಅಕಾಲ ಮರಣಕ್ಕೆ ತುತ್ತಾಗಿರಬಹುದು. ಸಿಂಗನಿಗೆ ಕೇತಲದೇವಿಯೆಂಬ ರಾಣಿಯಿದ್ದಳು. ಶಾಸನದಲ್ಲಿ ಈಕೆಯನ್ನು ವಾಗ್ವಧೂದೇವಿ ಎಂದು ಕರೆಯಲಾಗಿದೆ[೫೫೩].

**ಎರಡನೆಯ ಆಚುಗಿ:**

ಸಿಂಗ ಮತ್ತು ಕೇತಲದೇವಿಯರ ಮಗನಾದ ಈತ ಅವನ ನಂತರ ಆಳ್ವಿಕೆಗೆ ಬಂದನು. ಈತನನ್ನು ಶಾನದಲ್ಲಿ ಸಿಂಗರಸನ ಪೇಶಳಪುತ್ರನೆಂದು ಕರೆಯಲಾಗಿದೆ[೫೫೪]. ಶಾಸನಗಳಲ್ಲಿ ಆಚ, ಆಚಿ, ಆಚಮ, ಆಚುಗಿ, ಆಚರಸ ಮತ್ತು ಆಚರಾಜನೆಂದು ವಿವಿಧ ಹೆಸರುಗಳಿಂದ ಉಲ್ಲೇಖಿಸಲಾಗಿದೆ. ಇವನ ಬಗ್ಗೆ ದೊರೆಯುವ ಪ್ರಥಮ ದಾಖಲೆಯೆಂದರೆ ಅಬ್ಬಿಗೇರಿ ಶಾಸನವಾಗಿದೆ[೫೫೫]. ಈತನಿಗೆ ಭುವನಖ್ಯಾತ, ನೂತನ ಮಾಂದಾತ, ಮಂಡಳಿಕ ಮದಗಜ ಮೃಗೇಂದ್ರ, ಭುಜಬಳ, ಮಂಡಳಿಕ ಭೀಮ, ಸಿಂಗರಸನ ಸುಂದರಮಗ, ಸಂಚರಿಸುವ ರಥ ಸಮೂಹ, ರಾಜ್ಯಶ್ರೀ ನಾರೀರಮಣ, ಗುಣನಿಳಯ, ಭೂನುತ ಶಾಸ್ತ್ರ ಕಳಾವಿಜ್ಞಾನ, ಮಂಡಳಿಕ ತಿಳಕ, ಪರಿಪಂಥಿವರೂಥಯೂಥ, ತ್ರಿಭುವನಮಲ್ಲ ಕೇಸರಿ ಎಂದು ಮುಂತಾಗಿ ಬಿರುದುಗಳಿದ್ದವು.

ಈತನ ಕಾಲದ ಪ್ರಮುಖ ಘಟನೆಯೆಂದರೆ ಆರನೆಯ ವಿಕ್ರಮಾದಿತ್ಯನ ವಿರುದ್ಧವಾಗಿ ಸ್ವತಂತ್ರರಾಗಲು ಬಯಸಿದ ಹಲವಾರು ಸಾಮಂತರುಗಳ ವಿರುದ್ಧ ಈತನು ಯುದ್ಧ ಕೈಕೊಳ್ಳಬೇಕಾಯ್ತು. ಅವರಲ್ಲಿ ಹೊಯ್ಸಳರು ಕದಂಬರುಗಳ ಮೇಲೆ ಈತ ಧಾಳಿಯಿಡಬೇಕಾಯ್ತು[೫೫೬]. ಈತನು ಯುದ್ಧ ಕೈಕೊಂಡಾಗ ಹೊಯ್ಸಳ ಸಿಂಹಾಸನದ ಮೇಲೆ ವಿಷ್ಣುವರ್ಧನನಿದ್ದರೆ, ಗೋವೆಯ ಕದಂಬರ ದೊರೆ ಎರಡನೆಯ ಜಯಕೇಶಿಯಿದ್ದನೆಂದು ತಿಳಿದುಬರುತ್ತದೆ[೫೫೭]. ನಂತರ ಪಾಂಡರಸ್ಯ(?), ಕರಹಾಡದ ಶಿಲಹಾರ ದೊರೆಗಳು ದಂಗೆಯದ್ದಾಗ ಅವರನ್ನೂ ಕೂಡ ಸದೆಬಡೆದು ಅವರು ಚಾಲುಕ್ಯರಿಗೆ ನಿಷ್ಠರಾಗಿರುವಂತೆ ಮಾಡಿದನಲ್ಲದೇ ಮಲೆಪರು, ಕೊಂಕಣರು, ಲಕ್ಷ್ಮಣರುಗಳನ್ನು ಓಡಿಸಿ, ಬೆನ್ನಟ್ಟಿ ವೈರಿಗಳನ್ನೆಲ್ಲ ಸಂಹರಿಸಿದನೆಂದು ಶಾಸನಗಳಿಂದ ತಿಳಿದುಬರುತ್ತದೆ[೫೫೮]. ಮುಂದೆ ಮಾಳವ, ಗೂರ್ಜರ, ಚೋಳ, ಚೇರ, ಕಳಿಂಗ, ವಂಗ ಮುಂತಾದ ಪ್ರಾಂತಗಳ ಅರಸರುಗಳು ಇವನಿಂದ ಸೋಲನ್ನನುಭವಿಸಿದರು[೫೫೯]. ಇದಲ್ಲದೇ ಡಾಹಳದ ಅಧಿಪತಿ, ಕಡಾರ ಕನ್ನನನ್ನು ಬೆನ್ನತ್ತಿ ಹೋಗಿ ಕೊಂದನು[೫೬೦]. ಬೊಪ್ಪಭೂಪ, ಜಾಹುತಿ, ಹೂಣರುಗಳನ್ನು ಕೂಡ ಈತನು ಸೋಲಿಸಿದನು. ಇವನು ಅವರಿಗೆಲ್ಲ ಸಿಂಹಸ್ವಪ್ನನಾಗಿದ್ದನಲ್ಲದೇ ಅವನ ಹರಿತವಾದ ಖಡ್ಗದಲ್ಲಿ ಅವರೆಲ್ಲ ತಮ್ಮ ರಾಣಿಯರ ಅಳರ್ಗಣ್ಣ

ಬೆಳಕನ್ನು ಕಾಣುತ್ತಿದ್ದರೆಂದು ಶಾಸನದಿಂದ ಅರಿವಾಗುತ್ತದೆ[೫೬೧]. ಆದರ ಇಲ್ಲಿ ಉಲ್ಲೇಖಿತವಾಗಿರುವ ಪ್ರಾಂತ್ಯಗಳಲ್ಲಿನ ಅರಸರುಗಳಲ್ಲಿ ಕೆಲವರು ಯಾರೆಂಬುದು ಸ್ಪಷ್ಟವಾಗುವದಿಲ್ಲ. ಒಟ್ಟಿನಲ್ಲಿ ಈತನು ಚಾಲುಕ್ಯ ಆರನೆಯ ವಿಕ್ರಮಾದಿತ್ಯನ ನೆಚ್ಚಿನ ಭಂಟನಾಗಿದ್ದುಕೊಂಡು ಅವನ ಅನೇಕ ಯುದ್ಧಗಳಲ್ಲಿ ಭಾಗವಹಿಸಿದ್ದನೆಂಬುದು ಸಂದೇಹವಿಲ್ಲದ ಮಾತಾಗಿದೆ.

ಅಪ್ರತಿಮ ಶೂರನಾದ ಆಚರಸನನ್ನು ಶಾಸನಗಳು ವರ್ಣಿಸಿದ್ದು ಹೀಗೆ - ಸಮುದ್ರ ಉಕ್ಕೇರಿ ಉಪ್ಪಿನ ಕಟ್ಟೆಯನ್ನು ನಾಶಮಾಡುವಂತೆ ಆತನು ವೈರಿಗಳನ್ನು ನಾಶಗೊಳಿಸುತ್ತಿದ್ದನು[೫೬೨]. ವೈರಿಗಳ ಸೈನ್ಯವೆಂಬ ಹಾವಿಗೆ ಗರುಡನಂತಿದ್ದ ಈತನ ಕೀರ್ತಿಯು ಮಂದಾರ ಪರ್ವತಕ್ಕೆ ಹೊನಲಾಗಿ ಹರಿಯಿತು. ಕಾಮಿನಿಯರಿಗಿಂತ ನೂರ್ಮಡಿ ಚೆಲುವನ್ನು ಹೊಂದಿದ್ದ ಆಚರಸನು ಪಂಡಿತರಿಂದಲೂ ಸ್ತುತಿಸಲ್ಪಟ್ಟಿದ್ದನು[೫೬೩]. ಸಾಹಸ ಸಮುದ್ರನಾದ ಈತನು ಜಗ್ಗುವಿನ ವಂಶವೆಂಬ ಗೋದಿಯನ್ನು ಬೀಸುವ ಕಲ್ಲಿನಂತಿದ್ದನು. ಕೀಳುಮಾತಿನ, ಮೋಸವಂಚನೆಯ ಸಿಂಗನ ದಶಾಪಟ್ಟದಂತಿದ್ದನು[೫೬೪]. ಆಚುಗಿಗೆ ಮಹಾದೇವಿ ಮತ್ತು ಚಂದಲದೇವಿಯರೆಂಬ ಇಬ್ಬರು ಮಡದಿಯರಿದ್ದು, ಅವರಲ್ಲಿ ಮಹಾದೇವಿಯಿಂದ ಪೆರ್ಮಾಡಿ, ಚಂದಲದೇವಿಯಿಂದ ಚಾವುಂಡರು ಜನಿಸಿದರೆಂದು ತಿಳಿದುಬರುತ್ತದೆ[೫೬೫]. ಆಚರಸನ ಬಗ್ಗೆ ತಿಳಿಸುವ ಕೊನೆಯ ದಾಖಲೆಯಂದರೆ ಕ್ರಿ.ಶ. ೧೧೨೫ರ ಅಬ್ಬಿಗೇರಿಯ ಶಾಸನವಾಗಿದೆ[೫೬೬].

**ಒಂದನೆಯ ಪೆರ್ಮಾಡಿ:**

ಆಚುಗಿಯ ನಂತರ ಆಳ್ವಿಕೆಗೆ ಬಂದ ಪೆರ್ಮಾಡಿ ಅವನ ಮಗನಾಗಿದ್ದು, ತಂದೆಯಂತೆಯೇ ಚಾಲುಕ್ಯರಿಗೆ ಅಪಾರ ಪ್ರಮಾಣದ ಸೇವೆ ಸಲ್ಲಿಸಿದವನಾಗಿದ್ದಾನೆ. ಶಾಸನದಲ್ಲಿ ಇವನನ್ನು ಸಕಲ ಜನರಿಗೆ ಹರ್ಷವನ್ನು ನೀಡುವದಕ್ಕಾಗಿ ಜನಿಸಿದವನೆಂದು ಉಲ್ಲೇಖಿಸಲಾಗಿದೆ[೫೬೭]. ಈತನಿಗೆ ಯದುಘ ವಿಕ್ರಮ, ಖೇಚರ ಕೀರ್ತಿ, ಮನೋಜ್ಞಾಚರಣ, ರಣೋದ್ಧತ ವಿರುದ್ಧ ನ್ರಿಪಾಳಕಾಜಾಳ, ವಿದ್ಯಾಚಾರ್ಯ, ಸಿಂದಕುಳಮಾರ್ತ್ತಾಂಡ, ತೀವ್ರಪ್ರತಾಪ, ಅಸಮ ಸಾಹಸತುಂಗ, ಮಂಡಳಿಕ ಕುಸುಮಕೋದಂಡ, ಕಳಹಯಾರೂಢ, ಅಸಹಾಯ ಶೌರ್ಯ, ನಾನಾನಯೋಪಾಯ ನಿಪುಣ ಚಾಣಕ್ಯ, ರಣಾಂಗಣ ಧುರೀಣ, ಭೋಗೋಪಭೋಗ ಸಂಕ್ರಂದನ, ಅನೇಕ ವಿಧ ದುರ್ಗವರ್ಗ ತ್ರಿಣೇತ್ರ, ಶರಣಾಗತ ವಜ್ರಪಂಜರ, ಮಂಡಳೀಕ ದಿಕ್ಕುಂಜರ, ಸುಪ್ರತಾಪ ಚರಿತಚಿತ್ತ ಮುಂತಾಗಿ ಬಿರುದುಗಳಿದ್ದವು.

ಆರನೆಯ ವಿಕ್ರಮಾದಿತ್ಯನ ಕೊನೆಗಾಲದಲ್ಲಿ ಆಳ್ವಿಕೆಗೆ ಬಂದ ಇವನು, ಚಾಲುಕ್ಯರ ಸಾಮ್ರಾಜ್ಯಕ್ಕೆ ಮುಂದೆ ಒದಗಿಬಂದಂತಹ ಕಂಟಕಗಳನ್ನು ತೊರೆಯುವಲ್ಲಿ ಪ್ರಮುಖಪಾತ್ರ ವಹಿಸಿದನು. ವಿಕ್ರಮಾದಿತ್ಯನ ಮರಣದ ನಂತರ ಮತ್ತೊಮ್ಮೆ ಅವನ ಸಾಮಂತರುಗಳು ಸಮಯದ ಸದುಪಯೋಗ ಪಡೆದುಕೊಳ್ಳಲು ಸ್ವತಂತ್ರರಾಗಲು ಹವಣಿಸಿ ದಂಗೆಯೆದ್ದರು. ಆಗ ಪೆರ್ಮಾಡಿಯು ಮತ್ತೊಮ್ಮೆ ಅವರನ್ನು ಸದೆಬಡಿಯುವದರೊಂದಿಗೆ ತಂದೆಯಂತೆ ಚಾಲುಕ್ಯ ಸಾಮ್ರಾಜ್ಯವನ್ನು ರಕ್ಷಿಸಿದನು. ಹಾಗೆ ದಂಗೆಯೆದ್ದ ಸಾಮಂತರುಗಳಲ್ಲಿ ಹೊಯ್ಸಳ ವಿಷ್ಣುವರ್ಧನನನ್ನು ತುಂಗಭದ್ರೆಯ ಆಚೆಗೆ ಅಟ್ಟಿದನಲ್ಲದೇ, ಬೇಲೂರಿನವರೆಗೂ ಬೆನ್ನತ್ತಿ ಹೋಗಿ ಅದನ್ನು ವಶಪಡಿಸಿಕೊಂಡನೆಂದು ತಿಳಿದುಬರುತ್ತದೆ[೫೬೮].

ನಂತರ ಗೋವೆಯ ಕದಂಬ ದೊರೆ ಜಯಕೇಶಿಯು ಮತ್ತೊಮ್ಮೆ ಸ್ವತಂತ್ರನಾಗಲು ಬಯಸಿ ಕೊಂಕಣ ಚಕ್ರವರ್ತಿ ಎಂಬ ಬಿರುದನ್ನು ಧರಿಸಿದನು. ಆಗ ತನ್ನ ಚಕ್ರವರ್ತಿ ಮೂರನೆಯ ಸೋಮೇಶ್ವರನ ಆಜ್ಞೆಯ ಮೇರೆಗೆ ಅವನ ಮೇಲೆ ಧಾಳಿಯಿಟ್ಟು ಸೋಲಿಸಿದನು. ಅಲ್ಲದೇ ಕುಲಶೇಖರ ಮತ್ತು ಚಟ್ಟರನ್ನು ಮುತ್ತಿ ಕೊಂದುಹಾಕಿದನು[೫೯]. ಕ್ರಿ.ಶ. ೧೧೪೪ರ ನಂತರ ಈತನ ಉಲ್ಲೇಖವು ದೊರೆಯದ ಕಾರಣ ಈ ವೇಳೆಗಾಗಲೇ ಈತನು ಮರಣಿಸಿರಬಹುದು ಎಂದು ಭಾವಿಸಲಾಗಿದೆ.

**ಎರಡನೆಯ ಚಾವುಂಡ:**

ಒಂದನೆಯ ಪೆರ್ಮಾಡಿಯ ನಂತರ ಆತನಿಗೆ ಮಕ್ಕಳಿಲ್ಲದ್ದರಿಂದ ಅವನ ಸಹೋದರ ಚಾವುಂಡನು ಆಳ್ವಿಕೆಗೆ ಬಂದನು. ಕ್ರಿ.ಶ. ೧೧೫೧ರ ಅರಸೀಬೀದಿ ಶಾಸನವು ಈತನ ಪ್ರಥಮ ದಾಖಲೆಯಾಗಿದೆ[೬೦]. ಆದ್ದರಿಂದ ಇವನು ಕ್ರಿ.ಶ. ೧೧೪೪ ರಿಂದ ೧೧೫೧ರ ಮಧ್ಯದಲ್ಲಿ ಪಟ್ಟಕ್ಕೆ ಬಂದಿರಬಹುದೆಂದು ಊಹಿಸಬಹುದು. ಚಾವುಂಡನು ಚಂಡೋಗ್ರ ಪ್ರಬಳ ಪ್ರತಾಪ ನಿಳಯ, ಮಂಡಳಿಕಾಗ್ರಗಣ್ಯ, ಸಾಹಸೋತ್ತುಂಗ, ಭುಜಬಳ ಭೀಮ, ಸಾಹಸಿಕ ಮಂಡಳಿಕ ಮುಖದರ್ಪಣ, ಮಂಡಳಿಕ ಮುಕುಟಚೂಡಾಮಣಿ, ಸಿಂದಕುಳ ಮಂಡನ, ಸಿಂದವಂಶ ಚೂಡಾಮಣಿ, ಸಿಂದಕುಳಾಬ್ಜ ಭಾನು, ವಿದ್ವಿಷ್ಟಮಂಡಳಿಕ ವಜ್ರದಂಡ, ವಿಜಯಲಕ್ಷ್ಮೀಕಾಂತ, ರಣರಂಗ ಭೈರವ, ವಿರೋಧಿ ಮಂಡಳೇಶ, ಕದನಪ್ರಚಂಡ, ನುಡಿದಂತೆ ಗಂಡ ಎಂಬ ಅನೇಕ ವಿರೋಚಿತ ಬಿರುದುಗಳನ್ನು ಹೊಂದಿದ್ದನು.

ಚಾಲುಕ್ಯರ ಸಾಮಂತನಾಗಿದ್ದ ಈತನ ಕ್ರಿ.ಶ. ೧೧೫೫ರ ಹೊಸೂರು ಶಾಸನವು ಅವರನ್ನು ಉಲ್ಲೇಖಿಸದೇ ಕೇವಲ ಸಿಂಧರ ಆಳ್ವಿಕೆಯನ್ನು ಮಾತ್ರ ಹೇಳಿದೆ[೬೧]. ಕ್ರಿ.ಶ. ೧೧೬೦ರ ಬೆಂಚನಮಟ್ಟಿ ಶಾಸನದ ಪ್ರಕಾರ ಈತನು ಹೊಯ್ಸಳ ಮತ್ತು ಪಾಂಡ್ಯರೊಡನೆ ಹೋರಾಡಿದಂತೆ ವಿವರಿಸಿದೆ[೬೨]. ಚಾಲುಕ್ಯರ ಬಲ ತಗ್ಗಿದ್ದರಿಂದ ಹೊಯ್ಸಳ ಮತ್ತು ಪಾಂಡ್ಯರು ಸ್ವತಂತ್ರರಾಗುವ ಪ್ರಯತ್ನವನ್ನು ಮೊದಲಿನಿಂದಲೇ ಆರಂಭಿಸಿದ್ದರು. ಆ ಪ್ರಯತ್ನದ ಮುಂದುವರಿಕೆ ಇದಾಗಿರಬಹುದು. ಆಗ ಅವರನ್ನು ಮತ್ತೆ ಈತನು ತಡೆದನು. ಇಲ್ಲಿ ಇವನಿಂದ ಪರಾಜಿತನಾದ ಹೊಯ್ಸಳ ಅರಸು ಒಂದನೆಯ ನರಸಿಂಹನಾಗಿರಬೇಕು. ಆದರೆ ಶಾಸನದಲ್ಲಿ ಪಾಂಡ್ಯಕಾಮನೃಪನೆಂದು ಹೇಳಲ್ಪಟ್ಟ ಅರಸು ಯಾರೆಂಬುದು ಸ್ಪಷ್ಟವಾಗುವದಿಲ್ಲ. ಹೀಗೆ ಸುಮಾರು ೨೫ ವರ್ಷಗಳವರೆಗೆ ರಾಜ್ಯಭಾರಮಾಡಿದ ಚಾವುಂಡನ ಕೊನೆಯ ಉಲ್ಲೇಖ ನಮಗೆ ಕ್ರಿ.ಶ. ೧೧೬೫ರ ಉಣಚಗೇರಿಯ ಶಾಸನದಲ್ಲಿ ದೊರೆಯುತ್ತದೆ[೬೩].

ಚಾವುಂಡನು ಬಿಜ್ಜಳನ ತಂಗಿಯರಾದ ಸಿರಿಯಾದೇವಿ ಮತ್ತು ಲಕ್ಷ್ಮೀದೇವಿಯರನ್ನು ಮದುವೆಯಾಗಿದ್ದನು[೬೪]. ಹೀಗಾಗಿ ಇವನು ಬಿಜ್ಜಲನಿಗೆ ಅವನು ಸ್ವತಂತ್ರನಾಗುವಲ್ಲಿ ಸಹಾಯವನ್ನು ನೀಡಿರಬಹುದಾಗಿದೆ. ಅಲ್ಲದೇ ಚಾವುಂಡನು ತನ್ನ ರಾಣಿ ಲಕ್ಷ್ಮೀದೇವಿಗೆ ಸೂಡಿ, ಹೊಸೂರು ಮತ್ತಿತರ ಪ್ರದೇಶಗಳಿಗೆ ಆಡಳಿತಾಧಿಕಾರಿಣಿಯಾಗಿ ನೇಮಿಸಿದ್ದನು[೬೫]. ಪಟ್ಟದಕಲ್ಲು ಶಾಸನವು ಈತನು ತೈಲಪನ ಪಾದಪದ್ಮ ಸೇವಾ ತತ್ಪರಭೃಂಗನಾಗಿದ್ದನೆಂದು ಉಲ್ಲೇಖಿಸಿದೆ[೬೬]. ಚಾವುಂಡನಿಗೆ ದೇಮಲದೇವಿ ಎಂಬ ಇನ್ನೊಬ್ಬ ರಾಣಿಯಿದ್ದಳು. ಅವಳನ್ನು ಅರಸೀಬೀದಿ ಶಾಸನದಲ್ಲಿ ಪಿರಿಯರಸಿ

ಪಟ್ಟಮಹಾದೇವಿ ಎಂದು ಕರೆಯಲಾಗಿದೆ[೧೬೬]. ಅಲ್ಲದೇ ರೋಣ ಶಾಸನವು ಸಿರಿಯಾದೇವಿಯನ್ನು ವೀರಚಾವುಂಡರಸ-ದೇವನರ್ದ್ಧಾಂಗಲಕ್ಷ್ಮೀ ಪಟ್ಟಮಹಾದೇವಿಯಂತಃಪುರ ಮುಖದರ್ಪಣೆ ಸಿರಿಯಾದೇವಿಯರಸಿ ಎಂದು ಉಲ್ಲೇಖಿಸಿದೆ[೧೬೭]. ಬಹುಷಃ ಕಾಲಾನುಕ್ರಮದಲ್ಲಿ ಅವರ ಅಧಿಕಾರ ಬದಲಾಗಿರಬಹುದು. ಚಾವುಂಡನಿಗೆ ದೇಮಳದೇವಿಯಲ್ಲಿ ಆಚುಗಿ, ಪೆರ್ಮಾಡಿ ಎಂಬ ಮಕ್ಕಳು ಮತ್ತು ಸಿರಿಯಾದೇವಿಯಲ್ಲಿ ವೀರಬಿಜ್ಜಳ, ವಿಕ್ರಮರು ಜನಿಸಿದರು. ಆದರೆ ಲಕ್ಷ್ಮೀದೇವಿಗೆ ಮಕ್ಕಳಾಗಿದ್ದಂತೆ ಕಾಣುವದಿಲ್ಲ.

**ಬಿಜ್ಜಳ ಮತ್ತು ವಿಕ್ರಮ:**

ಚಾವುಂಡನ ನಂತರ ಅವನ ರಾಣಿ ಸಿರಿಯಾದೇವಿಯ ಮಕ್ಕಳಾದ ಬಿಜ್ಜಳ ಮತ್ತು ವಿಕ್ರಮರು ಆಳ್ವಿಕೆಗೆ ಬಂದರು. ಇವರು ಜೊತೆಯಾಗಿಯೇ ಆಳ್ವಿಕೆ ನಡೆಸಿರಬಹುದು. ಇವರ ಪ್ರಥಮ ಉಲ್ಲೇಖ ಐಹೊಳೆ ಶಾಸನದಲ್ಲಿ ಕಂಡುಬರುತ್ತದೆ[೧೬೯]. ಇವರು ಚಾವುಂಡನಿಗೆ ರಾಮಲಕ್ಷ್ಮಣರಂತೆ ಜನಿಸಿದರೆಂದು ಅಬ್ಬಿಗೇರಿ ಶಾಸನ ಉಲ್ಲೇಖಿಸಿದೆ. ಭೂಮಿಯನ್ನು ಪಾಲಿಸಲೆಂದು ಪಾರ್ವತಿಗೆ ಗಣಪತಿ-ಷಣ್ಮುಖರು, ಸೀತೆಗೆ ಲವ-ಕುಶರು, ದೇವಕಿಗೆ ಕೃಷ್ಣ-ಬಲರಾಮರು ಜನಿಸಿದ ಹಾಗೆ ಸಿರಿಯಾದೇವಿಗೆ ಇವರು ಜನಿಸಿದರೆಂದು ಕಲ್ಲೂರಿನ ಶಾಸನ ತಿಳಿಸಿದೆ[೧೭೦]. ಬಿಜ್ಜಲನಿಗೆ ಮಂಡಳಿಕ ಮಂಡನ, ಮೂವರ ಗಂಡ, ಶೌರ್ಯವಸಂತಂ, ಉಭಯಕುಲಶುದ್ಧ, ಭಾವೋದ್ಭವರೂಪ, ಅಖಿಳಸ್ತುತಿಕೀರ್ತಿ, ನೀತಿಶರನಿಧಿ, ಸಲ್ಲಲಿತಕೀರ್ತಿ, ರಿಪುಹೃತ್ಸೆಲ್ಲ, ಹುಲೆಯೆಂದಣನಣಸುವ ಜಕ್ಕುಲಿಪ ಜವನಂ, ಅಭಿನವ ಚೇತೋಜಾತ, ನೂತನ ರಘುಸುತ, ಅತಿವಿಖ್ಯಾತಿ, ಸಾಹಸೋತ್ತುಂಗ, ಭುಜಬಳಭೀಮ, ಸಿಂದಾನ್ವಯ ಲಕ್ಷ್ಮೀಧರ ಎಂದು ಮುಂತಾದ ಬಿರುದುಗಳಿದ್ದವು. ವೀರಬಿಜ್ಜಳನಿಗೆ ತ್ರಿಪುರಾದೇವಿ ಎಂಬ ರಾಣಿಯಿದ್ದಳು. ಆದರೆ ವಿಕ್ರಮಾದಿತ್ಯನ ರಾಣಿಯ ಹೆಸರನ್ನು ಹೇಳುವಲ್ಲಿ ಶಾಸನ ತೃಟಿತಗೊಂಡಿದ್ದರಿಂದ ಅವಳ ಹೆಸರು ತಿಳಿದುಬರುವದಿಲ್ಲ. ಕ್ರಿ.ಶ. ೧೧೮೬ರ ನಂತರದಿಂದ ವಿಕ್ರಮಾದಿತ್ಯನು ರಾಜ್ಯಭಾರ ಕೈಕೊಂಡನೆಂದು ತಿಳಿದುಬರುತ್ತದೆ.

ಇವರ ನಂತರ ಈ ಮನೆತನ ಕೊನೆಗೊಂಡಂತೆ ತೋರುತ್ತದೆ. ಕಾರಣ ಮುಂದೆ ಈ ಮನೆತನದ ಉಲ್ಲೇಖ ನಮಗೆಲ್ಲಿಯೂ ಸಿಗುವದಿಲ್ಲ. ಬಹುಷಃ ಚಾಲುಕ್ಯ ಮತ್ತು ಹೊಯ್ಸಳರ ಘರ್ಷಣೆಯಲ್ಲಿ ಈ ಮನೆತನ ಕಣ್ಮರೆಯಾಗಿರುವ ಸಾಧ್ಯತೆಯಿದೆ.

**ಡ)ಬೆಳಗುತ್ತಿಯ ಸಿಂದರು:**

ಇಂದಿನ ಶಿವಮೊಗ್ಗ, ಧಾರವಾಡ, ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳ ಕೆಲವು ಪ್ರದೇಶಗಳನ್ನು ಒಳಗೊಂಡಿದ್ದ ಬೆಳಗುತ್ತಿಯ ಪ್ರದೇಶದಲ್ಲಿ ಆಳ್ವಿಕೆ ಕೈಕೊಂಡ ಇವರು, ತಮ್ಮ ಮೂಲಪುರುಷ ನಿಡುದೋಳ್ ಸಿಂದನೆಂದು ಹೇಳಿಕೊಂಡಿದ್ದಾರೆ. ಅಲ್ಲದೇ ಇವರು ತಮ್ಮನ್ನು ಕರಹಾಟ ಪುರವರಾಧೀಶ್ವರರೆಂದು ಕರೆದುಕೊಂಡಿದ್ದಾರೆ. ಇವರು ಕರ್ನಾಟಕದ ಪ್ರಬಲ ಶಕ್ತಿಗಳಾದ ಚಾಲುಕ್ಯ, ಕಲಚೂರಿ, ಹೊಯ್ಸಳ, ಸೇವುಣ ಮತ್ತು ಹಾನಗಲ್ ಕದಂಬ ಮನೆತನಗಳೊಂದಿಗೆ ರಾಜಕೀಯ ಸಂಬಂಧವನ್ನು ಹೊಂದಿದ್ದರು.

ಈ ಮನೆತನ ಕ್ರಿ.ಶ. ೧೦ನೆಯ ಶತಮಾನದಲ್ಲಿ ಕಾಣಸಿಕೊಂಡಿದೆ. ಹೀಗಾಗಿ ನಿಡುದೋಳ್ ಸಿಂದನ ನಂತರ ಈ ಮನೆತನದ ಐತಿಹಾಸಿಕ ವ್ಯಕ್ತಿ ಯಾರೆಂಬುದರ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ದಿನಕರ ದೇಸಾಯಿಯವರು ಕ್ರಿ.ಶ. ೯೬೮ರ ಗುಂಡೇರಿ ಶಾಸನದಲ್ಲಿ ಬರುವ ಕೆರೆಸಿಗನನ್ನಿಗ ಸಿಂದನೇ ಈ ವಂಶದ ಮೊದಲ ಅರಸನೆಂದು ಅಭಿಪ್ರಾಯಪಟ್ಟಿದ್ದಾರೆ[೧೮೧]. ನನ್ನಿಗ ಅಥವಾ ನನ್ನಿಯ ಎಂಬ ಪದವು ಆಕರ್ಷಕ ಅಥವಾ ನಂಬಿಗಸ್ಥ ಎಂಬ ಅರ್ಥವನ್ನು ನೀಡುತ್ತದೆ. ಅಲ್ಲದೇ ಇದರ ಮುಂದೆ ಸಿಂದ ಎಂಬ ಪದ ಪ್ರಯೋಗವಾಗಿದ್ದರಿಂದ ಈತನನ್ನು ಸಿಂಧವಂಶಕ್ಕೆ ಸೇರಿಸಬಹುದೇ ಎನ್ನುತ್ತಾ ಬಾ.ರಾ.ಗೋಪಾಲರು ಆ ವಾದವನ್ನು ತಳ್ಳಿಹಾಕಿದ್ದಾರೆ[೧೮೨]. ನಂತರ ಕ್ರಿ.ಶ. ೯೭೨ರ ವಾಸನ ಗ್ರಾಮದ ಶಾಸನದಲ್ಲಿ ಕಂಡುಬರುವ ಮಹಾಸಾಮಂತ ಸಿಂದ ಜಾತರಸನು ಮುಳಗುಂದದವನಾಗಿದ್ದರಿಂದ ಅವನು ಬೆಳಗುತ್ತಿಯ ವಂಶಕ್ಕೆ ಸೇರಿದವನಲ್ಲವೆನ್ನುವದು ದೃಢವಾಗುತ್ತದೆ[೧೮೩]. ಹೀಗಾಗಿ ಗೋಪಾಲರು ಪಿರಿಯ ಚಟ್ಟರಸನನ್ನು ಬೆಳಗುತ್ತಿಯ ಸಿಂದರ ಐತಿಹಾಸಿಕ ವ್ಯಕ್ತಿಯೆಂದು ಕರೆದಿದ್ದಾರೆ[೧೮೪].

**ಸಿಂದರದೇವ:**

ಕ್ರಿ.ಶ. ೯೨೪ರ ಖಂಡೇಬಾಗೂರಿನ ಶಾಸನವೊಂದು ಸಿಂದರದೇವನ ಮಕ್ಕಳಾದ ವಿಕ್ರಮಾದಿತ್ಯ, ನಾಗಯ್ಯ ಮತ್ತು ಬಂದಿಯಣ್ಣರು ಎಡವಟ್ಟೆ-೭೦ರಲ್ಲಿಯ ಬಾಗೂರಿನಲ್ಲಿ ದತ್ತಿಬಿಟ್ಟದ್ದನ್ನು ಉಲ್ಲೇಖಿಸಿದೆ[೧೮೫]. ಇಲ್ಲಿ ಎಡವಟ್ಟೆ ನಾಡು ಬೆಳಗುತ್ತಿಯ ಸಿಂದರ ಆಳ್ವಿಕೆಗೊಳಪಟ್ಟಿದ್ದರಿಂದ ಇಲ್ಲಿ ಕಂಡುಬರುವ ಸಿಂದರದೇವರಸನೇ ಈ ಮನೆತನದ ಐತಿಹಾಸಿಕ ವ್ಯಕ್ತಿಯಾಗಿರಬೇಕು. ಈತನು ಕ್ರಿ.ಶ.ಸು. ೯೦೦ರಲ್ಲಿ ಆಳ್ವಿಕೆಯನ್ನು ಮಾಡಿರಬಹುದು. ಈತನ ನಂತರ ಅವನ ಮಕ್ಕಳು ಆಳ್ವಿಕೆಯನ್ನು ಮುಂದುವರೆಯಿಸಿಕೊಂಡು ಹೋಗಿರಬಹುದಾಗಿದೆ.

**ನನ್ನಿಗಸಿಂದ:**

ಕ್ರಿ.ಶ. ೯೬೮ರ ಗುಂಡೇರಿ ಶಾಸನ[೧೮೬]. ದಲ್ಲಿ ಕಾಣಿಸಿಕೊಳ್ಳುವ ಈತನು ಸಿಂದರದೇವ ಮತ್ತು ಆತನ ಮಕ್ಕಳ ನಂತರ ಆಳ್ವಿಕೆಗೆ ಬಂದಿರುವ ಸಾಧ್ಯತೆಯಿದೆ. ಇವನು ಬೆಳಗುತ್ತಿ ಸಿಂದರ ವಂಶಕ್ಕೆ ಸೇರಿದವನೆಂಬುದಂತೂ ಸ್ಪಷ್ಟವಾದ ವಿಚಾರವಾಗಿದೆ.

ನನ್ನಿಯ ಸಿಂದನ ನಂತರ ಈ ಮನೆತನದ ಬಗೆಗೆ ಸು. ೯೦ ವರ್ಷಗಳ ಕಾಲದವರೆಗೆ ಯಾವುದೇ ಉಲ್ಲೇಖ ಕಂಡುಬರುವದಿಲ್ಲ. ಒಂದು ತಲೆಮಾರಿಗೆ ೨೫ ವರ್ಷಗಳನ್ನು ಹಿಡಿದರೆ ಈ ವೇಳೆಯಲ್ಲಿ ಸುಮಾರು ೪ ಜನ ಅರಸರುಗಳು ಆಳ್ವಿಕೆ ನಡೆಸಿರಬಹುದಾದ ಸಾಧ್ಯತೆಯಿದೆ. ಆದರೆ ಅವರ ಬಗ್ಗೆ ಯಾವುದೇ ವಿವರಗಳು ತಿಳಿದುಬರುವದಿಲ್ಲ.

**ಪಿರಿಯ ಚಟ್ಟರಸ:**

ನಂತರ ಕಂಡುಬರುವ ಅರಸನೆಂದರೆ ಹರಿಹರ ಶಾನೋಲ್ಲೇಖಿತ ಪಿರಿಯ ಚಟ್ಟರಸನಾಗಿದ್ದಾನೆ[೧೮೭]. ಚಟ್ಟರಸನ ಆಳ್ವಿಕೆಯ ಬಗ್ಗೆ ಶಾಸನಗಳಲ್ಲಿ ಯಾವುದೇ ಹೆಚ್ಚಿನ ಉಲ್ಲೇಖಗಳು ದೊರೆಯುವದಿಲ್ಲ. ಆದರೆ ಈ ಪಿರಿಯ ಚಟ್ಟರಸನಿಗೆ

ದೊರಬ್ಬರಸಿಯೆಂಬ ರಾಣಿಯಿದ್ದುದಾಗಿ, ಅವರಿಬ್ಬರಿಗೆ ಜೋಗರಸನು ಜನಿಸಿದನೆಂದು ಶಾಸನದಿಂದ ತಿಳಿದುಬರುತ್ತದೆ[೧೮೮].

**ಅಯ್ಯಣ ಜೋಗರಸ:**

ಪಿರಿಯ ಚಟ್ಟರಸನ ಮಗನಾದ ಈತ ಅವನ ನಂತರ ಆಳ್ವಿಕೆಯನ್ನು ಮಾಡಿದನು. ಈತನು ಕ್ರಿ.ಶ. ೧೦೬೩ರಲ್ಲಿ ದೇವರ-೩೦, ಮಾಸೂರು-೧೨, ಕುಂಡೂರು-೧೨, ಕೊಳಗನೂರು-೭೦, ಅರಕೆರೆ-೧೨ ಅಲ್ಲದೇ ೫೬-ಬಾಡ ಮುಂತಾದವುಗಳನ್ನು ಆಳುತ್ತಿದ್ದನೆಂದು ಮೇಡೂರು ಶಾಸನದಿಂದ ತಿಳಿದುಬರುತ್ತದೆ[೧೮೯].

**ಎರಡನೆಯ ಚಟ್ಟರಸ:**

ಅಯ್ಯಣ ಜೋಗರಸನ ನಂತರ ಅವನ ಮಗನಾದ ಈತನು ಆಳ್ವಿಕೆಗೆ ಬಂದನು. ಇವನು ಕಲ್ಯಾಣಿ ಚಾಲುಕ್ಯರ ಆರನೆಯ ವಿಕ್ರಮಾದಿತ್ಯನ ಸಾಮಂತನಾಗಿ ಆಳ್ವಿಕೆಯನ್ನು ನಡೆಸಿದುದಾಗಿ ತಿಳಿದುಬರುತ್ತದೆ. ಅತ್ಯಂತ ತ್ರುಟಿತವಾದ ಮೇಡೂರಿನ ಇನ್ನೊಂದು ಶಾಸನದ ಪ್ರಕಾರ ಇವನು ಎಡವಟ್ಟೆ-೭೦, ಅರಕೆರೆ-೧೨ ಮತ್ತು ಇತರ ವಿಭಾಗಗಳನ್ನಾಳುತ್ತಿದ್ದನೆಂದು ತಿಳಿಯುತ್ತದೆ[೧೯೦]. ಕ್ರಿ.ಶ. ೧೧೧೩ರ ಹೊಳಲ್ಕೆರೆ ಶಾಸನದಲ್ಲಿಯೂ ಈತ ಕಂಡುಬರುತ್ತಾನೆ[೧೯೧]. ಕ್ರಿ.ಶ. ೧೧೧೭ರಲ್ಲಿ ಈತನ ಮೊಮ್ಮಗನಾದ ಮಾಚರಸನು ನಾಡಾಳಿತದಲ್ಲಿ ತೊಡಗಿದ್ದ ವಿವರ ಕೂಡ ತಿಳಿದುಬರುತ್ತದೆ. ಬಹುಷಃ ಈತನ ಮಗನಾದ ಈಶ್ವರದೇವನು ಅಕಾಲ ಮರಣಕ್ಕೆ ತುತ್ತಾಗಿದ್ದರಿಂದ ಅವನ ಮೊಮ್ಮಗನಾದ ಮಾಚರಸನು ಅಜ್ಜನಿಗೆ ಆಡಳಿತದಲ್ಲಿ ಸಹಾಯ ನೀಡುತ್ತಿರಬಹುದು[೧೯೨].

**ಮಾಚರಸ:**

ಎರಡನೆಯ ಚಟ್ಟರಸನ ಮೊಮ್ಮಗನೂ, ಈಶ್ವರದೇವನ ಮಗನಾದ ಈತನು ಕ್ರಿ.ಶ. ೧೧೨೫ರ ಸುಮಾರಿಗೆ ಪಟ್ಟಕ್ಕೆ ಬಂದಿರಬಹುದು. ಕ್ರಿ.ಶ. ೧೧೨೮ರಲ್ಲಿ ಇವನು ಎಡವಟ್ಟೆ-೭೦, ಅರಕೆರೆ-೧೨ ಮತ್ತು ೫೬-ಬಾಡಗಳನ್ನು ಆಳುತ್ತಿದ್ದುದಾಗಿ ನಾಗವಂದೆ ಶಾಸನದ ಮೂಲಕ ಸ್ಪಷ್ಟವಾಗುತ್ತದೆ[೧೯೩]. ಈ ಮಾಚರಸನು ಕ್ರಿ.ಶ. ೧೧೪೦ರವರೆಗೆ ಆಳ್ವಿಕೆ ಮಾಡಿದನೆಂದು ತಿಳಿದುಬರುತ್ತದೆ.

**ಮಲ್ಲಿದೇವ:**

ಮಾಚರಸನ ನಂತರ ಕ್ರಿ.ಶ. ೧೧೪೦ರ ಸುಮಾರಿಗೆ ಮಲ್ಲಿದೇವನು ಪಟ್ಟಕ್ಕೆ ಬಂದು, ಕ್ರಿ.ಶ.೧೧೫೫ ರವರೆಗೆ ಆಳ್ವಿಕೆಯನ್ನು ಮಾಡಿದನು. ಈಶ್ವರದೇವನಿಗೆ ಮಾಚರಸ, ಮಲ್ಲಿದೇವ ಮತ್ತು ಐಹರಸರೆಂಬ ಮಕ್ಕಳಿದ್ದುದಾಗಿ ಬೆಳಗುತ್ತಿ[೧೯೪] ಮತ್ತು ಹಿರೇಕಬ್ಬೂರ[೧೯೫] ಶಾಸನಗಳು ತಿಳಿಸುತ್ತವೆ. ಮಾಚರಸ ಮತ್ತು ಮಲ್ಲಿದೇವರಿಗೆ ಮಕ್ಕಳಿದ್ದಂತೆ ಕಾಣುವದಿಲ್ಲ. ಆದರೆ ಐಹರಸನಿಗೆ ರಾಯರಸನೆಂಬ ಮಗನೊಬ್ಬನಿದ್ದುದು ತಿಳಿದುಬರುತ್ತದೆ. ಈತನ ಮಗ ಎರಡನೆಯ

ಈಶ್ವರದೇವನಾಗಿದ್ದಾನೆ[೯೬]. ಅಲ್ಲದೇ ಈ ಐಹರಸ ಮತ್ತು ರಾಯರಸರು ಆಳ್ವಿಕೆ ಮಾಡಿದ ವಿವರಗಳು ಯಾವುದೇ ಶಾಸನಗಳಲ್ಲಿ ಸಿಗುವದಿಲ್ಲ. ಆದ್ದರಿಂದ ಅವರು ಆಡಳಿತವನ್ನು ಕೈಕೊಂಡಿಲ್ಲದಿರುವದು ಸ್ಪಷ್ಟವಾಗುತ್ತದೆ[೯೭].

**ಎರಡನೆಯ ಈಶ್ವರದೇವ:**

ನಂತರ ರಾಯರಸನ ಮಗನಾದ ಎರಡನೆಯ ಈಶ್ವರದೇವನು ಬೆಳಗುತ್ತಿಯ ಮನೆತನಕ್ಕೆ ಉತ್ತರಾಧಿಕಾರಿಯಾದನು. ಪಟ್ಟಕ್ಕೆ ಬಂದ ಹೊಸತರಲ್ಲಿ ಈತನು ಎಡವಟ್ಟಿ-೭೦ನ್ನು ಮಾತ್ರ ಆಳುತ್ತಿದ್ದುದಾಗಿ ತಿಳಿಯುತ್ತದೆ. ಈತನಾಳ್ವಿಕೆಯ ಸಮಯವು ಕರ್ನಾಟಕದ ರಾಜಕೀಯದಲ್ಲಿ ಅನೇಕ ಬದಲಾವಣೆಗಳನ್ನು ಹೊಂದುತ್ತಿತ್ತು. ಕಲಚೂರಿಗಳು ಚಾಲುಕ್ಯರಿಂದ ಸಾಮ್ರಾಜ್ಯವನ್ನು ಕಸಿದುಕೊಂಡು ತಾವೇ ಚಕ್ರವರ್ತಿಗಳಾಗಿ ಆಳುತ್ತಿದ್ದರು. ಅತ್ತ ಹೊಯ್ಸಳರು ಕಲಚೂರಿಗಳ ಹಿಡಿತದಲ್ಲಿದ್ದ ಅನೇಕ ಪ್ರಾಂತಗಳನ್ನು ವಶಪಡಿಸಿಕೊಳ್ಳಲು ನಿರಂತರ ಸಮರದಲ್ಲಿ ತೊಡಗಿದ್ದರು. ಹೀಗಾಗಿ ಕ್ರಿ.ಶ. ೧೧೬೪ರಲ್ಲಿ ಈಶ್ವರದೇವನು ಕಲಚೂರಿ ಬಿಜ್ಜಳನ ಸಾಮಂತನಾಗಿ ಆಳ್ವಿಕೆ ಕೈಕೊಂಡಿದ್ದು ತಿಳಿದುಬರುತ್ತದೆ[೯೮]. ಕ್ರಿ.ಶ. ೧೧೬೫ರಲ್ಲಿ ಈಶ್ವರದೇವನು ಬನವಾಸೆನಾಡಿನಲ್ಲಿಯ ಮಾಸವೂರು-೧೨, ಎಡವಟ್ಟೆ-೭೦, ಬಳ್ಳಾವೆ-೭೦, ನರಿಯಳಿಗೆ-೪೦ ಮತ್ತು ಸಾಂತಳಿಗೆ-೧೦೦೦ ನಾಡಿನಲ್ಲಿಯ ಮಾಲೆ-೭೦, ಮುದವರೆ-೩೦ ಹಾಗೂ ಆಸಂದೆನಾಡಿನಲ್ಲಿನ ಮನುಜವೊಳಲು-೧೨, ಕೊಳಗ-೭೦, ಅರಕೆರೆ-೧೨, ಬ್ರಾಂತಿ-೩೦, ಕುಂದೂರು-೩೦, ೫೬-ಬಾಡ, ಅತ್ತಿಗೇರಿ-೧೨, ಪಾಂಡುಗಲು-೧೨, ಅರಬಲ-೭೦, ಹಟ್ಟಿನಾಡು-೧೨ ಮತ್ತು ಮಂಡಲಿನಾಡಿನ ಹೊಳಲಕೆರೆಗಳನ್ನು ಹಳ್ಳವೂರ ರಾಜಧಾನಿಯಿಂದ ಆಳುತ್ತಿದ್ದುದಾಗಿ ತಿಳಿಯುತ್ತದೆ[೯೯]. ಕ್ರಿ.ಶ. ೧೧೭೫ರಲ್ಲಿ ಇವನು ಹೊಯ್ಸಳರ ಎರಡನೆಯ ಬಲ್ಲಾಳನ ದಂಡನಾಯಕನೊಬ್ಬನ ಕೈಕೆಳಗೆ ಮನ್ನೆಯನಾಗಿ ಆಳ್ವಿಕೆ ಕೈಕೊಂಡಿದ್ದನ್ನು ಶಾಸನವೊಂದು ಉಲ್ಲೇಖಿಸಿದೆ[೧೦೦]. ನಂತರ ಈತನು ಕ್ರಿ.ಶ. ೧೧೭೯ರಲ್ಲಿ ಮಹಾಮಂಡಳೇಶ್ವರನಾಗಿ ಕಲಚೂರಿ ಸಂಕಮನ ಕೈಕೆಳಗೆ ಹಳ್ಳವೂರ ನೆಲೆವೀಡಿನಿಂದ ಆಳ್ವಿಕೆ ಕೈಕೊಂಡಿದ್ದ ವಿವರಗಳು ದೊರೆಯುತ್ತವೆ[೧೦೧]. ಮುಂದೆ ಕ್ರಿ.ಶ. ೧೧೮೦ರಲ್ಲಿ ಈಶ್ವರದೇವನು ತನ್ನ ಮಕ್ಕಳಾದ ಪಾಂಡ್ಯದೇವ ಮತ್ತು ಮಲ್ಲಿದೇವರ ಸಹಾಯದಿಂದ ಆಡಳಿತವನ್ನು ಕೈಕೊಂಡಿದ್ದನ್ನು ಬೆಳಗುತ್ತಿಯ ಶಾಸನ ವಿವರಿಸಿದೆ. ಇವರು ಪರಂಪರಾಗತವಾಗಿ ಬಂದ ಅನೇಕ ನಾಡುಗಳನ್ನು ಬೆಳಗುತ್ತಿ ನೆಲೆವೀಡಿನಿಂದ ಆಳುತ್ತಿದ್ದುದಾಗಿ ತಿಳಿಯುತ್ತದೆ.

ಎರಡನೆಯ ಈಶ್ವರದೇವನಿಗೆ ಪಾಂಡ್ಯದೇವ, ಮಲ್ಲಿದೇವ, ರಾಯ ಮತ್ತು ವಿಜಯನೃಪಾಲರೆಂಬ ನಾಲ್ಕು ಜನ ಮಕ್ಕಳಿದ್ದರು[೧೦೨]. ಆದರೆ ಪಾಂಡ್ಯದೇವನು ಕಲಚೂರಿಗಳು ಮತ್ತು ಹೊಯ್ಸಳರ ನಡುವೆ ನಡೆದ ಕದನದಲ್ಲಿ ಭಾಗವಹಿಸಿ ಮರಣಿಸಿರಬೇಕು. ನಂತರ ಈಶ್ವರದೇವನ ಎರಡನೆಯ ಮಗನಾದ ಮಲ್ಲಿದೇವನು ಆಳ್ವಿಕೆಗೆ ಬಂದನು.

**ಎರಡನೆಯ ಮಲ್ಲಿದೇವ:**

ಎರಡನೆಯ ಈಶ್ವರದೇವನ ಮಗನಾದ ಮಲ್ಲಿದೇವನು ಕ್ರಿ.ಶ. ೧೧೮೯ರಲ್ಲಿ ಚಾಲುಕ್ಯ ನಾಲ್ಕನೆಯ ಸೋಮೇಶ್ವರನ ಮಹಾಮಂಡಳೇಶ್ವರನಾಗಿ ಬೆಳಗುತ್ತಿಯಿಂದ ಆಳ್ವಿಕೆ ನೆಡೆಸುತ್ತಿದ್ದನೆಂದು ತಿಳಿದುಬರುತ್ತದೆ[೧೦೩]. ಆದರೆ

ಹೊಳಲಕೇರೆಯ ಶಾಸನವೊಂದು ಈತನು ಹಳ್ಳಾಪೂರ ರಾಜಧಾನಿಯಿಂದ ಆಳ್ವಿಕೆ ನಡೆಸುತ್ತಿದ್ದ ವಿಷಯವನ್ನು ತಿಳಿಸುತ್ತದೆ[೬೦೪]. ನಂತರ ಕ್ರಿ.ಶ. ೧೧೯೫ರ ಮತ್ತೊಂದು ಶಾಸನದಲ್ಲಿ ಈತನಾಳ್ವಿಕೆಯನ್ನು ಯಾವುದೇ ಚಕ್ರವರ್ತಿಗಳ ಆಳ್ವಿಕೆಯನ್ನು ಸೂಚಿಸದೇ ಉಲ್ಲೇಖಿಸಲಾಗಿದೆ[೬೦೫]. ಬಹುಷಃ ನಾಲ್ಕನೆಯ ಸೋಮೇಶ್ವರನ ಮರಣದ ನಂತರ ಮಲ್ಲಿದೇವ ಸ್ವತಂತ್ರನಾಗಿರಬಹುದು. ಕೆಲಕಾಲದ ನಂತರ ಮಲ್ಲಿದೇವನ ಮಂತ್ರಿ ಕಲ್ಲೆಯನಾಯಕನು ರಟ್ಟಿಹಳ್ಳಿಯಲ್ಲಿ ವೈರಿಗಳೊಂದಿಗೆ ಹೋರಾಡಿ ಹತನಾದ ವಿವರ ಬರುತ್ತದೆ. ಹೀಗಾಗಿ ಅಲ್ಲಿನ ಹಲವಾರು ವೀರಗಲ್ಲುಗಳ ಹೊಯ್ಸಳರ ವಿರುದ್ಧ ಹೋರಾಟ ನಡೆದಿದ್ದನ್ನು ಸೂಚಿಸುವದರಿಂದ ಮಲ್ಲಿದೇವನು ಹೊಯ್ಸಳರೊಂದಿಗೆ ಮುಂದೆ ಹೋರಾಡಬೇಕಾಯ್ತು[೬೦೬]. ನಂತರ ಇಮ್ಮಡಿ ಬಲ್ಲಾಳನ ರಾಣಿ ಉಮಾದೇವಿ ಬೆಳಗುತ್ತಿಗೆ ಮುತ್ತಿಗೆ ಹಾಕಿ ಅದನ್ನು ವಶಪಡಿಸಿಕೊಳ್ಳಲೆತ್ನಿಸಿದಾಗ ನಡೆದ ಹೋರಾಟದಲ್ಲಿ ಮಲ್ಲಿದೇವನ ಅಧಿಕಾರಿಗಳಾದ ಗಟ್ಟಿಯನಾಯಕ, ಮೈಲನಾಯಕರು ಹೋರಾಡಿ ವಿಫಲರಾಗಿ ಓಡಿಹೋದರಲ್ಲದೇ ಕೆಲವರು ಮರಣಹೊಂದಿದರು. ಕೊನೆಗೆ ಕ್ರಿ.ಶ. ೧೧೯೮ರಲ್ಲಿ ಮಲ್ಲಿದೇವ ಹೊಯ್ಸಳರಿಂದ ಸೋಲನ್ನನುಭವಿಸಿದನು[೬೦೭].

**ಮೂರನೆಯ ಈಶ್ವರದೇವ:**

ಮಲ್ಲಿದೇವನ ಮಗನಾದ ಈತನು ಅವನ ನಂತರ ಕ್ರಿ.ಶ. ೧೨೦೫ರಲ್ಲಿ ಆಳ್ವಿಕೆಯನ್ನಾರಂಭಿಸಿದನು. ಕ್ರಿ.ಶ. ೧೨೧೫ರ ಶಾಸನವೊಂದು ಈತನು ಸೇವುಣ ಎರಡನೆಯ ಸಿಂಘಣನ ಸಾಮಂತನಾಗಿ ಆಳ್ವಿಕೆ ಮಾಡುತ್ತಿದ್ದನೆಂದು ತಿಳಿಸುತ್ತದೆ[೬೦೮]. ಬಹುಷಃ ಹೊಯ್ಸಳರಿಂದ ತನ್ನ ತಂದೆಗಾದ ಅವಮಾನದ ಸೇಡನ್ನು ತೀರಿಸಿಕೊಳ್ಳಲು ಸಿಂಘಣನ ಸ್ನೇಹವನ್ನು ಈತ ಬೆಳೆಸಿರಬಹುದು. ಆದರೆ ಈಶ್ವರದೇವನ ಈ ಚಟುವಟಿಕೆಗಳನ್ನು ಗಮನಿಸಿದ ಹೊಯ್ಸಳರು ಕ್ರಿ.ಶ. ೧೨೧೬-೧೨೧೭ರಲ್ಲಿ ಸಿಂದರ ಪ್ರಾಂತಗಳ ಮೇಲೆ ಧಾಳಿಯಿಟ್ಟರು. ಅದರ ಫಲವಾಗಿ ಕ್ರಿ.ಶ. ೧೨೧೬ರಲ್ಲಿ ಮದನಭಾವಿಯಲ್ಲಿ ನಡೆದ ಯುದ್ಧದಲ್ಲಿ ಚಿಣ್ಣಯ್ಯನೆಂಬುವನು ಈಶ್ವರದೇವನ ಪರವಾಗಿ ಹೋರಾಡಿ ವೀರಮರಣವನ್ನಪ್ಪಿದನು ಎಂದು ತಿಳಿಯುತ್ತದೆ[೬೦೯]. ಹೊಯ್ಸಳರು ಮತ್ತು ಹಾನಗಲ್ಲ ಕದಂಬರೊಡನೆ ಈಶ್ವರದೇವ ಮತ್ತು ಸಿಂಘಣರು ನಿರಂತರವಾಗಿ ಹೋರಾಟದಲ್ಲಿ ತೊಡಗಿದ್ದುದು ಕಂಡುಬರುತ್ತದೆ. ಆದರೆ ವೀರಬಲ್ಲಾಳನಿಗೆ ವಯಸ್ಸಾದುದರಿಂದ ಸಿಂದರೊಂದಿಗೆ ಹೋರಾಡಲು ಅಸಮರ್ಥನಾದನು. ಹೀಗಾಗಿ ಆತನ ಮರಣದ ನಂತರದಲ್ಲಿ ಉಚ್ಚಂಗಿನಾಡು ಮುಂತಾದವುಗಳನ್ನು ಸಿಂದರು ವಶಪಡಿಸಿಕೊಂಡರು[೬೧೦]. ಈಶ್ವರದೇವನಿಗೆ ಕಟ್ಟಲೆ ಮತ್ತು ದೇವಿ ಎಂಬ ರಾಣಿಯರಿದ್ದರಲ್ಲದೇ, ಈತನಿಗೆ ಕೇಶವ, ಸೋವಲೆ ಮತ್ತು ಕಳಲೆಯರೆಂಬ ಮಕ್ಕಳಿದ್ದುದಾಗಿ ತಿಳಿದುಬರುತ್ತದೆ[೬೧೧].

**ಕೇಶವ:**

ಮೂರನೆಯ ಈಶ್ವರದೇವನ ಮರಣದ ನಂತರ ಆತನ ಮಗನಾದ ಕೇಶವನು ಕ್ರಿ.ಶ. ೧೨೨೭-೨೮ರ ಸುಮಾರಿಗೆ ಆಳ್ವಿಕೆಗೆ ಬಂದನು. ಇವನ ಕಾಲದಲ್ಲಿ ಮೊದಲು ಸೇವುಣರ ಅಧಿಕಾರಿ ಮಾಯಿದೇವ ದಂಡನಾಯಕ ಬನವಾಸಿ ಪ್ರಾಂತದ

ಮೇಲಾಧಿಕಾರಿಯಾಗಿದ್ದಾಗ, ಅವರೊಡನೆ ಉತ್ತಮ ಸಂಬಂಧ ಹೊಂದಿದ್ದನು. ಆದರೆ ನಂತರ ಬಂದ ಹೊನ್ನಬೊಮ್ಮಿಸೆಟ್ಟಿಯ ಮೇಲಾಧಿಕಾರದ ಕಾಲಕ್ಕೆ ಸಿಂದರ ಮತ್ತು ಸೇವುಣರ ಸಂಬಂಧ ಬಿಗಡಾಯಿಸಿತು. ಹೀಗಾಗಿ ಕೇಶವನು ಹಾನಗಲ್ಲ ಕದಂಬರೊಂದಿಗೆ ಸ್ನೇಹಹಸ್ತವನ್ನು ಚಾಚಿದನು. ಅಲ್ಲದೇ ಸ್ವತಂತ್ರನಾಗಲು ಏಕಾಂಗಿಯಾಗಿಯೇ ಸೇವುಣರ ವಿರುದ್ಧ ಯುದ್ಧವನ್ನು ಕೈಕೊಂಡನು. ಆದರೆ ಅದರಲ್ಲಿ ಜಯ ಸಾಧಿಸಿದೇ ಕ್ರಿ.ಶ. ೧೨೩೮ರ ವೇಳೆಗೆ ಮಡಿದನು[೬೧೨].

ಕೇಶವನ ನಂತರ ಬೆಳಗುತ್ತಿ ಸಿಂದರ ಮನೆತನ ಕಣ್ಮರೆಯಾಯಿತು. ದಿನಕರ ದೇಸಾಯಿಯವರು ಕೇಶವನ ನಂತರ ಆತನ ಮಗ ಬೀರದೇವನು ಆಳ್ವಿಕೆಗೆ ಬಂದನೆಂದು ಹೇಳಿದ್ದಾರೆ. ಆದರೆ ಈ ಬೀರದೇವನು ಧರಿಸಿದ ಬಿರುದುಗಳು ಸಿಂದರವೆಂದು ಸ್ಪಷ್ಟವಾಗುವದಿಲ್ಲವಾದ್ದರಿಂದ ಅವನನ್ನು ಸಿಂದವಂಶದವನೆಂದು ಒಪ್ಪಿಕೊಳ್ಳುವದು ಕಷ್ಟವೆಂದು ಗೋಪಾಲರು ಅಭಿಪ್ರಾಯಪಟ್ಟಿದ್ದಾರೆ[೬೧೩].

ಹೀಗೆ ಬೆಳಗುತ್ತಿ ಸಿಂದ ಮನೆತನವು ಕ್ರಿ.ಶ.೧೦ನೆಯ ಶತಮಾನದಿಂದ ೧೩ನೆಯ ಶತಮಾನದ ಮಧ್ಯಭಾಗದವರೆಗೂ ಕರ್ನಾಟಕ ಇತಿಹಾಸದಲ್ಲಿ ಕಂಡುಬರುತ್ತದೆ.

## ಈ) ರಂಜೋಲದ ಸಿಂದರು:

ಇಂದಿನ ಬೀದರ ಜಿಲ್ಲೆಯ ರಂಜೇರು ಹಿಂದೆ ಅಟ್ಟಳೆನಾಡಿನ ರಾಜಧಾನಿಯಾಗಿತ್ತು. ಈ ರಂಜೇರುವಿನಲ್ಲಿ ಸಿಂದರ ಮನೆತನವೊಂದು ಆಳ್ವಿಕೆ ನಡೆಸಿದ್ದನ್ನು ಡಾ.ಬಾ.ರಾ.ಗೋಪಾಲರು ಗುರುತಿಸಿದ್ದಾರೆ[೬೧೪]. ಈ ಮನೆತನದವರೂ ಕೂಡ ತಮ್ಮ ಮೂಲಪುರುಷ ನಿಡುದೋಳ್ ಸಿಂದನೆಂದು ಹೇಳಿಕೊಂಡಿದ್ದಾರೆ. ನಿಡುದೋಳ್ ಸಿಂದನ ನಾಲ್ಕುಜನ ಮಕ್ಕಳಲ್ಲಿ ಜಗತ್ಸೇವ್ಯನು ಅಟ್ಟಳೆನಾಡಿನಲ್ಲಿ ನೆಲೆನಿಂತು ಅಲ್ಲಿನ ಶಾಖೆಗೆ ಮುಖ್ಯಸ್ತನಾಗಿದ್ದನೆಂದು ರಂಜೋಲ ಶಾಸನ ತಿಳಿಸುತ್ತದೆ[೬೧೫]. ಈ ನಿಡುದೋಳ್ ಸಿಂದನು ಕದಂಬ ಮಯೂರವರ್ಮನ ಸಮಕಾಲೀನನಾಗಿದ್ದನೆಂದು ತಿಳಿದುಬರುತ್ತದೆ. ಹೀಗಾಗಿ ಜಗತ್ಸೇವ್ಯನು ಕ್ರಿ.ಶ. ೪ನೆಯ ಶತಮಾನದಲ್ಲಿ ಆಳ್ವಿಕೆ ಮಾಡಿದ್ದು ಸ್ಪಷ್ಟವಾಗುತ್ತದೆ.

ಅಟ್ಟಳೆನಾಡನ್ನಾಳಿದ ಈ ವಂಶದ ಅರಸರುಗಳ ಶಾಸನಗಳು ಭಾಲ್ಕಿ, ಬಸವಕಲ್ಯಾಣ ಮತ್ತು ಬೀದರ ತಾಲೂಕಿನ ಹಲವಾರು ಕಡೆಯಲ್ಲಿ ದೊರೆಯುತ್ತವೆ. ಅಲ್ಲದೇ ಇಲ್ಲಿನ ಕೆಲ ಅರಸರುಗಳು ಸಿಂದವಂಶದ ಯಾವುದೇ ಬಿರುದುಗಳನ್ನು, ಪ್ರಶಸ್ತಿಗಳನ್ನು ಹೊಂದಿಲ್ಲದಿರುವದು ಗಮನಾರ್ಹ. ಆದರೆ ಇವರು ಅಟ್ಟಳೆನಾಡಿನಲ್ಲಿ ಆಳ್ವಿಕೆಮಾಡಿದ್ದರಿಂದ ಅವರನ್ನು ಸಿಂದವಂಶದಲ್ಲಿ ಸೇರಿಸಲಾಗಿದೆ.

ಜಗತ್ಸೇವ್ಯನ ನಂತರ ಕ್ರಿ.ಶ. ೧೦೧೫ರ ವರೆಗೆ ಈ ವಂಶದಲ್ಲಿ ಆಳ್ವಿಕೆಮಾಡಿದ ಅರಸರುಗಳ ಬಗ್ಗೆ ಆಧಾರಗಳ ಕೊರತೆಯಿಂದಾಗಿ ನಮಗೆ ಏನೂ ತಿಳಿದುಬರುವದಿಲ್ಲ. ರಂಜೋಲದ ಶಾಸನ ಅಲ್ಲಮ ಮತ್ತು ಬದ್ದೆಗರನ್ನು

ಉಲ್ಲೇಖಿಸಿದೆ. ಇಲ್ಲಿ ಕಂಡುಬರುವ ಬದ್ದೆಗನಿಗೆ ಗೊನ್ನ ಹಾಗೂ ಗೊಂಕರೆಂಬ ಇಬ್ಬರು ಮಕ್ಕಳಿದ್ದುದಾಗಿ ತಿಳಿದುಬರುತ್ತದೆ. ಅಲ್ಲದೇ ಶಾಸನದಲ್ಲಿ ಹಜ್ಜ ಅಥವಾ ಅಜ್ಜರಸನ ಉಲ್ಲೇಖ ಬರುತ್ತದೆ. ಆದರೆ ಗೊಂಕ ಮತ್ತು ಅಜ್ಜರಸನ ನಡುವಿನ ಸಂಬಂಧವಿಲ್ಲಿ ಸ್ಪಷ್ಟವಾಗುವದಿಲ್ಲ. ಆದರೆ ಅಜ್ಜರಸನು ಅಟ್ಟಳೆನಾಡನ್ನು ಆಳುತ್ತಿದ್ದುದಾಗಿಯೂ, ಸಿಂದಕುಲಕ್ಕೆ ಸೇರಿದುದ್ದಾಗಿಯೂ ತಿಳಿದುಬರುತ್ತದೆ[೭೧೬].

ಅಟ್ಟಳೆನಾಡನ್ನು ಆಳುತ್ತಿದ್ದ ಮಹಾಮಂಡಳೇಶ್ವರ ಬದ್ದೆಗ ಅಥವಾ ಬದ್ದರಸನ ವಂಶಾವಳಿಯನ್ನು ಚಾಲುಕ್ಯ ಎರಡನೆಯ ಜಗದೇಕಮಲ್ಲನ ಕಾಲದ ಅಣದೂರ ಶಾಸನ ತಿಳಿಸುತ್ತದೆ. ಅದು ಗೊಂಕ, ಅವನ ಮಗ ಬದ್ದೆಗ, ಅವನ ಮಗ ಮಲ್ಲಿದೇವರು ಕ್ರಮವಾಗಿ ಅಟ್ಟಳೆನಾಡನ್ನಾಳಿದರು ಎಂದು ತಿಳಿಸುತ್ತದೆ. ಶಾಸನದಲ್ಲಿ ಇವರನ್ನು ಸಿಂದವಂಶದವರೆಂದು ತಿಳಿಸಿಲ್ಲ. ಆದ್ದರಿಂದ ಇಲ್ಲಿಯ ಬದ್ದೆಗ ಮತ್ತು ರಂಜೋಲ ಶಾಸನದ ಹಜ್ಜರಸನ ನಡುವೆ ಇದ್ದ ಸಂಬಂಧ ಕೂಡಾ ಸ್ಪಷ್ಟವಾಗುವದಿಲ್ಲ[೭೧೭].

ಚಾಲುಕ್ಯ ಆರನೆಯ ವಿಕ್ರಮಾದಿತ್ಯನ ಕಾಲದಲ್ಲಿ ಅಟ್ಟಳೆನಾಡನ್ನು ಹಜ್ಜರಸನು ಆಳುತ್ತಿದ್ದುದಾಗಿಯೂ, ಈತನ ರಾಣಿ ಹಮ್ಮಲದೇವಿ ಎಂಬುದಾಗಿಯೂ ತಿಳಿದುಬರುತ್ತದೆ[೭೧೮]. ಅಜ್ಜರಸ ಮತ್ತು ಹಮ್ಮಲದೇವಿಯರ ಮಗ ವೀರಪೆರ್ಮಾಡಿಯಾಗಿದ್ದನೆಂದು ತಿಳಿದುಬರುತ್ತದೆ. ಅಲ್ಲದೇ ಕ್ರಿ.ಶ. ೧೧೨೯ರ ನಾರಾಯಣಪುರ ಶಾಸನದಲ್ಲಿ ಕೂಡ ಪೆರ್ಮಾಡಿಯ ಬಗ್ಗೆ ವಿವರ ಕಂಡುಬರುತ್ತದೆ[೭೧೯]. ಶಾಸನದಲ್ಲಿ ಪೆರ್ಮಾಡಿಯನ್ನು ಭೈರವನ ಅಂಕಕಾರ ಎಂದು ಕರೆಯಲಾಗಿದೆ. ಈ ಭೈರವನು ಬಹುಷಃ ಹಜ್ಜರಸನ ಅಧಿಕಾರಿಯಾಗಿರಬಹುದು. ಗುಲ್ಬರ್ಗದ ಕ್ರಿ.ಶ. ೧೧೧೭ರ ಶಾಸನವೊಂದರಲ್ಲಿ ಹೆಮ್ಮಾಡಿಯರಸನೆಂಬುವವನ ಉಲ್ಲೇಖ ಬರುತ್ತಿದ್ದು, ಬಹುಷಃ ಈತನೇ ಸಿಂದವಂಶದ ಪೆರ್ಮಾಡಿಯರಸನಾಗಿರಬೇಕು. ಇದು ಸರಿಯಾದರೆ ಪೆರ್ಮಾಡಿಯು ಕ್ರಿ.ಶ. ೧೧೧೫ರ ಸುಮಾರಿಗೆ ಆಳ್ವಿಕೆಯನ್ನು ಆರಂಬಿಸಿರಬೇಕು. ಹೀಗಾಗಿ ಈತನ ತಂದೆ ಅಜ್ಜರಸನು ಕ್ರಿ.ಶ. ೧೦೮೫ ಅಥವಾ ಕ್ರಿ.ಶ. ೧೦೯೦ರಿಂದ ಕ್ರಿ.ಶ. ೧೧೧೫ರ ವರೆಗೆ ಆಳ್ವಿಕೆಮಾಡಿರಬಹುದಾಗಿದೆ[೭೨೦].

ರಂಜೋಲದ ದಿನಾಂಕವಿಲ್ಲದ ಶಾಸನವೊಂದರಲ್ಲಿ ಪೆರ್ಮಾಡಿಯ ರಾಣಿ ಮೈಳಲದೇವಿ ಮತ್ತು ಅವರ ಮಗ ಭೈರವನನ್ನು ಉಲ್ಲೇಖಿಸಲಾಗಿದೆ. ಕ್ರಿ.ಶ. ೧೧೬೯ರ ರಂಜೋಲದ ಮತ್ತೊಂದು ಶಾಸನದಲ್ಲಿ ಈ ಮನೆತನದ ವಂಶಾವಳಿ ಕಂಡುಬರುತ್ತಿದ್ದು, ಆ ಶಾಸನದ ಕಾಲದಲ್ಲಿ ಭೈರವನ ಮೊಮ್ಮಗನಾದ ಬರ್ಮದೇವನು ಆಳ್ವಿಕೆ ಮಾಡುತ್ತಿದ್ದುದಾಗಿ ತಿಳಿದುಬರುತ್ತದೆ. ಕ್ರಿ.ಶ. ೧೧೪೦ರ ವರೆಗೆ ಆಳಿದ ವೀರಪೆರ್ಮಾಡಿಯ ನಂತರ ಆತನ ಮಗ ಭೈರವದೇವ, ನಂತರ ಆತನ ಮಗ ಹೆಮ್ಮ, ಮುಂದೆ ಹೆಮ್ಮನ ಎರಡನೆಯ ಮಗ ಬರ್ಮದೇವರು ಕ್ರಮವಾಗಿ ಆಳ್ವಿಕೆ ಮಾಡಿದರು. ಆದರೆ ಬರ್ಮದೇವನಿಗೆ ಬಾಚಿದೇವನೆಂಬ ಅಣ್ಣನೊಬ್ಬನಿದ್ದು ಆತ ಆಳ್ವಿಕೆ ನಡೆಸಿದ ವಿವರಗಳು ದೊರೆಯುವದಿಲ್ಲ[೭೨೧].

ಸಿಂದ ಆದ್ಯರಸನು ಕ್ರಿ.ಶ. ೧೨೦೮ರಲ್ಲಿ ಸೇವುಣ ಸಿಂಘಣನ ಮಹಾಮಂಡಳೇಶ್ವರನಾಗಿ ಆಳುತ್ತಿದ್ದನೆಂದು ರಂಜೋಲದ ಶಾಸನದಿಂದ ತಿಳಿದುಬರುತ್ತದೆ. ಈತನು ಮೇಲೆ ಉಲ್ಲೇಖಿಸಿದ ಬರ್ಮದೇವನ ಮಗನಾಗಿರಬಹುದು. ಬೀದರಿನ ಶಾಸನದಲ್ಲಿ ಸಿಂದವಂಶದ ವಂಶಾವಳಿಯನ್ನು ನೀಡಲಾಗಿದ್ದು, ಇಲ್ಲಿ ನೂರ್ಮಡಿಗಂಡ ಭೈರ, ದುಗ್ಗರಸ, ಗೊಂಕರಸ ಮತ್ತು ಹಿರಿಯ ಭೈರವದೇವರುಗಳನ್ನು ಉಲ್ಲೇಖಿಸಲಾಗಿದೆ. ಇಲ್ಲಿ ಬರುವ ನೂರ್ಮಡಿಗಂಡ ಭೈರವನಿಗೂ ಮೇಲೆ ಹೇಳಿದ ರಂಜೋಲ ಶಾಸನದ ಆದ್ಯರಸನಿಗೂ ಇದ್ದ ಸಂಬಂಧ ಸ್ಪಷ್ಟವಾಗುವದಿಲ್ಲ[೬೨].

ದುಗ್ಗರಸನು ನೂರ್ಮಡಿಗಂಡ ಭೈರವನ ಮಗನಾಗಿದ್ದು, ಗೊಂಕರಸನು ದುಗ್ಗರಸನ ಮಗನಾಗಿರಬೇಕು. ಈ ಗೊಂಕರಸನ ಮಗ ಹಿರಿಯ ಭೈರವನಾಗಿದ್ದು ಈತನು ಕಾಕತೀಯ ರುದ್ರಮದೇವಿಯ ಸಾಮಂತನಾಗಿ ಆಳ್ವಿಕೆಯನ್ನು ನಡೆಸುತ್ತಿದ್ದನು[೬೩]. ಕ್ರಿ.ಶ. ೧೨೫೫ರ ವೇಳೆಯಲ್ಲಿ ಬಹುಷಃ ಇವರು ಕಾಕತೀಯರ ಕಡೆಗೆ ವಾಲಿರಬಹುದೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.

ಹೀಗೆ ರಂಜೋಲದ ಸಿಂದರು ಚಾಲುಕ್ಯ, ಕಲಚೂರಿ, ಸೇವುಣ ಮತ್ತು ಕಾಕತೀಯರ ಸಾಮಂತರಾಗಿ ಅಟ್ಟಳೆನಾಡಿನಲ್ಲಿ ಆಳ್ವಿಕೆಯನ್ನು ನಿರ್ವಹಿಸಿದ್ದಾರೆ.

### ಘ) ಮುಳಗುಂದದ ಸಿಂದರು:

ಮುಳಗುಂದವು ಪ್ರಾಚೀನ ಬೆಳ್ವೊಲನಾಡಿನ ಉಪವಿಭಾಗವಾಗಿತ್ತು. ಇಂದಿನ ಗದಗ ಜಿಲ್ಲೆಯಲ್ಲಿನ ಮುಳಗುಂದ ಗ್ರಾಮವು ಆ ವಿಭಾಗದ ಮುಖ್ಯ ಪಟ್ಟಣವಾಗಿತ್ತು. ಮುಳಗುಂದದಲ್ಲಿ ನೆಲೆನಿಂತ ಈ ಸಿಂದರ ಶಾಖೆಯವರು ತಮ್ಮನ್ನು ಮುಳಗುಂದ ಪುರವರಾಧೀಶ್ವರರೆಂದು ಕರೆದುಕೊಂಡಿದ್ದಾರೆ. ಪ್ರಾಚೀನ ಮುಳಗುಂದ ವಿಭಾಗದಲ್ಲಿ ದೊರೆಯುವ ಶಾಸನಗಳ ಆಧಾರದಿಂದ ಅವರ ಇತಿಹಾಸವನ್ನು ರಚಿಸಬಹುದು.

ಉಳಿದ ಸಿಂದಶಾಖೆಗಳಂತೆ ಇವರು ತಮ್ಮ ಮೂಲಪುರುಷನ ಬಗ್ಗೆ ಹೇಳಿಕೊಂಡಿಲ್ಲ. ಆದರೆ ಈ ಸಿಂದರ ಪ್ರಥಮ ಉಲ್ಲೇಖದ ವಾಸನ ಗ್ರಾಮದ ಶಾಸನದಲ್ಲಿ ಸಿಂದ ಜಾತರಸನು ಮುಳಗುಂದ ಸಿಂದನೆಂದು ಕರೆದುಕೊಂಡಿದ್ದಾನೆ. ಹೀಗಾಗಿ ಈವರೆಗೆ ಈತನೇ ನಮಗೆ ದೊರೆಯುವ ಮುಳಗುಂದ ಸಿಂದರ ಮೂಲಪುರುಷನಾಗಿದ್ದಾನೆ.

**ಜಾತರಸ:**

ವಾಸನಗ್ರಾಮದ ಶಾಸನದ ಪ್ರಕಾರ ಜಾತರಸನು ಚಾಲುಕ್ಯ ಎರಡನೆಯ ತೈಲಪನ ಮಹಾಸಾಮಂತನಾಗಿ ಕದಂಬಳಿಗೆ-೧೦೦೦ ನಾಡನ್ನು ಆಳುತ್ತಿದ್ದನು[೬೪]. ಆದರೆ ಡಾ.ದಿನಕರ ದೇಸಾಯಿಯವರು ಈತನು ಬೆಳಗುತ್ತಿ ಸಿಂದರ ದೊರೆಯಾಗಿದ್ದನೆಂದು ಹೇಳಿದ್ದಾರೆ[೬೫]. ಡಾ.ಬಾ.ರಾ.ಗೋಪಾಲರು ಇದನ್ನು ತಳ್ಳಿಹಾಕುತ್ತಾ ಇವನನ್ನು ಶಾಸನದಲ್ಲಿ ಮುಳ್ಗುನ್ದಸಿನ್ದ ಎಂದು ಕರೆದಿದ್ದರಿಂದ ಈತನು ಮುಳಗುಂದ ಸಿಂದರ ದೊರೆಯೆಂದು ಅಭಿಪ್ರಾಯ ಪಟ್ಟಿದ್ದಾರೆ[೬೬].

**ಕೊರಲಗುಂದ:**

ಜಾತರಸನ ನಂತರ ಕಂಡುಬರುವ ಈತನು ಮುಳಗುಂದ-೧೨ರ ಮನ್ನೆಯನಾಗಿದ್ದನೆಂದು ಹೊಸೂರಿನ ಕ್ರಿ.ಶ. ೯೯೪ರ ಶಾಸನದಲ್ಲಿ ಉಲ್ಲೇಖಗೊಂಡಿದ್ದಾನೆ[೨೭]. ಈ ಕೊರಲಗುಂದನು ಪನ್ನಗಧ್ವಜ ವಿರಾಜಮಾನ, ಕುನ್ನಲವಂಶ ಪ್ರದೀಪ, ಫಣಿವರಭೀಮ, ಸುಭಟರಾಮ, ಮುಳಗುಂದ ವಿದ್ಯಾಧರ ಎಂಬ ಬಿರುದುಗಳನ್ನು ಧರಿಸಿದ್ದನು. ಇವನಿಗೆ ಸಿಂದರಸನೆಂಬ ಮಗನಿದ್ದುದಾಗಿ ತಿಳಿದುಬರುತ್ತದೆ. ಆದರೆ ಈತನ ರಾಣಿಯ ಬಗ್ಗೆ ಏನೂ ತಿಳಿಯುವದಿಲ್ಲ.

ಜಾತರಸನು ಕದಂಬಳಿಗೆಯನ್ನಾಳುತ್ತಿದ್ದು, ಅವನ ನಂತರ ಬಂದ ಈ ಕೊರಲಗುಂದನು ಮುಳಗುಂದ-೧೨ರ ಮನ್ನೆಯತನವನ್ನು ಹೊಂದಿದ್ದುದು ತಿಳಿಯುತ್ತದೆ. ಆದರೆ ಯಾವ ಕಾರಣದಿಂದ ಇವರಿಗೆ ಮಹಾಸಾಮಂತ ಪದವಿ ತಪ್ಪಿ ಮನ್ನೆಯ ಪದವಿ ಲಭ್ಯವಾಯಿತೆಂದು ಇಲ್ಲಿ ಸ್ಪಷ್ಟವಾಗುವದಿಲ್ಲ. ಅಲ್ಲದೇ ಇವರು ಆಳುತ್ತಿದ್ದ ಕದಂಬಳಿಗೆಯಂತಹ ದೊಡ್ಡ ವಿಭಾಗವೂ ಕೈತಪ್ಪಿಹೋಗಿದ್ದು ಕೂಡ ಏತಕ್ಕಾಗಿ ಎಂಬುದು ಸ್ಪಷ್ಟವಾಗುವದಿಲ್ಲ.

**ಸಿಂದರಸ:**

ಕೊರಲಗುಂದನ ನಂತರ ಅವನ ಮಗನಾದ ಈತನು ಆಳ್ವಿಕೆಗೆ ಬಂದನು. ಹೊಸೂರಿನ ಕ್ರಿ.ಶ. ೧೦೨೯ರ ಶಾಸನದಲ್ಲಿ ಈತನಿಗೆ ಮುಳಗುಂದ ವಿದ್ಯಾಧರ, . . . ಮಾರ್ತ್ತಾಂಡ ಎಂಬ ಬಿರುದುಗಳನ್ನು ಉಲ್ಲೇಖಿಸಲಾಗಿದೆ[೨೮]. ತಂದೆಯಂತೆಯೇ ಈತನು ಕೂಡ ಮನ್ನೆಯನಾಗಿದ್ದು ಮುಳಗುಂದ-೧೨ರ ಮನ್ನೆಯತನವನ್ನು ಕೈಕೊಂಡಿದ್ದನು. ಸಿಂದರಸನಿಗೆ ಕಂಚರಸನೆಂಬ ಮಗನಿದ್ದುದಾಗಿ ತಿಳಿದುಬರುತ್ತದೆ.

**ಕಂಚರಸ:**

ಸಿಂದರಸನ ತರುವಾಯ ಅವನ ಮಗನಾದ ಈತನು ಕ್ರಿ.ಶ. ೧೦೫೩ರ ಸುಮಾರಿಗೆ ಆಳ್ವಿಕೆ ಕೈಕೊಂಡನು. ಈತನಿಗೆ ಕನಬಳಾನಂದನ ಕರರೂಪ, ಅಸಮಸಾಹಸನಿಳಯ, ಇಂದುಕರ ಅಪ್ರತಿಮ ಕೀರ್ತ್ತಿ, ಕಾಂತಕಾಂತ, ಜನಧರ್ಮ ನಿರ್ಮಳ, ಸತ್ಯನಿಧಾನ, ಅನೂನದಾನ, ನಂದಿನಂದನ, ಪಂಚೇಷು ನಿಭ ಮುಂತಾದ ಬಿರುದುಗಳಿದ್ದವು. ಶಾಸನದಲ್ಲಿ ಈತನನ್ನು ಮುಳಗುಂದ ಸಿಂದದೇಶ ಲಲಾಮ ಎಂದು ಉಲ್ಲೇಖಿಸಲಾಗಿದೆ[೨೯].

**ಭೀಮರಸ:**

ಕಂಚರಸನ ನಂತರ ಆವನ ಮಗನಾಗಿರಬಹುದಾದ ಈತನು ಆಳ್ವಿಕೆಯನ್ನು ಕೈಕೊಂಡನು. ಈತನ ಕಾಲದಿಂದ ಈ ವಂಶದವರು ಮತ್ತೊಮ್ಮೆ ಮನ್ನೆಯ ಪದವಿಯಿಂದ ಮಹಾಸಾಮಂತ ಪದವಿಗೆ ಏರಿದ್ದನ್ನು ಕಾಣುತ್ತೇವೆ. ಭೀಮರಸನು ಸಿಂದಕುಳಕಮಳ ಮಾರ್ತ್ತಾಂಡ, ನುಡಿದಂತೆ ಗಂಡ, ಕುನ್ನಲವಂಶ ಲಲಾಮ, ಗುಣಗಣೋದ್ದಾಮ, ಕಲಿಗಂಡತೊಂಡೆ, ಕದನಪ್ರಚಂಡ, ರಿಪುನ್ರಿಪ ಭಯಂಕರ, ಸತ್ಯರತ್ನಾಕರ, ಸೌಜನ್ಯಜನ ಮನೋರಂಜನ, ಚತುರಚತುರಾನನ,

ಭಯಲೋಭವರ್ಜಿತ, ವಿಕ್ರಮೋಪಾರ್ಜಿತ, ದರ್ಪಿಷ್ಠ ದುಷ್ಟರಾತಿ ಮದನಿವಾರಣ, ಸಹಜ ಮನೋಜ, ಹಯವತ್ಸರಾಜ, ಕೊಂಗಮನ್ನೆಯ ಬಂಗಾರ, ಶ್ರೀವಾದಿ ಮಹಾಪ್ರಳಯ, ಕಾಲಭೈರವ, ಪರಬಳಸಾಧಕ, ಮಾವನಂಕಕಾರ ಎಂಬ ವೀರೋಚಿತ ಬಿರುದುಗಳನ್ನು ಧರಿಸಿದ್ದನೆಂದು ತಿಳಿದುಬರುತ್ತದೆ. ಅಲ್ಲದೇ ಕ್ರಿ.ಶ. ೧೦೬೨ರ ಮುಳಗುಂದ ಶಾಸನ ಈತನನ್ನು ಕಂಚನ ಗಂಧವಾರಣ ಎಂದು ಉಲ್ಲೇಖಿಸಿದೆ[೬೦]. ಆದ್ದರಿಂದ ಈತನು ಕಂಚರಸನ ಮಗನಾಗಿದ್ದಿರಬಹುದೆಂದು ಊಹಿಸಬಹುದು. ಇದೇ ಶಾಸನ ಭೀಮರಸನ ಜೊತೆ ನಿರಾಬಾಧೆಯಿಂದ ಮಹಾಸಾಮಂತ ಆಚರಸನೆಂಬುವವನೂ ಮುಳಗುಂದ ವಿಭಾಗವನ್ನು ಆಳುತ್ತಿದ್ದನೆಂದು ಹೇಳಿದೆ. ಆದರೆ ಈ ಆಚರಸನ ಬಗ್ಗೆ ಹೆಚ್ಚಿನ ವಿವರಗಳೇನೂ ತಿಳಿದುಬರುವದಿಲ್ಲ.

ಭೀಮರಸನ ನಂತರ ಸಿಂದ ಮನೆತನ ರಾಜಕೀಯದಿಂದ ಕಣ್ಮರೆಯಾಗಿ ಹೋಗುತ್ತದೆ. ಆದರೆ ಸುಮಾರು ಒಂದು ಶತಮಾನದ ತರುವಾಯ ಅಂದರೆ ಕ್ರಿ.ಶ. ೧೨ನೆಯ ಶತಮಾನದಲ್ಲಿ ನಮಗೆ ಮತ್ತೆ ಈ ಮುಳಗುಂದ ಸಿಂದ ಮನೆತನದ ವ್ಯಕ್ತಿಯೊಬ್ಬನ ಉಲ್ಲೇಖ ಸಿಗುತ್ತದೆ. ಇದಕ್ಕೆ ಕಾರಣಗಳೇನೆಂದು ತಿಳಿದುಬರುವದಿಲ್ಲ.

**ಬೊಪ್ಪರಸ:**

ಮುಳಗುಂದ ಸಿಂದ ಮನೆತನದವನಾದ ಈತನು ಉದಾರ ಮಹೇಶ್ವರ, ಪಾತಾಳಚಕ್ರವರ್ತಿ, ಸಕಳ ದಿಗ್ವಳಯ ವಿಳಸಿತಕೀರ್ತಿ, ಸೌಜನ್ಯತಿಲಕಾನಂದ, ಸಿಂದಕುಳ ಕಮಳ ಮಾರ್ತ್ತಾಂಡ, ಸಿತಗರಗಂಡ, ಕುನ್ನುಲಾನ್ವಯ ಪ್ರಸೂತ, ಪರಿಜನ ಪಾರಿಜಾತ, ವಿದಗ್ಧ ಮುಗ್ಧನಾದ, ಸೀಮಂತಿನೀ ಸೀಮಂತ, ವಿಷಮ ತುರಗಾರೂಢ, ಪ್ರೌಢರೇವಂತ, ಸಾಮಂತ ಲಲಾಟಪಟ್ಟ, ವೈರಿಗೋಧೂಮಘರಟ್ಟ, ಸತ್ಯರತ್ನಾಕರ, ರಿಪುನ್ರಿಪ ಭಯಂಕರ, ವೈರಝಳಪ್ಪ, ನಾಗಧ್ವಜವಿರಾಜಮಾನ, ಸಮಸ್ತಜನ ಸಂಸ್ತೂಯಮಾನ, ದಾನವಿನೋದ, ಮೃಗದಾಮೋದ, ಹರಚರಣಕಮಳಬ್ರಿಂಗ, ಸಾಹಸೋತ್ತುಂಗ ಮುಂತಾದ ಬಿರುದುಗಳನ್ನು ಹೊಂದಿ, ಮುಳಗುಂದ-೧೨ನ್ನು ಆಳುತ್ತಿದ್ದನೆಂದು ಮುಳಗುಂದದ ಶಾಸನವೊಂದು ಉಲ್ಲೇಖಿಸಿದೆ[೬೧]. ಹೊಸೂರು ಶಾಸನದಲ್ಲಿ ಈತನನ್ನು ರಕ್ಷಿಸಿ ಧರ್ಮ್ಮಂಗಳನುಪ ಲಕ್ಷಿಸಿ ಕುನ್ನುಲನ ಚರಿತಮಂ ರಿಪುಜಯೊದೊಳಕ್ಷತಿವೆತ್ತಂ ಸೆಲೆ ಸಿನ್ದ ಕ್ಷತ್ರಿಯನೆನಿಪ್ಪ ಬೊಪ್ಪನಹಿತ ಝಳಪ್ಪಂ ಎಂದು ಬಣ್ಣಿಸಲಾಗಿದೆ[೬೨].

ಬೊಪ್ಪರಸನ ನಂತರ ಈ ವಂಶದಲ್ಲಿ ಹೊಲ್ಲರಸನೆಂಬುವವನು ಆಳ್ವಿಕೆಯನ್ನು ಮಾಡಿದನೆಂದು ತಿಳಿದುಬರುತ್ತದೆ. ಆದರೆ ಅವನಾಳ್ವಿಕೆಯ ವಿವರಗಳು ತಿಳಿದುಬಂದಿಲ್ಲ. ನಂತರ ಈ ವಂಶವು ಕಣ್ಮರೆಯಾಯಿತು. ಹೀಗೆ ಉಳಿದ ಸಿಂದರಂತೆ ಈ ಮನೆತನವೂ ಕೂಡ ಕಲ್ಯಾಣಿ ಚಾಲುಕ್ಯರ ನಿಷ್ಠಾವಂತ ಸಾಮಂತರಾಗಿ ಮುಳಗುಂದ ವಿಭಾಗದಲ್ಲಿ ಆಳ್ವಿಕೆ ಮಾಡಿದ್ದು ಕಂಡುಬರುತ್ತದೆ.

## ಗ)ಪ್ರತ್ಯಂಡ್ರಕದ ಸಿಂದರು:

ಡಾ. ಫ್ಲೀಟರು ಪ್ರತ್ಯಂಡ್ರಕ-೪೦೦೦ವು ಇಂದಿನ ಪಠಾಣ ರಾಜ್ಯವೆಂದು ಗುರುತಿಸುತ್ತಾ, ಅದು ಉತ್ತರಕ್ಕೆ ಪಂಢರಾಪುರ(ಮಂಗಳವೇಡೆಗೆ ಹೊಂದಿಕೊಂಡಂತೆ), ದಕ್ಷಿಣಕ್ಕೆ ಮಾನಗಂಗಾ ನದಿಯವರೆಗಿನ ಪ್ರದೇಶವನ್ನೊಳಗೊಂಡಿತ್ತೆಂದು ಅಭಿಪ್ರಾಯಪಡುತ್ತಾರೆ[೬೩]. ಶಾಸನಗಳಲ್ಲಿ ಬರುವ ಪಳಿಯಂಡಕ-೪೦೦೦ ಮತ್ತು ಪ್ರತ್ಯಂಡ್ರಕ-೪೦೦೦ ಎಂಬುವುಗಳು ಒಂದೇ ವಿಭಾಗದ ಹೆಸರುಗಳಾಗಿರಬೇಕು.

ತಿಡಗುಂಡಿ ತಾಮ್ರಶಾಸನವು ಈ ಪ್ರತ್ಯಂಡ್ರಕ-೪೦೦೦ವನ್ನು ಆಳುತ್ತಿದ್ದ ಸಿಂದರನ್ನು ಉಲ್ಲೇಖಿಸಿದೆ[೬೪]. ಈ ಶಾಸನ ಸಿಂದ ಮುಂಜನ ಆಳ್ವಿಕೆಯನ್ನು ಉಲ್ಲೇಖಿಸುವದರ ಜೊತೆಗೆ, ಆ ಮನೆತನದ ಭೀಮ ಮತ್ತು ಅವನ ಮಗ ಸಿಂದರಾಜರುಗಳನ್ನು ಹೆಸರಿಸಿದೆ. ಈ ಸಿಂದರಾಜನ ಮಗನೇ ಮುಂಜರಾಜನಾಗಿದ್ದಾನೆ. ಈ ಮುಂಜನು ಪ್ರತ್ಯಂಡ್ರಕ ಚತುಃಸಹಸ್ರ ದೇಶಾಧಿಪತಿಯಾಗಿದ್ದನೆಂದು ಶಾಸನ ಹೇಳಿದೆ. ಕ್ರಿ.ಶ. ೧೦೮೩ರಲ್ಲಿ ಶಾಸನ ರಚಿತವಾಗಿರುವದರಿಂದ ಒಂದೊಂದು ತಲೆಮಾರಿಗೆ ೨೫ ವರ್ಷಗಳಂತೆ ಲೆಖ್ಖಹಾಕಿದರೆ, ಭೀಮನು ಕ್ರಿ.ಶ. ೧೦೩೨ರಲ್ಲಿಯೂ, ಅವನ ಮಗ ಸಿಂದರಾಜನು ಕ್ರಿ.ಶ.ಸು. ೧೦೬೨ರಲ್ಲಿಯೂ ಆಳ್ವಿಕೆ ಮಾಡಿರಬಹುದಾಗಿದೆ. ಆದರೆ ಶಾಸನದಿಂದ ಭೀಮ ಹಾಗೂ ಸಿಂದರಾಜರು ಅಧಿಕಾರದ ಯಾವ ಸ್ಥಾನಮಾನಗಳನ್ನು ಹೊಂದಿದ್ದರೆಂದು ತಿಳಿಯುವದಿಲ್ಲ.

ಮುಂಜರಾಜನು ಚಾಲುಕ್ಯ ಆರನೆಯ ವಿಕ್ರಮಾದಿತ್ಯನ ಕೈಕೆಳಗೆ ಮಹಾಮಂಡಳೇಶ್ವರನಾಗಿ ಆಳ್ವಿಕೆಯನ್ನು ಮಾಡಿದ್ದಾನೆ. ಅಲ್ಲದೇ ಅವನು ಸಿಂದಕುಲ ಕಮಲ ಮಾರ್ತಾಂಡ, ಫಣಿವಂಶಕುಲೋದ್ಭವ ಎಂಬ ಬಿರುದುಗಳನ್ನು ಹೊಂದಿದ್ದನು. ಅಲ್ಲದೇ ಈತನು ಲಾಟವಂಶದ ರಾಜಕುಮಾರಿಯನ್ನು ಮದುವೆಯಾಗಿದ್ದನೆಂದು ಮೆಲಿನ ಶಾಸನದಿಂದ ತಿಳಿದುಬರುತ್ತದೆ.

ಹೀಗೆ ಪ್ರತ್ಯಂಡ್ರಕ ಸಿಂದ ವಂಶದವರೂ ಕೂಡ ಕಲ್ಯಾಣಿ ಚಾಲುಕ್ಯರ ಸಾಮಂತರಾಗಿ ಸೇವೆ ಸಲ್ಲಿಸಿರುವದು ತಿಳಿದುಬರುತ್ತದೆ.

## ಹ) ಕೋಗಳಿ ನಾಡಿನ ಸಿಂದರು:

ಪ್ರಾಚೀನ ಕೋಗಳಿ-೫೦೦ ನಾಡಿನ ಕೆಲವು ಗ್ರಾಮಗಳನ್ನು ಸಿಂದ ವಂಶದ ಕೆಲ ಅರಸರು ಆಳುತ್ತಿದ್ದರು. ದಿನಕರ ದೇಸಾಯಿಯವರು ಈ ವಂಶದ ಬೊಮ್ಮರಸನನ್ನು ಕುರುಗೋಡು ಸಿಂದ ವಂಶದವನೆಂದು ಹೇಳುತ್ತಾರೆ[೬೫]. ಆದರೆ ಬಾ.ರಾ.ಗೊಪಾಲರು ಈ ಬೊಮ್ಮರಸ ಮತ್ತು ಕುರುಗೋಡು ಸಿಂದರ ಉದಯಾದಿತ್ಯರ ಸಂಬಂಧದ ಬಗ್ಗೆ ಅನುಮಾನ ವ್ಯಕ್ತಪಡಿಸುತ್ತಾರಾದರೂ ಕೂಡ ಅವನನ್ನು ಕುರುಗೋಡು ಸಿಂದರಲ್ಲಿಯೇ ಸೇರಿಸುತ್ತಾರೆ[೬೬].

ನಮಗೆ ತಿಳಿದಂತೆ ಕುರುಗೋಡು ಸಿಂದರು ಬಲ್ಲಕುಂದೆ ನಾಡನ್ನು ಮಾತ್ರ ಆಳುತ್ತಿದ್ದರು. ಆದರೆ ಬಮ್ಮರಸನು ಕ್ರಿ.ಶ.೧೦೫೨-೫೩ರಲ್ಲಿ ಮಹಾಮಂಡಳೇಶ್ವರ ನೊಳಂಬ ಪಲ್ಲವ ಪೆರ್ಮಾಡಿಯ ಸಾಮಂತನಾಗಿ ಕೋಗಳು ಆಯ್ನೂರರಕಂ . ಪೊಗೆ ಪನ್ನೆರಡರ ಬಳಿಯಗ್ರಹಾರಂ ತೊಣಕಲಿಯುಂ ಮ . ಲುದಯಿ ಪಂನೆಡರ ಬಳಿಯ ನಿಟ್ಟೂರಮುಮಂ ಮೊಸ . ವದು ಪನ್ನೆರಡರ ಬಸಿಕೋಡುವಂ ಆಳುತ್ತಿದ್ದನು ಎಂದು ಹೂವಿನ ಹಡಗಲಿ ತಾಲೂಕ ತಳಕಲ್ಲು ಶಾಸನ ಉಲ್ಲೇಖಿಸಿದೆ[೭೩೭]. ಇದರಿಂದ ಈತನು ಕೋಗಳಿ-೫೦೦ರಲ್ಲಿಯ ಬೇರೆ ಬೇರೆ ಉಪವಿಭಾಗಗಳಿಗೆ ಸೇರಿದ ೩ ಗ್ರಾಮಗಳನ್ನು ಮಾತ್ರ ಆಳುತ್ತಿದ್ದುದಾಗಿ ಸ್ಪಷ್ಟವಾಗುತ್ತದೆ. ಹೀಗಾಗಿ ಈತನನ್ನು ಕೋಗಳಿನಾಡಿನ ಸಿಂದರ ಶಾಖೆಗೆ ಸೇರಿದವನೆಂದು ಕರೆಯಲಾಗಿದೆ.

ಬಮ್ಮರಸನು ವೀರಮಹೇಶ್ವರ, ವಿಜಯ ವಿಕ್ರಮ, ಸಿಂದಕುಳಕಮಳ ಭಾಸ್ಕರ, ಪ್ರತ್ಯಕ್ಷಪಾರ್ಥ, ವೈರಿಕಾಳನಳ, ಪರಪಕ್ಷಮಲ್ಲ, ಪಾತಾಳಚಕ್ರವರ್ತಿ, ಫಣೀಂದ್ರ ಕುಳಭೂಷಣ ಮುಂತಾದ ಬಿರುದುಗಳನ್ನು ಹೊಂದಿದ್ದನು. ಅಲ್ಲದೇ ಶಾಸನವು ಈತನನ್ನು ಅಣ್ಣನ ಸಿಂಗನೆಂದೂ, ಜಾತನ ಗಂಧವಾರಣನೆಂದು ಕರೆದಿದೆ. ಈತನು ತನ್ನ ತಂದೆ-ತಾಯಿಯರಿಗೆ ತುಂಬಾ ವಿಧೇಯನಾಗಿದ್ದನೆಂದು ಅದೇ ಶಾಸನದಿಂದ ತಿಳಿಯುತ್ತದೆ. ಆದರೆ ಈತನ ಅಣ್ಣ ಮತ್ತು ತಂದೆ-ತಾಯಿಯರ ವಿವರಗಳು ತಿಳಿದುಬರುವದಿಲ್ಲ.

ಬಮ್ಮರಸನ ಮೊದಲಾಗಲೀ ನಂತರವಾಗಲೀ ಈ ವಂಶದಲ್ಲಿ ಯಾರು ಆಗಿಹೋದರು ಎಂಬುದಕ್ಕೆ ನಮಗೆ ಈವರೆಗೆ ಯಾವುದೇ ಆಧಾರಗಳು ದೊರೆಯುವದಿಲ್ಲ.

### ಇ)ಗುತ್ತಿಯ ಸಿಂದರು:

ಇಂದಿನ ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯ ತಾಲೂಕು ಕೇಂದ್ರವಾದ ಗುತ್ತಿಯಲ್ಲಿ ಒಂದು ಸಿಂದರ ಶಾಖೆಯಿತ್ತೆಂದು ಶಾಸನವೊಂದರಿಂದ ತಿಳಿದುಬರುತ್ತದೆ. ಈ ಮನೆತನದ ಬಾಚಿಭೂಪನೆಂಬುವನು ಗುತ್ತಕಲು ರಾಜಧಾನಿಯಿಂದ ಆಳ್ವಿಕೆಯನ್ನು ನಡೆಸಿದ್ದಾನೆ. ಹೀಗಾಗಿ ಅವರನ್ನು ಗುತ್ತಿಯ ಸಿಂದರೆಂದು ಕರೆಯಲಾಗಿದೆ. ಕ್ರಿ.ಶ. ೧೧೩೨ರ ಕರಕಂಠಪುರ ಶಾಸನದ ಆಧಾರದ ಮೇಲಿಂದ ಈ ಮನೆತನದ ಇತಿಹಾಸವನ್ನು ಹೀಗೆ ನಿರೂಪಿಸಬಹುದು[೭೩೮].

### ಬಟ್ಟಿಗಕ್ಷ್ಮಾಪ:

ಈತನು ಈ ಮನೆತನದ ಮೂಲಪುರುಷನಾಗಿದ್ದು, ಈತನಿಗೆ ಚಂಡಲದೇವಿ ಎಂಬ ರಾಣಿಯಿದ್ದಳು. ಇವರಿಬ್ಬರಿಗೆ ಚೆಕ್ಕಳನೃಪನೆಂಬ ಮಗ ಜನಿಸಿದನು. ಚೆಕ್ಕಳನೃಪನಿಗೆ ರೇಕಾಂಬಿಕೆ ಎಂಬ ರಾಣಿಯಿದ್ದಳು. ಇವರಿಬ್ಬರಿಗೆ ಮಾರ್ತಾಂಡ, ನಿಚರಸ, ಬಗ್ಗಿದೇವ, ಚೊಕ್ಕಿಭೂಪಾಳ, ಬಟ್ಟಿಗಕ್ಷ್ಮಾಪ ಮತ್ತು ಸೊಮ ಎಂಬ ಆರು ಮಕ್ಕಳಿದ್ದರು. ಶಾಸನದಲ್ಲಿ ಇವರನ್ನು ಉರುಭುಜಾಟೋಪರೆಂದು ಕರೆಯಲಾಗಿದೆ.

**ಚೊಕ್ಕಿಭೂಪಾಳ:**

ಚೆಕ್ಕಳನೃಪನ ಮಗನಾದ ಈತನನ್ನು ಶಾಸನದಲ್ಲಿ ಚೊಕ್ಕಿ, ಚೊಕ್ಕಿನೃಪ, ಚೊಕ್ಕಿಭೂಪಾಳ, ಚೆಕ್ಕಲ ಎಂದು ಮುಂತಾಗಿ ಕರೆಯಲಾಗಿದೆ. ಈತನು ಅತುಳಮಜಬಳದಿನನುಪಮ ವಿತರಣಗುಣದಿಂ ಧರಿತ್ರಿಯಂ ಮೆಚ್ಚಿಸಿ ಸಂತಸವಂ ತಳೆದಿದ್ದನು ಎಂದು ಶಾಸನದಲ್ಲಿ ಹೇಳಲಾಗಿದೆ. ಈತನಿಗೆ ಲಕ್ಷ್ಮೀದೇವಿ ಎಂಬ ರಾಣಿಯಿದ್ದು, ಅವರಿಬ್ಬರಲ್ಲಿ ಜೋಯಿಗಾಂಕ, ಚೇರಮ, ಜಯೋದ್ಭವ, ಸಿತಗರಗಂಡ, ಬಾಚಿಭೂಪ ಮತ್ತು ಕಲಿದೇವಚೋಳ ಎಂಬ ಆರು ಜನ ಮಕ್ಕಳಿದ್ದರು. ಇವರಲ್ಲಿ ಬಾಚಿಭೂಪನು ಪ್ರಸಿದ್ಧನಾದನು. ಬಾ.ರಾ.ಗೋಪಾಲರು ಕ್ರಿ.ಶ. ೧೦೯೨ರ ಸಿರಗುಪ್ಪ ಶಾಸನ[೬೯]ದಲ್ಲಿ ಬರುವ ಚೋಕರಸನೆಂಬುವನು ಹಾಗೂ ಕರಕಂಠಪುರದ ಈ ಮೇಲಿನ ಚೊಕ್ಕಿನೃಪರು ಒಂದೇ ಆಗಿರಬಹುದೆಂದಿದ್ದಾರೆ[೭೦]. ಆದರೆ ಅವರಿಬ್ಬರೂ ಭಿನ್ನರಾಗಿರುವದು ಕಂಡುಬರುತ್ತದೆ.

**ಬಾಚಿಭೂಪ:**

ಚೊಕ್ಕಿಭೂಪಾಳನ ಮಗನಾದ ಈತನು ಅವನ ನಂತರ ಆಳ್ವಿಕೆ ಕೈಕೊಂಡಿದ್ದಾನೆ. ಈತನು ಚಾಲುಕ್ಯ ಮೂರನೆಯ ಸೋಮೇಶ್ವರ ಹಾಗೂ ಆತನ ತಮ್ಮ ಯುವರಾಜ ತೈಲಪನ ಸಾಮಂತನಾಗಿ ಆಳ್ವಿಕೆಯನು ನಿರ್ವಹಿಸಿದ್ದಾನೆ. ಈತನಿಗೆ ವಿದಗ್ಧಗಣಿಕಾಜನ ಹೃದಯ ಸೂರೆಕಾರ, ಅಣ್ಣನಂಕಕಾರ, ಸಿತಗರಗಂಡ, ನುಡಿದಂತೆ ಗಂಡ, ತೊಡರೆಬಲ್ಗಂಡ, ಅಯ್ಯನ ಸಿಂಗ, ಸಾಹಸೋತ್ತುಂಗ, ಪರಬಳಸಾಧಕ ಮುಂತಾದ ಬಿರುದುಗಳಿದ್ದವು. ಈತನು ಸಿಂದವಾಡಿ-೧೦೦೦ ಒಂದು ಉಪವಿಭಾಗವನ್ನು ಮಾತ್ರ ಗುತ್ತಿಕಲು ರಾಜಧಾನಿಯಿಂದ ಆಳುತ್ತಿದ್ದುದಾಗಿ ತಿಳಿದುಬರುತ್ತದೆ. ಆದರೆ ಆ ಉಪವಿಭಾಗ ಯಾವುದೆಂದು ಶಾಸನದಿಂದ ಸ್ಪಷ್ಟವಾಗುವದಿಲ್ಲ.

ಹೀಗೆ ಕ್ರಿ.ಶ. ೧೨ನೆಯ ಶತಮಾನದಲ್ಲಿ ಗುತ್ತಿಯ ಸಿಂದರೂ ಕೂಡ ಕಲ್ಯಾಣ ಚಾಲುಕ್ಯರ ಸಾಮಂತರಾಗಿ ಆಳ್ವಿಕೆ ಕೈಕೊಂಡಿದ್ದಾರೆ.

**ಜ)ಸಾಲಗುಂದೆಯ ಸಿಂದರು:**

ಎಡದೊರೆ-೨೦೦೦ ನಾಡಿನ ಉಪವಿಭಾಗವಾದ ನಿಟ್ಟುರವೆ-೭೦ರಲ್ಲಿನ ಒಂದು ಅಗ್ರಹಾರ ಸಾಲಗುಂದೆಯಾಗಿತ್ತು. ಇದು ಇಂದಿನ ರಾಯಚೂರು ಜಿಲ್ಲೆಯ ಸಿಂಧನೂರ ತಾಲೂಕಿನ ಚಿಕ್ಕ ಗ್ರಾಮವಾಗಿದೆ. ಸಾಲಗುಂದೆ ಮತ್ತು ಅದರ ಸುತ್ತಲಿನ ಗ್ರಾಮಗಳನ್ನಾಳಿದ ಸಿಂದರನ್ನು ಸಾಲಗುಂದೆಯ ಸಿಂದರೆಂದು ಕರೆಯಲಾಗಿದೆ. ಮೊದಲು ಕೆಲ ಗ್ರಾಮಗಳನ್ನಾಳುತ್ತಿದ್ದ ಇವರು ನಂತರದಲ್ಲಿ ನಿಟ್ಟುರವೆ-೭೦ ಮತ್ತು ಸಾಲಗುಂದೆ-೭೦ ವಿಭಾಗಗಳ ಅಧಿಪತಿಗಳಾಗಿ ಆಳ್ವಿಕೆಯನ್ನು ಕೈಕೊಂಡಿದ್ದಾರೆ.

**ನಾಗೇಂದ್ರ:**

ಸಾಲಗುಂದೆಯ ಸಿಂದರು ತಮ್ಮ ವಂಶದ ಮೂಲಪುರುಷ ನಾಗೇಂದ್ರ ಮತ್ತು ನಾಗಿಣಿಯರೆಂದು ಹೇಳಿಕೊಂಡಿದ್ದಾರೆ. ಕ್ರಿ.ಶ. ೧೦೮೮ರ ಮುಕ್ಕುಂದೆ ಶಾಸನದಲ್ಲಿ ನಾಗೇಂದ್ರಂ ತಂದೆ ತಾಯ್ನಾಗಿಣಿ ವಿಮಳ ನಿಜೋತ್ಪತ್ತಿಯಿಂ ತಾನ್ಸುದಿಪೆಂಪಾರ್ಗ್ಗಂ ತಾನೆಂಬನಂ . . . ಸಿಂನ್ದಾಭೂಪ ಎಂದು ಹೇಳಲಾಗಿದೆ[೬೧]. ನಾಗೇಂದ್ರ ಮತ್ತು ನಾಗಿಣಿಯರ ನಂತರ ನಮಗೆ ಕಂಡುಬರುವ ಅರಸನೆಂದರೆ ಕಾಲಿಗಾನಭೂಪ ಎಂಬುವವನಾಗಿದ್ದಾನೆ. ಆದರೆ ಈತನಾಳ್ವಿಕೆಯ ವಿವರಗಳು ದೊರೆಯುವದಿಲ್ಲ.

**ಕಣ್ಣರಸ:**

ಕಾಲಿಗಾನ ಭೂಪನ ಮಗನಾದ ಈತನು ನಂತರದಲ್ಲಿ ಆಳ್ವಿಕೆ ನಡೆಸಿದ್ದಾನೆ. ಇವನು ಮಹಾಮಂಡಳೇಶ್ವರ ಅಮ್ಮಣದೇವನ ಸಾಮಂತನಾಗಿ ಆಳ್ವಿಕೆ ನಡೆಸುತ್ತಿದ್ದನೆಂದು ಕ್ರಿ.ಶ. ೧೦೫೩ರ ರೌಡಕುಂದೆ ಶಾಸನ ತಿಳಿಸುತ್ತದೆ[೬೨]. ಇವನು ಇಳಾವಿಖ್ಯಾತ, ಶಿಷ್ಟೇಷ್ಟದಾತ, ಭೂಪಭಯೋದಲ್ಬಾತ, ಶೌರ್ಯದೊಳುಪಮಾತೀತನೂ ಆಗಿದ್ದನು[೬೩]. ಅಲ್ಲದೇ ಈತನಿಗೆ ಶೌರ್ಯಮಹೇಶ್ವರ, ವಿದ್ಯಾವಿರಿಂಚನ, ಸಿಂದ ಶಿಖಾಮಣಿ, ವಿಬುಧಚಿಂತಾಮಣಿ, ಶೌಚಗಾಂಗೇಯ, ಸತ್ಯರಾಧೇಯ, ಗುಣಗಣೋತ್ತುಂಗ, ಗೋನನಸಿಂಗ ಮುಂತಾದ ಬಿರುದುಗಳನ್ನು ಶಾಸನದಲ್ಲಿ ಉಲ್ಲೇಖಿಸಲಾಗಿದೆ[೬೪]. ಆದರೆ ಶಾಸನಗಳು ಈತನಾಳ್ವಿಕೆಯ ಪ್ರದೇಶವನ್ನು ಉಲ್ಲೇಖಿಸುವದಿಲ್ಲ. ಇವನಿಗೆ ಕಾವಬ್ಬರಸಿ ಅಥವಾ ಕಾಮಲದೇವಿ ಎಂಬ ರಾಣಿಯಿದ್ದಳು. ಮತ್ತು ಕಾಲಿಗಾನಭೂಪ ಮತ್ತು ಬಾಚಿಭೂಪರೆಂಬ ಮಕ್ಕಳಿದ್ದರು.

**ಎರಡನೆಯ ಕಾಲಿಗಾನಭೂಪ:**

ಕಣ್ಣರಸನ ನಂತರ ಆತನ ಹಿರಿಯ ಮಗನಾದ ಕಾಲಿಗಾನಭೂಪನು ಆಳ್ವಿಕೆಗೆ ಬಂದನು. ಈತನಿಗೆ ಕಣ್ಣರಸನಂಕಕಾರ ಎಂಬ ಬಿರುದಿದ್ದುದು ತಿಳಿಯುತ್ತದೆ. ಅಲ್ಲದೇ ಈತನಾಳ್ವಿಕೆಯ ವಿವರಗಳು ತಿಳಿಯುವದಿಲ್ಲ. ಶಾಸನವು ಈತನನ್ನು ಮನುಮಾರ್ಗ್ಗಮುಮ್ಯುತುಖಿಚರಪತಿ ವಿಳಾಸ ವಿಳಾಸಂ ದನನಾಧೀಶನತೇಜಂ ತೇಜಮಂ ಭೋರುಹಸುಖಿಸುತ ನಮ್ಮರ್ಮ್ಮಡಿವಾಪಗಾ ಪುತ್ರನ ಶೌಚಮಿಂದ್ರಪ್ರಭವೆನಬಳವಧು ವಿಕ್ರಮಕಾಲ . ಪಕಾಳ . . ಮೆಂದದುರೆ ದೊರೆ ಪೆರರಾರ್ಗ್ಗಂ ವಾಭೂಷಂಗ ಭೂಪರು ಎಂದು ಕರೆದಿದೆ[೬೫]. ಬಹುಷಃ ಈತನು ಅಕಾಲ ಮರಣಕ್ಕೆ ತುತ್ತಾಗಿರಬಹುದು. ಕಾರಣ ನಂತರ ಈತನ ತಮ್ಮನು ಕೆಲವೇ ವರ್ಷಗಳಲ್ಲಿ ಆಳ್ವಿಕೆ ಮಾಡಿದ್ದು ಕಂಡುಬರುತ್ತದೆ.

**ಬಾಚಿಭೂಪ:**

ಎರಡನೆಯ ಕಾಲಿಗಾನಭೂಪನ ನಂತರ ಆತನ ತಮ್ಮ ಬಾಚಿಭೂಪನು ಕ್ರಿ.ಶ. ೧೦೬೩ರಲ್ಲಿ ಆಳ್ವಿಕೆಗೆ ಬಂದನು. ಸಾಲಗುಂದೆ ಮನೆತನದ ಅರಸರುಗಳಲ್ಲಿಯೇ ಈತ ಪ್ರಬಲನಾಗಿದ್ದಾನೆ. ಕ್ರಿ.ಶ. ೧೦೬೩ರ ಸಾಲಗುಂದೆ ಶಾಸನವು

ನಿಟ್ಟುರವೆಯೆಪ್ಪತರ ಅಗ್ರಹಾರ ಸಾಲಗುಂದೆಯನ್ನು ಬಾಚಿಭೂಪನು ಆಳುತ್ತಿದ್ದುದಾಗಿ ಉಲ್ಲೇಖಿಸುತ್ತದೆ[೪೬]. ಇವನನ್ನು ಶಾಸನದಲ್ಲಿ ಬಾಚರಸ, ಬಾಚಿಭೂಪ, ಬಾಚಿರಂಗ ಎಂದು ಮುಂತಾಗಿ ಕರೆಯಲಾಗಿದೆ. ಅಲ್ಲದೇ ಈತನು ಕಣ್ಣರಸನಸಿಂಗನೆನಿಸಿದ್ದನೆಂದು ತಿಳಿದುಬರುತ್ತದೆ. ಇವನು ಚಾಲುಕ್ಯ ಆರನೆಯ ವಿಕ್ರಮಾದಿತ್ಯನ ನಿಷ್ಠಾವಂತ ಸಾಮಂತನಾಗಿದ್ದನೆಂದು ಈತನ ಪೆರ್ಮಾಡಿಬಲ್ಲು ಎಂಬ ಬಿರುದಿನಿಂದ ಸ್ಪಷ್ಟವಾಗುತ್ತದೆ. ಬಾಚಿಭೂಪನಿಗೆ ನಾಗರಾಜವಂಶೋದ್ಭವ, ಉನ್ನತಿಮತಿ, ತೇಜೋನಿಧಿ, ವಿಕ್ರಮವಿಭಾಸಿ, ರಿಪುನ್ರಿಪ ಜಳದಿಮದನ ಸಂಜಾತ, ವೀರಲಕ್ಷ್ಮೀಲಕ್ಷಿತ ದಕ್ಷಿಣದೋರ್ದ್ದಣ್ಡ, ಸಿಂದರೊಳ್ಗಂಡ, ವಿಜಯಪಟ್ಟುರುಹ ವಿಶೇಷ, ಲೋಕೈಯ್ಕಭಾಸ್ಕರ, ಚಲದಂಕರಾಮ, ಅಳ್ಗಿನಲ್ಲಾತ, ವೈರಿನಿರ್ಗ್ಗೂತ, ಭ್ರಿತ್ಯಚಿಂತಾಮಣಿ, ಸುಭಟಶಿರೋಮಣಿ, ಶೌರ್ಯಪ್ರಭಾವ, ಮಂಡಲಗಾವ, ಗಂಡಭೇರುಂಡ, ಸೂದ್ರಕವಿಚರಣ, ಬುಧಜನಸ್ತುತ್ಯ, ಕಲಿಯಸೆಳೆವ, ಕಣ್ಣಂಗನಾಸಿಂಗ ಮುಂತಾದ ಬಿರುದುಗಳಿದ್ದವು. ಇದರಿಂದ ಅವನ ಶೌರ್ಯ-ಪರಾಕ್ರಮಗಳ ಪರಿಚಯ ನಮಗಾಗುತ್ತದೆ. ಕ್ರಿ.ಶ. ೧೦೮೮ರ ಮುಕ್ಕುಂದೆ ಶಾಸನವು ಈತನ ಉಲ್ಲೇಖ ನೀಡುತ್ತಿದ್ದು ಇದು ಈತನಾಳ್ವಿಕೆಯ ಕೊನೆಯ ಶಾಸನವಾಗಿದೆ[೪೭].

ಕ್ರಿ.ಶ. ೧೦೮೮ರ ನಂತರ ಬಾಚಿಭೂಪನ ಆಳ್ವಿಕೆ ಕೊನೆಗೊಂಡಾಗ, ಮುಂದೆ ಈ ಸಿಂದಮನೆತನದ ಉಲ್ಲೇಖ ಕ್ರಿ.ಶ. ೧೧೫೩ರವರೆಗೆ ನಮಗೆಲ್ಲಿಯೂ ದೊರೆಯುವದಿಲ್ಲ. ಆ ವೇಳೆಯಲ್ಲಿ ಈ ಮನೆತನದಲ್ಲಿ ಯಾರು ಆಳಿದರೆಂಬುದರ ಬಗ್ಗೆ ನಮಗೆ ಶಾಸನಾಧಾರಗಳಿಂದ ತಿಳಿಯಲಾಗಿಲ್ಲ.

**ಬಾಚಿದೇವ:**

ಕ್ರಿ.ಶ. ೧೧೫೩ರಲ್ಲಿ ಬಾಚಿದೇವನು ಎಡದೊರೆ-೨೦೦೦ದೊಳಗಣ ಸಾಲಗುಂದೆ-೭೦ನ್ನು ಆಳುತ್ತಿದ್ದುದಾಗಿ ಸಾಲಗುಂದೆ ಶಾಸನದಿಂದ ತಿಳಿದುಬರುತ್ತದೆ[೪೮]. ಅಲ್ಲದೇ ಅದೇ ಗ್ರಾಮದ ಮತ್ತೊಂದು ಶಾಸನವು ಎಡದೊರೆಯೆಚ್ಚಾಸಿರನಾಡೊಳಗೆ ಶೋಭೆವೆತ್ತಿರ್ಪ . ಭೂದೇವ ಕುಳೋತ್ತಮರಿಂದು ಕೇವಳವೆ ಸಾಲಗುಂದೆಯೆಪ್ಪತ್ತರೊಳು ಪರಮೋತ್ಸವದಿಂದನಾಳ್ವರಸಂ ಶ್ರೀಬಾಚಿದೇವನನುನಯದಿಂ ಎಂದು ಹೇಳುತ್ತದೆ[೪೯]. ಹೀಗೆ ಕ್ರಿ.ಶ. ೧೧೫೩ರ ವೇಳೆಗೆ ಸಾಲಗುಂದೆಗೆ ಒಂದು ವಿಭಾಗದ ಸ್ಥಾನಮಾನ ದೊರೆತದ್ದು, ಅದು ಸಾಲಗುಂದೆ-೭೦ ಎಂಬ ಉಪವಿಭಾಗವಾಗಿ ಮಾರ್ಪಟ್ಟದ್ದು ತಿಳಿದುಬರುತ್ತದೆ. ಆದರೆ ಅದನ್ನು ಆಗ ಆಳುತ್ತಿದ್ದ ಈ ಬಾಚಿದೇವ ಸಿಂದವಂಶಕ್ಕೆ ಸೇರಿದವನೆಂದು ಒಪ್ಪಿಕೊಳ್ಳಲು ಆಧಾರಗಳ ಕೊರತೆಯಿದೆ.

ಹೀಗೆ ಸಾಲಗುಂದೆಯ ಸಿಂದರೂ ಕೂಡ ಕಲ್ಯಾಣಿ ಚಾಲುಕ್ಯರ ಸಾಮಂತರಾಗಿ ಆಳ್ವಿಕೆಯನ್ನು ನಡೆಸಿರುವದು ಕಂಡುಬರುತ್ತದೆ.

**ಅಡಿಟಿಪ್ಪಣಿಗಳು**

೧. Sheik Ali,B., History of the Western Gangas, 1976, Mysore, p-40.
೨. E.C., Vol-IX, Db, No-67; Mahalingam,T.V., Banas in South Indian History, p-160.
೩. Sheik Ali,B., op.cit., p-41.
೪. MAR., 1925, Ins.No-115.
೫. Ibid., 1921, p-8.
೬. Sheik Ali,B., op.cit., p-43.
೭. MAR., 1925, Ins.No-105, p-85.
೮. Sheik Ali,B., op.cit., p-44.
೯. E.C., Vol-III, Nj, No-122.
೧೦. Ibid., p-202.
೧೧. MAR., 1914, Plate-XVIII, p-15; B.Sheik Ali, op.cit., p-46.
೧೨. Sheik Ali,B., op.cit., p-48.
೧೩. Ibid., p-52.
೧೪. Ind.Ant., Vol-VI, p-25.
೧೫. Sringeri grant, Mr, 73.
೧೬. E.C., Vol-X; MAR., 1916, Nonamangala grant.
೧೭. Ibid., Vol-VII, p-172.
೧೮. MAR., 1930, p-113.
೧೯. Sheik Ali,B., op.cit., p-57.
೨೦. S.S.Sastry, QJMS., Vol-XXXVI, p-126.
೨೧. Ind.Ant., Vol-VII, pp-174-75.
೨೨. MAR., 1938, p-86.
೨೩. E.C., Vol-IX, Db, No-68.
೨೪. Ibid., No-67.
೨೫. MAR., 1925, Ins.No-78, pp-68-69.
೨೬. Sheik Ali,B., op.cit., p-63.
೨೭. MAR., 1941, Ins.No-31; MAR., 1916, pp-44.
೨೮. E.C., Vol-XII, Mi, No-110; E.C., Vol-IX, Bn, No-141.
೨೯. MAR., 1916, pp-44.
೩೦. S.S.Sastry, QJMS., Vol-XL, p-65.
೩೧. MAR., 1924, Ins.No-79.
೩೨. Ibid., 1912, p-31.
೩೩. MAR., 1916, p-44.
೩೪. Ibid., 1918,pp-35-36.
೩೫. Ibid., 1942, No-31, Plates-II & III.

೩೬. S.S.Sastry, QJMS., Vol-XL, p-71.
೩೭. Sheik Ali,B., op.cit., p-69.
೩೮. S.S.Sastry, QJMS., Vol-XLIV, p-119.
೩೯. MAR., 1925, Tm, No-23.
೪೦. E.C., Vol-III, Md, No-113.
೪೧. MAR., 1925, Ins.No-105, p-86.
೪೨. Ind.Ant., Vol-XIV, British Museum Plates of Ereyanga, No-CLVII, pp-229-30.
೪೩. MAR., 1925, Ins.No-105, p-90-92; Ind.Ant., Vol-VII, pp-101-117.
೪೪. Sheik Ali,B., op.cit., p-72.
೪೫. MAR., 1916-17, Para-77, p-38.
೪೬. S.S.Sastry, QJMS., Vol-XLIV, 1924, pp-123-24.
೪೭. Sheik Ali,B., op.cit., p-74.
೪೮. MAR., 1925, Ins.No-105, p-85.
೪೯. E.C., Vol-III, Md, No-113.
೫೦. S.S.Sastry, QJMS., Vol-XLIV, p-127.
೫೧. MAR., 1925, Ins.No-105, Lines-26, 32-33 & 37, p-86.
೫೨. SII., Vol-II, Part-V, p-517.
೫೩. E.C., Vol-III, Md, No-113; E.C., Vol-XII, Tm, No-103.
೫೪. K.D.R., M.J.L.S., p-9.
೫೫. Sheik Ali,B., op.cit., p-77.
೫೬. E.C., Vol-III, Md, No-113.
೫೭. MAR., 1944, Ins.No-15.
೫೮. E.C., Vol-III, Md, No-113.
೫೯. MAR., 1918, P-62.
೬೦. Ind.Ant., Vol-VI, pp-87-88; Ind.Ant., Vol-VII, pp-303.
೬೧. Ibid., Vol-XIV, No-CLVII, pp-229.
೬೨. Sheik Ali,B., op.cit., p-79.
೬೩. E.C., Vol-IX, Hk, No-86; E.C., Vol-X, Bg, No-13; Mahalingam,T.V., op.cit., p-167; MAR., 1906, p-42.
೬೪. Ibid., Vol-IV, Ng, No-85; Mahalingam,T.V., op.cit., p-167.
೬೫. MAR., 1923, Para-52-53; Ep.Ind., Vol-XI, p-222.
೬೬. Mahalingam,T.V., op.cit., p-167-68.
೬೭. E.C., Vol-XII, Tm, No-23; E.C., Vol-XII, Md, No-3; SII., Vol-II, Part-V, p-517.
೬೮. MAR., 1919-20, Para-51-52.
೬೯. Ibid., 1918-19, Para-66.
೭೦. Ibid., 1919-20, Para-60-63.
೭೧. Mahalingam,T.V., op.cit., p-167.

౭౨. Ep.Ind., Vol-IX, p-205.
౭౩. KrishnaRao,M.V., The Gangas of Talkad, pp-53-54.
౭౪. Ep.Ind., Vol-XII, p-49, Islampur Plates.
౭౫. E.C., Vol-XII, Mi, No-99; MAR., 1910-11, Para-74.
౭౬. Ibid., Vol-IV, Tm, No-86; MAR., 1910, p-16.
౭౭. Ep.Ind., Vol-XIII, p-275; E.C., Vol-XII, Mc, No-99.
౭౮. MAR., 1920, Para-52.
౭౯. Sheik Ali,B., op.cit., p-89.
౮౦. Ind.Ant., Vol-IX, British Museum Plates of Govinda III, p-121; Altekar,A.S., The Rashtrakutas and their Times, p-63.
౮౧. Rice, Mysore and Coorg from Inscriptions, pp-39-55.
౮౨. E.C., Vol-XVI, Mb, No-80 & 253; E.C., Vol-X, Srinivaspur, No-57.
౮౩. Ep.Ind., Vol-IV, p-86; Ind.Ant., Vol-VI, p-62.
౮౪. E.C., Vol-II, Sb, No-24; E.C., Vol-IV, Hg, No-23.
౮౫. Ind.Ant., Vol-V, p-150; Ind.Ant., Vol-VI, p-62 & 70; Ind.Ant., Vol-XI, p-161; E.C., Vol-IX, p-41.
౮౬. MAR., 1920, Para-54; KrishnaRao,M.V., op.cit., pp-63.
౮౭. Ibid., 1920, Para-54.
౮౮. E.C., Vol-XII, Kadaba Plates; MAR., 1910, No-61, Para-23, Gubbi.
౮౯. Ind.Ant., Vol-XX, p-101.
౯౦. Sheik Ali,B., op.cit., p-97.
౯౧. E.C., Vol-IV, Sr, No-160; MAR., 1919, P-28.
౯౨. Ep.Ind., Vol-VI, No-4, p-24, Konnur Plates.
౯౩. Ep.Ind., Vol-VI, No-4, p-24-25; MAR., 1919, P-29, para-68.
౯౪. E.C., Vol-IX, Si, No-38.
౯౫. Sheik Ali,B., op.cit., p-101.
౯౬. Mahalingam,T.V., op.cit., p-169.
౯౭. Ep.Ind., Vol-VII, pp-22-23; E.C., Vol-X, Mb, No-228.
౯౮. E.C., Vol-XII, Si, No-38.
౯౯. Aiyangar,S.K., Historical Inscriptions of South India, p-38.
౧౦౦. Mahalingam,T.V., op.cit., p-169.
౧౦౧. SII., Vol-III, pp-47-48.
౧౦౨. SII., Vol-II, p-381; MAR., 1906, para-9.
౧౦౩. Ibid., Vol-II, p-76.
౧౦౪. Ibid., Vol-II, p-387.
౧౦౫. Sheik Ali,B., op.cit., p-105.
౧౦౬. SII., Vol-II, p-375, Udayendiram Plates.
౧౦౭. MER., 1931, No-345; Hayavadana Rao,C., Mysore Gazetteer, II, Pt-II, p-650.

೧೦೮. SII., Vol-II, V.S.-24.
೧೦೯. Sheik Ali,B., op.cit., p-106.
೧೧೦. E.C., Vol-IV, Yd, No-60; MAR., 1919, Para-63-68; MAR., 1918, P-67.
೧೧೧. Ibid., Vol-X, Mb, No-228.
೧೧೨. Ibid., Vol-X, Kl, No-79.
೧೧೩. Ibid., Vol-X, Kl, No-90; E.C., Vol-IV(suppliment), Nj, No-269.
೧೧೪. MAR., 1919, para-63-68.
೧೧೫. Ibid., 1921, para-41.
೧೧೬. Ep.Ind., Vol-VI, p-41.
೧೧೭. Sheik Ali,B., op.cit., p-110.
೧೧೮. E.C., Vol-X, Bp, No-60; E.C., Vol-X, Kl, No-79.
೧೧೯. MAR., 1907, P-68.
೧೨೦. KAN.Sastri, Pandyan Kingdom, P-75.
೧೨೧. MAR., 1921, P-8.
೧೨೨. E.C., Vol-V, Hs, No-92.
೧೨೩. Ibid., Vol-III (suppliment), Nj, No-269.
೧೨೪. MAR., 1919, Paras-63-68.
೧೨೫. Ibid., 1931, No-49.
೧೨೬. Sheik Ali,B., op.cit., p-114.
೧೨೭. MAR., 1921, Para-46.
೧೨೮. E.C., Vol-III, Hg, No-103.
೧೨೯. Ibid., Vol-V, Hs, No-92.
೧೩೦. Ibid., Vol-II, Sb, No-546, 91 & 88; E.C., Vol-VIII, Nr, No-23.
೧೩೧. Ibid., Vol-IX, Bn, No-83 & 87, p-17; MAR., 1914-15, Para-65.
೧೩೨. Ep.Ind., Vol-X, No-65; MAR., 1913, Para-13.
೧೩೩. MAR., 1906, Para-46.
೧೩೪. Ibid., 1921, Kudlur Plates.
೧೩೫. Ep.Ind., Vol-VI, p-46.
೧೩೬. E.C., Vol-VIII, Nr, No-35; Ep.Ind., Vol-VI, p-47.
೧೩೭. Karnataka Through the Ages, p-134.
೧೩೮. Sheik Ali,B., op.cit., p-119.
೧೩೯. MAR., 1921, Para-46.
೧೪೦. Sheik Ali,B., op.cit., p-120.
೧೪೧. MAR., 1921, Para-41-59.
೧೪೨. Ibid., p-18 & 29.
೧೪೩. Ep.Ind., Vol-II, p-167-69.
೧೪೪. Ibid., Vol-IV, p-289.

೧೪೫. Ibid., Vol-V, p-151.

೧೪೬. Ibid., p-191.

೧೪೭. Sheik Ali,B., op.cit., p-124.

೧೪೮. Ep.Ind., Vol-III, No-25, p-164; MAR, 1920-21, Para-55, Sudi Plates.

೧೪೯. MAR, 1921, Para-41-59, Kudlur Plates.

೧೫೦. Ibid., pp-18-29.

೧೫೧. E.C., Vol-III, Md, No-41, p-42.

೧೫೨. Ep.Ind., Vol-VI, p-56.

೧೫೩. Ibid., Vol-II, pp-167-69, Atakur.

೧೫೪. E.C., Vol-III, Md, No-41, p-42.

೧೫೫. Ep.Ind., Vol-II, pp-167-69.

೧೫೬. Ibid.

೧೫೭. Ibid., Vol-VIII, p-280.

೧೫೮. Ibid., Vol-IV, p-279-90.

೧೫೯. KrishnaRao,M.V., op.cit., p-98.

೧೬೦. Sheik Ali,B., op.cit., p-133.

೧೬೧. E.C., Vol-VIII, Nr, No-35; MAR., 1921, Para-55, Kudlur Plates.

೧೬೨. Sheik Ali,B., op.cit., p-135.

೧೬೩. MAR, 1921, Kudlur Plates.

೧೬೪. ಪಂಚಮುಖಿ ಮತ್ತು ಲಕ್ಷ್ಮೀನಾರಾಯಣರಾವ, ಕರ್ನಾಟಕದ ಅರಸುಮನೆತನಗಳು, ಪು-೨೦೪.

೧೬೫. MAR, 1921, Kudlur Plates.

೧೬೬. Ep.Ind., Vol-X, p-78.

೧೬೭. Altekar,A.S., op.cit., p-121.

೧೬೮. Ep.Ind., Vol-XIX, p-236.

೧೬೯. Ibid., Vol-X, p-78, Balera Plates.

೧೭೦. E.C., Vol-XI, No-11.

೧೭೧. Ibid., Vol-IX, Hl, No-23; E.C., Vol-XI, Hl, No-23 & 36; E.C., Vol-II, Sb, No-38.

೧೭೨. Ibid., Vol-II, Sb, No-59, p-11; E.C., Vol-XI, No-11; Altekar, op.cit., p-121.

೧೭೩. Ibid., Vol-II, Sb, No-59, p-11.

೧೭೪. E.C., Vol-XIII, p-180; Altekar,A.S., op.cit., p-124.

೧೭೫. Ep.Ind., Vol-XII, p-263.

೧೭೬. E.C., Vol-II, Sb, No-59, p-11.

೧೭೭. Ibid., Sb, No-59, p-11.

೧೭೮. E.C., Sb, No-59, p-17.

೧೭೯. Ep.Ind., Vol-V, p-151; E.C., Vol-II, Sb, No-59.

೧೮೦. Ibid., Vol-IV, p-280; E.C., Vol-III, Tn, No-69.

೧೮೧. ಪಂಚಮುಖಿ ಮತ್ತು ಲಕ್ಷ್ಮೀನಾರಾಯಣರಾವ, ಕರ್ನಾಟಕದ ಅರಸುಮನೆತನಗಳು, ಪು-೧೯೮.

೧೮೨. E.C., Vol-V, Cp, No-267.

೧೮೩. Ibid., Vol-III, Md, No-41, p-88.

೧೮೪. Ibid., Vol-II, Sb, No-59, p-12; MAR., 1910-11, Para-77.

೧೮೫. Ibid., Sb, No-59, p-12; Ep.Ind., Vol-V, p-170.

೧೮೬. Sheik Ali,B., op.cit., p-149.

೧೮೭. Desai,P.B., History of Karnataka, p-151; Ep.Ind., Vol-V, p-171-173; Ind.Ant., Vol-XII, p-255; ಚಾಮುಂಡರಾಯ ಪುರಾಣ, Verses-21-23, p-5.

೧೮೮. Ep.Ind., Vol-VI, p-159.

೧೮೯. E.C., Vol-XI, Hr, No-1, p-105.

೧೯೦. Ep.Ind., Vol-VI, p-257.

೧೯೧. Ibid., Vol-V, p-172; E.C., Vol-XI, Hr, No-1.

೧೯೨. ಚಾಮುಂಡರಾಯ ಪುರಾಣ, Verses-21-23, p-5.

೧೯೩. E.C., Vol-II, Sr, No-281; ಚಾಮುಂಡರಾಯ ಪುರಾಣ, Verses-21-23, p-5.

೧೯೪. Ibid., Sr, No-138, p-64.

೧೯೫. Sheik Ali,B., op.cit., p-152.

೧೯೬. E.C., Vol-I, Cg, No-4.

೧೯೭. Ibid., Peggur; Ep.Ind., Vol-V, pp-171-75.

೧೯೮. ಚಾಮುಂಡರಾಯ ಪುರಾಣ, Verses-20-23, p-5.

೧೯೯. ಅದೇ.

೨೦೦. Sheik Ali,B., op.cit., p-157.

೨೦೧. E.C., Vol-X, No-59, Srinivaspur.

೨೦೨. Ibid., Vol-VIII, Nr, No-35, P-136.

೨೦೩. Ibid., Vol-X, p-24, Kolar.

೨೦೪. Ibid., Vol-IX, No-3, Hoskote.

೨೦೫. Ibid., Vol-X, pp-23-24, Kolar.

೨೦೬. Ibid., Vol-VIII, Nr, No-35, P-136; MAR., 1909-10, Para-62; E.C., Vol-X, Sr, No-59, P-12; E.C., Vol-XI, No-59, Kolar.

೨೦೭. Ibid., Vol-VIII, Nr, No-35.

೨೦೮. E.C., Vol-VIII, Nr, No-35.

೨೦೯. Ibid., Vol-VI, No-8 & 9, p-10, Kadur

೨೧೦. Ibid., Vol-III, Nj, No-155 & 156.

೨೧೧. SII., Vol-XX, No-247.

೨೧೨. Ibid.

೨೧೩. JBBRAS., Vol-X, p-119.

೨೧೪. Ibid., p-200.

೨೧೫. Ibid., p-199, 200.

೨೧೬. Ibid., p-209.

೨೧೭. Ibid., p-208, 209.
೨೧೮. Ibid., p- 209, 211.
೨೧೯. Ibid., p-217; Ep.Ind., Vol-XVI, pp-7-8.
೨೨೦. Ep.Ind., Vol-XVI, pp-4-7.
೨೨೧. JBBRAS., Vol-X, p-201.
೨೨೨. Ep.Ind., Vol-XVI, pp-7-8.
೨೨೩. JBBRAS., Vol-X, p-217, 218.
೨೨೪. Ibid., p-218.
೨೨೫. Ibid., p-201.
೨೨೬. Ibid., p-218.
೨೨೭. Ibid., p-201, 218.
೨೨೮. Ind.Ant., Vol-XIX, p-165.
೨೨೯. JBBRAS., Vol-X, p-201, 218.
೨೩೦. Ibid., p-218; KI., Vol-V, No-52.
೨೩೧. Ibid., p-172.
೨೩೨. Ibid., p-201, 218.
೨೩೩. Ibid.
೨೩೪. Ep.Ind., Vol-III, pp-311.
೨೩೫. JBBRAS., Vol-X, p-198.
೨೩೬. Fleet, Kanarese Dynasties, p-554.
೨೩೭. JBBRAS., Vol-X, p-202.
೨೩೮. Ibid., p-217; Ind.Ant., Vol-XIV, p-24.
೨೩೯. Ibid., Vol-X, p-219.
೨೪೦. Ibid., p-219, 202.
೨೪೧. Ibid., p-202.
೨೪೨. Ibid., p-293.
೨೪೩. Fleet, Kanarese Dynasties, p-555.
೨೪೪. Ibid.
೨೪೫. Ibid., p-476.
೨೪೬. JBBRAS., Vol-X, p-181.
೨೪೭. Ep.Ind., Vol-XII, p-23.
೨೪೮. Ind.Ant., Vol-XXXII, p-218.
೨೪೯. ನರಸಿಂಹಾಚಾರ್ಯ, ಕರ್ನಾಟಕ ಕವಿಚರಿತೆ, ಸಂ-೧, ಪು-೧೪೦, ೨೫೫.
೨೫೦. JBBRAS., Vol-X, p-232, 233 & 235.
೨೫೧. SII., Vol-XX, No-284.
೨೫೨. Ibid., p-230.
೨೫೩. Ep.Ind., Vol-XIII, pp-25, 33.

೨೫೪. Ind.Ant., Vol-XIX, p-248.
೨೫೫. Ibid., Vol-XXIX, p-280.
೨೫೬. Ep.Ind., Vol-XIII, pp-26.
೨೫೭. Ind.Ant., Vol-XIX, p-242-43.
೨೫೮. Ep.Ind., Vol-XIII, pp-21, 30; Ind.Ant., Vol-XIX, p-247.
೨೫೯. JBBRAS., Vol-X, p-227 & 231; Ep.Ind., Vol-XIII, pp-27.
೨೬೦. Ibid., p-231.
೨೬೧. Ibid., p-273.
೨೬೨. Ibid., p-282.
೨೬೩. Ibid., p-260.
೨೬೪. Fleet, Kanarese Dynasties, p-558.
೨೬೫. JBBRAS., Vol-X, p-384-85.
೨೬೬. ಎ. ಇ. ಸಂ೬ ನಂ- ೪ ಕ್ರಿ.ಶ. ೮೬೦
೨೬೭. ಕೆ.ಇ. ಸಂ-೧, ಪುಟ-೧೫, ೮೭೪-೭೫; Ep.Ind., Vol-VII, p-212.
೨೬೮. Ep.Ind., Vol-VI, No-4.
೨೬೯. ಪಾವಟೆ ಚನ್ನಕ್ಕ., ರಾಷ್ಟ್ರಕೂಟ ಸಾಮಂತ ಚೆಲ್ಲಕೇತನರು, ಪುಟ-೮.
೨೭೦. Ep.Ind., Vol-VI, No-4.
೨೭೧. ಧಾರವಾಡ ಜಿಲ್ಲೆಯ ಶಾಸನಸೂಚಿ, ಹಳೇರಿತ್ತಿ, ನಂ-೧೫೦.
೨೭೨. E.C., Vol-VII, Shikaripur, No-219.
೨೭೩. Ibid., Supplimentary Inscription, 902A.D.
೨೭೪. Ep.Ind., Vol-VI, No-4.
೨೭೫. Ibid.
೨೭೬. Ibid.
೨೭೭. KI., Vol-I, No-15, Shigaon.
೨೭೮. Ep.Ind., Vol-VII, p-212.
೨೭೯. KI., Vol-I, No-15, Shigaon.
೨೮೦. KRI., Collections, 1950-51.
೨೮೧. Ep.Ind., Vol-VI, No-4.
೨೮೨. SII., Vol-XVIII, No-13.
೨೮೩. KI., Vol-I, No-15, Shigaon.
೨೮೪. Ep.Ind., Vol-VII, p-212.
೨೮೫. ARIE., 1945-46, No-336.
೨೮೬. Ep.Ind., Vol-VI, No-4.
೨೮೭. Ibid.
೨೮೮. KRI., Reports, 1942-43, Lokapur.
೨೮೯. SII., Vol-XVIII, No-13.
೨೯೦. Ep.Ind., Vol-VII, p-212.

೨೯೦. SII., Vol-XVIII, No-13.

೨೯೧. Ep.Ind., Vol-VII, p-212.

೨೯೨. KI., Vol-I, No-15, Shigaon.

೨೯೩. Krishnamurthi,M.S., A Kilgunte gor Hemavati, p-76. ಡಾ.ಗಣೇಶ,ಕೆ.ಆರ್., ಆಂಧ್ರಪ್ರದೇಶದ ಕನ್ನಡ ಶಾಸನಗಳು, ಪು-೨೨೨.

೨೯೪. KRI., Reports, 1942-43, Lokapur.

೨೯೫. Ep.Ind., Vol-XVI, p-21.

೨೯೬. E.C., Vol-VII, Supplimentary Inscription, No-368, 902A.D.

೨೯೭. SII., Vol-XVIII, No-17.

೨೯೮. Ibid., No-15; KI., Vol-VI, No-3, Anaji.

೨೯೯. KRI., Collections 1950-51, Shiragambi.

೩೦೦. E.C., Vol-VII, No-219, Bandalike.

೩೦೧. Ep.Ind., Vol-XVI, No-21.

೩೦೨. Ibid.; SII., Vol-XVIII, No-17.

೩೦೩. E.C., Vol-VII, No-368, Bandalike.

೩೦೪. KRI., Reports, 1942-43, Lokapur.

೩೦೫. SII., Vol-XX, No-15.

೩೦೬. ARIE., 1945-46, No-285, Guddada Chennapur.

೩೦೭. ಚೆನ್ನಕ್ಕ ಪಾವಟೆ, ರಾಷ್ಟ್ರಕೂಟರ ಸಾಮಂತ ಚೆಲ್ಲಕೇತನರು, ಅನುಬಂಧ-ಚೆಲ್ಲಕೇತನರ ಶಾಸನಗಳು, ನಂ-೨೧, ಪು-೧೩೪.

೩೦೮. SII., Vol-XVIII, No-19.

೩೦೯. KI., Vol-II, No-4, Dandapur.

೩೧೦. Ind.Ant., Vol-XXXII, p-221 to 226.

೩೧೧. SII., Vol-XVIII, No-20.

೩೧೨. KI., Vol-I, No-16, Shigaon.

೩೧೩. E.C., Vol-VIII, No-15, Juturu.

೩೧೪. ದಾ.ಜಿ.ಶಾ.ಸೂ, ನಂ-೨೬೭.ಲಕ್ಷ್ಮೀಪುರ.

೩೧೫. ದಾ.ಜಿ.ಶಾ.ಸೂ., ನಂ-೨೮೫. ಗುಡ್ಡದ ಚೆನ್ನಾಪೂರ.

೩೧೬. SII., Vol-XVIII, No-17 & 15.

೩೧೭. E.C., Vol-VIII, No-83 & 88, Kumsi.

೩೧೮. Ibid., Vol-VII, No-219, Bandalike.

೩೧೯. ದಾ.ಜಿ.ಶಾ.ಸೂ., ನಂ-೨೪೨. ಮಲಗುಂದ.

೩೨೦. E.C., Vol-VIII, No-240, Chikkachivuti.

೩೨೧. ದಾ.ಜಿ.ಶಾ.ಸೂ., ನಂ-೨೪೬. ಹಂಸಭಾವಿ.

೩೨೨. SII., Vol-XVIII, No-24.

೩೨೩. ARIE., 1949-50, B. No-87.

೩೨೪. SII., Vol-XVIII, No-23.

೩೨೫. ದಾ.ಜಿ.ಶಾ.ಸೂ., ನಂ-೧೫೦, ಹಳೇರಿತ್ತಿ; SII., Vol-XVIII, No-23.

೩೨೭. Ep.Ind., Vol-XVI, No-22.

೩೨೮. SII., Vol-XVIII, No-24.

೩೨೯. ದಾ.ಜಿ.ಶಾ.ಸೂ., ನಂ-೨೪೨, ಮಲಗುಂದ.

೩೩೦. ದಾ.ಜಿ.ಶಾ.ಸೂ., ನಂ-೨೪೬, ಮಂಟೂರು.

೩೩೧. CII., Vol-VI, pp-186-87.

೩೩೨. Ibid.

೩೩೩. Ibid.

೩೩೪. Ibid.

೩೩೫. Ibid.

೩೩೬. Gopal,B.R., Minor Dynasties of South India (Karnataka), Vol-I, p-133 to 166.

೩೩೭. Ibid., p-136.

೩೩೮. K.I., Vol-II., No-12, 1940-41; SII., Vol-XX, Introduction, p-xxi.

೩೩೯. SII., Vol-XX, No-71.

೩೪೦. Ibid., No-21.

೩೪೧. Ibid., No-71.

೩೪೨. Ibid., No-91.

೩೪೩. K.I., Vol-II, No-12.

೩೪೪. Discriptive List of Inscriptions, 1940-41, No-16, p-3.

೩೪೫. SII., Vol-XX, No-85.

೩೪೬. Ibid., No-35.

೩೪೭. Ibid., No-292.

೩೪೮. Ibid., No-179.

೩೪೯. Ibid.

೩೫೦. Ibid., No-178.

೩೫೧. SII., Vol-XX, No-179.

೩೫೨. APGAS., No-9 & 13-14, p-43.

೩೫೩. SII., Vol-XX, No-30.

೩೫೪. Ibid., No-51.

೩೫೫. Ibid., No-56.

೩೫೬. Ibid., No-80.

೩೫೭. Ibid., No-104.

೩೫೮. Ibid.

೩೫೯. Ibid., No-111.

೩೬೦. Ibid., No-115-16.

೩೬೧. Ibid., No-136.

೩೬೨. Ibid., No-151.

೩೬೩. Ibid., No-116.

೩೬೪. Ibid., No-154.
೩೬೫. Ibid., No-127.
೩೬೬. Ind.Ant., Vol-X, No-17.
೩೬೭. E.C., Vol-VII, No-454-55.
೩೬೮. ಶ್ರೀಕಂಠತೀರ್ಥ, ರಾಷ್ಟ್ರಕೂಟ ವಂಶಾವಳಿಯ ಮೇಲೆ ಹೊಸಬೆಳಕು, ಪು-೬೮೨-೮೪.
೩೬೯. ARSIE., 1939-40, BK, No-88 & 85.
೩೭೦. ಗುರವ, ಆರ್.ಎನ್., ಕಾರವಾರ ಜಿಲ್ಲೆಯ ಶಾಸನಗಳು, ಪು-೪೪.
೩೭೧. ಶ್ರೀಕಂಠತೀರ್ಥ, ರಾಷ್ಟ್ರಕೂಟ ವಂಶಾವಳಿಯ ಮೇಲೆ ಹೊಸಬೆಳಕು, ಪು-೮೧-೮೪.
೩೭೨. ARIE., 1939-40, No-27.
೩೭೩. E.C., Vol-VII, No-413; E.C., Vol-VII, No-234, Sorab.
೩೭೪. ARIE., 1947-48, No-304.
೩೭೫. Ind.Ant., Vol-X, No-17; Ind.Ant., Vol-CXVII, No-249.
೩೭೬. Ibid., Vol-CXVII, No-249; K.I., Vol-V, No-7.
೩೭೭. SII., Vol-XX, No-34.
೩೭೮. K.I., Vol-V, No-7.
೩೭೯. Ibid.
೩೮೦. SII., Vol-XVIII, No-66; E.C., Vol-VII, No-262.
೩೮೧. K.I., Vol-V, No-7.
೩೮೨. Ibid., No-9.
೩೮೩. Ibid.
೩೮೪. Ind.Ant., Vol-X, No-27.
೩೮೫. Kadambas of Goa and thair Inscriptions, No-8 A, 1079.
೩೮೬. E.C., Vol-VII, No-123, Chikkamagadi.
೩೮೭. Ind.Ant., Vol-XVI, No-8(b).
೩೮೮. ARIE., 1945-46, No-244.
೩೮೯. Ibid., No-12.
೩೯೦. Ep.Ind., Vol-XIII, No-2.
೩೯೧. Ind.Ant., Vol-XVI, No-8(b).
೩೯೨. Ibid., Vol-X, No-27.
೩೯೩. ARIE., 1946-47, No-203.
೩೯೪. MAR., 1932-33.
೩೯೫. Ibid., 1926.
೩೯೬. E.C., Vol-VII, No-47, Belligutti.
೩೯೭. Ibid., Vol-VII, No-141, Sorab.
೩೯೮. Ind.Ant., Vol-X, p-249-55.
೩೯೯. MAR., 1930, No-79.
೪೦೦. ARIE., 1946-47, No-228.

೪೦೧. MAR., 1930, No-7.
೪೦೨. ARIE., 1949-50, No-89.
೪೦೩. Ibid., 1957-58, No-278.
೪೦೪. ARSIE., 1944-45, BK, No-58.
೪೦೫. Ibid., 1932-33, BK, No-45.
೪೦೬. ಶಾಸ್ತ್ರಿ,ಎ.ಕೆ., ಶಿರಸಿ ತಾಲೂಕಾ ದರ್ಪಣ, ಪು-೧೩೯, ಶಿರಸಿ, ೧೯೮೮.
೪೦೭. E.C., Vol-XII, Sb, No-177.
೪೦೮. Ibid., Vol-VIII, Sb, No-421.
೪೦೯. Ibid., Sb, No-229.
೪೧೦. Ibid., Sb, No-306.
೪೧೧. Ibid., No-568.
೪೧೨. SII., Vol-XX, No-250.
೪೧೩. Ep.Ind., Vol-XVI, p-36-37.
೪೧೪. KI., Vol-V, No-59.
೪೧೫. Moraes., Kadamba Kula, No-14, p-449.
೪೧೬. Ibid., p-452-54.
೪೧೭. E.C., Vol-VIII, Sb, No-179.
೪೧೮. Ibid., Vol-VII, No-197.
೪೧೯. KI., Vol-IV, No-6.
೪೨೦. E.C., Vol-VIII, Sb, No-179.
೪೨೧. ARIE., 1945-46, No-237.
೪೨೨. ARSIE., 1944-45, B.K. No-2.
೪೨೩. KI., Vol-V, No-63.
೪೨೪. E.C., Vol-VIII, Sb, No-346.
೪೨೫. Ibid., Sb, No-384.
೪೨೬. ARIE., 1945-46, No-234; KI., Vol-V, Introduction. P-xxiv-xxv.
೪೨೭. KI., Vol-V, No-60.
೪೨೮. SII., Vol-XV, No-609.
೪೨೯. ಧಾ.ಜಿ.ಶಾ.ಸೂ., ನಂ-೨೭೬.
೪೩೦. KI., Vol-V, No-60.
೪೩೧. E.C., Vol-VIII, Sb, No-517.
೪೩೨. ಶಾಸ್ತ್ರಿ,ಎ.ಕೆ., ಶಿರಸಿ ತಾಲೂಕಾ ದರ್ಪಣ, ಪು-೬೦.
೪೩೩. SII., Vol-XX, No-24.
೪೩೪. Ep.Ind., Vol-XVI, No-11.
೪೩೫. SII., Vol-XX, No-31.
೪೩೬. ARIE., 1950-51, No-49.
೪೩೭. Ibid., 1946-47, No-206.

೪೩೮. Moraes., op.cit., p-102-104.

೪೩೯. Ep.Ind., Vol-XVI, No-76.

೪೪೦. ARIE., 1946-47, No-210.

೪೪೧. Ep.Ind., Vol-XVI, No-66.

೪೪೨. K.I., Vol-I, No-17.

೪೪೩. Ind.Ant., Vol-IV, No-203.

೪೪೪. ARIE., 1946-47, No-210.

೪೪೫. Ibid., No-204.

೪೪೬. ARSIE., 1933-34, B.K. No-4.

೪೪೭. Ep.Ind., Vol-XVI, No-81 ff.

೪೪೮. ARIE., 1950-51, No-63.

೪೪೯. Ibid., 1947-48, No-198.

೪೫೦. ARSIE., 1933-34, B.K. No-27.

೪೫೧. ARIE., 1950-51, No-63.

೪೫೨. SII., Vol-XVIII, No-76; ARSIE., 1933-34, B.K. No-27.

೪೫೩. ARIE., 1947-48, No-208.

೪೫೪. Gopal,B.R., Chalukyas of Kalyana and Kalachuries, p-227.

೪೫೫. E.I., Vol-III, No-33, p-230-36.

೪೫೬. ರಂಜೋಲದ ಸಿಂದರ ಶಾಸನ, (ಸಂ.) ಗೋಪಾಲ,ಬಾ.ರಾ., ಕರ್ನಾಟಕ ಭಾರತಿ, ಸಂ-೧, ಸಂಚಿಕೆ-೧, ಪು-೧೪೭-೧೫೬.)

೪೫೭. ಅದೇ.

೪೫೮. E.I., Vol-III, No-33, p-233.

೪೫೯. SII., Vol-XX, No-280.

೪೬೦. E.I., Vol-III, No-33, p-230-36.

೪೬೧. Ibid., p-232-35.

೪೬೨. SII., Vol-XX, No-280.

೪೬೩. E.I., Vol-III, No-33, p-232-35; SII., Vol-XX, No-280.

೪೬೪. Ibid., No-33, p-232-35.

೪೬೫. SII., Vol-XI, Pt-I, No-71, p-62.

೪೬೬. Desai Dinkar., Mahamandaleshwar's Under the Chalukyas of Kalyani, p-71.

೪೬೭. E.I., Vol-III, No-33, p-233.

೪೬೮. Ibid., Vol-III, No-33, p-232-35.

೪೬೯. Ibid.

೪೭೦. ಚನ್ನಬಸವಯ್ಯ, ಹಿರೇಮಠ., ಕುರುಗೋಡು ಸಿಂದರು ಒಂದು ಅಧ್ಯಯನ, ೧೯೯೫, ಕೊಪ್ಪಳ, ಪು-೪.

೪೭೧. Ep.Ind., Vol-XIV, No-19(i).

೪೭೨. ಗೋಪಾಲ,ಬಿ.ಆರ್., ರಂಜೋಲ ಗ್ರಾಮದ ಸಿಂದರ ಶಾಸನ, ಕರ್ನಾಟಕ ಭಾರತಿ, ಸಂ-೧, ಸಂ-೧, ಪು-೧೫೩.

೪೭೩. SII., Vol-IX(i), No-65.

೪೭೪. B.No-84/77-78.

೪೭೫. B.No-86/77-78.
೪೭೬. SII., Vol-IX(i), No-100.
೪೭೭. Ibid., Vol-IX(i), No-159.
೪೭೮. B.No-99/77-78.
೪೭೯. SII., Vol-IX(i), No-167.
೪೮೦. Desai, Dinakar., op.cit., p-120.
೪೮೧. B.No-99-101/77-78.
೪೮೨. SII., Vol-IX(i), No-167.
೪೮೩. B.No-99-101/77-78.
೪೮೪. B.No-99/77-78.
೪೮೫. SII., Vol-IX(i), No-225.
೪೮೬. B.No-100-101/77-78.
೪೮೭. B.No-100-101/77-78.
೪೮೮. SII., Vol-IX(i), No-225.
೪೮೯. Ibid., No-249.
೪೯೦. B.No-100-101/77-78.
೪೯೧. SII., Vol-IX(i), No-235.
೪೯೨. Ibid., No-249.
೪೯೩. Ibid., No-235 & 237.
೪೯೪. Desai, Dinakar., op.cit., p-120.
೪೯೫. B.No-100-101/77-78.
೪೯೬. SII., Vol-IX(i), No-249.
೪೯೭. B.No-99/77-78.
೪೯೮. SII., Vol-IX(i), No-235.
೪೯೯. Ibid., No-237.
೫೦೦. B.No-100-101/77-78.
೫೦೧. Ep.Ind., Vol-XIV, No-19(i).
೫೦೨. SII., Vol-IX(i), No-296.
೫೦೩. Ibid., No-253.
೫೦೪. Desai, Dinakar., op.cit., p-121.
೫೦೫. SII., Vol-IX(i), No-296 & 297.
೫೦೬. Ep.Ind., Vol-XIV, No-19(ii).
೫೦೭. ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರರತ್ನಾಕರ, ಭಾಗ-೧, (ಸಂ)ಹಿರೇಮಠ,ಆರ್.ಸಿ., ಪು-೨೪೭-೨೪೯.
೫೦೮. SII., Vol-IX(i), No-235.
೫೦೯. B.No-65/85-86.
೫೧೦. SII., Vol-IX(i), No-297.
೫೧೧. Ep.Ind., Vol-XIV, No-19(ii).

೫೧೨. B.No-100-101/77-78.

೫೧೩. Ep.Ind., Vol-XIV, No-19(i).

೫೧೪. Ibid.

೫೧೫. SII., Vol-IX(i), No-253.

೫೧೬. Desai, Dinakar., op.cit., p-122.

೫೧೭. Ep.Ind., Vol-XIV, No-19(i).

೫೧೮. Ibid., No-19(ii).

೫೧೯. Desai, Dinakar., op.cit., p-122.

೫೨೦. ರಾಜಶೇಖರ,ಎಸ್., ಕುರುಗೋಡಿನ ಉಜ್ವಲರಾಯನಗುಡಿ, ಕರ್ನಾಟಕ ಭಾರತಿ, ಸಂ-೭, ಸಂ-೩, ಪು-೧೫೮.

೫೨೧. SII., Vol-IX(i), No-253.

೫೨೨. Ep.Ind., Vol-XIV, No-19(i).

೫೨೩. Ibid., No-19(ii).

೫೨೪. Ibid., No-19(i-ii).

೫೨೫. Desai,P.B., A History of Karnataka, (Dharwad-1970), p-187.

೫೨೬. SII., Vol-IV, No-260.

೫೨೭. Ibid., Vol-IX(i), No-322.

೫೨೮. Ep.Ind., Vol-XIV, No-19(ii).

೫೨೯. SII., Vol-IV, No-260.

೫೩೦. Ibid., Vol-IX(i), No-327.

೫೩೧. SII., Vol-IX(i), No-337.

೫೩೨. Desai Dinkar., op.cit., p-71.

೫೩೩. SII., Vol-XV, No-241.

೫೩೪. Ep.Ind., Vol-XX, No- , p- .

೫೩೫. SII., Vol-XV, No-74, 77, 134 & 241.

೫೩೬. Gopal,B.R., Minor Dynasties of South India (Karnataka), Vol-I, p-110.

೫೩೭. SII., Vol-XV, No-92.

೫೩೮. Desai Dinkar., op.cit., p-73-76.

೫೩೯. SII., Vol-XI (i), No-117.

೫೪೦. Ibid., No-103.

೫೪೧. Gopal,B.R., op.cit., p-111.

೫೪೨. SII., Vol-XI (i), No-117.

೫೪೩. Ibid., Vol-XV, No-238.

೫೪೪. Ibid., No-77.

೫೪೫. ಶಾಸನ ಪರಿಚಯ, ನಂ-೩೬.

೫೪೬. Ep.Ind., Vol-XIX, No-38; Ep.Ind., Vol-XX, No-12.

೫೪೭. SII., Vol-XV, No-238.

೫೪೮. Ibid.

೫೪೯. Ibid., Vol-XI (ii), No-103.

೫೫೦. Ibid., Vol-XV, No-74.

೫೫೧. Ibid., No-92.

೫೫೨. Ibid., No-74; ಶಾಸನ ಪರಿಚಯ, ನಂ-೩೬; ಪಟ್ಟದಕಲ್ಲು ಗುಡಿಗಳು, ಪು-೮೮.

೫೫೩. Ibid., No-77.

೫೫೪. Ibid., No-92.

೫೫೫. Ibid., Vol-XI(i), No-103.

೫೫೬. Ibid., Vol-XV, No-41-42; Ibid., Vol-XI(ii), No-135.

೫೫೭. Gopal,B.R., op.cit., p-112.

೫೫೮. SII., Vol-XV, No-41-42.

೫೫೯. Ibid., No-74.

೫೬೦. ಶಾಸನ ಸಾಹಿತ್ಯ ಸಂಚಯ, ಪು-೮೩.

೫೬೧. SII., Vol-XV, No-92.

೫೬೨. Ibid., No-241.

೫೬೩. Ibid., Vol-XI(ii), No-129.

೫೬೪. Ibid., Vol-XV, No-42.

೫೬೫. Ibid., Vol-XI(ii), No-155; Ibid., Vol-XV, No-238; Ep.Ind., Vol-XX, No-12.

೫೬೬. Ibid., Vol-XV, No-28.

೫೬೭. SII., Vol-XI(ii), No-155.

೫೬೮. K.I., Vol-V, No-72.

೫೬೯. SII., Vol-XV, No-42.

೫೭೦. Ibid., No-47.

೫೭೧. Ibid., No-236.

೫೭೨. Ep.Ind., Vol-XX, No-12.

೫೭೩. SII., Vol-XV, No-237.

೫೭೪. Ibid., No-238; Ep.Ind., Vol-XX, No-12.

೫೭೫. Gopal,B.R., op.cit., p-114.

೫೭೬. ಪಟ್ಟದಕಲ್ಲು ಗುಡಿಗಳು, ಪು-೮೯-೯೦.

೫೭೭. SII., Vol-XV, No-47.

೫೭೮. Ep.Ind., Vol-XIX, No-38.

೫೭೯. ಐಹೊಳೆ ಸಂಸ್ಕೃತಿ ಮತ್ತು ಕಲೆ, ಪು-೧೬೦.

೫೮೦. ಶಾಸನ ಪರಿಚಯ, ಪು-೩೬.

೫೮೧. E.C., Vol-XI, Hl, No-23.

೫೮೨. ಗೋಪಾಲ,ಬಾ.ರಾ., ಬೆಳಗುತ್ತಿ ಸಿಂದರು, ಉಪಾಯನ, ಪ-೮೭-೯೩.

೫೮೩. ಅದೇ.

೫೮೪. Gopal,B.R., op.cit., p-97.

೫೮೫. K.I., Vol-VI, No-4.

೫೮೬. E.C., Vol-XI, Hl, No-23.
೫೮೭. Gopal,B.R., op.cit., p-97.
೫೮೮. K.I., Vol-VI, No-11.
೫೮೯. Ibid., Vol-IV, No-41.
೫೯೦. JKU.(Humanities), Vol-X, pp-146; K.I., Vol-VI, No-17.
೫೯೧. E.C., Vol-VII, Hl, No-45.
೫೯೨. Gopal,B.R., op.cit., p-98.
೫೯೩. K.I., Vol-VI, No-25.
೫೯೪. Ibid., No-38.
೫೯೫. B.No-571/58-59/Ref.: Gopal,B.R., op.cit., p-99.
೫೯೬. Desai, Dinakar., op.cit., p-25.
೫೯೭. Gopal,B.R., op.cit., p-99-100.
೫೯೮. E.C., Vol-VII, Hl, No-45.
೫೯೯. Ibid., Vol-XI, Dg, No-43.
೬೦೦. Ibid., Vol-VII, Sk, No-206.
೬೦೧. Ibid., Hl, No-50.
೬೦೨. Ibid., Hl, No-46.
೬೦೩. K.I., Vol-IV, No-38.
೬೦೪. E.C., Vol-VII, Hl, No-51.
೬೦೫. Ibid., Hl, No-37-40.
೬೦೬. Ibid., Sh, No-315; Desai, Dinakar., op.cit., p-50-51.
೬೦೭. Ibid., Hl, No-44.
೬೦೮. Ibid., Hl, No-25; Desai, Dinakar., op.cit., p-48-49.
೬೦೯. Ibid., Hl, No-48.
೬೧೦. Desai, Dinakar., op.cit., p-53-54.
೬೧೧. Ibid., p-55.
೬೧೨. Ibid., p-56-57.
೬೧೩. Gopal,B.R., op.cit., p-106.
೬೧೪. ಮಾನವಿಕ ಕರ್ನಾಟಕ, ಸಂ-೪, ಸಂ-೨, ಪು-೫೩.
೬೧೫. ರಂಜೋಲ ಗ್ರಾಮದ ಸಿಂದರ ಶಾಸನ, ಕರ್ನಾಟಕ ಭಾರತಿ, ಸಂ-೧, ಸಂ-೨, ಪು-೧೫೦-೫೩.
೬೧೬. ಗೋಪಾಲ, ಬಾ.ರಾ., (ಸಂ), ಮಾನವಿಕ ಕರ್ನಾಟಕ, ಸಂ-೪, ಸಂ-೨, ಪು-೫೩.
೬೧೭. ಕನ್ನಡ ಸಂಶೋಧನ ಸಂಸ್ಥೆಯ ಸಂಗ್ರಹ, ಉಲ್ಲೇಖ Gopal,B.R., op.cit., p-118.
೬೧೮. B.No-204/56-57, KRI, Collections; Gopal,B.R., op.cit., p-119.
೬೧೯. B.No-220/56-57, KRI, Collections
೬೨೦. Gopal,B.R., op.cit., p-119.
೬೨೧. Ibid.
೬೨೨. Ibid.

೬೨೩. Ibid.

೬೨೪. E.C., Vol-XI, Dg, No-114.

೬೨೫. Desai, Dinakar., op.cit., p-11-13.

೬೨೬. ಗೋಪಾಲ,ಬಾ.ರಾ., ಬೆಳಗುತ್ತಿಯ ಸಿಂದರು, ಉಪಾಯನ, ಪು-೮೭-೯೩.

೬೨೭. SII., XI, (i), No-47.

೬೨೮. Ibid., No-65.

೬೨೯. Ibid., No- , ೧೦೫೩, ಮುಳಗುಂದ.

೬೩೦. Ibid., No-97.

೬೩೧. Ibid., Vol-XV, No-40.

೬೩೨. ರಿತ್ತಿ, ಶ್ರೀನಿವಾಸ., ಮುಳಗುಂದನಾಡು, ಪು-೨೧.

೬೩೩. Ind.Ant., Vol-XXX, pp-381-82.

೬೩೪. Ep.Ind., Vol-III, No-43.

೬೩೫. Desai, Dinakar., op.cit., p-119-120.

೬೩೬. Gopal,B.R., op.cit., p-124-125.

೬೩೭. SII., Vol-IX(i), No-109.

೬೩೮. Ibid., No-226.

೬೩೯. SII., Vol-IX(i), No-159.

೬೪೦. Gopal,B.R., op.cit., p-125-126.

೬೪೧. B.No-102/85-86.

೬೪೨. B.No-104/85-86.

೬೪೩. B.No-102/85-86.

೬೪೪. B.No-104/85-86.

೬೪೫. B.No-102/85-86.

೬೪೬. B.No-105/85-86.

೬೪೭. B.No-102/85-86.

೬೪೮. B.No-107/85-86.

೬೪೯. B.No-104/85-86.

# ಅಧ್ಯಾಯ-೫

# ಆಡಳಿತದಲ್ಲಿ ಸಾಮಂತ ಅರಸುಮನೆತನಗಳ ಪಾತ್ರ

ಕರ್ನಾಟಕದ ಇತಿಹಾಸವನ್ನು ಅವಲೋಕಿಸಿದಾಗ ಅದನ್ನಾಳಿದ ಅರಸುಮನೆತನಗಳು ತಮ್ಮ ಹಿಂದಿನ ಕಾಲದಿಂದ ನಡೆದುಕೊಂಡು ಬಂದ ಆಡಳಿತವನ್ನೇ ಮುಂದುವರೆಯಿಸಿದ್ದು ಕಂಡುಬರುತ್ತದೆ. ಅದರಂತೆಯೇ ಆ ಸಾಮ್ರಾಟರ ಆಧೀನರಾದ ಮನ್ನೆಯ, ಸಾಮಂತ, ಮಹಾಸಾಮಂತ ಹಾಗೂ ಮಂಡಳೇಶ್ವರರು ಅವರ ಆಡಳಿತ ಪದ್ಧತಿಯನ್ನೇ ಅನುಸರಿಸಿಕೊಂಡು ಬಂದದ್ದು ತಿಳಿಯುತ್ತದೆ. ಒಂದೇ ಮಾತಿನಲ್ಲಿ ಹೇಳುವದಾದರೆ ಸಾಮಂತರ ಆಡಳಿತ ಪದ್ಧತಿಯು ಚಕ್ರವರ್ತಿಗಳ ಆಡಳಿತದ ಕನ್ನಡಿಯಾಗಿರುವದು.

ವಿಶಾಲವಾದ ಸಾಮ್ರಾಜ್ಯವನ್ನು ಚಕ್ರವರ್ತಿಯೊಬ್ಬನಿಂದಲೇ ನಿರ್ವಹಿಸಲು ಸಾಧ್ಯವಿಲ್ಲ. ಹೀಗಾಗಿ ಅವರು ಅದನ್ನು ಆಡಳಿತದ ಅನುಕೂಲಕ್ಕಾಗಿ ದೇಶ, ವಿಷಯ, ನಾಡು, ಭುಕ್ತಿ, ಮಂಡಲ, ಆಹಾರ ಮುಂತಾಗಿ ವಿಂಗಡಿಸಿದ್ದು ತಿಳಿದುಬರುತ್ತದೆ. ಇವುಗಳಿಗೆ ಚಕ್ರವರ್ತಿಗಳು ತಮಗೆ ವಿಧೇಯರಾದ, ಸಮರ್ಥ ವ್ಯಕ್ತಿಗಳನ್ನು ಅಧಿಕಾರಿಗಳನ್ನಾಗಿ ನೇಮಿಸುತ್ತಿದ್ದರು. ಈ ಪದ್ಧತಿಯು ಬಹಳ ಪ್ರಾಚೀನ ಕಾಲದಿಂದಲೂ ನಡೆದು ಬಂದಿದೆ. ಕರ್ನಾಟಕದ ಮಟ್ಟಿಗೆ ಹೇಳುವದಾದರೆ, ಪ್ರಾಂತೀಯ ಆಡಳಿತದ ಪರಿಕಲ್ಪನೆಯು ಕದಂಬರ ಕಾಲಕ್ಕಾಗಲೇ ಪ್ರಾರಂಭವಾಗಿತ್ತು[೧]. ಮಧ್ಯಕಾಲೀನ ಕರ್ನಾಟಕ ಮತ್ತು ದಖ್ಖನ್ನಿನ ಶಿಲಾಶಾಸನಗಳಲ್ಲಿ ಇವುಗಳಿಗೆ ಮಂಡಲ, ವಿಷಯ, ದೇಶ, ನಾಡು, ಕಂಪಣ ಎಂದು ಮುಂತಾಗಿ ಕರೆಯಲಾಗಿದೆ[೨].

**ಸಾಮಂತ ವ್ಯವಸ್ಥೆಯ ಮೂಲ:**

ಒಂದು ನಿರ್ದಿಷ್ಟ ಪ್ರದೇಶದ ಸ್ಥಳೀಯ ಆಡಳಿತವನ್ನು ನಿರ್ವಹಿಸಲು ಸಾಮ್ರಾಟನು ನೇಮಿಸಿದ ಅಧಿಕಾರಿವರ್ಗವೇ ಸಾಮಂತ ಅರಸು ಮನೆತನಗಳಾಗಿವೆ. ಅವುಗಳು ಪ್ರಭಾವೀ ಜನಾಂಗವಾಗಿದ್ದು, ಒಂದು ಭೂಪ್ರದೇಶವನ್ನು ವಂಶಪಾರಂಪರ್ಯವಾಗಿ ಆಳುತ್ತ, ಚಕ್ರವರ್ತಿಗಳಿಗೆ ಹಲವು ಕಪ್ಪ-ಕಾಣಿಕೆಗಳನ್ನು ನೀಡುತ್ತ ಅಥವಾ ತಮ್ಮ ಆದಾಯದ ಕೆಲಭಾಗವನ್ನು ನೀಡುತ್ತ ಆಳ್ವಿಕೆಯನ್ನು ನಡೆಸುವಂತಹ ಒಂದು ವ್ಯವಸ್ಥೆಯಾಗಿದೆ. ಈ ಪದ್ಧತಿಯು ಈ ಮೇಲೆ ಹೇಳಿದಂತೆ ಪ್ರಾಚೀನ ಕಾಲದಿಂದಲೂ ನಡೆದುಬಂದಿದೆ. ಆದರೂ ಅದರ ಸ್ಪಷ್ಟ ಚಿತ್ರಣ ಮೌರ್ಯರ ಕಾಲದಿಂದ ಮೂಡುತ್ತದೆ. ಇದರ ಮೂಲವನ್ನು ಹುಡುಕುತ್ತ ಆರ್.ಎಸ್.ಶರ್ಮಾರವರು ಇದಕ್ಕೆ ಬ್ರಾಹ್ಮಣರಿಗೆ ಭೂಮಿಯನ್ನು ದಾನವಾಗಿ ನೀಡುವದೇ ಕಾರಣವೆನ್ನುತ್ತಾರೆ. ಅಲ್ಲದೇ ವ್ಯಾಪಾರೀ ಚಟುವಟಿಕೆಗಳ ಅಭಾವದಿಂದಲೂ, ನಾಣ್ಯಗಳ ಕೊರತೆಯಿಂದಲೂ ಅಧಿಕಾರಿಗಳಿಗೆ ಕೊಡುವ ಕಾಣಿಕೆ ಹಣದ ಬದಲಾಗಿ ಭೂಮಿಯನ್ನು ನೀಡುವದರ ಮೂಲಕ ಬಂದಿದೆಯೆಂದಿದ್ದಾರೆ. ಈ ವಾದವನ್ನು ಒಪ್ಪದೇ ಡಾ.ಝಾಕಿಯಾ ಪಠಾಣರು ಶರ್ಮಾರವರು ಹೇಳಿದಂತೆ ನಡೆದಿದ್ದರೆ, ಕರ್ನಾಟಕದ ತುಂಬೆಲ್ಲಾ ಇಂತಹ ಅನೇಕ ಮನೆತನಗಳು ಹುಟ್ಟಿಕೊಳ್ಳುತ್ತಿದ್ದವು. ಅಲ್ಲದೇ ಪ್ರಸ್ತುತ ಕರ್ನಾಟಕದಲ್ಲಿ

ಕಂಡುಬರುವಂತಹ ಅನೇಕ ಸಾಮಂತ ಅರಸುಮನೆತನಗಳು ಬ್ರಾಹ್ಮಣ ಅಥವಾ ಪೂಜಾರಿಗಳ ವರ್ಗಕ್ಕೆ ಸೇರಿಲ್ಲದಿರುವದು ಇದಕ್ಕೆ ಒಳ್ಳೆಯ ಉದಾಹರಣೆ ಎಂದಿದ್ದಾರೆ[೨].

ಸಾಮಂತ ವ್ಯವಸ್ಥೆಯ ಉಗಮಕ್ಕೆ ಪ್ರಮುಖವಾಗಿ ಎರಡು ಕಾರಣಗಳಿವೆ. ಒಂದು ಚಕ್ರವರ್ತಿಗಳು ವಿಸ್ತಾರವಾದ ತಮ್ಮ ಸಾಮ್ರಾಜ್ಯವನ್ನು ಆಡಳಿತದ ಅನುಕೂಲಕ್ಕಾಗಿ ಅನೇಕ ವಿಭಾಗಗಳಾಗಿ ವಿಂಗಡಿಸಿ ಅದನ್ನು ನೋಡಿಕೊಳ್ಳಲು ಅಧಿಕಾರಿಗಳನ್ನು ನೇಮಿಸುತ್ತಿದ್ದುದು. ಎರಡನೆಯದು ಅನೇಕ ಮನೆತನಗಳು ಯುದ್ಧದ ವೇಳೆಯಲ್ಲಿ ತಮ್ಮ ನಿಷ್ಠೆಯನ್ನು ಸೂಚಿಸುವದರ ಮೂಲಕ, ಆಯಾ ಪ್ರದೇಶವನ್ನು ಚಕ್ರವರ್ತಿಗಳಿಂದ ಕಾಣಿಕೆಯಾಗಿ ಪಡೆದುಕೊಳ್ಳುತ್ತಿದ್ದವು. ಅಲ್ಲದೇ ಕೆಲ ಉತ್ಸಾಹೀ ಶೂರ ಸ್ಥಾನಿಕ ನಾಯಕರುಗಳು ದಿಗ್ವಿಜಯಗಳ ಮೂಲಕ ತಮ್ಮ ಪ್ರದೇಶಗಳನ್ನು ವಿಸ್ತರಿಸಿಕೊಂಡು ಚಕ್ರವರ್ತಿಗಳಿಗೆ ನಿಷ್ಠರಾಗಿ ಮುಂದುವರೆಯುತ್ತಿದ್ದರು. ಇವರಿಗೂ ಕೂಡ ಚಕ್ರವರ್ತಿಗಳು ಸಮ್ಮತಿ ಸೂಚಿಸುವದರೊಂದಿಗೆ ಅವರನ್ನು ತಮ್ಮ ಪ್ರಾಂತಾಧಿಕಾರಿಗಳನ್ನಾಗಿ ಮುಂದುವರೆಸುತ್ತಿದ್ದರು. ಇದರಿಂದಾಗಿ ಸಾಮ್ರಾಜ್ಯದ ವಿವಿಧ ಮೂಲೆಗಳನ್ನು ತನ್ನ ಆಧೀನದಲ್ಲಿಟ್ಟುಕೊಳ್ಳಲು ಅನುಕೂಲವಾಗುತ್ತಿತ್ತು. ಹೀಗೆ ಸಾಮ್ರಾಟರ ಆಡಳಿತದ ಅನುಕೂಲತೆ ಮತ್ತು ಮಹಾಮಂಡಳೇಶ್ವರರ ಸಾಮರ್ಥ್ಯಗಳು ಈ ಪದ್ಧತಿಯ ಅಸ್ತಿತ್ವಕ್ಕೆ ಕಾರಣವಾಗಿವೆ. ಇದರ ಪ್ರಮುಖ ಲಕ್ಷಣವೆಂದರೆ, ರಾಜಕೀಯ ಒಪ್ಪಂದವಾಗಿತ್ತು. ಕೆಲವೊಮ್ಮೆ ವೈವಾಹಿಕ ಸಂಬಂಧಗಳಿಂದ ಚಕ್ರವರ್ತಿಗಳಿಗೆ ಸಾಮಂತರು ಹತ್ತಿರದವರಾಗುತ್ತಿದ್ದರು.

**ಸಾಮಂತರ ಅಧಿಕಾರ:**

ಶಾಸನಗಳಲ್ಲಿ ಸಾಮಂತರ ವಿಷಯವನ್ನು ಹೇಳುವಾಗ ಕೆಲವು ಶಬ್ದಗಳು ಮತ್ತೆ ಮತ್ತೆ ಗೋಚರಿಸುತ್ತವೆ. ಅವುಗಳನ್ನು ಸರಿಯಾಗಿ ಅರ್ಥೈಸಿಕೊಂಡರೆ ಆಳುವ ಸಾಮಂತರುಗಳ ಅಧಿಕಾರ, ಸ್ಥಾನಮಾನ ಮತ್ತು ಕಾರ್ಯವ್ಯಾಪ್ತಿಗಳ ಪರಿಚಯವಾಗುತ್ತದೆ. ಅವುಗಳನ್ನಿಲ್ಲಿ ಒಂದೊಂದಾಗಿ ನೋಡೋಣ:

**ಆಳುತ್ತುಮಿರೆ:**

ಶಾಸನಗಳಲ್ಲಿ ಅಧಿಕಾರಿವರ್ಗದವರನ್ನು ಕುರಿತು ಆಳುತ್ತುಮಿರೆ ಎಂಬ ಶಬ್ದವನ್ನು ಹಲವಾರುಬಾರಿ ಬಳಸಲಾಗಿದೆ. ಇದರಿಂದಾಗಿ ಅವರು ನೇರವಾಗಿ ಪ್ರಭುಗಳಾಗಿ ಅಥವಾ ಒಡೆಯರಾಗಿ ಆಳುತ್ತಿದ್ದರೆಂದು ವಿದ್ವಾಂಸರು ಭಾವಿಸಿದ್ದಾರೆ. ಆದರೆ ಶಾಸನಗಳ ಅಧ್ಯಯನದಿಂದ ತಿಳಿಯುವಂತೆ ಈ ಶಬ್ದವು ಎರಡು ಅರ್ಥಗಳಲ್ಲಿ ಅಂದು ಬಳಕೆಯಾಗುತ್ತಿತ್ತು. ಅದೆಂದರೆ ಪ್ರಭುವಾಗಿ ಆಳ್ವಿಕೆ ನಡೆಸುವದು ಮತ್ತು ಅಧಿಕಾರಿಯಾಗಿ ತನ್ನ ಕರ್ತವ್ಯವನ್ನು ನಿರ್ವಹಿಸುವದು. ಇದರಲ್ಲಿ ಚಕ್ರವರ್ತಿಗಳು, ಮಹಾಮಂಡಳೇಶ್ವರರು, ಆಳುವ ಮಹಾಸಾಮಂತರು, ಪ್ರಭುಗಾವುಂಡರು ಮತ್ತು ಗಾವುಂಡರುಗಳು ಮಾತ್ರ ಪ್ರಭುವಾಗಿ ವಂಶಪಾರಂಪರ್ಯವಾಗಿ ಆಳುತ್ತಿದ್ದರು. ಒಟ್ಟಿನಲ್ಲಿ ಒಬ್ಬ ಚಕ್ರವರ್ತಿಯ ಕೈಕೆಳಗೆ ಅನೇಕ ಮಹಾಮಂಡಳೇಶ್ವರರು, ಮಹಾಮಂಡಳೇಶ್ವರನ ಕೈಕೆಳಗೆ ಅನೇಕ ಮಹಾಸಾಮಂತರೂ,

ಮಹಾಸಾಮಂತನ ಕೈಕೆಳಗೆ ಅನೇಕ ಪ್ರಭುಗಾವುಂಡರುಗಳು, ಪ್ರಭುಗಾವುಂಡನ ಕೈಕೆಳಗೆ ಅನೇಕ ಗಾವುಂಡರುಗಳು ಆಳ್ವಿಕೆ ನಡೆಸುತ್ತಿದ್ದರು. ಕಲ್ಯಾಣ ಚಾಲುಕ್ಯ ಆರನೆಯ ವಿಕ್ರಮಾದಿತ್ಯನ ಮಹಾಮಂಡಳೇಶ್ವರನಾಗಿ ತ್ರಿಭುವನಮಲ್ಲ ಪೊಯ್ಸಳದೇವರು ಗಂಗವಾಡಿ-೯೬೦೦೦ವನ್ನು ಆಳುತ್ತಿರುವಾಗ, ಅವನ ಮಹಾಸಾಮಂತನಾಗಿ ಚಟ್ಟಯ್ಯನು ಈತನ ಗಾವುಂಡನಾಗಿ ಚೆಂದವಗಾವುಣ್ಡನು ಆಳ್ವಿಕೆ ನಡೆಸುತ್ತಿದ್ದುದಾಗಿ ತಿಳಿದುಬರುತ್ತದೆ.

ಇನ್ನು ಆಡಳಿತಕ್ಕೆ ಸಂಬಂಧಿಸಿದಂತೆ ನೋಡಿದಾಗ ಮಹಾಸಾಮಂತಾಧಿಪತಿ, ಮಹಾಪ್ರಚಂಡದಂಡನಾಯಕ, ಸುಂಕದಮಹಾಸಾಮಂತ, ದಂಡನಾಯಕ, ಪೆರ್ಗಡೆ ಮುಂತಾದವರು ಕಂಡುಬರುತ್ತಾರೆ. ಕೆಲವು ಮಹಾಸಾಮಂತಾಧಿಪತಿ, ಮಹಾಪ್ರಚಂಡದಂಡನಾಯಕರುಗಳು ಚಕ್ರವರ್ತಿಯ ಆದೇಶದ ಮೇರೆಗೆ ರಾಷ್ಟ್ರದ ಒಳಪ್ರದೇಶದಲ್ಲಿ ಮತ್ತು ಗಡಿಪ್ರದೇಶಗಳಲ್ಲಿ ಪ್ರಭುಗಳಾಗಿ ಆಳ್ವಿಕೆಯನ್ನು ಮಾಡುತ್ತಿದ್ದರು. ಆದರೆ ಅವರಿಗೆ ಈ ಪದವಿ ಶಾಶ್ವತವಾಗಿಯಾಗಲೀ, ವಂಶಪಾರಂಪರ್ಯವಾಗಿಯಾಗಲೀ ಇರುತ್ತಿರಲಿಲ್ಲ. ಮಹಾಸಾಮಂತಾಧಿಪತಿ ಮಹಾಪ್ರಚಂಡ ದಂಡನಾಯಕ ಬಲದೇವಯ್ಯನು ಬನವಾಸಿ-೧೨೦೦೦, ೧೮ ಅಗ್ರಹಾರ . . ಸುಂಕವನ್ನು ಆಳುತ್ತಿದ್ದನೆಂದು ತಿಳಿದುಬರುತ್ತದೆ. ಅಲ್ಲದೇ ಕೋಳೂರಿನ ಶಾಸನದಲ್ಲಿ ಇವನು ಬನವಾಸಿ-೧೨೦೦೦ದ ವಡ್ಡರಾವುಳ ಸುಂಕವನ್ನು ಆಳುತ್ತಿದ್ದನೆಂದು ಉಲ್ಲೇಖವಿದೆ. ಹೀಗಾಗಿ ಈತನು ಪ್ರಭುವಾಗಿ ರಾಜ್ಯಭಾರ ಮಾಡದೇ, ಕೇವಲ ಸುಂಕದ ಇಲಾಖೆಯನ್ನು ಮಾತ್ರ ನೋಡಿಕೊಳ್ಳುತ್ತಿದ್ದನೆಂಬುದು ಸ್ಪಷ್ಟವಾಗುತ್ತದೆ. ಕೆಲವೊಮ್ಮೆ ದಂಡನಾಯಕರನ್ನು ಕೂಡ ಆಳುತ್ತಿದ್ದರೆಂದು ಶಾಸನದಲ್ಲಿ ಉಲ್ಲೇಖಿಸಲಾಗಿದೆ. ಆದರೆ ಇವರು ಪ್ರಭುಗಳಾಗಿ ಆಳುತ್ತಿರದೇ ಅಧಿಕಾರಿಗಳಾಗಿ ತಮ್ಮ ಕರ್ತವ್ಯಗಳನ್ನು ನಿರ್ವಹಿಸುತ್ತಿದ್ದರೆಂದು ತಿಳಿದುಬರುತ್ತದೆ. ದಂಡನಾಯಕ ಶಿವರಾಜನೆಂಬುವವನು ಎರಡರುನೂರನ್ನು ಆಳುತ್ತಿದ್ದನೆಂದು ಶಾಸನವೊಂದರಿಂದ ತಿಳಿದುಬರುತ್ತದೆ. ಆದರೆ ಈತನು ವಡ್ಡರಾವುಳ ಸುಂಕಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದುದು ತಿಳಿದುಬರುತ್ತದೆ.

**ತ್ರಿಭೋಗ:**

ತ್ರಿಭೋಗಾಭ್ಯಂತರಸಿದ್ಧಿ ಎಂಬುದು ಮೂರು ಪದಗಳಿಂದ ಕೂಡಿದ ಒಂದು ಶಬ್ದವಾಗಿದ್ದು, ಶಾಸನಗಳಲ್ಲಿ ಸಾಮಂತರುಗಳ ಆಡಳಿತವನ್ನು ಹೇಳುವಾಗ ಹಲವಾರು ಬಾರಿ ಕಂಡುಬರುತ್ತದೆ. ಇದರಲ್ಲಿ ತ್ರಿಭೋಗ, ಅಭ್ಯಂತರ, ಸಿದ್ಧಿ ಎಂಬ ಮೂರು ಪ್ರತ್ಯೇಕ ಪದಗಳು ಕಂಡುಬರುತ್ತವೆ. ಇದನ್ನು ತ್ರಿಭೋಗವಾಗಿ ಅಭ್ಯಂತರವಿಲ್ಲದೇ, ಸಂಪೂರ್ಣ ಸ್ವಾಮಿತ್ವವನ್ನು ಪಡೆಯುವುದು ಎಂದು ಅರ್ಥೈಸಬಹುದಾಗಿದೆ. ಡಾ.ಚಿದಾನಂದಮೂರ್ತಿಯವರು ಫ್ಲೀಟರು ಹೇಳಿದ "a grant to be enjoyed by three generations" ಎಂಬ ಹೇಳಿಕೆಯನ್ನು "ವಾಸ್ತವವಾಗಿ ಮೂರು ತಲೆಮಾರುಗಳು ಅನುಭವಿಸುವ ದಾನ" ಎಂಬ ಅರ್ಥ ಸರಿಯಾದುದು ಎಂದು ಒಪ್ಪಿಕೊಂಡಿದ್ದಾರೆ. ತ್ರಿಭೋಗ ಎಂಬುದು ಶಾಸನಗಳಲ್ಲಿ ಎರಡು ಸಂದರ್ಭಗಳಲ್ಲಿ ಬಳಕೆಗೊಂಡಿದೆ. ಒಂದು ಪ್ರಭುವರ್ಗದವರ ಬಗ್ಗೆ ಹೇಳುವಾಗ, ಅವರು

ತ್ರಿಭೋಗಾಭ್ಯಂತರಸಿದ್ಧಿಯೊಳು ಆಳುತ್ತಿದ್ದರೆಂದು ಹೇಳಲಾಗಿದೆ. ಕ್ರಿ.ಶ. ೧೦೨೦ರಲ್ಲಿ ಮಹಾಪ್ರಚಂಡ ದಂಡನಾಯಕಂ ಘಟೆಯಂಕಕಾರ ಬ್ರಹ್ಮಾಧಿರಾಜರ್ ಪಾಪೆಕಲ್ಲಂ ತ್ರಿಭೋಗಭ್ಯನ್ತರ ಸಿದ್ಧಿಯೊಳಾಳುತ್ತಿದ್ದನು ಎಂದು ತೆಕ್ಕಲಕೋಟೆಯ ಶಾಸನ ಹೇಳಿದೆ. ಕ್ರಿ.ಶ. ೧೦೭೯ರ ಚಿನ್ನತುಂಬಳಮ್ ಶಾಸನ ತಿಳಿಸುವಂತೆ ಮಹಾಮಂಡಳೇಶ್ವರ ಜೋಯಿಮಯ್ಯರಸನು ಸಿಂದವಾಡಿ-೧೦೦೦ವನ್ನು ತ್ರಿಭೋಗಾಭ್ಯಂತರಸಿದ್ಧಿಯಿಂದ ಆಳುತ್ತಿದ್ದುದಾಗಿ ತಿಳಿದುಬರುತ್ತದೆ[೧೦]. ಕ್ರಿ.ಶ. ೧೦೮೫ರ ತಟ್ಟಕೆರೆ ಶಾಸನದಲ್ಲಿ ಚಾಲುಕ್ಯ ಆರನೆಯ ವಿಕ್ರಮಾದಿತ್ಯನು ತನ್ನ ಮಹಾಮಂಡಳೇಶ್ವರನಾಗಿ ಗಂಗವಾಡಿ-೯೬೦೦೦ನ್ನು ಆಳುತ್ತಿದ್ದ ತ್ರಿಭುವನಮಲ್ಲ ಗಂಗಪೆರ್ಮಾಡಿಗೆ ಮಂಡಳಿ-೧೦೦೦ದ ಒಡೆತನವನ್ನು ನೀಡಿದಾಗ ಅದನ್ನು ಅವನು ತ್ರಿಭೋಗಾಭ್ಯಂತರ ಸಿದ್ಧಿಯಿಂದ ಆಳ್ವಿಕೆಮಾಡಿದನೆಂದು ಉಲ್ಲೇಖಿಸಲಾಗಿದೆ[೧೧]. ಲಕ್ಷ್ಮೇಶ್ವರದ ಕ್ರಿ.ಶ. ೧೧೦೬ರ ಶಾಸನವು ಹಾನಗಲ್ಲ ಕದಂಬರ ಮಹಾಮಂಡಳೆಶ್ವರ ತೈಲಪದೇವನು ಪಾನುಂಗಲ್ಲು-೫೦೦ನ್ನು ಪಾನುಂಗಲ್ಲು ನೆಲೆವೀಡಿನಿಂದ ತ್ರಿಭೋಗವಾಗಿ ಆಳುತ್ತಿದ್ದನೆಂದು ತಿಳಿಸಿದೆ[೧೨]. ಕ್ರಿ.ಶ. ೧೧೦೬ರ ಗುತ್ತಿಯ ಶಾಸನವೊಂದರಲ್ಲಿ ಸಿಂದವಾಡಿ-೧೦೦೦ವನ್ನು ತ್ರಿಭೋಗಾಭ್ಯಂತರಸಿದ್ಧಿಯಿಂದ ಮಹಾಮಂಡಳೇಶ್ವರ ಮಲ್ಲರಸನೆಂಬುವನು ಆಳುತ್ತಿದ್ದುದಾಗಿ ಉಲ್ಲೇಖಿಸಲಾಗಿದೆ[೧೩]. ಕ್ರಿ.ಶ. ೧೧೨೩ರ ಬಾಳಂಬಿಡದ ಶಾಸನದಲ್ಲಿ ಕೂಡ ಹಾನಗಲ್ಲ ಕದಂಬ ಮಹಾಮಂಡಳೇಶ್ವರ ತೈಲಪದೇವನು ಪಾನುಂಗಲ್ಲ ನೆಲವೀಡಿನೊಳಗೆ ಐನೂರಮೆಬನವಾಸಿ ಪನ್ನಿಚ್ಛಾರ್ಸಿರಮುಮಂ ತ್ರಿಭೋಗಾಭ್ಯಂತರಸಿದ್ಧಿಯಿಂದಾಳೆ ಎಂದು ಉಲ್ಲೇಖಿಸಲಾಗಿದೆ[೧೪]. ಕ್ರಿ.ಶ. ೧೧೨೫ರ ಚೆನ್ನಗಿರಿಯ ಶಾಸನವೊಂದು ಮಹಾಮಂಡಳೇಶ್ವರ ತ್ರಿಭುವನಮಲ್ಲರಾಯ ಪಾಂಡ್ಯದೇವನು ನೊಳಂಬವಾಡಿ-೩೨೦೦೦, ಸಾಂತಳಿಗೆ-೧೦೦೦ಗಳನ್ನು ತ್ರಿಭೋಗಾಭ್ಯಂತರದಿಂದ ಆಳುತ್ತಿದ್ದನೆಂದು ತಿಳಿಸುತ್ತದೆ[೧೫]. ಕ್ರಿ.ಶ. ೧೧೪೫ರ ಮುದ್ದೇಬಿಹಾಳ ತಾಲೂಕಿನ ಬೇಲೂರಿನ ಶಾಸನವೊಂದು ತಿಳಿಸುವಂತೆ ಚಾಲುಕ್ಯ ಎರಡನೆಯ ಜಗದೇಕಮಲ್ಲನ ಮಹಾಮಂಡಳೇಶ್ವರನಾದ ಸೇವುಣ ಹೆಮ್ಮಾಡಿದೇವರಸನ ಆಧೀನನಾದ ಹಂದೆಯನಾಯಕನು ಹಗರಿಟ್ಟಗೆ-೩೦೦ನ್ನು ತ್ರಿಭೋಗಾಭ್ಯಂತರಸಿದ್ಧಿಯಿಂದ ಆಳುತ್ತಿದನು[೧೬].

ಎರಡನೆಯದಾಗಿ ಶಾಸನಗಳಲ್ಲಿ ದತ್ತಿಯನ್ನು ನೀಡುವ ಸಂದರ್ಭದಲ್ಲಿಯೂ ಈ ತ್ರಿಭೋಗಾಭ್ಯಂತರ ಸರ್ವಬಾಧಾಪರಿಹಾರಮಾಗಿ[೧೭] ಬಿಡಲಾಗಿದೆ ಎಂದು ಕಂಡುಬರುತ್ತದೆ. ಹೀಗೆ ಇಲ್ಲಿ ಮೂರುತಲೆಮಾರು ಎಂಬುದು ಸರಿಯಾದ ಅಭಿಪ್ರಾಯವಾಗಿದೆ. ಆದರೆ ಇಲ್ಲಿ ಆದನ್ನು ನೀಡುವವರ ಅಥವಾ ಭೋಗಿಸುವವರ ತಲೆಮಾರುಗಳೆಂಬುದು ಸ್ಪಷ್ಟವಾಗುವದಿಲ್ಲ. ಆದರೆ ಶಾಸನಗಳಿಂದ ಅರ್ಥವಾಗುವ ಒಂದು ವಿಷಯವೆಂದರೆ, ದಾನಗಳನ್ನು ನೀಡುವವರು ಮತ್ತೆ ಅದನ್ನು ಕೆಲಕಾಲದ ನಂತರ ಪುನರ್ದತ್ತಿಯಾಗಿ ನೀಡುವ ಪರಿಪಾಠವಿತ್ತು. ಹೀಗಾಗಿ ಅರಸರ ಮೂರುತಲೆಮಾರುಗಳು ಕಳೆದ ನಂತರ ಈ ದಾನದ ಅವಧಿ ಮುಗಿದಕಾರಣ ಹೀಗೆ ಮಾಡಲಾಗುತ್ತಿತ್ತು. ಆದ್ದರಿಂದ ತ್ರಿಭೋಗಾಭ್ಯಂತರಸಿದ್ಧಿಯಿಂದ ಅಂದರೆ ಮೂರು ತಲೆಮಾರುಗಳ ಆಡಳಿತವಿರುವವರೆಗೆ ಅವರ ಆಳ್ವಿಕೆಗೆ ಅಥವಾ ದಾನವನ್ನು ಅನುಭವಿಸಲು ಯಾವುದೇ ಬಾಧ್ಯತೆ ಇದ್ದಿಲ್ಲವೆನ್ನಬಹುದು.

**ಉಭಯಸ್ವಾಮ್ಯ:**

ಶಾಸನಗಳಲ್ಲಿ ಕೆಲವು ಮಹಾಮಂಡಳೇಶ್ವರರಿಗೆ ಉಭಯಸ್ವಾಮ್ಯದಿಂದ ಆಳುತ್ತಿದ್ದರೆಂದು ಉಲ್ಲೇಖಿಸಲಾಗಿದೆ. ಅಕ್ಷರಶಃ ಇದರ ಅರ್ಥ ಎರಡರ ಒಡೆತನ ಎಂದಾಗುತ್ತದೆ. ಆದರೆ ಪ್ರಸ್ತುತ ಅದರ ಅರ್ಥ ಇಬ್ಬರಿಂದ ಒಡೆತನದ ಮಾನ್ಯತೆ ಪಡೆದು ಆಳುತ್ತಿರುವದಾಗಿದೆ. ಕ್ರಿ.ಶ. ೧೦೯೩ರಲ್ಲಿ ಹೊಯ್ಸಳ ಎರೆಯಂಗನ ಸಾಮಂತನಾದ ಕುಂದಮಾರಾಯ ಎಂಬುವವನು ಮಯ್ಸೆನಾಡಲ್ಲಿರುವ ತಾವರೆಕೆರೆಯನ್ನು ಉಭಯಸ್ವಾಮ್ಯದಿಂದ ಆಳುತ್ತಿದ್ದನೆಂದು ದೇವಿಹಳ್ಳಿ ಶಾಸನದಿಂದ ತಿಳಿದುಬರುತ್ತದೆ[೭೮]. ಕ್ರಿ.ಶ. ೧೧೦೭ರ ನಿಡಗುಂದಿ ಶಾಸನದಿಂದ ಹಾನಗಲ್ಲ ಕದಂಬ ತೈಲಪದೇವನು ಚಾಲುಕ್ಯ ಚಕ್ರವರ್ತಿಯ ಪಾದಪದ್ಮೋಪಜೀವಿಯಾಗಿ ಉಭಯಸ್ವಾಮ್ಯದಿಂದ ಆಳ್ವಿಕೆ ನಡೆಸುತ್ತಿದ್ದ ವಿವರ ಕಂಡುಬರುತ್ತದೆ[೭೯]. ಹಾನಗಲ್ಲಿನ ಕ್ರಿ.ಶ. ೧೧೧೯ರ ಶಾಸನದಲ್ಲಿಯೂ ಕೂಡ ಹಾನಗಲ್ಲ ಕದಂಬ ತೈಲಪನು ಬನವಾಸಿ-೧೨೦೦೦ ಮತ್ತು ಹಾನಗಲ್ಲು-೫೦೦ಗಳನ್ನು ಉಭಯಸ್ವಾಮ್ಯದಿಂದ ಆಳುತ್ತಿದ್ದುದಾಗಿ ಉಲ್ಲೇಖಿಸಲಾಗಿದೆ[೮೦]. ಹೀಗೆ ಹಾನಗಲ್ಲ ಕದಂಬರು ಮೊದಲು ಚಕ್ರವರ್ತಿಗಳಾದ ಚಾಲುಕ್ಯರಿಗೂ ಮತ್ತು ಅವರ ಮಹಾಮಂಡಳೇಶ್ವರರಾದ ಗೋವೆಯ ಕದಂಬರಿಗೂ ಆಧೀನರಾಗಿ ಆಳ್ವಿಕೆಮಾಡಿದ್ದು ಕಂಡುಬರುತ್ತದೆ. ಕ್ರಿ.ಶ. ೧೧೨೧ರ ಕೊಂಚಗೆರೆ ಶಾಸನದ ಪ್ರಕಾರ ಕುರುಗೋಡು ಸಿಂದರ ಮಹಾಮಂಡಳೇಶ್ವರ ಸೋವಿದೇವನು ಬಲ್ಲಕುಂದೆ-೩೦೦ನ್ನು ಉಭಯಸ್ವಾಮ್ಯದಿಂದ ಆಳುತ್ತಿದ್ದನು ಎಂದು ತಿಳಿದುಬರುತ್ತದೆ[೮೧]. ಚಾಲುಕ್ಯ ಎರಡನೆಯ ಜಯಸಿಂಹನ ಮಹಾಮಂಡಳೇಶ್ವರನಾದ ಸಿಂದ ಪೆರ್ಮಾಡಿದೇವರಸನು ಕಿಸುಕಾಡು-೭೦, ಕೆಲವಾಡಿ-೩೦೦, ಬಾಗಡಗೆ-೭೦, ನೆರೆಯಂಗಲ್ಲು-೧೨ ಮುಂತಾದವುಗಳನ್ನು ಉಭಯಸ್ವಾಮ್ಯದಿಂದ ಆಳುತ್ತಿದ್ದನೆಂದು ನರೆಗಲ್ಲ ಶಾಸನದಿಂದ ತಿಳಿದುಬರುತ್ತದೆ[೮೨]. ಇಲ್ಲಿ ಸಿಂದರು ಮೊದಲು ಚಕ್ರವರ್ತಿ ನಂತರ ಅವನ ಮಹಾಮಂಡಳೇಶ್ವರರಾದ ನೊಳಂಬರ ಸಾಮಂತರಾಗಿದ್ದರಿಂದ ಅವರು ಉಭಯಸ್ವಾಮ್ಯದಿಂದ ಆಳ್ವಿಕೆ ಮಾಡಿದ್ದಾರೆ. ಇದೇ ರೀತಿ ಮಹಾಮಂಡಳೇಶ್ವರ ಚಿದ್ದಣಚೋಳನು ಕ್ರಿ.ಶ. ೧೧೨೪ರಲ್ಲಿ ಉಭಯಸ್ವಾಮ್ಯಮನಾಳುತ್ತಿರುವಾಗ ಎಂದು ಶಾಸನವೊಂದರಲ್ಲಿ ಉಲ್ಲೇಖಿಸಲ್ಪಟ್ಟಿದ್ದಾನೆ[೮೩]. ಕಲ್ಯಾಣಿ ಚಾಲುಕ್ಯರಿಗೆ ಆಧೀನನಾದ ಈತನು ಮತ್ಯಾರಿಗೆ ಆಧೀನನಾಗಿ ಆಳುತ್ತಿದ್ದನೆಂಬುದು ಮಾತ್ರ ಇಲ್ಲಿ ಸ್ಪಷ್ಟಗೊಂಡಿಲ್ಲ.

**ಏಕಭೋಗ ಮತ್ತು ಏಕಸ್ವಾಮ್ಯ:**

ಶಾಸನಗಳಲ್ಲಿ ಏಕಭೋಗ ಮತ್ತು ಏಕಸ್ವಾಮ್ಯ ಎಂಬ ಪದಗಳು ಆಧೀನವರ್ಗದವರಿಗೆ ಸಂಬಂಧಿಸಿದಂತೆ ಕಂಡುಬರುತ್ತವೆ. ಹೀಗೆಂದರೆ ಅಧಿಕಾರ ಪಡೆದ ವ್ಯಕ್ತಿಯು ತಾನು ಜೀವಂತವಾಗಿರುವವರೆಗೆ ಮಾತ್ರ ಅದನ್ನು ಅನುಭವಿಸುವದಾಗಿದೆ. ನಂತರ ಈ ಅಧಿಕಾರ ಅವನ ವಂಶಸ್ಥರಿಗೆ ಮುಂದುವರೆಯುತ್ತಿದ್ದಿಲ್ಲ. ಒಂದು ವೇಳೆ ಮುಂದುವರೆಯಬೇಕಾದರೆ ಅದನ್ನು ಪುನಃ ಪಡೆಯಬೇಕಾಗುತ್ತದೆ. ಕ್ರಿ.ಶ. ೧೦೪೫ರಲ್ಲಿ ಮಹಾಸಾಮಂತ ಸಿಂದ ಉದಯಾದಿತ್ಯನು ಮನ್ನೆಯಸ್ವಾಮ್ಯದಿಂದ ಆಳುತ್ತಿದ್ದುದಾಗಿ ತಿಳಿದುಬರುತ್ತದೆ[೮೪]. ಕ್ರಿ.ಶ. ೧೦೭೬ರ ಹೊನ್ನಳ್ಳಿ ಗ್ರಾಮದ

ಶಾಸನದ ಪ್ರಕಾರ ಮಹಾಸಾಮಂತ ನೊಟ್ಟಿಘಟ್ಟಿಯಣ್ಣನು ಮಂಡಲಿ-೧೦೦೦ದ ಕಂಪಣ ಚೀಲೂರುಬಳ್ಳೆ-೩೦ರ ಪ್ರವಿಷ್ಠಬಾದಕೋಟೆಪುರದಲ್ಲಿ ಏಕಭೋಗಂ ಸುಖದಿಂದ ಆಳುತ್ತಿದ್ದನೆಂದು ತಿಳಿದುಬರುತ್ತದೆ[೨೫]. ಕ್ರಿ.ಶ. ೧೯೨ರ ಸಿರಗುಪ್ಪ ಶಾಸನವು ಸಿಂದ ಮಹಾಸಾಮಂತ ಮನ್ನೆಯ ಚೋಕರಸನು ತಮ್ಮ ಮ . ಯಸ್ವಾಮ್ಯಮುಮಂ ಆಳುತ್ತಿದ್ದನೆಂದು ಉಲ್ಲೇಖಿಸಿದೆ[೨೬]. ಕ್ರಿ.ಶ. ೧೧೨೧ರಲ್ಲಿ ಕೊಟ್ಟೂರಿನ ಕದಂಬವಂಶದ ಮಹಾಮಂಡಳೇಶ್ವರ ಘಟ್ಟಿಯರಸನು ಕೋಗಳಿಯಯ್ನೂರರ ಮನ್ನೆಯ ಮನೇಕಾದಿಷ್ಟೆತಂ ಸುಖದಿನಾಳುತ್ತಿದ್ದನೆಂದು ಸೋಗಿ ಶಾಸನದಲ್ಲಿ ಹೇಳಲಾಗಿದೆ[೨೭].

**ಬೀಳಾನುವೃತ್ತಿ:**

ಶಾಸನಗಳಲ್ಲಿ ಕಂಡುಬರುವ ಬೀಳಾನುವೃತ್ತಿ ಅಥವಾ ಬೀಳುವೃತ್ತಿ ಎಂಬ ಶಬ್ದ ಅನೇಕ ಕುತೂಹಲಕ್ಕೆ ಕಾರಣವಾಗಿದೆ. ಈ ಬೀಳುವೃತ್ತಿಯಿಂದ ಆಳುತ್ತಿದ್ದ ಸಾಮಂತರ ಉಲ್ಲೇಖ ಅನೇಕ ಕಡೆ ಕಂಡುಬರುತ್ತದೆ. ಡಾ.ಚಿದಾನಂದಮೂರ್ತಿಯವರು "ಬೀಳುವೃತ್ತಿಯು ಅಧಿರಾಜ ಮತ್ತು ಸಾಮಂತರ ಸಂಬಂಧವನ್ನು ಸೂಚಿಸುತ್ತದೆ. ಬೀಳ್ ಎಂದರೆ ಕೆಳಗೆ ಬೀಳು, ಸೋಲು ಎಂದರ್ಥ. ಬೀಳವೃತ್ತಿಯು ಸಾಮಂತನು ಅಧಿರಾಜನಿಗೆ ಸೋತು, ಅವನಿಗೆ ತೋರಿಸುತ್ತಿದ್ದ ಗೌರವವನ್ನು ಸೂಚಿಸುತ್ತಿರುವಂತೆ ಕಾಣುತ್ತದೆ. ಅಲ್ಲದೇ ಬೀಳ್ ಎಂದರೆ ಆಲದ ಮರದ ಬಿಳಿಲು ಅಥವಾ ಬೇರು. ಇದು ಬೀಳಲ್ ಧಾತುವಿನಿಂದ ಬಂದಿರುತ್ತದೆ. ಆಲದ ಮರದ ವಂಶವು ಈ ಬಿಳಿಲುಗಳಿಂದ ಬೆಳೆಯುತ್ತಾ ಹೋಗುತ್ತದೆ. ಹಾಗೆ ಒಂದು ವಂಶದ ರಾಜನ ಆಶ್ರಯದಲ್ಲಿ ಅದೇ ವಂಶದ ಇತರರು ಆಧೀನರಾಗಿ ಆಳುತ್ತಿದ್ದ ವಿಷಯವನ್ನು ಇದು ಸೂಚಿಸುತ್ತದೆ" ಎಂದು ಅಭಿಪ್ರಾಯಪಟ್ಟಿದ್ದಾರೆ[೨೮]. ಆದರೆ ಈ ಊಹೆಯನ್ನು ಒಪ್ಪಲು ಆಧಾರಗಳ್ಯಾವವೂ ದೊರೆಯುವದಿಲ್ಲ. ಕಾರಣ ಕರ್ನಾಟಕದ ಸಾಮಂತ ಅರಸುಮನೆತನಗಳನ್ನು ಗಮನಿಸಿದಾಗ, ಅವುಗಳಲ್ಲಿ ಬೀಳಾನುವೃತ್ತಿಯಿಂದ ಆಳಿದ ಮನೆತನಗಳಲ್ಲಿ ಚಕ್ರವರ್ತಿಗಳಿಗೆ ಸಂಬಂಧಿಸಿದ ಮನೆತನಗಳಿರುವದು ಕಂಡುಬರುವದಿಲ್ಲ. ಅಲ್ಲದೇ ಬೀಳುವೃತ್ತಿಯಿಂದ ಆಳುತ್ತಿದ್ದವರು ಚಕ್ರವರ್ತಿಗೆ ಅತ್ಯಂತ ನಿಷ್ಠರಾಗಿದ್ದವರಾದ್ದರಿಂದ ಅವರನ್ನು ಸೋಲಿಸುವ ಪ್ರಶ್ನೆಯೇ ಬರುವದಿಲ್ಲ. ಆದ್ದರಿಂದ ಬೀಳಾನುವೃತ್ತಿಯೆಂಬುದು ಮೇಲೆ ನಿರೂಪಿಸಿದ ವಿದ್ವಾಂಸರ ಅರ್ಥಕ್ಕಿಂತ ಭಿನ್ನವಾದುದಾಗಿದೆ. ಬೀಳ್ ಎಂದರೆ ಇಲ್ಲಿ ಕೆಳಗಿನದುದನ್ನು ಅಂದರೆ ಸೇವಕ ಎಂಬರ್ಥವನ್ನು ನೀಡುವಂತೆ ತೋರುತ್ತದೆ. ಚಕ್ರವರ್ತಿಯ ನಿಷ್ಠಾವಂತ ಸೇವಕರು, ಗರುಡರು, ಮನ್ನೆಯರು ಈ ರೀತಿ ಬೀಳಾನುವೃತ್ತಿಯಿಂದ ಆಳಿದವರಾಗಿದ್ದಾರೆ. ಹೀಗಾಗಿ ಅವರ ಈ ನಿಷ್ಠೆಯನ್ನು ಮೆಚ್ಚಿ ಚಕ್ರವರ್ತಿಯು ಅವರನ್ನು ಮಹಾಮಂಡಳೇಶ್ವರ ದರ್ಜೆಗೇರಿಸಿರಬಹುದು.

ಚಿತ್ರದುರ್ಗದ ಕ್ರಿ.ಶ. ೯೬೮ರ ಶಾಸನವೊಂದು ತಿಳಿಸುವಂತೆ ಸಾಮಂತ ಶ್ರೀಪಂದಯ್ಯನೆನ್ನುವನು ಬೀಳಾನುವೃತ್ತಿಯಿಂದ ಆಳ್ವಿಕೆ ನಡೆಸುತ್ತಿದ್ದನು[೨೯]. ಕ್ರಿ.ಶ. ೧೦೦೬ರಲ್ಲಿ ಪಡೆವಳ ತೈಲನು ಮಾಸವಾಡಿ-೧೪೦ನ್ನು ಬೀಳಾನುವೃತ್ತಿಯಿಂದ ಆಳುತ್ತಿದ್ದುದಾಗಿ ತಿಳಿದುಬರುತ್ತದೆ[೩೦]. ಕ್ರಿ.ಶ. ೧೦೩೦ರಲ್ಲಿ ಚಾಲುಕ್ಯ ಎರಡನೆಯ

ಜಯಸಿಂಹದೇವನ ಮಹಾಮಂಡಳೇಶ್ವರನಾದ ಕುಂದಮರಸನು ಬನವಾಸಿ-೧೨೦೦೦ವನ್ನು ಬೀಳುವೃತ್ತಿಯಿಂದ ಆಳುತ್ತಿದ್ದನೆಂದು ಲಕ್ಕುಂಡಿಯ ಶಾಸನ ತಿಳಿಸಿದೆ[೨೧]. ಕ್ರಿ.ಶ. ೧೦೪೯ರಲ್ಲಿ ಚಾಲುಕ್ಯ ಚಕ್ರವರ್ತಿ ತ್ರೈಲೋಕ್ಯಮಲ್ಲದೇವನ ಮಗ ಸೋಮೇಶ್ವರನು ಬೀಳಾನುವೃತ್ತಿಯಿಂದ ಆಳುತ್ತಿದ್ದನೆಂದು ಶಾಸನವೊಂದು ಉಲ್ಲೇಖಿಸಿದೆ[೨೨]. ಕ್ರಿ.ಶ. ೧೦೫೨-೫೩ರಲ್ಲಿ ಚಾಲುಕ್ಯ ತ್ರೈಲೋಕ್ಯಮಲ್ಲನ ಸಾಮಂತನಾದ ತ್ರೈಲೋಕ್ಯಮಲ್ಲ ನೊಳಂಬಪೆರ್ಮಾನಡಿದೇವನು ಕೋಗಳಿ-೫೦೦, ಬಲ್ಲಕುಂದೆ-೩೦೦, ಕದಂಬಳಿಗೆ-೧೦೦೦ಗಳನ್ನು ಬೀಳವೃತ್ತಿಯಿಂದ ಆಳುತ್ತಿದ್ದುದಾಗಿ ತಿಳಿದುಬರುತ್ತದೆ[೨೩]. ಕ್ರಿ.ಶ. ೧೦೬೨ರ ನಾಗಾಯಿಯ ಶಾನವೊಂದು ಚಾಲುಕ್ಯ ಆರನೆಯ ವಿಕ್ರಮಾದಿತ್ಯನ ಮಹಾಮಂಡಳೇಶ್ವರನಾದ ಮನ್ನೆಯ ಲೋಕರಸನು ಅರಲು-೩೦೦, ಮಿರಿತೆ-೩೦೦ ವಿಭಾಗಗಳನ್ನು ಬೀಳಾನುವೃತ್ತಿಯಿಂದ ಆಳುತ್ತಿದ್ದುದಾಗಿ ತಿಳಿಸುತ್ತದೆ[೨೪]. ಕ್ರಿ.ಶ. ೧೦೮೧ರಲ್ಲಿ ಚಾಲುಕ್ಯರ ವಿಕ್ರಮಾದಿತ್ಯನ ಪೇಶಣಗರುಡನಾದ ಮಹಾಮಂಡಳೇಶ್ವರ ಜೋಯಿಮಯ್ಯರಸನು ಸಿಂದವಾಡಿ-೧೦೦೦ನ್ನು ಬೀಳಾನುವೃತ್ತಿಯಿಂದ ಆಳುತ್ತಿದ್ದುದಾಗಿ ತಿಳಿದುಬರುತ್ತದೆ[೨೫].

**ಕುಮಾರವೃತ್ತಿ:**

ಅನೇಕ ಸಾಮಂತರಾಜರುಗಳು ಕುಮಾರವೃತ್ತಿಯಿಂದ ಆಳ್ವಿಕೆನಡೆಸಿದುದು ಕಂಡುಬರುತ್ತದೆ. ಕುಮಾರ ಎಂದು ಯುವರಾಜನನ್ನು ಹಲವಾರು ಶಾಸನಗಳಲ್ಲಿ ಕರೆದಿರುವದು ತಿಳಿಯುತ್ತದೆ[೨೬]. ರಾಜಕುಮಾರರು ಮುಂದೆ ರಾಜರಾಗಬೇಕಾದ್ದರಿಂದ ಅವರು ಆಡಳಿತದಲ್ಲಿ ಅನುಭವ, ತರಬೇತಿ ಹೊಂದಲೆಂಬ ಉದ್ದೇಶದಿಂದ ಅವರನ್ನು ರಾಜನು ಪ್ರಾಂತಗಳಿಗೆ ಅಧಿಕಾರಿಗಳನ್ನಾಗಿ ಮಾಡುತ್ತಿದ್ದನೆಂದು ತಿಳಿಯುತ್ತದೆ[೨೭]. ಯುವರಾಜ ಅಥವಾ ರಾಜಕುಮಾರರ ಆಳ್ವಿಕೆಯನ್ನೇ ಕುಮಾರವೃತ್ತಿಯ ಆಳ್ವಿಕೆಯೆಂದು ಭಾವಿಸಬಹುದೆಂದು ಚಿದಾನಂದಮೂರ್ತಿಯವರು ಅಭಿಪ್ರಾಯಪಟ್ಟಿದ್ದಾರೆ[೨೮]. ಕ್ರಿ.ಶ. ೧೦೫೭ರ ಹಿರೇಹಡಗಲಿಯ ಶಾಸನವು ಚಾಲುಕ್ಯ ತ್ರೈಲೋಕ್ಯಮಲ್ಲನ ಕಾಲದಲ್ಲಿ ಗಂಗಪೆರ್ಮಾಡಿದೇವರು ಗಂಗವಾಡಿ-೯೬೦೦೦ ಮುಂತಾದನಾಡುಗಳನ್ನು ಕುಮಾರವೃತ್ತಿಯಿಂದಾಳುತ್ತಿದ್ದನೆಂದು ಉಲ್ಲೇಖಿಸಿದೆ[೨೯]. ಅಲ್ಲದೇ ಕ್ರಿ.ಶ. ೧೧೪೮ರ ಶಾಸನವೊಂದು ಶ್ರೀಮನ್ಮಹಾಮಂಡಳೇಶ್ವರ ಜಗದೇಕಮಲ್ಲ ಪಾಂಡ್ಯದೇವರು ಕೆಲವು ದೇಶಗಳನ್ನು ಕುಮಾರವೃತ್ತಿಯಿಂದ ಆಳುತ್ತಿದ್ದುದಾಗಿ ತಿಳಿಸುತ್ತದೆ[೩೦]. ಕ್ರಿ.ಶ. ೧೦೬೪ರ ಹೊಟ್ಟೂರಿನ ಶಾಸನದಲ್ಲಿ ಹಾನಗಲ್ಲ ಕದಂಬ ಮಹಾಮಂಡಳೇಶ್ವರ ಜೇಮರಸನ ಮಗ ಮಹಾಸಾಮಂತ ಜೋಯಿಯರಸನು ಕುಮಾರವೃತ್ತಿಯಿಂದ ಪೊಟ್ಟಿಯೂರನ್ನು ಆಳುತ್ತಿದ್ದುದನ್ನು ಕಾಣಬಹುದು[೩೧].

**ಅಚಳವೃತ್ತಿ:**

ಕೆಲವು ಶಾಸನಗಳಲ್ಲಿ ಅಚಳವೃತ್ತಿಯಿಂದ ಸಾಮಂತರುಗಳು ಆಳುತ್ತಿದ್ದುದಾಗಿ ತಿಳಿದುಬರುತ್ತದೆ. ತನ್ನ ಒಡೆಯನಲ್ಲಿರುವ ಅಚಲವಾದ ಭಕ್ತಿಗೌರವಗಳನ್ನಿಟ್ಟುಕೊಂಡ ಆಳ್ವಿಕೆ ಎಂದು ಭಾವಿಸುವದು ಅಥವಾ ರಾಜನಿಂದ

ಪ್ರಾಪ್ತವಾಗಿರುವ ಅಧಿಕಾರವು ಶಾಶ್ವತವಾದುದು ಎಂಬುದನ್ನೂ ಸೂಚಿಸಬಹುದು ಎಂದು ಡಾ.ಚಿದಾನಂದಮೂರ್ತಿಯವರು ಅಭಿಪ್ರಾಯಪಡುತ್ತಾರೆ[೪೨]. ಕ್ರಿ.ಶ.೧೦೪೫ರ ಮೋರಿಗೇರಿ ಶಾಸನ ತಿಳಿಸುವಂತೆ ಆಚಳವೃತ್ತಿಯಿಂದ ಮಹಾಮಂಡಳೇಶ್ವರ ತ್ರೈಳೋಕ್ಯಮಲ್ಲ ನನ್ನಿನೊಳಂಬ ಪಲ್ಲವನು ಚಕ್ರವರ್ತಿ ತ್ರೈಳೋಕ್ಯಮಲ್ಲ ಅಹಾವಮಲ್ಲದೇವನ ಸಾಮಂತನಾಗಿ ಆಳ್ವಿಕೆ ಮಾಡುತ್ತಿದ್ದುದು ತಿಳಿದುಬರುತ್ತದೆ[೪೩].

**ಅಣುಗಜೀವಿತ ಮತ್ತು ಕುಟ್ಟುಂಬಿಟಿಅಣುಗಜೀವಿತ:**

ಸಾಮಂತರ ಆಳ್ವಿಕೆಯನ್ನು ಉಲ್ಲೇಖಿಸುವಾಗ ಶಾಸನಗಳಲ್ಲಿ ಅಣುಗಜೀವಿತ ಮತ್ತು ಕುಟ್ಟುಂಬಿಟಿಅಣುಗಜೀವಿತವಾಗಿ ಆಳ್ವಿಕೆ ನಡೆಸುತ್ತಿದ್ದ ವಿವರಗಳು ಕಂಡುಬರುತ್ತವೆ. ಅಣುಗ ಎಂದರೆ ಪ್ರೀತಿಪಾತ್ರ ಎಂದರ್ಥ. ಅಣುಗಜೀವಿತವೆಂದರೆ ಪ್ರೀತಿಪಾತ್ರರಿಗೆ ಕೊಟ್ಟಕೊಡುಗೆ ಎಂದರ್ಥವಾಗುತ್ತದೆ[೪೪]. ಕುಟ್ಟುಂಬಿಟಿ ಎಂಬ ಶಬ್ದವು ಕುಟುಂಬವನ್ನು ನಿರ್ದೇಶಿಸುತ್ತದೆ. ಕುಟ್ಟುಂಬಿಟಿಅಣುಗಜೀವಿತದ ಒಟ್ಟರ್ಥವು ಕುಟುಂಬದ ಜೀವನನಿರ್ವಹಣೆಗಾಗಿ ಕೊಟ್ಟಕೊಡುಗೆ ಎಂದಾಗುತ್ತದೆ. ಹೀಗೆ ಅಣುಗವೃತ್ತಿಯಿಂದ ರಾಜನಿಗೂ ಅವನ ಆಶ್ರಿತಸಾಮಂತರಿಗೂ ಇದ್ದಂತಹ ಪ್ರೀತಿಪೂರ್ವಕ ಸಂಬಂಧವನ್ನು ಸೂಚಿಸುತ್ತದೆ. ಕ್ರಿ.ಶ. ೯೭೦ರಲ್ಲಿ ರಾಷ್ಟ್ರಕೂಟರ ಸಾಮಂತನಾದ ಗಂಗಮಾರಸಿಂಘ ಪೆರ್ಮಾನಡಿಯು ಅನೇಕ ನಾಡುಗಳನ್ನು ಅಣುಗಜೀವಿತವಾಗಿ ಆಳುತ್ತಿದ್ದಂತೆ ತಿಳಿದುಬರುತ್ತದೆ[೪೫]. ಕ್ರಿ.ಶ. ೯೭೩ರಲ್ಲಿ ರಾಷ್ಟ್ರಕೂಟರ ಇನ್ನೊಬ್ಬ ಸಾಮಂತನಾದ ತೈಲಪನು ತರ್ದವಾಡಿ-೧೦೦೦ವನ್ನು ಅಣುಂಗಜೀವಿತವಾಗಿ ಆಳುತ್ತಿದ್ದಂತೆ ಶಾಸನವೊಂದು ತಿಳಿಸುತ್ತದೆ[೪೬]. ಕ್ರಿ.ಶ. ೧೦೪೫ರ ಮೋರಿಗೇರಿ ಶಾಸನದಲ್ಲಿ ಬರುವಂತೆ ಚಾಲುಕ್ಯ ಅಹವಮಲ್ಲನ ಮಹಾಮಂಡಳೇಶ್ವರನಾದ ನನ್ನಿನೊಳಂಬ ಪಲ್ಲವಪೆರ್ಮಾನಡಿಯ ಮಹಾಮಂಡಳೇಶ್ವರನಾದ ದಂಡನಾಯಕ ತೀಕಣ್ಣನು ಆರು ಗ್ರಾಮಗಳನ್ನು ಅಣುಗಜೀವಿತವಾಗಿ ಆಳುತ್ತಿದ್ದುದಾಗಿ ತಿಳಿದುಬರುತ್ತದೆ[೪೭]. ಕ್ರಿ.ಶ. ೧೦೬೪ರಲ್ಲಿ ಚಾಲುಕ್ಯರ ಸಾಮಂತನಾದ ಹಾನಗಲ್ಲ ಕದಂಬ ಮಹಾಮಂಡಳೇಶ್ವರ ಜೇಮರಸನು ಕೆಲಗ್ರಾಮಗಳನ್ನು ಕುಟ್ಟುಂಬಿಟಿಯಣುಗಜೀವಿತವಾಗಿ ಆಳುತ್ತಿದ್ದನೆಂದು ತಿಳಿದುಬರುತ್ತದೆ[೪೮]. ಕ್ರಿ.ಶ. ೧೦೬೮ರ ಶಾಸನವೊಂದು ಚಾಲುಕ್ಯ ತ್ರೈಳೋಕ್ಯಮಲ್ಲನ ಮಾಂಡಳೀಕನಾದ ಲಕ್ಷ್ಮಣನೆಂಬುವನನ್ನು ಚಕ್ರವರ್ತಿಯ ಅಣುಗಾಳ್ ಎಂದು ಉಲ್ಲೇಖಿಸಿದೆ[೪೯]. ಕ್ರಿ.ಶ. ೧೧೦೨ರಲ್ಲಿನ ಸಿರಗುಪ್ಪ ಶಾಸನವು ನೊಳಂಬ ಮಹಾಮಂಡಳೇಶ್ವರ ತ್ರಿಭುವನಮಲ್ಲ ಪಾಂಡ್ಯರಸನು ಕುತ್ತುಂಬಿತ್ತಿ ಭತ್ತಗ್ರಾಮೆ . . . . . . ಮಾಡಿ ಆಳುತ್ತಿದ್ದನೆಂದು ಹೇಳಿದೆ[೫೦].

**ಮಹಾಮಂಡಳೇಶ್ವರರು:**

ಮಂಡಲದ ಆಡಳಿತವನ್ನು ನೋಡಿಕೊಳ್ಳುವವನು ಮಂಡಳೇಶ್ವರನಾಗುತ್ತಾನೆ. ಮಹಾಮಂಡಳೇಶ್ವರ ಎಂಬ ಶಬ್ದದ ಅರ್ಥ ವಿಸ್ತಾರವಾದ ಭೂಮಿಗೆ ಅಥವಾ ವಿಭಾಗಕ್ಕೆ ಒಡೆಯನೆಂದಾಗುತ್ತದೆ. ಅಲ್ಲದೇ ಕಿಟ್ಟೆಲ್‌ರು ಶಬ್ದಕೋಶದಲ್ಲಿ ಮಂಡಲದ ಅರ್ಥವನ್ನು ಪ್ರಾಂತ, ಪ್ರದೇಶ ಎಂದು ನೀಡಿದ್ದಾರೆ[೫೧]. ಮಹಾಮಂಡಳೇಶ್ವರ ಎಂಬುದಕ್ಕೆ

ಮಂಡಲಾಧಿಪತಿ, ಮಂಡಲೀಕ, ಮಂಡಲೇಶ ಎಂಬ ಪರ್ಯಾಯ ಪದಗಳುಂಟು. ಎಲ್ಲ ಮಹಾಮಂಡಳೇಶ್ವರರು ಒಂದೇ ವಿಧವಾದ ಗೌರವ ಹಾಗೂ ಆಡಳಿತವನ್ನು ಹೊಂದಿರದೇ, ಅವರು ತಮ್ಮ ಅಧಿಕಾರ ಮತ್ತು ಕಾರ್ಯವ್ಯಾಪ್ತಿಗನುಗುಣವಾಗಿ ಬೇರೆ ಬೇರೆ ಸ್ಥಾನಮಾನಗಳನ್ನು ಹೊಂದಿರುತ್ತಿದ್ದರು. ಅಂತಹ ಮೂರು ಪ್ರಕಾರಗಳನ್ನು ಡಾ.ಜೆ.ಎಂ.ನಾಗಯ್ಯನವರು ೧) ರಾಜವಂಶೀಯ ಮಹಾಮಂಡಳೇಶ್ವರರು, ೨) ಮಹಾಮಂಡಳೇಶ್ವರರ ಮಹಾಮಂಡಳೇಶ್ವರು ಮತ್ತು ೩) ಇತರ ಮಹಾಮಂಡಳೇಶ್ವರರು ಎಂದು ಗುರುತಿಸಿದ್ದಾರೆ[೨೨].

**೧) ರಾಜವಂಶೀಯ ಮಹಾಮಂಡಳೇಶ್ವರರು:**

ಇವರು ರಾಜವಂಶದಿಂದ ಬಂದವರಾಗಿರುತ್ತಾರೆ. ಇವರಲ್ಲಿ ಮತ್ತೆ ಎರಡು ಪ್ರಕಾರಗಳುಂಟು,

**ಅ) ಹಿಂದೆ ಚಕ್ರವರ್ತಿಗಳಾಗಿದ್ದವರು :** ಹಿಂದೆ ಚಕ್ರವರ್ತಿಗಳಾಗಿದ್ದವರು ಕೆಲಕಾಲದ ನಂತರ ಅಧಿಕಾರ ಕಳೆದುಕೊಂಡು ಬೇರೊಬ್ಬ ಚಕ್ರವರ್ತಿಗೆ ಮಹಾಮಂಡಳೇಶ್ವರರಾಗಿ ಮುಂದುವರೆದಿದ್ದಾರೆ. ಕದಂಬರು ಮೂಲತಃ ಚಕ್ರವರ್ತಿಗಳಾಗಿದ್ದು ನಂತರ ಅಧಿಕಾರ ಕಳೆದುಕೊಂಡು ಬಾದಾಮಿ ಚಾಲುಕ್ಯ, ರಾಷ್ಟ್ರಕೂಟ ಮತ್ತು ಕಲ್ಯಾಣ ಚಾಲುಕ್ಯರಿಗೆ ಮಹಾಮಂಡಳೇಶ್ವರರಾಗಿ ಆಳ್ವಿಕೆ ಕೈಕೊಂಡಿದ್ದಾರೆ. ಇದೇ ರೀತಿ ಬಾದಾಮಿ ಚಾಲುಕ್ಯರು ಕೂಡ ರಾಷ್ಟ್ರಕೂಟರಿಗೆ ಅಧೀನರಾಗಿ, ನಂತರ ಮುಂದೆ ರಾಷ್ಟ್ರಕೂಟರು ಕಲ್ಯಾಣಿಯ ಚಾಲುಕ್ಯರಿಗೆ ಕೆಲಕಾಲ ಅಧೀನರಾಗಿ ಆಳ್ವಿಕೆಯನ್ನು ನಡೆಸಿದ್ದಾರೆ.

**ಬ) ಆರಂಭದಿಂದಲೂ ಮಹಾಮಂಡಳೇಶ್ವರರಾಗಿದ್ದವರು:**

ರಾಜವಂಶೀಯ ಮಹಾಮಂಡಳೇಶ್ವರರಲ್ಲಿ ಕೆಲವರು ಆರಂಭದಿಂದಲೂ ಎಲ್ಲಾ ವಂಶದ ಚಕ್ರವರ್ತಿಗಳಿಗೆ ಮಹಾಮಂಡಳೇಶ್ವರಾಗಿದ್ದಾರೆ. ಉದಾಹರಣೆಗೆ ಗಂಗರು, ಶಿಲಾಹಾರ, ಸಾಂತರ, ಸಿಂದ, ಬಾಣ ಮುಂತಾದವರು. ಇವರು ತಮಗೆ ವಂಶಪರಂಪರಾಗತವಾಗಿ ಬಂದ ಭೂಪ್ರದೇಶವನ್ನು ಆಳುತ್ತಿದ್ದರಲ್ಲದೇ, ಕೆಲವೊಮ್ಮೆ ಚಕ್ರವರ್ತಿಗಳಿಂದ ಅವರ ಮನ್ನಣೆಗೆ ಪಾತ್ರರಾಗಿ ಹೆಚ್ಚಿನ ಭೂಪ್ರದೇಶಗಳನ್ನೂ ಪಡೆದಿದ್ದು ಉಂಟು. ಕೆಲವೊಮ್ಮೆ ವೈರಿಗಳನು ಹಿಮ್ಮೆಟ್ಟಿಸಿ ಅವರ ಪ್ರದೇಶಗಳನ್ನು ವಶಪಡಿಸಿಕೊಂಡು ತಮ್ಮ ಪ್ರದೇಶಗಳನ್ನು ವಿಸ್ತರಿಸಿಕೊಂಡಿದ್ದು ಉಂಟು. ಇವರು ಸಾಮಾನ್ಯವಾಗಿ ದೊಡ್ಡ ವಿಭಾಗಗಳಿಗೆ ಮುಖ್ಯಸ್ಥರಾಗಿರುತ್ತಿದ್ದರು.

**೨) ಮಹಾಮಂಡಳೇಶ್ವರರ ಮಹಾಮಂಡಳೇಶ್ವರು:**

ಕೆಲವರು ರಾಜವಂಶೀಯ ಮಹಾಮಂಡಳೇಶ್ವರಿಗೆ ಅಧೀನರಾಗಿ ಆಳುತ್ತಿದ್ದರು. ಅಂತಹವರು ಈ ಗುಂಪಿಗೆ ಸೇರುತ್ತಾರೆ. ಇವರು ಮಹಾಮಂಡಳೇಶ್ವರರಿಗೆ ಅಧೀನರಾಗಿದ್ದು ಚಿಕ್ಕ ಚಿಕ್ಕ ವಿಭಾಗಗಳ ಮುಖ್ಯಸ್ಥರಾಗಿ ಮಹಾಮಂಡಳೇಶ್ವರರಾಗಿ ಆಳ್ವಿಕೆ ನಡೆಸಿದ್ದಾರೆ. ಮಹಾಮಂಡಳೇಶ್ವರ ಎನ್ನುವದು ಮಂಡಳೇಶ್ವರ ಎನ್ನುವ ಪದವಿಗಿಂತ

ದೊಡ್ಡದು ಎಂಬುದು ಸ್ಪಷ್ಟವಾಗುತ್ತದೆ. ಒಬ್ಬ ಮಹಾಮಂಡಳೇಶ್ವರನ ಆಧೀನದಲ್ಲಿ ಹಲವಾರು ಮಂಡಳೇಶ್ವರರು ಇರುತ್ತಿದ್ದರೆಂದು ತಿಳಿಯುತ್ತದೆ. ಶ್ರೀಮನ್ಮಹಾಮಂಡಳೇಶ್ವರ ಜಗದೇಕಮಲ್ಲ ಮಲ್ಲದೇವನು ನಲವತ್ತುನಾಲ್ವರ್ ಮಂಡಳೀಕರ ತಲೆಗೊಂಡ ಗಂಡ ಎಂದು ಶಾಸನವೊಂದು ಉಲ್ಲೇಖಿಸಿದೆ[೫೩]. ಅಲ್ಲದೇ ಮಹಾಮಂಡಳೇಶ್ವರಿಗೆ ಮಂಡಳೇಶ್ವರರು ಕಪ್ಪ-ಕಾಣಿಕೆಗಳನ್ನು ನೀಡುತ್ತಿದ್ದಂತೆ ಶಾಸನವೊಂದರಿಂದ ತಿಳಿದುಬರುತ್ತದೆ[೫೪]. ಕ್ರಿ.ಶ. ೮ನೆಯ ಶತಮಾನದ ವರುಣದ ಶಾಸನವೊಂದು ತಿಳಿಸುವಂತೆ ಮಹಾಮಂಡಳೇಶ್ವರ ಗಂಗ ಶ್ರೀಪುರುಷನ ಮಹಾಮಂಡಳೇಶ್ವರನಾಗಿ ಚೊತ್ತಮನ್ ಎಂಬುವನು ಎಡತೊರೆ-೧೦೦೦ವನ್ನು ಆಳುತ್ತಿದ್ದನು[೫೫]. ಕ್ರಿ.ಶ. ೮ನೆಯ ಶತಮಾನದ ದೇವರಹಳ್ಳಿಯ ಶಾಸನವೊಂದು ತಿಳಿಸುವಂತೆ ಮಹಾಮಂಡಳೇಶ್ವರ ಗಂಗ ಶ್ರೀಪುರುಷನ ಮಹಾಮಂಡಳೇಶ್ವರನಾಗಿ ಬಾಣ ಪರಮಗೂಳನೆಂಬುವವನು ನಿರ್ಗುಂದ ವಿಷಯವನ್ನು ಪಾಲಿಸುತ್ತಿದ್ದನು[೫೬]. ಕ್ರಿ.ಶ. ೧೦೭೯ರ ಹಸೂರು ಶಾಸನದಲ್ಲಿ ಮಹಾಮಂಡಳೇಶ್ವರ ಬಿಬ್ಬರಸನಿಗೆ ಆಧೀನನಾಗಿ ಗೊಂಕನಾಡನ್ನು ಬಾಣವಂಶದ ಮಹಾಮಂಡಳೇಶ್ವರ ವೀರಗೊಂಕರಸನು ಆಳುತ್ತಿದ್ದ ವಿಷಯವಿದೆ[೫೭]. ಕ್ರಿ.ಶ. ೧೦೯೨ರಲ್ಲಿ ಮಹಾಮಂಡಳೇಶ್ವರ ಕಲಚೂರಿ ಜೋಗಮರಸನ ಮಹಾಮಂಡಳೇಶ್ವರನಾಗಿ ಶಿಲಾಹಾರ ಮನೆತನದ ಕವಿಲಾಸರಸನು ಕಾಣಿಸಿಕೊಂಡಿದ್ದಾನೆ[೫೮]. ಕ್ರಿ.ಶ. ೧೦೯೮ರ ಕಾದರವಳ್ಳಿ ಶಾಸನವು ಮಹಾಮಂಡಳೇಶ್ವರ ಗೋವೆಯ ಕದಂಬ ಗೂವಲದೇವನ ಪಾದಪದ್ಮೋಪಜೀವಿಯಾಗಿ ಕಾದರವಳ್ಳಿ-೩೦ನ್ನು ಆಳುತ್ತಿದ್ದ ಮಹಾಮಂಡಳೇಶ್ವರ ಅರಿಕೇಸರಿಯನ್ನು ಉಲ್ಲೇಖಿಸಿದೆ[೫೯]. ಕ್ರಿ.ಶ. ೧೧೦೩ರಲ್ಲಿ ಮಹಾಮಂಡಳೇಶ್ವರ ಬಿಬ್ಬರಸನ ಮಹಾಮಂಡಳೇಶ್ವರನಾಗಿ ಮಾಗರಸನು ರುದ್ರವಾಡಿ ಶಾಸನದಲ್ಲಿ ಕಂಡುಬರುತ್ತಾನೆ[೬೦]. ಕ್ರಿ.ಶ. ೧೧೦೩ರಲ್ಲಿ ಮಹಾಮಂಡಳೇಶ್ವರ ಗೋವೆಯ ಕದಂಬ ಗೂವಲದೇವನ ಮಹಾಮಂಡಳೇಶ್ವರನಾಗಿ ಹಾನಗಲ್ಲ ಕದಂಬ ಮಹಾಮಂಡಳೇಶ್ವರ ತೈಲಪದೇವನು ಹಾನಗಲ್-೫೦೦ ಮತ್ತು ಕೊಣ್ತಕುಳಿ-೩೦ನ್ನು ಆಳುತ್ತಿದ್ದನೆಂದು ಮುಕ್ಕಲ್ ಶಾಸನ ಉಲ್ಲೇಖಿಸಿದೆ[೬೧]. ಕ್ರಿ.ಶ. ೧೧೨೧ರ ಸೋಗಿ ಶಾಸನ ಹೇಳುವಂತೆ ಪಾಂಡ್ಯವಂಶದ ಮಹಾಮಂಡಳೇಶ್ವರ ತ್ರಿಭುವನಮಲ್ಲ ಪಾಂಡ್ಯದೇವನ ಮಹಾಮಂಡಳೇಶ್ವರನಾಗಿ ಕದಂಬ ಘಟ್ಟಿಯರಸನು ಕೋಗಳಿ-೫೦೦ರ ಆಡಳಿತ ನಡೆಸುತ್ತಿದ್ದನು[೬೨]. ಕ್ರಿ.ಶ. ೧೨ನೆಯ ಶತಮಾನದ ಕಂದಗಲ್ಲ ಶಾಸನದಲ್ಲಿ ಮಹಾಮಂಡಳೇಶ್ವರ ಪೆರ್ಮಾಡಿಯ ಮಹಾಮಂಡಳೇಶ್ವರನಾಗಿ ಗೋಮದೇವರಸನೆಂಬುವನು ಆಳುತ್ತಿದ್ದುದಾಗಿ ಉಲ್ಲೇಖಿಸಲಾಗಿದೆ[೬೩].

**೩) ಇತರ ಮಹಾಮಂಡಳೇಶ್ವರರು:**

ಇವರು ಸಣ್ಣ ವಿಭಾಗಕ್ಕೆ ಅಥವಾ ಕೆಲವು ಗ್ರಾಮಗಳಿಗೆ ಮಹಾಮಂಡಳೇಶ್ವರರಾಗಿದ್ದರು. ಇವರನ್ನು ಈ ಗುಂಪಿಗೆ ಸೇರಿಸಲಾಗಿದೆ. ಇವರು ಯಾವುದೇ ರಾಜವಂಶಕ್ಕೆ ಸೇರದೇ, ಚಕ್ರವರ್ತಿಗೆ ನಿಷ್ಠೆಯಿಂದ ಇದ್ದವರಾಗಿದ್ದು, ಯುದ್ಧಗಳಲ್ಲಿ ಅವರ ಪರವಾಗಿ ತಮ್ಮ ಜೀವದ ಹಂಗುತೊರೆದು ಹೋರಾಡಿ ಜಯಗಳಿಸಿಕೊಟ್ಟಿರುತ್ತಾರೆ. ಇಂತವರನ್ನು ಚಕ್ರವರ್ತಿಗಳು ಗೌರವಿಸಿ ಕೆಲ ಪ್ರದೇಶಗಳನ್ನು ನೀಡಿ ಮಹಾಮಂಡಳೇಶ್ವರರೆಂದು ನೇಮಿಸುತ್ತಿದ್ದನು. ಕ್ರಿ.ಶ. ೯೬೫ರ ಸೊರಬ ತಾಲೂಕಿನ

ಶಾಸನವೊಂದು ರಾಷ್ಟ್ರಕೂಟ ಕನ್ನರದೇವನ ಮಹಾಮಂಡಳೇಶ್ವರನಾಗಿ ಜವನೀಶನು ಬನವಾಸೆನಾಡನ್ನು ಆಳುತ್ತಿದ್ದನೆಂದು ಉಲ್ಲೇಖಿಸಿದೆ[೬೪]. ಕ್ರಿ.ಶ. ೯೭೨ರ ಬೆನ್ನೂರು ಶಾಸನದಲ್ಲಿ ರಾಷ್ಟ್ರಕೂಟ ಕಕ್ಕಲದೇವನಾಳ್ವಿಕೆಯಲ್ಲಿ ಅವನ ಮಹಾಮಂಡಳೇಶ್ವರನಾಗಿ ಬನವಾಸೆನಾಡನ್ನು ಚಟ್ಟಯ್ಯನೆಂಬುವನು ಆಳುತ್ತಿದ್ದನೆಂದು ತಿಳಿದುಬರುತ್ತದೆ[೬೫]. ಕ್ರಿ.ಶ. ೧೦೩೨ರಲ್ಲಿ ಬನವಾಸೆ-೧೨೦೦೦ನ್ನು ಮಹಾಮಂಡಳೇಶ್ವರ ಬ್ರಹ್ಮದೇವನೆಂಬುವನು ಆಳುತ್ತಿದ್ದುದಾಗಿ ಸಾರೆಕೊಪ್ಪದ ಶಾಸನ ತಿಳಿಸುತ್ತದೆ[೬೬]. ಕ್ರಿ.ಶ. ೧೦೬೪ರಲ್ಲಿ ಮಹಾಮಂಡಳೇಶ್ವರ ಜೇಮರಸನು ಪೊಟ್ಟಿಯೂರು, ಎಳವಟ್ಟಿ, ನಿಟ್ಟಸಿಂಗಿ, ಹಂಡಿಯೂರ ಮೊದಲಾದ ಬಾಡಗಳನ್ನಾಳುತ್ತಿದ್ದ ವಿಷಯ ತಿಳಿದುಬರುತ್ತದೆ[೬೭]. ಕ್ರಿ.ಶ. ೧೦೮೩ರ ಬಿಜಾಪೂರ ಶಾಸನದಲ್ಲಿ ಮಹಾಮಂಡಳೇಶ್ವರ ಭೀವಣದೇವನು ತರ್ದವಾಡಿ-೧೦೦೦ವನ್ನಾಳುತ್ತಿದ್ದ ಉಲ್ಲೇಖ ದೊರೆಯುತ್ತದೆ[೬೮]. ಕ್ರಿ.ಶ. ೧೧೧೨ರ ದಿಂಡವಾರ ಶಾಸನದಲ್ಲಿ ತರ್ದವಾಡಿ-೧೦೦೦ದಲ್ಲಿರುವ ದಿಂಡಾವೂರವನ್ನು ಮಹಾಮಂಡಳೇಶ್ವರ ಭೀಷಣದೇವರಸನು ಪರಿಪಾಲಿಸುತ್ತಿದ್ದನೆಂದು ಹೇಳಲಾಗಿದೆ[೬೯]. ಕ್ರಿ.ಶ. ೧೨೧೧ರ ಅಕ್ಕಲಕೋಟ ಶಾಸನವು ಯಾದವ ಸಿಂಘಣನ ಮಹಾಮಂಡಳೇಶ್ವರನಾದ ಕುಪ್ಪರಸನನ್ನು ಉಲ್ಲೇಖಿಸುತ್ತದೆ[೭೦]. ಕ್ರಿ.ಶ. ೧೩೨೨ರಲ್ಲಿ ಮಹಾಮಂಡಳೇಶ್ವರ ಕುಮಟಭೂದೇವ ಎಂಬುವನು ಹಣಿಯೂರಿನಿಂದ ಆಳ್ವಿಕೆ ನಡೆಸುತ್ತಿದ್ದನೆಂದು ಕ್ಯಾಗಟ್ಟದ ಶಾಸನ ಹೇಳಿದೆ[೭೧]. ಕ್ರಿ.ಶ. ೧೩೨೫ರ ಮದ್ದೂರಿನ ಶಾಸನದಲ್ಲಿ ಮಹಾಮಂಡಳೇಶ್ವರ ಕಮಲರಾಜನೆಂಬುವನು ಕಾಣಿಸಿಕೊಳ್ಳುತ್ತಾನೆ[೭೨].

**ಸಾಮಂತ ಮತ್ತು ಮಹಾಸಾಮಂತರು:**

ಶಾಸನಗಳಲ್ಲಿ ಸಾಮಂತ, ಮಹಾಸಾಮಂತ ಎಂಬ ಶಬ್ದಗಳು ಕಂಡುಬರುತ್ತವೆ. ಸಾಮಂತ ಎನ್ನುವ ಪದಕ್ಕೆ ಕನ್ನಡ ಸಾಹಿತ್ಯಪರಿಷತ್ತಿನ ನಿಘಂಟುವಿನಲ್ಲಿ ಒಬ್ಬ ರಾಜನಿಗೆ ಅಧೀನನಾಗಿರುವ ರಾಜ, ಮಾಂಡಲೀಕ ಎಂಬ ಅರ್ಥವಿದೆ[೭೩]. ಇದು ತೀರಾ ಸಾಮಾನ್ಯವಾದ ಸರಳವಾದ ಅರ್ಥವಾಗಿದೆ. ಮಹಾಸಾಮಂತ ಎಂಬುದರಲ್ಲಿ ಎರಡು ಪದಗಳಿವೆ. ಮಹಾ ಮತ್ತು ಸಾಮಂತ. ಸಾಮಂತ ಎಂಬುದು ಸಾಮ್ಯವಂತ(ಒಡೆಯ, ಒಡೆತನ ಪಡೆದವ), ಸಾಮಂತ, ಸಾವಂತ ಎಂದು ರೂಪಾಂತರ ಹೊಂದುತ್ತ ಬಂದಿದೆ. ಈ ಶಬ್ದಕ್ಕೆ ಗೌರವಸೂಚಕವಾಗಿ ಮಹಾ ಎಂಬ ವಿಶೇಷಣ ಸೇರಿ ಮಹಾಸಾಮಂತ ಎಂದಾಗಿದೆ. ಅಂದರೆ ಸಾಮಂತ ಮತ್ತು ಮಹಾಸಾಮಂತ ಎಂಬವುಗಳು ಒಂದೇ ಹುದ್ದೆಯನ್ನು ಸೂಚಿಸುತ್ತವೆ.

ಮಹಾಸಾಮಂತರಿಗೂ ಮಹಾಮಂಡಳೇಶ್ವರಿಗೂ ವ್ಯತ್ಯಾಸಗಳು ಕಂಡುಬರುತ್ತವೆ. ಮಹಾಮಂಡಳೇಶ್ವರರು ದೊಡ್ಡದಾದ ಕೆಲವೊಮ್ಮೆ ಚಿಕ್ಕ ಪ್ರಾಂತಗಳಿಗೆ ಒಡೆಯರಾಗಿದ್ದರೆ, ಇವರ ಕೆಳಗೆ ಮಹಾಸಾಮಂತರುಗಳು ಆಳುತ್ತಿದ್ದರು. ಈ ಮಹಾಸಾಮಂತರು ಮಹಾಮಂಡಳೇಶ್ವರಿಗೆ ಆಧೀನರಾಗಿ ಕೆಲಸ ಮಾಡಬೇಕಾಗುತ್ತಿತ್ತು. ಆದ್ದರಿಂದ ಇವರು ಮಹಾಮಂಡಳೇಶ್ವರರಿಗಿಂತ ಕಡಿಮೆ ಅಧಿಕಾರವ್ಯಾಪ್ತಿಯನ್ನು ಹೊಂದಿದ್ದರೆಂದು ಹೇಳಬಹುದು.

ಈ ಮಹಾಸಾಮಂತರುಗಳಲ್ಲಿ ಡಾ.ಜೆ.ಎಂ.ನಾಗಯ್ಯನವರು[೭೪] ಮತ್ತೆ ೧) ಆಳುವ ಮಹಾಸಾಮಂತರು ಮತ್ತು ೨) ಸುಂಕದ ಮಹಾಸಾಮಂತರು ಎಂದು ಎರಡು ಬಗೆಗಳನ್ನು ಗುರುತಿಸಿದ್ದಾರೆ.

### ೧) ಆಳುವ ಮಹಾಸಾಮಂತರು:

ಮಹಾಮಂಡಳೇಶ್ವರ ಕೈಕೆಳಗೆ ಚಿಕ್ಕ ವಿಭಾಗಗಳಿಗೆ ಒಡೆಯರಾಗಿ ಆಳುತ್ತಿದ್ದವರನ್ನು ಆಳುವ ಮಹಾಸಾಮಂತರ ಗುಂಪಿಗೆ ಸೇರಿಸಬಹುದು. ಇವರು ಸರ್ವಸ್ವತಂತ್ರರಾಗಿರದೇ, ಮಹಾಮಂಡಳೇಶ್ವರರ ಆಜ್ಞಾನುವರ್ತಿಗಳಾಗಿ ಆಳುತ್ತಿದ್ದರು. ಕೆಲವೊಮ್ಮೆ ಮಹಾಮಂಡಳೇಶ್ವರಿಗಿಂತಲೂ ಇವರು ಪ್ರಬಲರಾಗಿದ್ದ ಉದಾಹರಣೆಗಳು ಕಂಡುಬರುತ್ತವೆ. ಆದರೂ ಇವರು ಮಹಾಮಂಡಳೇಶ್ವರರಿಗೆ ಆಧೀನರಾಗಿದ್ದಾರೆ. ಕಲಿತನದಿಂದಕೂಡಿದ ಮಹಾಸಾಮಂತರುಗಳು ತಮ್ಮದೇ ಆದ ಸೈನ್ಯದ ತುಕಡಿಯನ್ನು ಹೊಂದಿರುತ್ತಿದ್ದರು. ಚಕ್ರವರ್ತಿ ಯುದ್ಧಕ್ಕೆ ಹೋಗುವಾಗ ಮಹಾಮಂಡಳೇಶ್ವರರು ತಮ್ಮ ಸೈನ್ಯದೊಂದಿಗೆ ಅವನ ಸಹಾಯಕ್ಕೆ ಹೋಗುತ್ತಿದ್ದರು. ಆಗ ಮಹಾಮಂಡಳೇಶ್ವರರು ತನ್ನ ಕೈಕೆಳಗಿನ ಎಲ್ಲ ಮಹಾಸಾಮಂತರನ್ನು ಮತ್ತು ಅವರ ಸೈನ್ಯಗಳನ್ನು ಸೇರಿಸಿಕೊಂಡು ಹೋಗುತ್ತಿದ್ದರು. ಸಾಮಾನ್ಯವಾಗಿ ರಣರಂಗದಲ್ಲಿ ಮುಂಚೂಣಿಯಲ್ಲಿ ನಿಂತು ಹೋರಾಡುವವರೆಂದರೆ ಈ ಮಹಾಸಾಮಂತರು ಹಾಗೂ ಅವರ ಭಟರರುಗಳಾಗಿದ್ದಾರೆ. ನಂತರ ಇವರ ಹಿಂದೆ ಮಹಾಮಂಡಳೇಶ್ವರರು, ಇನ್ನೂ ಹಿಂದೆ ಚಕ್ರವರ್ತಿಗಳು ಇರುತ್ತಿದ್ದರು.

ಆಳುವ ಮಹಾಸಾಮಂತರಲ್ಲಿಯೂ ರಾಜವಂಶೀಯ ಮತ್ತು ಇತರ ಮಹಾಸಾಮಂತರೆಂದು ಎರಡು ಬಗೆಗಳನ್ನು ಡಾ. ಜೆ.ಎಂ.ನಾಗಯ್ಯನವರು ಗುರುತಿಸಿದ್ದಾರೆ.

#### ಅ)ರಾಜವಂಶೀಯ ಮಹಾಸಾಮಂತರು:

ಇವರು ಮೊದಲು ಚಕ್ರವರ್ತಿಗಳಾಗಿದ್ದು ನಂತರ ಅಧಿಕಾರ ಕಳೆದುಕೊಂದಂಥವರು ಅಥವಾ ಬೇರೆ ರಾಜವಂಶದವರು ಮಹಾಸಾಮಂತರುಗಳಾಗಿ ಆಳ್ವಿಕೆ ನಡೆಸುತ್ತಿದ್ದರು. ಕ್ರಿ.ಶ. ೫೩೨-೩೩ರ ಗೋಕಾಕ ತಾಮ್ರಪಟಗಳಲ್ಲಿ ಬಾದಾಮಿ ಚಾಲುಕ್ಯರ ಸಾಮಂತನಾಗಿ ರಾಷ್ಟ್ರಕೂಟ ದೆಜ್ಜ ಮಹಾರಾಜನು ಕಾಣಿಸಿಕೊಳ್ಳುತ್ತಾನೆ[೭೫]. ಕ್ರಿ.ಶ. ೯೯೦-೯೧ ಸುಮಾರಿಗೆ ಚಾಲುಕ್ಯ ಎರಡನೆಯ ತೈಲಪನ ಸಾಮಂತನಾಗಿ ಸಿಂದರ ಪುಲಿಕಾಲನು ಬಾಗೆಡೆಗೆ ನಾಡನ್ನಾಳುತ್ತಿದ್ದನೆಂದು ಮಹಾಕೂಟದ ಶಾಸನ ತಿಳಿಸಿದೆ[೭೬]. ಕ್ರಿ.ಶ. ೧೦ನೆಯ ಶತಮಾನದ ವರುಣದ ಶಾಸನವೊಂದು ಚಾಲುಕ್ಯವಂಶದ ಮಹಾಸಾಮಂತ ದುರ್ಗನೆಂಬುವನನ್ನು ಉಲ್ಲೇಖಿಸುತ್ತದೆ[೭೭]. ಅದೇ ಕಾಲದ ಅದೇ ಸ್ಥಳದ ಇನ್ನೊಂದು ಶಾಸನದಲ್ಲಿಯೂ ಕೂಡ ಚಾಲುಕ್ಯವಂಶದ ಮಹಾಸಾಮಂತ ಗೊಗ್ಗಿ ಎಂಬುವನಾಳ್ವಿಕೆಯ ವಿವರಗಳೂ ತಿಳಿಯುತ್ತವೆ[೭೮]. ಕ್ರಿ.ಶ. ೧೦೭೧ರ ಹೂವಿನ ಹಡಗಲಿ ಶಾಸನದಲ್ಲಿ ಕದಂಬ ವಂಶದ ಮಹಾಸಾಮಂತ ಘಟ್ಟಿಯರಸನ ಉಲ್ಲೇಖ ಬರುತ್ತದೆ[೭೯]. ಕ್ರಿ.ಶ. ೧೦೭೭ರ ಕುಳೇಕುಮಟಗಿ ಶಾಸನ ತಿಳಿಸುವಂತೆ ಶಿಲಹಾರ ವಂಶದ ಮಹಾಸಾಮಂತ ಸಿಂಗರಸನು ಚಾಲುಕ್ಯರ ಆಧೀನನಾಗಿ ಆಳ್ವಿಕೆಯನ್ನು ಮಾಡಿದ್ದಾನೆ[೮೦]. ಕ್ರಿ.ಶ. ೧೦೮೭ರ ಮಹಾರಾಷ್ಟ್ರದ ನಾಗಪುರದ ಬಳಿ ಸಿತಾಬಲ್ದಿ ಶಾಸನದಲ್ಲಿ ರಾಷ್ಟ್ರಕೂಟ ವಂಶದ ಮಹಾಸಾಮಂತ ಶ್ರೀಧಾಡಿ ಆದೇವರಾಂಕ ಎಂಬುವನ ಉಲ್ಲೇಖ ಬರುತ್ತದೆ[೮೧]. ಕ್ರಿ.ಶ. ೧೨ನೆಯ ಶತಮಾನದ ಕಲ್ಯಾಣಿ ಚಾಲುಕ್ಯರ ಎರಡನೆಯ ಜಗದೇಕಮಲ್ಲನ ಮಹಾಸಾಮಂತನಾಗಿ ಸಿಂದ ಬೊಪ್ಪದೇವನು ಮುಳಗುಂದ-೧೨ನ್ನು ಆಳುತ್ತಿದ್ದನೆಂದು ತಿಳಿಯುತ್ತದೆ[೮೨].

ಬ) ಇತರ ಮಹಾಸಾಮಂತರು:

ಮಹಾಸಾಮಂತರುಗಳಾಗಿ ರಾಜವಂಶೀಯರಲ್ಲದವರೂ ಆಳ್ವಿಕೆಯನ್ನು ಮಾಡಿದ್ದಾರೆ ಅಂಥವರನ್ನು ಈ ಗುಂಪಿಗೆ ಸೇರಿಸಬಹುದು. ಇವರು ಮೊದಲು ಗಾವುಂಡರಾಗಿದ್ದು ನಂತರದಲ್ಲಿ ಪ್ರಭುಗಾವುಂಡ, ನಾಳ್ಗಾವುಂಡ, ಮುಂತಾಗಿ ಬಡ್ತಿ ಹೊಂದಿ, ಚಕ್ರವರ್ತಿಗಳಿಂದಲೋ ಅಥವಾ ಮಹಾಮಂಡಳೇಶ್ವರರಿಂದಲೋ ಮಹಾಸಾಮಂತರುಗಳಾಗಿ ನೇಮಕಗೊಂಡವರಾಗಿದ್ದಾರೆ. ಇದು ಅವರ ಸಾಮರ್ಥ್ಯ ಹಾಗೂ ಸೇವೆಗಳನ್ನು ಅವಲಂಬಿಸಿರುತ್ತದೆ. ಕ್ರಿ.ಶ. ೯೧೯ರ ಶಿಗ್ಗಾಂವ ಶಾಸನದಲ್ಲಿ ರಾಷ್ಟ್ರಕೂಟ ಮೂರನೆಯ ಇಂದ್ರನ ಮಹಾಸಾಮಂತನಾದ ಬಂಕೇಯರಸನು ೩೨೦೦೦ವನ್ನಾಳುತ್ತಿದ್ದುದಾಗಿ ಉಲ್ಲೇಖವಿದೆ[೩]. ಕ್ರಿ.ಶ. ೯೩೯ರ ಹೆಚ್ಚೆಯ ಶಾಸನವೊಂದು ರಾಷ್ಟ್ರಕೂಟ ಕನ್ನರದೇವನ ಮಹಾಸಾಮಂತ ಮಾಚಿಗನ ಉಲ್ಲೇಖ ಮಾಡುತ್ತದೆ[೪]. ಕ್ರಿ.ಶ. ೯೯೯ರಲ್ಲಿ ಚಾಲುಕ್ಯ ಸತ್ಯಾಶ್ರಯನ ಮಹಾಸಾಮಂತನಾಗಿ ಭೀಮನೆಂಬುವನು ಬನವಾಸೆ-೧೨೦೦೦ವನ್ನು ಆಳುತ್ತಿದ್ದುದಾಗಿ ತಿಳಿದುಬರುತ್ತದೆ[೫]. ಕ್ರಿ.ಶ. ೧೦೩೩ರಲ್ಲಿ ಚಾಲುಕ್ಯ ಜಯಸಿಂಹದೇವನ ಮಹಾಸಾಮಂತನಾಗಿ ಅಲ್ಲಯ್ಯದೇವ ಮತ್ತು ಆತನ ಮಗ ಜಯಸಿಂಗದೇವರು ಬನವಾಸಿ-೧೨೦೦೦ ಮತ್ತು ಸಾಂತಳಿಗೆ-೧೦೦೦ಗಳನ್ನಾಳುತ್ತಿದ್ದಂತೆ ಕುಪ್ಪಗಡ್ಡೆ ಶಾಸನದಲ್ಲಿ ಉಲ್ಲೇಖಿಸಲಾಗಿದೆ[೬]. ಕ್ರಿ.ಶ. ೧೦೪೨ರ ಆಚಾಪುರ ಶಾಸನವು ಚಾಲುಕ್ಯ ಜಗದೇಕಮಲ್ಲನ ಮಹಾಸಾಮಂತನಾಗಿ ಗೋಣರಸನು ಸಾಂತಳಿಗೆ-೧೦೦೦ವನ್ನು ಆಳುತ್ತಿದ್ದುದಾಗಿ ತಿಳಿಸಿದೆ[೭]. ಅಲ್ಲದೇ ಕ್ರಿ.ಶ. ೧೧೨೫ರ ಮುಗದದ ಶಾಸನವೊಂದರಲ್ಲಿ ಪಲಸಿಗೆ-೧೨೦೦೦ದ ಭಾಗವಾದ ಮಹಾರಾಜವಾಡಿನಾಡಿನ ಮುಗದ-೩೦ಕ್ಕೆ ಅಧಿಕಾರಿಯಾದ ನಾರ್ಗಾವುಂಡ ಚಿವುಣ್ಣನ ಮೊಮಕ್ಕಳನ್ನು ಮಹಾಸಾಮಂತ ಎಂದು ಉಲ್ಲೇಖಿಸಲಾಗಿದೆ[೮]. ಕ್ರಿ.ಶ. ೧೨೨೪ರಲ್ಲಿ ಹೊಯ್ಸಳ ಎರಡನೆಯ ನರಸಿಂಹನ ಮಹಾಸಾಮಂತ ಬಲ್ಲೆಯನಾಯಕನು ಕಬ್ಬಹುನಾಡನ್ನಾಳುತ್ತಿದ್ದನೆಂದು ಅಗ್ರಹಾರ ಬಾಚಹಳ್ಳಿಯ ಶಾಸನ ಹೇಳಿದೆ[೯]. ಕ್ರಿ.ಶ. ೧೩೦೫ರಲ್ಲಿ ಹೊಯ್ಸಳ ಮೂರನೆಯ ಬಲ್ಲಾಳನ ಮಹಾಸಾಮಂತನಾಗಿ ನಾಗಯ್ಯನೆಂಬುವನು ಕಂಡು ಬರುತ್ತಾನೆ[೧೦]. ಕ್ರಿ.ಶ. ೧೩೩೮ರ ಹಿರೇಗುಂಡಗಲ್ ಶಾಸನದ ಪ್ರಕಾರ ಹೊಯ್ಸಳ ಮೂರನೆಯ ಬಲ್ಲಾಳನ ಮಹಾಸಾಮಂತನಾಗಿ ಮಾಚಣ್ಣನೆಂಬುವನಿದ್ದನೆಂದು ತಿಳಿಯುತ್ತದೆ[೧೧].

೨) ಸುಂಕದ ಮಹಾಸಾಮಂತರು:

ಶಾಸನಗಳಲ್ಲಿ ಸುಂಕಸಂಗ್ರಹಿಸುವವರನ್ನು ಕೂಡ ಮಹಾಸಾಮಂತರೆಂದು ಕರೆಯಲಾಗಿದೆ. ಇವರು ಮಹಾಮಂಡಳೇಶ್ವರ, ಮಹಾಸಾಮಂತಾಧಿಪತಿ ಹಾಗೂ ಮಹಾಪ್ರಚಂಡದಂಡನಾಯಕರಿಗೆ ಅಧೀನರಾಗಿದ್ದುಕೊಂಡು ಸುಂಕವನ್ನು ಸಂಗ್ರಹಿಸುವ ಕೆಲಸವನ್ನು ನಿರ್ವಹಿಸುತ್ತಿದ್ದರು. ಇವರದು ಆಳುವ ಮಹಾಸಾಮಂತರಿಗೆ ಸಮನಾದ ದರ್ಜೆಯಾಗಿರಬಹುದು. ಹೀಗಾಗಿ ಇವರನ್ನೂ ಕೂಡ ಮಹಾಸಾಮಂತರೆಂದು ಕರೆಯಲಾಗಿದೆ. ಕ್ರಿ.ಶ. ೧೦೯೩ರಲ್ಲಿ ಕಲ್ಯಾಣ ಚಾಲುಕ್ಯರ ಸುಂಕದ ಮಹಾಸಾಮಂತನಾಗಿ ಚಾಮುಂಡರಸನು ಪೊಳಲ್ಗುಂದೆಯನ್ನು, ಸಪ್ತಾರ್ಧ ಲಕ್ಷೆಯೊಳಳ್ಲ

ವಂಕಗದ್ಯಾಣವನ್ನು, ಅರಮನೆಯಂಕಂಗಳನ್ನು ಜೀವಿತದಲ್ಲಿ ದಶವನ್ದವನ್ನು ಆಳುತ್ತಿದ್ದನು[೨]. ಕ್ರಿ.ಶ. ೧೧೦೮ರ ಅಸಗೋಡ ಶಾಸನದಿಂದ ತಿಳಿಯುವಂತೆ ಮಹಾಸಾಮಂತ ಸಿಂಧರಸನು ನೊಳಂಬವಾಡಿ-೩೨೦೦೦ದ ವಡ್ಡರಾವುಳದ ಸುಂಕವನ್ನು ಸಂಗ್ರಹಿಸುತ್ತಿದ್ದನು[೩].

**ಮನ್ನೆಯರು:**

ಶಾಸನಗಳಲ್ಲಿ ಹೆಚ್ಚಾಗಿ ಕಂಡುಬರುವ ಇನ್ನೊಂದು ಶಬ್ದವೆಂದರೆ ಮನ್ನೆಯ ಎಂಬುದಾಗಿದೆ. ಮಹಾಸಾಮಂತರುಗಳನ್ನೇ ಇಲ್ಲಿ ಮನ್ನೆಯರೆಂದು ಕೆಲವೊಮ್ಮೆ ಕರೆಯಲಾಗಿದೆ. ಮನ್ನೆಯ ಎಂದರೆ ಮನ್ನಣೆಗೆ ಅಥವಾ ಗೌರವಕ್ಕೆ ಪಾತ್ರನಾದವನು ಎಂದು ಅರ್ಥ. ಚಕ್ರವರ್ತಿ ಅಥವಾ ಮಹಾಮಂಡಳೇಶ್ವರರಿಂದ ಮಾನ್ಯತೆಯನ್ನು ಹೊಂದಿ ಆಳ್ವಿಕೆ ನಡೆಸುತ್ತಿದ್ದವರು ಬಹುಷಃ ಮನ್ನೆಯರಾಗಿರಬಹುದು. ಈ ಮನ್ನೆಯರನ್ನೇ ಮುಂದೆ ಮಹಾಸಾಮಂತರುಗಳನ್ನಾಗಿ ಬಡ್ತಿ ನೀಡುತ್ತಿರಬಹುದು. ಹೀಗಾಗಿ ಶಾಸನಗಳಲ್ಲಿ ಮನ್ನೆಯ ಮಹಾಸಾಮಂತರುಗಳೆಂದು ಇಂಥವರನ್ನು ಕರೆಯಲಾಗಿದೆ. ಹೀಗೆ ಮನ್ನೆಯ ಎಂಬ ಶಬ್ದವು ಮಹಾಸಾಮಂತರಿಗೆ ಅನ್ವಯಿಸುತ್ತಿದ್ದುದು ಸ್ಪಷ್ಟವಾಗುತ್ತದೆ. ಕೆಲವೊಮ್ಮೆ ಈ ಶಬ್ದವು ಮಹಾಮಂಡಳೇಶ್ವರಿಗೂ ಕಂಡುಬರುತ್ತದೆ. ಬಹುಷಃ ಇವರು ಮೊದಲು ಮನ್ನೆಯರಾಗಿದ್ದು, ನಂತರದಲ್ಲಿ ಮಹಾಮಂಡಳೇಶ್ವರಾಗಿ ಬಡ್ತಿಹೊಂದಿರಬಹುದು. ಹೀಗಾಗಿ ಮೊದಲು ಅವರಿಗೆ ರೂಢಿಯಲ್ಲಿದ್ದ ಮನ್ನೆಯ ಎಂಬ ಪದವು ಈಗಲೂ ಬಳಕೆಗೊಂಡಿರಬಹುದು. ಕೆಲವೊಮ್ಮೆ ಮನ್ನೆಯರು ಅವಿಧೇಯತೆ ತೋರಿದರೆ, ಚಕ್ರವರ್ತಿಯು ಅವನನ್ನು ಅಧಿಕಾರದಿಂದ ತೆಗೆದುಹಾಕಿದ ಉದಾಹರಣೆಗಳುಂಟು. ಬಹುಷಃ ಈ ಅಧಿಕಾರ ಚಕ್ರವರ್ತಿಗೆ ಮಾತ್ರ ಮೀಸಲಾಗಿರಬೇಕು. ಗಂಡರಾದಿತ್ಯನಪೊಳಲಿನ ಮಹಾಜನರು ಮನ್ನೆಯ ಬೊಪ್ಪಯನು ಮಾಡಿ ಹೀನ ಕೆಲಸವನ್ನು ಚಕ್ರವರ್ತಿಗೆ ಹೇಳಿದಾಗ ಅವನು ಬೊಪ್ಪಯನನ್ನು ಮನ್ನೆಯತ್ವದಿಂದ ವಜಾಮಾಡಿದ್ದು ಕ್ರಿ.ಶ. ೧೧೦೪ರ ಕುರುವತ್ತಿಯ ಶಾಸನವೊಂದರಲ್ಲಿ ಕಂಡುಬರುತ್ತದೆ[೪].

ಕ್ರಿ.ಶ. ೧೦೪೫ರ ಹಾವಿನಾಳ ಶಾಸನವು ಸಿಂದ ಉದಯಾದಿತ್ಯದೇವನನ್ನು ಮನ್ನೆಯ ಮಹಾಸಾಮಂತನೆಂದು ಉಲ್ಲೇಖಿಸಿದೆ[೫]. ಕ್ರಿ.ಶ. ೧೦೬೩ರ ಸಾಲಗುಂದೆ ಶಾಸನದಲ್ಲಿ ಸಿಂದ ಚೋಕರಸನನ್ನು ಮನ್ನೆಯನೆಂದು ಕರೆಯಲಾಗಿದೆ[೬]. ಕ್ರಿ.ಶ. ೧೦೭೧ರಲ್ಲಿನ ಹೂವಿನ ಹಡಗಲಿಯ ಶಾಸನದಲ್ಲಿ ಘಟ್ಟಿಯರಸನನ್ನು ಶ್ರೀಮನ್ಮಹಾಸಾಮಂತ ಮನ್ನೆಯಂ ಎಂದು ಉಲ್ಲೇಖಿಸಲಾಗಿದೆ[೭]. ಕ್ರಿ.ಶ. ೧೦೭೬ರ ಕುರುವ ಗ್ರಾಮದ ಶಾಸನದಲ್ಲಿ ಮಹಾಸಾಮಂತ ನೊಟ್ಟಿಘಟ್ಟಿಯಣ್ಣನು ಮಂಡಲಿ-೧೦೦೦ದ ಕಂಪಣ ಚೀಲೂರುಬಳ್ಳಿ-೩೦ರ ಪ್ರವಿಷ್ಟವಾದಕೋಟೆಪುರದಲ್ಲಿ ಸುಖವಾಗಿ ಆಳುತ್ತಿದ್ದನೆಂದು ಹೇಳಲಾಗಿದೆ[೮]. ಕ್ರಿ.ಶ. ೧೦೯೧-೯೨ರ ಸಿರಗುಪ್ಪ ಶಾಸನದಲ್ಲಿ ಚೋಕರಸನನ್ನು ಶ್ರೀಮನ್ಮಹಾಸಾಮಂತ ಮನ್ನೆಯ ಚೋಕರಸರು ಎಂದು ಉಲ್ಲೇಖಿಸಲಾಗಿದೆ[೯]. ಕ್ರಿ.ಶ. ೧೧೦೨ರ ಸಿರಗುಪ್ಪ ಶಾಸನವೊಂದು ಸಿಂದ ಬೀವರಸನನ್ನು ಮನ್ನೆಯನೆಂದು ಕರೆದಿದೆ[೦೦]. ಕ್ರಿ.ಶ. ೧೧೦೫-೦೬ರ ಶಿವಮೊಗ್ಗ ತಾಲೂಕಿನ ಶಾಸನವೊಂದರಲ್ಲಿ ಗೊಳ್ಳರಸನನ್ನು

ಶ್ರೀಮನ್ಮಹಾಸಾಮಂತ ಎಡವಲೆ-೭೦ರ ಮನ್ನೆಯ ಬಮ್ಮರಸನ ಮಗಂ ಮನ್ನೆಯಗೊಳ್ಳರಸ ಎಂದು ಹೇಳಲಾಗಿದೆ[೧೦೧]. ಕ್ರಿ.ಶ. ೧೧೦೬ರ ಶಾಸನವೊಂದು ಅಣ್ಣಮರಸನು ಸಾಸಿರನಾಡ ಮನ್ನೆಯನಾಗಿದ್ದನೆಂದೂ, ಮಾಕರಸನು ಇಪ್ಪತ್ನಾಲ್ಕು ಬಾಡದ ಮನ್ನೆಯನಾಗಿದ್ದನೆಂದು ತಿಳಿಸಿದೆ[೧೦೨]. ಕ್ರಿ.ಶ. ೧೧೧೪ರ ಸಾತೇನಹಳ್ಳಿಯ ಶಾಸನದಲ್ಲಿ ಸಾಮನ್ತ ಬನ್ದಣಿಕೆಯ ಬೊಪ್ಪರಸನ ಉಲ್ಲೇಖ ದೊರೆಯುತ್ತದೆ[೧೦೩]. ಕಾಗಿನೆಲೆಯ ಕ್ರಿ.ಶ. ೧೧೨೧ರ ಶಾಸನದಿಂದ ಕಲಿಯಮ್ಮರಸನೆಂಬುವನು ಬಾಸವೂರ-೧೪೦ರ ಮನ್ನೆಯದರಸುಗೈಯ್ಯುತ್ತಿದ್ದನೆಂದು ತಿಳಿದುಬರುತ್ತದೆ[೧೦೪]. ಕ್ರಿ.ಶ. ೧೧೨೫ರ ಚೆನ್ನಗಿರಿ ಶಾಸನದಲ್ಲಿ ಮಹಾಸಾಮಂತ ಸೋಮರಸನು ಬಿಳಿಚೆ-೭೦ರಲ್ಲಿ ಮನ್ನೆಯವನ್ನು ಸಧರ್ಮದಿಂದ ಪಾಲಿಸುತ್ತಿದ್ದನೆಂದು ಉಲ್ಲೇಖಿಸಲಾಗಿದೆ[೧೦೫]. ಕ್ರಿ.ಶ. ೧೧೨೫ರ ನರಸಾಪುರಂ ಶಾಸನವು ಆ್ರಹರಸನೆಂಬುವನು ಕುಣಿಯಕಲ್ಲು-೩೦೦ರ ಉಪವಿಭಾಗವಾದ ಬಂಗಿಚೇರು-೩೦ರ ಮನ್ನೆಯನಾಗಿದ್ದನೆಂದು ತಿಳಿಸಿದೆ[೧೦೬].

**ಸಾಮಂತರುಗಳ ರಾಜಚಿನ್ಹೆಗಳು:**

ಆಧೀನ ರಾಜಮನೆತನಗಳು ತಮ್ಮದೇ ಆದ ರಾಜಚಿನ್ಹೆಗಳನ್ನು ಮತ್ತು ಪಂಚಮಹಾಶಬ್ದಗಳ ಗೌರವವನ್ನು ಹೊಂದಿರುತ್ತಿದ್ದವು. ಇರುಗಳೆ, ಗುಡಿ, ಚಾಮರ, ಮೇಘಾಡಂಬರಾದಿಗಳು ರಾಜಚಿನ್ಹೆಗಳೆಂದು ಶಾಸನವೊಂದು ತಿಳಿಸುತ್ತದೆ. ಇವು ಬಹುಷಃ ಎಲ್ಲ ರಾಜರುಗಳಿಗೂ ಸಮಾನವಾದವುಗಳು. ಒಂದೊಂದು ರಾಜಮನೆತನವೂ ತನ್ನದೇ ಆದ ವಾದ್ಯ, ಧ್ವಜ ಮತ್ತು ಲಾಂಛನಗಳನ್ನು ಹೊಂದಿತ್ತು. ಬಾಣರು ಪೈಶಾಚಿಕಪಹಟವಾದ್ಯವನ್ನು, ಕೃಷ್ಣಧ್ವಜವನ್ನು, ವೃಷಭಲಾಂಛನವನ್ನು ಹೊಂದಿದ್ದರು[೧೦೭]. ಗಂಗರು ಪಿಂಛಧ್ವಜವನ್ನು ಮತ್ತು ಮದಗಜಲಾಂಛನವನ್ನು ಹೊಂದಿದ್ದರು[೧೦೮]. ಗೋವೆಯ ಕದಂಬರು ಸಿಂಹಲಾಂಛನ, ವಾನರಧ್ವಜವನ್ನು ಹೊಂದಿದ್ದರು[೧೦೯]. ಮಹಾಮಂಡಳೇಶ್ವರ ಮಂಗರಸನು ಕಂಬಳಪರೆವಾದ್ಯ, ಶಿಖಿಶಿಖಾಧ್ವಜ ಮತ್ತು ಸಿಂಹಲಾಂಛನಗಳನ್ನು ಉಪಯೋಗಿಸುತ್ತಿದ್ದನು[೧೧೦]. ಗುತ್ತರು ಮಕರಧ್ವಜವನ್ನು, ಮೃಗಲಾಂಛನವನ್ನು ಹೊಂದಿದ್ದರು[೧೧೧]. ಅಲ್ಲದೇ ಗುತ್ತವಂಶದ ಮಹಾಸಾಮಂತ ಚಂದ್ರಹಾಸನು ಮೃಗರಾಜಲಾಂಛನವನ್ನು, ವಟವೃಕ್ಷಧ್ವಜವನ್ನು ಹಾಗೂ ಧೈರ್ಯಗರುಡಧ್ವಜವನ್ನು ಹೊಂದಿದ್ದನು[೧೧೨]. ರಾಷ್ಟ್ರಕೂಟರ ಸಾಮಂತರಾದ ಚೆಲ್ಲಕೇತನರು ಚಲ್ಲವತಾಕ ಧ್ವಜವನ್ನು ಹೊಂದಿದ್ದರು[೧೧೩]. ಮಹಾಮಂಡಳೇಶ್ವರ ಚಿದ್ದಣಚೋಳನು ಪಂಪರೆಘೋಷಣವಾದ್ಯ, ಮಯೂರಸಿಂಘಧ್ವಜ ಮತ್ತು ಸಿಂಹಲಾಂಛನಗಳನ್ನಿಟ್ಟುಕೊಂಡಿದ್ದನು[೧೧೪]. ಹಾನಗಲ್ಲ ಕದಂಬರು ಪೆರ್ಮಟ್ಟಿತೂರ್ಯನಿರ್ಘೋಷಣಂವಾದ್ಯ, ಶಾಖಾಚರೇಂದ್ರಧ್ವಜ ಹಾಗೂ ಸಿಂಹಲಾಂಚನವನ್ನುಳ್ಳವರಾಗಿದ್ದರು[೧೧೫]. ಮಹಾಮಂಡಳೇಶ್ವರ ದಶವರ್ಮದೇವರಸನು ಮಕರಕೇತನ, ವೃಷಭಧ್ವಜ, ಅಶ್ವತ್ಥಭೂಜಧ್ವಜ, ಪೆರ್ಮಟ್ಟಿಪರೆವಾದ್ಯ ಮತ್ತು ವ್ಯಾಘ್ರಮೃಗಲಾಂಛನಗಳನ್ನು ಉಪಯೋಗಿಸುತ್ತಿದ್ದನು[೧೧೬]. ಮಹಾಮಂಡಳೇಶ್ವರ ವಿಜಯಾದಿತ್ಯದೇವನು ಹಯಲಾಂಛನ ಹಾಗೂ ದರ್ಪಣಧ್ವಜವನ್ನು ಹೊಂದಿದ್ದನು[೧೧೭].

ಪಂಚಮಹಾಶಬ್ದ ಅಥವಾ ವಾದ್ಯಗಳ ಗೌರವವು ಮಹಾಮಂಡಳೇಶ್ವರ ಹಾಗೂ ಸಾಮಂತರುಗಳಿಗೆ ಮಾತ್ರ ಮೀಸಲಾದುದಾಗಿತ್ತು. ರಾಜ್ಯ ಸೂಚಕವಾಗಿದ್ದ ಪಂಚಮಹಾವಾದ್ಯ ಅಥವಾ ಪಂಚಮಹಾಶಬ್ದಗಳ ಪ್ರಸಕ್ತಿಯು ಶಾಸನಗಳಲ್ಲಿ ದೊರೆಯುತ್ತದೆ[೧೧೮]. ಅಲ್ಲದೇ ಈ ಪಂಚಮಹಾಶಬ್ದಗಳ ಕುರಿತು ಪಂಪಭಾರತದಲ್ಲಿ "ಸಮನೆನಿಸುವರ್ ಪ್ರಶಸ್ತಿಕ್ರಮದೊಳ್ ಸ್ವಸ್ತಿ ಸಮಧಿಗತ ಪಂಚಮಹಾಶಬ್ದ ಮಹಾಸಾಮಂತರೆನಲ್ ಸಮನೆನಿಪರೆ ಗುಣದೊಳರಿಗನೊಳ್ ಸಾಮಂತರ್" ಎಂದು ಹೇಳಲಾಗಿದೆ[೧೧೯]. ಪಂಚಮಹಾಶಬ್ದವೆಂದರೆ ಮಹಾ ಎಂದು ಪ್ರಾರಂಭವಾಗುವ ಐದು ಬಿರುದುಗಳೆಂದೂ, ವಾದ್ಯವನ್ನು ಐದು ಸಲ ಬಾರಿಸುವದೆಂದು ಅನೇಕ ಬಗೆಯಾಗಿ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ[೨೦]. ಅಲ್ಲದೇ ಎಫ್.ಎಸ್.ಗ್ರೌಸ್‌ರು ಹೇಳುವಂತೆ ಪಂಚಮಹಾವಾದ್ಯಗಳು ಐದುರೀತಿಯ ವಾದ್ಯಗಳನ್ನು ಸೂಚಿಸುತ್ತವೆಂದು ತುಲಸೀರಾಮಾಯಣದ ಆಧಾರದ ಮೇಲೆ ನಿರ್ಧರಿಸಿದ್ದಾರೆ[೨೧]. ಆದರೆ ಕೆ.ಬಿ.ಪಾಠಕರು ಈ ಅಭಿಪ್ರಾಯಗಳನ್ನು ಪುಷ್ಟೀಕರಿಸಿ ನಿಜಗುಣಶಿವಯೋಗಿಯ ವಿವೇಕಚಿಂತಾಮಣಿಯ ಆಧಾರದ ಮೇಲೆ ಶೃಂಗ, ತಮ್ಮಟ, ಶಂಖ, ಭೇರಿ, ಜಯಘಂಟಾ ಎಂಬುವುಗಳೇ ಆ ಐದು ಮಹಾವಾದ್ಯಗಳೆಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ[೨೨]. ಆದರೆ ಕ್ರಿ.ಶ. ೧೧೯೨ರ ಶಾಸನವೊಂದು ತಿಳಿಸುವಂತೆ ತಿವರಿ, ದಟ್ಟ, ಖಂಡಿಕೆ, ಜಯಘಂಟೆ, ಕಹಳೆಗಳು ಪಂಚಮಹಾವಾದ್ಯಗಳಾಗಿವೆ[೨೩]. ಪಂಚಮಹಾವಾದ್ಯಗಳ ಬಗ್ಗೆ ವಿಸ್ತಾರವಾದ ಲೇಖನವನ್ನು ಬರೆದ ಡಾ.ವಿ.ರಾಘವನ್ ಅವರು ಕಲ್ಹಣನು ಪಂಚಮಹಾಶಬ್ದವು ಐದು ಅಧಿಕಾರಗಳನ್ನು ಸೂಚಿಸುವದೆಂದು ಹೇಳುತ್ತಾ, ಆ ಐದು ಅಧಿಕಾರಗಳ ಪಟ್ಟಿಯನ್ನು ನೀಡಿದ್ದನ್ನು ಉಲ್ಲೇಖಿಸಿ, ಪಂಚಮಹಾವಾದ್ಯಗಳ ಗೌರವವು ಮಹಾಮಂಡಳೇಶ್ವರ ಹಾಗೂ ಸಾಮಂತರಾಜರುಗಳಿಗೆ ಮೀಸಲಾಗಿದ್ದು, ಬಳಿಕ ಅವರ ಅಧಿಕಾರಗಳನ್ನು ಸೂಚಿಸುವದಕ್ಕೆ ಕಲ್ಹಣನು ಆ ಶಬ್ದಗಳನ್ನು ಬಳಸಿಕೊಂಡಿರಬಹುದೆಂದು ಅಭಿಪ್ರಾಯಪಟ್ಟಿದ್ದಾರೆ. ಅಲ್ಲದೇ ಅವರ ಪಂಚಮಹಾಶಬ್ದಗಳಲ್ಲಿ ಐದೂ ವಾದ್ಯಗಳೇ ಆಗಿರಬೇಕಾಗಿಲ್ಲ, ಅವುಗಳಲ್ಲಿ ನಾಲ್ಕು ವಾದ್ಯಗಳಾಗಿದ್ದು, ಐದನೆಯದು ಮನುಷ್ಯನ ಧ್ವನಿಯಾಗಿರಬಹುದು ಎಂದಿದ್ದಾರೆ[೨೪]. ಒಟ್ಟಿನಲ್ಲಿ ಈ ಪಂಚಮಹಾವಾದ್ಯವು ಮಹಾಸಾಮಂತ ಅಥವಾ ಮಹಾಮಂಡಳೇಶ್ವರಿಗೆ ಸಲ್ಲುವಂತಹ ಗೌರವವಾಗಿದೆ.

ಹೀಗೆ ವಿಸ್ತಾರವಾದ ಸಾಮ್ರಾಜ್ಯವನ್ನು ಚಕ್ರವರ್ತಿಯೊಬ್ಬನಿಂದಲೇ ನೋಡಿಕೊಳ್ಳುವದು ಅಸಾಧ್ಯವಾದ್ದರಿಂದ ಸಾಮ್ರಾಜ್ಯವನ್ನು ಅನೇಕ ವಿಭಾಗಗಳನ್ನಾಗಿ ವಿಂಗಡಿಸುತ್ತಿದ್ದರು. ಹೀಗೆ ವಿಭಾಗಿಸಲಾದ ಮಂಡಲಗಳಿಗೆ ವಂಶಪಾರಂಪರ್ಯದಿಂದ ಬಂದ ಮಹಾಮಂಡಳೇಶ್ವರರು, ಮಹಾಸಾಮಂತರು, ಸಾಮಂತರು ಮತ್ತು ಮನ್ನೆಯರನ್ನು ಮುಂದುವರೆಯಲು ಅನುಮತಿಸುತ್ತಿದ್ದನು. ಕೆಲವೊಮ್ಮೆ ಮಾತ್ರ ಹೊಸ ಅಧಿರಾಜರುಗಳನ್ನು ಅವರ ಸಾಮರ್ಥ್ಯಕ್ಕನುಗುಣವಾಗಿ ನೇಮಕಮಾಡುತ್ತಿದ್ದನು. ಹೆಗ್ಗಡೆದೇವನಕೋಟೆ ತಾಲೂಕಿನ ಶಾಸನವೊಂದರಲ್ಲಿ ಕುಡಿಯರ ಒಡೆಯನೂ, ನುಗುನಾಡ ಅಧಿಪತಿಯೂ ಆದ ರಂಗನೆಂಬುವನಿಗೆ ಚೋಳಚಕ್ರವರ್ತಿಯು ಸತ್ತಿಗೆ, ಶಂಖ, ಝಲ್ಲಳಿ

ಮುಂತಾದವುಗಳನ್ನು ನೀಡಿ ಮಂಡಳಿಕ ಪದವಿಯನ್ನು ದಯಪಾಲಿಸಿದ ವಿವರ ದೊರೆಯುತ್ತದೆ[೧೨೫]. ಆದರೆ ಎಲ್ಲ ವಿಷಯಗಳಲ್ಲಿ ಸ್ವಾತಂತ್ರ್ಯವನ್ನು ಹೊಂದಿದ್ದರೂ ಕೂಡ ಪ್ರತಿವರ್ಷ ತಪ್ಪದೇ ಚಕ್ರವರ್ತಿಗಳಿಗೆ ಕಪ್ಪ-ಕಾಣಿಕೆ ನೀಡಬೇಕಿತ್ತು. ಒಂದುವೇಳೆ ಕಪ್ಪ-ಕಾಣಿಕೆ ನೀಡದೇ, ಅಧೀನತೆಯನ್ನು ಒಪ್ಪಿಕೊಳ್ಳದೇ ಹೋದರೆ, ಚಕ್ರವರ್ತಿಯು ಇಂಥವರನ್ನು ಸದೆಬಡಿಯಲು ತನ್ನ ಬೇರೆ ಮಹಾಮಂಡಳೇಶ್ವರನ್ನು ಕಳಿಸುತ್ತಿದ್ದನು.

ಅಧಿರಾಜರ ಮೇಲೆ ಸದಾ ಒಂದುಕಣ್ಣಿಟ್ಟರಲು ಚಕ್ರವರ್ತಿಯು ಅವರ ಮೇಲೆ ತನ್ನ ಪುತ್ರರನ್ನೋ ಸಹೋದರರನ್ನೋ ಅಥವಾ ರಾಜಮನೆತನದ ಸದಸ್ಯರನ್ನೋ ನೇಮಿಸುತ್ತಿದ್ದನು. ಉದಾಹರಣೆಗೆ ಚಾಲುಕ್ಯ ಒಂದನೆಯ ಸೋಮೇಶ್ವರನು ಆಳುತ್ತಿದ್ದಾಗ ಅವನ ಮಗ ವಿಕ್ರಮಾದಿತ್ಯನು ಬನವಾಸಿ-೧೨೦೦೦ ಮತ್ತು ಗಂಗವಾಡಿ-೯೬೦೦೦ಗಳ ಮೇಲೆ ನೇಮಕಗೊಂಡಿದ್ದನು[೧೨೬]. ಯುದ್ಧದ ಸಮಯದಲ್ಲಿ ಇವರು ತಮ್ಮ ಚಕ್ರವರ್ತಿಗಳ ಸಹಾಯಕ್ಕೆ ಹೋಗಿ ಅನೇಕ ದೇಶಗಳನ್ನು ಗೆದ್ದುಕೊಟ್ಟಿದ್ದು ಕಂಡುಬರುತ್ತದೆ[೧೨೭]. ಇದಕ್ಕಾಗಿಯೇ ಕೆಲವು ಸಾಮಂತರುಗಳನ್ನು ಚಕ್ರವರ್ತಿಯು ಕಟ್ಟಿಕೊಂಡ ನೆಚ್ಚಿನ ಅಲಗುಗಳೆಂದು ಕರೆಯಲಾಗಿದೆ[೧೨೮].

ಸಾಮಂತರ ಆಳ್ವಿಕೆಯನ್ನು ಪರಿಶೀಲಿಸಿದಾಗ ಅವರ ಆಳ್ವಿಕೆಗೊಳಪಟ್ಟ ಪ್ರದೇಶಗಳು ಒಂದು ಚಿಕ್ಕ ಸಾಮ್ರಾಜ್ಯದಂತಿದ್ದುದು ಕಂಡುಬರುತ್ತದೆ. ಅವರು ತಮ್ಮಾಳ್ವಿಕೆಯ ಪ್ರದೇಶಗಳಲ್ಲಿ ಚಕ್ರವರ್ತಿಗಳಿಗಿದ್ದ ಸ್ಥಾನಮಾನ, ಗೌರವಗಳನ್ನು ಹೊಂದಿ, ಸ್ವತಂತ್ರ ರಾಜರಂತೆ ವರ್ತಿಸುತ್ತಿದ್ದರು. ಚಕ್ರವರ್ತಿಗಳಿಗೆ ಅಧೀನರಾಗಿದ್ದರೂ ಕೂಡ ಇವರು ತಮ್ಮ ಆಡಳಿತದ ಅನುಕೂಲಕ್ಕಾಗಿ ಮಂತ್ರಿಮಂಡಲ, ಅಧಿಕಾರಿವರ್ಗ, ಸೈನ್ಯ ಮುಂತಾದವುಗಳನ್ನು ಹೊಂದಿರುತ್ತಿದ್ದರು.

**ರಾಜ:**

ಸಾಮಂತ ಅರಸರುಗಳು ತಮ್ಮನ್ನು ಅರಸ, ರಾಜ, ಚಕ್ರವರ್ತಿಯೆಂದು ಕರೆದುಕೊಂಡಿದ್ದಾರೆ. ಕಾರಣ ಅವರು ತಮ್ಮ ಆಳ್ವಿಕೆಗೊಳಪಟ್ಟ ಪ್ರದೇಶಗಳಲ್ಲಿ ರಾಜರುಗಳಂತೆ ವರ್ತಿಸುತ್ತಿದ್ದರು. ಗಂಗ ಭೂತುಗನನ್ನು ಶಾಸನಗಳಲ್ಲಿ ಭೂತರಸ ಎಂದು ಕರೆಯಲಾಗಿದೆ[೧೨೯]. ಅಲ್ಲದೇ ಗಂಗ ನೀತಿಮಾರ್ಗ ಪೆರ್ಮಾನಡಿಯನ್ನು ಮಹಾರಾಜಾಧಿರಾಜ ಎಂದು ಕರೆಯಲಾಗಿದೆ[೧೩೦]. ಅದೇ ರೀತಿ ಸಿಂದ ಪೆರ್ಮಾಡಿಯನ್ನು ಪೆರ್ಮಾಡಿಯರಸ ಎಂದು ಉಲ್ಲೇಖಿಸಲಾಗಿದೆ[೧೩೧]. ಕದಂಬ ಎರಡನೆಯ ಜಯಕೇಶಿಯ ಶಾಸನವೊಂದರಲ್ಲಿ ಅವನನ್ನು ಕೊಂಕಣಚಕ್ರವರ್ತಿ ಎಂದು ಸಂಬೋಧಿಸಲಾಗಿದೆ[೧೩೨].

ಪ್ರಜೆಗಳನ್ನು ರಕ್ಷಿಸದವನು ರಾಜನೇ ಅಲ್ಲ (ಸಕಿಂ ರಾಜಾಯೋನ ರಕ್ಷತಿ ಪ್ರಜಾಃ)[೧೩೩]. ಪ್ರಜಾಪಾಲನೆಯೇ ರಾಜನ ನಿಜವಾದ ಯಜ್ಞ (ಪ್ರಜಾಪಾಲನಂ ಹಿ ರಾಜ್ಞಃ ಯಜ್ಞಃ) ಮತ್ತು ಕ್ಷತ್ರಿಯನು ವರ್ಣಾಶ್ರಮತೀ ಪಶುಹಿರಣ್ಯಧಾನ್ಯಫಲದಾ, ಅಂದರೆ ಪೃಥ್ವಿಯು ವರ್ಣಾಶ್ರಮ ರೂಪ ಸಾಮಾಜಿಕ ವ್ಯವಸ್ಥೆಯಿಂದ ಕೂಡಿದ್ದು, ಪ್ರಜೆಗಳ ಜೀವನ ಸಮೃದ್ಧಿಯನ್ನು ಮಾಡುತ್ತದೆ. ಇಂಥಹ ಭೂಮಿಯನ್ನು ಪರಿಪಾಲನೆಯನ್ನು ರಾಜನಾದವನು ಮಾಡಬೇಕು ಎಂದು ಸೋಮದೇವ ಸೂರಿ ತನ್ನ ನೀತಿವಾಕ್ಯಾಮೃತ ಗ್ರಂಥದಲ್ಲಿ ಹೇಳಿದ್ದಾನೆ[೧೩೪]. ಈ ನಿಯಮಕ್ಕನುಗುಣವಾಗಿ ಸಾಮಂತರಾಜರುಗಳೂ ಕೂಡ ದುಷ್ಟನಿಗ್ರಹ ಶಿಷ್ಟಪ್ರತಿಪಾಳನೆಯಿಂದ ಆಳುತ್ತಿದ್ದರೆಂದು ತಿಳಿದುಬರುತ್ತದೆ[೧೩೫].

ಪ್ರಜೆಗಳು ಸೇರಿ ರಾಜನನ್ನು ಆಯ್ಕೆ ಮಾಡುತ್ತಿದ್ದರೆಂದು ಋಗ್ವೇದದ ಒಂದು ಮಂತ್ರ ವಿವರಿಸುತ್ತದೆ[೧೩೬]. ಅಥರ್ವವೇದದಲ್ಲಿಯೂ ಕೂಡ ಒಂದು ಶ್ಲೋಕವು ಚುಣಾವಣೆಯ ಸಂಪೂರ್ಣ ಗೀತೆಯಾಗಿದೆ. ಮಂತ್ರಿಗಳು ಪ್ರಜೆಗಳು ಕೂಡಿ ರಾಜನನ್ನು ಆಯ್ಕೆಮಾಡುತ್ತಿದ್ದರೆಂದು ಉಲ್ಲೇಖ ದೊರೆಯುತ್ತದೆ[೧೩೭]. ಆದರೆ ನಮ್ಮ ಅಧ್ಯಯನದ ಅವಧಿಗಾಗಲೇ ಈ ಪದ್ಧತಿ ಜಾರಿಯಲ್ಲಿಲ್ಲದೇ ರಾಜನು ಆನುವಂಶಿಕವಾಗಿ ಆಯ್ಕೆಯಾಗುತ್ತಿದ್ದನು. ಹಾಗೇಯೇ ಸಾಮಂತರುಗಳಲ್ಲಿ ಕೂಡ ಅನುವಂಶಿಕ ರಾಜಪದ್ಧತಿ ಇತ್ತು. ಸಿಂಹಾಸನವು ತಂದೆಯಿಂದ ಹಿರಿಯಮಗನಿಗೆ ಬರುತ್ತಿತ್ತು. ಹಿರಿಯಮಗನನ್ನು ಮೊದಲು ಯುವರಾಜನನ್ನಾಗಿ ನೇಮಿಸಿ ಅವನಿಗೆ ಶಸ್ತ್ರ-ಶಾಸ್ತ್ರ ವಿದ್ಯೆಗಳ ತರಬೇತಿಯನ್ನು ನೀಡಲಾಗುತ್ತಿತ್ತು. ಅರಸನ ಮರಣದ ನಂತರ ಅವನನ್ನು ರಾಜನನ್ನಾಗಿ ನೇಮಿಸಲಾಗುತ್ತಿತ್ತು.

ಕೆಲವು ಸಲ ರಾಜನಿಗೆ ಮಕ್ಕಳಿಲ್ಲದಿದ್ದರೆ, ಹಿರಿಯಮಗನು ಅಸಮರ್ಥನಿದ್ದರೆ ಅವನ ಉಳಿದಮಕ್ಕಳಲ್ಲಿ ಯಾರಾದರೊಬ್ಬರನ್ನು ಅಥವಾ ಅವನ ಸಹೋದರನ್ನು ಕೆಲವೊಮ್ಮೆ ಅವನ ಸಂಬಂಧಿಗಳು ರಾಜರಾಗಿದ್ದುದು ಕಂಡುಬರುತ್ತದೆ. ಗಂಗ ಒಂದನೆಯ ಕೊಂಗುಣಿವರ್ಮನಿಗೆ ಮಕ್ಕಳಿಲ್ಲದ ಕಾರಣ ಅವನ ಸಹೋದರ ದಢಿಗನ ಮಗ ಎರಡನೆಯ ಮಾಧವ ಅಥವಾ ಕಿರಿಯ ಮಾಧವನು ಅವನ ಉತ್ತರಾಧಿಕಾರಿಯಾದನು. ಅಲ್ಲದೇ ಆತನು ನೀತಿಶಾಸ್ತ್ರ ಮತ್ತು ಉಪನಿಷದ್‌ಗಳಲ್ಲಿ ಪಾರಂಗತನಾಗಿದ್ದನೆಂದು ತಿಳಿಯುತ್ತದೆ[೧೩೮]. ರಟ್ಟರ ಎರಗನ ಮರಣದ ನಂತರ ಅವನ ಮಗ ಒಂದನೆಯ ಸೇನ ಅಪ್ರಾಪ್ತವಯಸ್ಕನಾಗಿದ್ದರಿಂದ ಎರಗನ ಸಹೋದರ ಅಂಕ ಅಥವಾ ಅಂಕಪಾಲನು ಆಳ್ವಿಕೆಗೆ ಬಂದನು[೧೩೯]. ಹಾನಗಲ್ಲ ಕದಂಬ ಒಂದನೆಯ ಕೀರ್ತಿವರ್ಮನ ನಂತರ ಅವನ ಸಹೋದರನಾದ ಎರಡನೆಯ ಚತ್ತಯ್ಯದೇವನು ಆಳ್ವಿಕೆ ನಡೆಸಿದನು. ಸಿಂದರ ಎರಡನೆಯ ಭೀಮನ ಸಹೋದರನಾದ ಒಂದನೆಯ ರಾಚಮಲ್ಲನು ಅಣ್ಣನಾಳ್ವಿಕೆಯಲ್ಲಿಯೇ ರಾಜ್ಯಭಾರ ಕೈಕೊಂಡಿದ್ದನ್ನು ಶಾಸನಗಳು ಉಲ್ಲೇಖಿಸಿವೆ.

**ಪಟ್ಟಾಭಿಷೇಕ:**

ಯುವರಾಜನು ರಾಜನಾಗಿ ಆಳ್ವಿಕೆಯನ್ನು ಕೈಕೊಳ್ಳುವದಕ್ಕಿಂತ ಮುಂಚೆ ಆತನಿಗೆ ಪಟ್ಟಾಭಿಷೇಕ ಮಹೋತ್ಸವ ನಡೆಯುತ್ತದೆ. ಈ ಸಮಾರಂಭಕ್ಕೆ ಪಟ್ಟಬಂಧ, ಪಟ್ಟಬಂಧೋತ್ಸವ, ವೀರಪಟ್ಟಬದ್ಧ ಶುಭಾಭಿಷೇಕ, ಮಹೋತ್ಸವ, ರಾಜಾಭಿಷೇಕವೆಂದು ಮುಂತಾಗಿ ಕರೆಯಲಾಗಿದೆ[೧೪೦]. ವೈದಿಕ ಸಂಪ್ರದಾಯದ ಪ್ರಕಾರ ಈ ಉತ್ಸವವು ನಡೆಯುತ್ತಿತ್ತು. ಪಟ್ಟಾಭಿಷೇಕ ನಡೆಯುವಾಗ ರಾಜನು ಬೆಲೆಬಾಳುವ ವಜ್ರ, ವೈಢೂರ್ಯ, ಬಂಗಾರದ ಆಭರಣಗಳಿಂದಲಂಕೃತನಾಗಿರುತ್ತಿದ್ದನು. ಪಂಡಿತರ ವೇದಪಠಣದೊಂದಿಗೆ ರಾಜನ ಸಿಂಹಾಸನಾರೋಹಣ ಉತ್ಸವವು ನಡೆಯುತ್ತಿತ್ತೆಂದು ಸೋಮದೇವಸೂರಿಯು ತನ್ನ ನೀತಿವಾಖ್ಯಾಮೃತದಲ್ಲಿ ಹೇಳಿದ್ದಾನೆ[೧೪೧]. ಪಟ್ಟಾಭಿಷೇಕದ ಕಾಲದಲ್ಲಿ ಅರಸನ ಸಭಾಗೃಹವು ಸಂಗೀತಗಾರರು, ನೃತ್ಯಗಾರರು, ಮಂತ್ರಿಗಳು, ಅವನ ಆಧೀನಅಧಿಕಾರಿಗಳು, ಕವಿಪುಂಗವರು, ಮಹಾಪಂಡಿತರು ಇತ್ಯಾದಿ ಜನಗಳಿಂದ ಕೂಡಿರುತ್ತಿತ್ತು. ಸಭಾಗೃಹದ ಹೊರಗಡೆ ಕಾಲ್ದಳ, ಅಶ್ವದಳ, ಗಜದಳ

ಸೈನ್ಯವಿರುತ್ತಿತ್ತು ಎಂದು ತಿಳಿದುಬರುತ್ತದೆ[೧೪೨]. ಪಟ್ಟಾಭಿಷೇಕದ ಸಮಯದಲ್ಲಿ ಅರಸನ ಮುಖ್ಯರಾಣಿಯು ಕೂಡ ಅವನೊಂದಿಗಿರುತ್ತಿದ್ದಳಲ್ಲದೇ, ಅವನೊಂದಿಗೆ ಅವಳಿಗೂ ಕೂಡ ಪಟ್ಟಾಭಿಷೇಕವಾಗುತ್ತಿತ್ತು. ಹೀಗಾಗಿ ಅವಳನ್ನು ಕೂಡ ಪಟ್ಟಮಹಿಷಿ ಎಂದು ಕರೆಯಲಾಗುತ್ತಿತ್ತು. ಈ ಸಮಯದಲ್ಲಿ ರಾಜರು ಬ್ರಾಹ್ಮಣರಿಗೆ ಮತ್ತು ದೇವಾಲಯಗಳಿಗೆ ದಾನ-ದತ್ತಿಗಳನ್ನು ನೀಡುತ್ತಿದ್ದುದಾಗಿಯೂ ತಿಳಿದುಬರುತ್ತದೆ. ಕ್ರಿ.ಶ. ೯ನೆಯ ಶತಮಾನದ ಉದಿಯಾವರದ ಶಾಸನವೊಂದು ತಿಳಿಸುವಂತೆ ಪೃಥ್ವೀಸಾಗರನು ಉದಯಪುರದಲ್ಲಿ ಪಟ್ಟಾಭಿಷಕ್ತನಾಗಿದ್ದನ್ನು ತಿಳಿಸುತ್ತದೆ[೧೪೩]. ಕ್ರಿ.ಶ. ೧೧ನೆಯ ಶತಮಾನದ ಹರದೂರು ಶಾಸನವು ಕೊಂಗಾಳ್ವ ಮುಂಜನ ಪಟ್ಟಾಭಿಷೇಕವನ್ನು ತಿಳಿಸುತ್ತಾ, ಪಟ್ಟಾಭಿಷೇಕದ ಸಮಯದಲ್ಲಿ ಮಾಲವ್ವಿ ಎಂಬ ಗ್ರಾಮವನ್ನು ನಾಡಕೊಡುಗೆಯೆಂದು ಬಿಟ್ಟದ್ದನ್ನು ಉಲ್ಲೇಖಿಸಿದೆ[೧೪೪]. ಮಹಾಮಂಡಳೇಶ್ವರ ಶಾಂತಾರ ತ್ರೈಲಪದೇವ ಭುಜಬಲಶಾಂತಾರನು ಪಟ್ಟವನ್ನು ಕಟ್ಟಿಸಿಕೊಂಡು, ಹೊಂಬುಚದ ತೀರ್ಥದ ಬಸದಿಗೆ ದತ್ತಿಯನ್ನು ಬಿಟ್ಟ ವಿಷಯ ಕ್ರಿ.ಶ. ೧೦೭೭ರ ಹುಂಚದ ಶಾಸನವೊಂದು ತಿಳಿಸುತ್ತದೆ[೧೪೫]. ಕೊಂಗಾಳ್ವ ರಾಜೇಂದ್ರಚೋಳನಿಗೆ ಪದ್ಮಲದೇವಿಯೆಂಬ ಪಟ್ಟದರಸಿಯಿದ್ದ ಉಲ್ಲೇಖ ಮುಳ್ಳೂರು ಶಾಸನದಿಂದ ದೊರೆಯುತ್ತದೆ[೧೪೬]. ಕ್ರಿ.ಶ. ೧೧೫೩ರ ಉಮರಾಣಿಯ ಶಾಸನ ಶಿಲಾಹಾರ ಮಹಾಮಂಡಳೇಶ್ವರ ಹೆಮ್ಮಾಡಿದೇವರಸನ ಪಟ್ಟಮಹಾದೇವಿ ಚಂದಲದೇವಿಯಾಗಿದ್ದಳೆಂದು ತಿಳಿಸುತ್ತದೆ[೧೪೭]. ಅಲ್ಲದೇ ಕದಂಬ ಮಹಾಮಂಡಳೇಶ್ವರ ಎರಡನೆಯ ಜಯಕೇಶಿಯ ಪಟ್ಟಮಹಾದೇವಿ ಮೈಳಲಮಹಾದೇವಿಯ ಉಲ್ಲೇಖ ಮದನಭಾವಿ ಶಾಸನದಲ್ಲಿದೆ[೧೪೮]. ಮಹಾಮಂಡಳೇಶ್ವರ ಸಿಂದ ಚಾವುಂಡರಸನ ಪಟ್ಟಮಹಾದೇವಿಯಾದ ದೇಮಲದೇವಿಯನ್ನು ಅರಸೀಬೀದಿ ಶಾಸನ ತಿಳಿಸುತ್ತದೆ[೧೪೯].

**ಯುವರಾಜ:**

ತನ್ನ ಜೀವಿತದ ಅವಧಿಯಲ್ಲಿ ರಾಜನು ತನ್ನ ಉತ್ತರಾಧಿಕಾರಿಯನ್ನಾಗಿ ರಾಜಕುಮಾರನನ್ನು ಆರಿಸುತ್ತಿದ್ದನು. ಅವರನ್ನು ಯುವರಾಜರೆಂದು ಕರೆಯಲಾಗುತ್ತಿತ್ತು. ಸಾಮಂತ ಅರಸರುಗಳು ಸಾಮಾನ್ಯವಾಗಿ ಯುವರಾಜನ ಆಯ್ಕೆಯಲ್ಲಿ ಅನುವಂಶಿಕತೆಯನ್ನು ಅನುಸರಿಸುತ್ತಿದ್ದರು. ಇದಕ್ಕೆ ಅಪವಾದವೆಂಬಂತೆ ಕೆಲವೊಮ್ಮೆ ಸಮರ್ಥ ವ್ಯಕ್ತಿಯನ್ನು ಯುವರಾಜನನ್ನಾಗಿ ನೇಮಿಸಲಾಗುತ್ತಿತ್ತು. ಹಾನಗಲ್ಲ ಕದಂಬ ಕೀರ್ತಿವರ್ಮದೇವನ ಕಾಲದಲ್ಲಿ ಆತನ ತಮ್ಮನಾದ ಚತ್ತಯ್ಯದೇವನು ಯುವರಾಜನಾಗಿ ಬನವಾಸಿಯಲ್ಲಿ ರಾಜ್ಯವಾಳುತ್ತಿದ್ದನೆಂದು ತಿಳಿದುಬರುತ್ತದೆ[೧೫೦]. ಗಂಗರ ಶ್ರೀವಿಕ್ರಮನ ಕಾಲದಲ್ಲಿ ಅವನ ಮಗನಾದ ಭೂವಿಕ್ರಮನು ಯುವರಾಜನಾಗಿ 'ಕೋಲಾಲನಾಡ'ನ್ನು ಕ್ರಿ.ಶ. ೭೦೮ರಲ್ಲಿ ಆಳುತ್ತಿದ್ದನೆಂದು ತಿಳಿದುಬರುತ್ತದೆ[೧೫೧]. ಕ್ರಿ.ಶ. ೮೭೦-೭೧ರ ಹುಸುಕೂರು ಶಾಸನ ಗಂಗ ಎರಡನೆಯ ರಾಜಮಲ್ಲನ ಆಳ್ವಿಕೆಯ ಕಾಲದಲ್ಲಿ ಯುವರಾಜ ಭೂತುಗನು ಕೊಂಗಳನಾಡು ಮತ್ತು ಪುನ್ನಾಡುಗಳನ್ನಾಳುತ್ತಿದ್ದುದಾಗಿ ಉಲ್ಲೇಖಿಸಿದೆ[೧೫೨]. ರಾಷ್ಟ್ರಕೂಟ ಸಾಮಂತ ಚೆಲ್ಲಕೇತನ ಬಂಕೇಯನು ತನ್ನ ಆಡಳಿತದ ಅವಧಿಯಲ್ಲಿ ತನ್ನ ಮಗನಾದ ಕುಂದಟ್ಟೆಯನ್ನು ಯುವರಾಜನನ್ನಾಗಿಸಿ, ಅವನನ್ನು ಚೆಂಚಲ-೫೦ ಮತ್ತು ನಿಡಗುಂದಗೆ-೧೨ರ ಅಧಿಕಾರವನ್ನು

ನೋಡಿಕೊಳ್ಳಲು ನೆಮಿಸಿದ್ದನು[೧೫೩]. ಹಾನಗಲ್ಲ ಕದಂಬ ಕೀರ್ತಿವರ್ಮದೇವನು ಬನವಾಸಿ ಪನ್ನಿಚ್ಛಾಸಿರವನ್ನು ಆಳುತ್ತಿರುವಾಗ ಆತನ ತಮ್ಮನಾದ ಚತ್ತಯ್ಯದೇವನು ಯುವರಾಜನಾಗಿ ಬನವಾಸಿಯಲ್ಲಿ ರಾಜ್ಯವಾಳುತ್ತಿದ್ದನೆಂದು ತಿಳಿದುಬರುತ್ತದೆ[೧೫೪]. ಗೋವೆಯ ಕದಂಬ ಮಹಾಮಂಡಳೇಶ್ವರ ಎರಡನೆಯ ಜಯಕೇಶಿಯ ಯುವರಾಜನಾಗಿ ಪೆರ್ಮಾಡಿದೇವನು ಭೋಗೂರು ನೆಲೆವೀಡಿನಲ್ಲಿ ರಾಜ್ಯಗೈಯುತ್ತಿದ್ದನೆಂದು ತಿಳಿಯುತ್ತದೆ[೧೫೫].

ಹೀಗೆ ಸಾಮಂತ ಅರಸರುಗಳು ಕೂಡ ಸಮರ್ಥನಾದ ರಾಜಕುಮಾರನನ್ನು ಯುವರಾಜನನ್ನಾಗಿ ನೇಮಿಸಿ, ಅವನಿಗೆ ಕೆಲ ಪ್ರದೇಶಗಳ ಮೇಲೆ ಆಡಳಿತ ನಿರ್ವಹಿಸುವ ಜವಾಬ್ದಾರಿಯನ್ನು ನೀಡಿ, ಅದರ ಮೂಲಕ ಅವರು ಆಡಳಿತದಲ್ಲಿ ತರಬೇತಿಯನ್ನು ಹೊಂದಿ, ಮುಂದೆ ರಾಜ್ಯವಾಳಲು ಸಮರ್ಥರಾಗುವಂತೆ ಕ್ರಮಕೈಕೊಳ್ಳುತ್ತಿದ್ದರು.

**ರಾಣಿಯರು:**

ಸಾಮಂತ ಅರಸರುಗಳ ರಾಣಿಯರು ಅವರೊಂದಿ ಎಲ್ಲ ಧಾರ್ಮಿಕ, ಸಾಮಾಜಿಕ ಕಾರ್ಯಗಳಲ್ಲಿ ಭಾಗವಹಿಸುತ್ತಿದ್ದರು. ಕೆಲವೊಮ್ಮೆ ಅವರು ಆಡಳಿತ ಕ್ಷೇತ್ರದಲ್ಲಿಯೂ ಮಿಂಚಿದಂತಹ ಉದಾಹರಣೆಗಳಿವೆ. ಅವರು ಸ್ವತಂತ್ರವಾಗಿ ಆಡಳಿತ ನಡೆಸಿ, ದೇವಾಲಯಗಳಿಗೆ ಮತ್ತು ಬ್ರಾಹ್ಮಣರಿಗೆ ದಾನವನ್ನು ಕೊಡಮಾಡಿದ ವಿಷಯ ಶಾಸನಗಳಿಂದ ವಿಧಿತವಾಗುತ್ತದೆ. ಅಲ್ಲದೇ ಸಾಮಂತ ರಾಜರುಗಳು ಕೂಡ ಚಕ್ರವರ್ತಿಗಳಂತೆ ಬಹುಪತ್ನಿಯರನ್ನು ಹೊಂದಿರುವದು ವೈಭವದ ಸಂಕೇತವಾಗಿತ್ತು. ಕೆಲವೊಮ್ಮೆ ಸಮಕಾಲೀನ ಅರಸುಮನೆತನಗಳೊಂದಿಗೆ ವೈವಾಹಿಕ ಸಂಬಂಧಗಳನ್ನು ರಾಜಕೀಯ ಭದ್ರತೆಗಾಗಿಯೂ ಕೈಕೊಳ್ಳುತ್ತಿದ್ದರು. ರಾಣಿಯರಲ್ಲಿ ಪಿರಿಯರಸಿ, ಪಟ್ಟಮಹಾದೇವಿ ಹಾಗೂ ರಾಣಿಯರೆಂದು ಮೂರು ಗುಂಪುಗಳಿದ್ದುದು ಶಾಸನಗಳ ಅಧ್ಯಯನದಿಂದ ತಿಳಿಯುತ್ತದೆ. ಪಿರಿಯರಸಿಯು ಹಿರಿಯ ರಾಣಿಯಾಗಿದ್ದು, ಇವಳಿಗೆ ಮಕ್ಕಳಾದರೆ ಪಿರಿಯರಸಿ ಪಟ್ಟಮಹಾದೇವಿಯೆನಿಸುತ್ತಾಳೆ. ಒಂದು ವೇಳೆ ಅವಳಿಗೆ ಮಕ್ಕಳಿಲ್ಲದಿದ್ದರೆ ಕೇವಲ ಪಿರಿಯರಸಿಯಾಗಿಯೆ ಉಳಿದು ಮಕ್ಕಳಿದ್ದ ಮುಂದಿನ ರಾಣಿಯು ಪಟ್ಟಮಹಾದೇವಿಯೆನಿಸುತ್ತಿದ್ದಳು. ಪಟ್ಟದರಾಣಿ ಎಂಬುದು ರಾಜನಂತೆ ಒಂದು ಪದವಿಯಾಗಿದ್ದು, ಅವಳ ಸ್ಥಾನ ಇತರ ರಾಣಿಯರಿಗಿಂತ ಹಿರಿದಾಗಿತ್ತು. ರಾಜನು ತನ್ನ ರಾಣಿಯರನ್ನು ರಾಜ್ಯದ ಬೇರೆ ಬೇರೆ ಭಾಗಗಳಿಗೆ ಆಳ್ವಿಕೆಯನ್ನು ನಡೆಸಲು ನೇಮಿಸುತ್ತಿದ್ದನು. ಕ್ರಿ.ಶ. ೮೩೭ರಲ್ಲಿ ಗಂಗರ ಭೂತುಗನ ರಾಣಿಯಾದ ರೇವಕ ನಿರ್ಮಡಿ ಸ್ವತಂತ್ರ ರಾಜ್ಯಭಾರ ಮಾಡಿದಂತೆ ಉಲ್ಲೇಖಗಳಿವೆ. ಇವಳು ಎಡದೊರೆ, ತುಳ್ವು, ಸೆಂಗಳ ಪ್ರದೇಶಗಳ ಮೇಲ್ವಿಚಾರಣೆ ಮಾಡುತ್ತಿದ್ದಳೆಂದು ಕೆಸರಭಾವಿ ಶಾಸನದಿಂದ ತಿಳಿದುಬರುತ್ತದೆ[೧೫೬]. ಕ್ರಿ.ಶ. ೯೧೮ ರಲ್ಲಿ ಸಾಮಂತ ನಾಗಾರ್ಜುನನ ರಾಣಿ ಜಕ್ಕಿಯಬ್ಬೆಯು ಅವನ ಮರಣದ ನಂತರ ನಾಗರಖಂಡವನ್ನು ಸಮರ್ಥವಾಗಿ ಆಳಿದಳು[೧೫೭]. ಕ್ರಿ.ಶ.ಸು. ೯೨೦ರಲ್ಲಿ ಗಂಗ ಭೂತುಗನ ಅರಸಿ ಸಮರಬ್ಬೆಯು ಕುರ್ಗ್ಗಲ್ಲನ್ನು ಆಳುತ್ತಿದ್ದಂತೆ ಶಾಸನವೊಂದು ಉಲ್ಲೇಖಿಸಿದೆ[೧೫೮]. ಕ್ರಿ.ಶ. ೯೯೯-೧೦೦೦ರ ಶಾಸನವೊಂದು ಗಂಗ ನೀತಿಮಾರ್ಗ ಪೆರ್ಮಾನಡಿ ಗೋವಿಂದರಸನ ರಾಣಿ ಪ್ರಿಥುವಬ್ಬರಸಿಯನ್ನು ಮನೋನಯನವಲ್ಲಭೆ,

ನೊಳಂಬವಂಶೋದ್ಭವೆ ಪಲ್ಲವಕುಲತಿಲಕೆ ಸಮ್ಯಕ್ತರೋಹಿಣಿ ಕಲಿಕಾಲರುಗಿಣಿ ಪತಿವ್ರತ ಮಹೀನುತೆ ಧರ್ಮಚಿನ್ತಾಮಣಿ ಸತ್ಯವಿಳಾಸಿನಿ ಎಂದು ಕರೆದಿದೆ[೫೯]. ಕ್ರಿ.ಶ. ೧೦೫೦ರ ಶಾಸನಗಳು ಕದಂಬ ಮಹಾಮಂಡಳೇಶ್ವರ ಮಯೂರವರ್ಮನ ರಾಣಿಯಾದ ಅಕ್ಕಾದೇವಿಯು ಕಿಸುಕಾಡು-೭೦, ಬಾಗಡಗೆ-೭೦, ತೊರಗಲೆ-೫೦, ಮಾಸವಾಡಿ-೧೪೦ ಮುಂತಾದವುಗಳನ್ನು ಆಳುತ್ತಿದ್ದಳೆಂದು ಹೇಳಿವೆ[೬೦]. ಅಲ್ಲದೇ ಶಾಸನಗಳು ಈಕೆಯನ್ನು ದಾನಚಿಂತಾಮಣಿ, ರಣಭೈರವಿ, ಉಚ್ಚಾನಂದ ಭೈರವಿ, ವಿವೇಕಚೂಡಾಮಣಿ ಎಂದು ಕರೆದಿವೆ[೬೧]. ಗೋವೆಯ ಕದಂಬ ಮಹಾಮಂಡಳೇಶ್ವರ ಜಯಕೇಶಿಯ ರಾಣಿಯಾದ ಮೈಳಲಮಹಾದೇವಿಯು ಕ್ರಿ.ಶ. ೧೧೨೩-೨೬ರ ನರೇಂದ್ರದ ಶಾಸನದಲ್ಲಿ ಕೊಂಕಣ-೯೦೦, ಕೊನ್ತಕುಳಿ-೩೦, ಹಾನಂಗಲ್ಲ-೫೦೦, ಕಾದರವಳ್ಳಿಯೆರಡುಮೂವತ್ತು, ಉಣಕಲ್ಲಬ್ಬಿಯೆರಡುಮೂವತ್ತು, ಪೊಳಲ್ಗುನ್ದೆ-೩೦, ವೇಳುಗ್ರಾಮ-೭೦, ಹೈವೆ-೫೦೦, ಕಾವಡಿದ್ವೀಪಸವಲಕ್ಷಮುಮಂಗಳನ್ನು ಕುನ್ದೂರಿನಿಂದ ಆಳುತ್ತಿದ್ದಳೆಂದು ಉಲ್ಲೇಖಿಸಲ್ಪಟ್ಟಿದ್ದಾಳೆ[೬೨]. ಆಳುಪರ ಚಿತ್ರವಾಹನನಿಗೆ ಕುಂಕುಮಮಹಾದೇವಿ ಎಂಬ ರಾಣಿಯಿದ್ದುದಾಗಿಯೂ ಅವಳು ಚಾಲುಕ್ಯ ವಿನಯಾದಿತ್ಯನ ಮಗಳಾಗಿದ್ದಳೆಂದು ತಿಳಿದುಬರುತ್ತದೆ[೬೩]. ಕ್ರಿ.ಶ. ೧೧೯೬ರಲ್ಲಿ ಕದಂಬ ಮಹಾಮಂಡಳೇಶ್ವರ ಎರೆಯಂಗದೇವನ ರಾಣಿ ಅಸವಬ್ಬರಸಿಯು ತುಂಬದೇವನಹಳ್ಳಿಯಲ್ಲಿ ಬಸದಿಯನ್ನು ಕಟ್ಟಿಸಿದಳೆಂದು ಅಲ್ಲಿನ ಶಾಸನವೊಂದು ಹೇಳುತ್ತದೆ[೬೪]. ಹೀಗೆ ರಾಣಿಯರು ಪ್ರಭಾವಶಾಲಿಗಳಾಗಿದ್ದು ಅವರಿಂದ ರಾಜರುಗಳು ರಾಜನೀತಿಯ ವಿಷಯವಾಗಿ ಸಲಹೆಗಳನ್ನು ಪಡೆಯುತ್ತಿದ್ದಿರಬಹುದು.

**ಮಂತ್ರಿಮಂಡಳ :**

ಚಕ್ರವರ್ತಿಗಳಿಗೆ ಅಧೀನರಾಗಿದ್ದರು ಕೂಡ ಸಾಮಂತರು ತಮ್ಮ ಆಡಳಿತದ ಅನುಕೂಲಕ್ಕಾಗಿ ಮಂತ್ರಿಮಂಡಳವನ್ನು ಹೊಂದಿರುತ್ತಿದ್ದರು. ಶಾಸನವೊಂದು ಗಂಗ ಕೊಂಗುಣಿವರ್ಮನು ಸದಾ ಮಂತ್ರಿಗಳಿಂದ ಸುತ್ತುವರಿದಿರುತ್ತಿದ್ದನೆಂದು ತಿಳಿದುಬರುತ್ತದೆ[೬೫]. ರಾಜನೊಬ್ಬನಿಂದಲೇ ಆಡಳಿತದ ಎಲ್ಲ ಕಾರ್ಯಗಳನ್ನು ನೋಡಿಕೊಳ್ಳುವದು ಅಸಾಧ್ಯವಾದುದರಿಂದ ಅವನು ತನ್ನಕೆಲವು ಕರ್ತವ್ಯಗಳನ್ನು ತನ್ನ ಮಂತ್ರಿಗಳ ಮೇಲೆ ಹೊರಿಸಬೇಕೆಂದು ಮಹಾಭಾರತ ಹೇಳುತ್ತದೆ[೬೬]. ಸಹಕಾರದಿಂದಲೇ ಪ್ರಭುತ್ವ ಸಾಧ್ಯ, ಒಂದೇ ಚಕ್ರದ ಮೇಲೆ ಗಾಡಿಯು ಎಂದೂ ಉರುಳಲಾರದು. ಆದ್ದರಿಂದ ರಾಜನು ಮಂತ್ರಿಗಳನ್ನು ನೇಮಿಸಿಕೊಂಡು ಅವರ ಅಭಿಪ್ರಾಯವನ್ನು ಕೇಳಬೇಕೆಂದು ಕೌಟಿಲ್ಯನು ತನ್ನ ಅರ್ಥಶಾಸ್ತ್ರದಲ್ಲಿ ಹೇಳಿದ್ದಾನೆ[೬೭]. ಸೋಮದೇವನು ತನ್ನ ಯಶಸ್ತಿಲಕ ಚಂಪುವಿನಲ್ಲಿ ರಾಜನು ಒಬ್ಬ ಮಂತ್ರಿಯನ್ನೇ ಅವಲಂಬಿಸಿರಕೂಡದೆಂದೂ, ಹಾಗೆ ಮಾಡಿದರೆ ಬಳ್ಳಿಯು ಒಂದೇ ಕೊಂಬೆ ಇರುವ ವೃಕ್ಷವನ್ನು ಅವಲಂಬಿಸಿದಂತಾಗುವುದೆಂದೂ ಹೇಳುತ್ತಾನೆ[೬೮]. ಹೀಗೆ ಪ್ರಾಚೀನ ಕಾಲದಿಂದ ಪದ್ಧತಿಯಂತೆ ಸಾಮಂತರಾಜರುಗಳು ಕೂಡ ಮಂತ್ರಿಪರಿಷತ್ತನ್ನು ಹೊಂದಿದ್ದರು.

ಈ ಮಂತ್ರಿಮಂಡಳದ ಸದಸ್ಯರ ಸಂಖ್ಯೆಯ ಕುರಿತು ಏಕಾಭಿಪ್ರಾಯವಿಲ್ಲ. ಅವಶ್ಯಕತೆಯಿದ್ದಷ್ಟು ಇರಬೇಕೆಂದು ಅರ್ಥಶಾಸ್ತ್ರ ಹೇಳಲಾಗಿದೆ[೧೬೯]. ನೀತಿವಾಕ್ಯಾಮೃತದಲ್ಲಿ ರಾಜನು ಮೂವರು, ಐವರು ಅಥವಾ ಏಳು ಜನರನ್ನು ಮಂತ್ರಿಗಳನ್ನಾಗಿ ಆರಿಸಿಕೊಳ್ಳಬಹುದೆಂದು ಸೂಚಿಸಿ, ಆದರೂ ರಾಜನ ಏಳಿಗೆಯು ಒಬ್ಬ ಮಂತ್ರಿಯ ಶೀಲವನ್ನವಲಂಬಿಸುವದೆಂದು ಹೇಳುತ್ತದೆ[೧೭೦]. ಹೀಗೆ ಪ್ರಾಚೀನರು ಮಂತ್ರಿಗಳ ಮಹತ್ವವನ್ನು ಒತ್ತಿ ಹೇಳಿದ್ದಾರೆ. ಕದಂಬ ರಾಣಿ ಅಕ್ಕಾದೇವಿಯು ಏಳುಜನ ಪ್ರಧಾನರು ಅಥವಾ ಮಂತ್ರಿಗಳನ್ನು ಹೊಂದಿದ್ದಂತೆ ಶಾಸನದಿಂದ ತಿಳಿಯುತ್ತದೆ[೧೭೧]. ಇನ್ನೊಂದು ಶಾಸನವು ರಾಜನೊಬ್ಬನಿಗೆ ಐವರು ಪ್ರಧಾನರಿದ್ದ ವಿಷಯವನ್ನು ಹೇಳುತ್ತದೆ[೧೭೨]. ಮಹಾಮಂಡಳೇಶ್ವರ ಕದಂಬ ವೀರಸೋಮನು ಎಂಭತ್ನಾಲ್ಕು ಊರುಗಳಲ್ಲಿ ಎಂಭತ್ನಾಲ್ಕು ಮಂತ್ರಿಗಳನ್ನಿಟ್ಟಿದ್ದನೆಂದು ಹೇಳಿದೆ[೧೭೩]. ಹೀಗೆ ಮಂತ್ರಿಮಂಡಳದ ಸಂಖ್ಯೆ ಅವರ ಅವಶ್ಯಕತೆಗನುಗುಣವಾಗಿ ಇರುತ್ತಿತ್ತು.

**ಮಹಾಪ್ರಧಾನ ಅಥವಾ ಮಹಾಮಾತ್ಯ:**

ಮಹಾಪ್ರಧಾನ ಅಥವಾ ಮಹಾಮಾತ್ಯನು ಮಂತ್ರಿಮಂಡಳದ ಮುಖ್ಯಸ್ಥನಾಗಿದ್ದನು. ಈತನು ಉಳಿದೆಲ್ಲ ಮಂತ್ರಿಗಳ ಮೇಲೆ ಸಂಪೂರ್ಣ ಅಧಿಕಾರವನ್ನು ಹೊಂದಿದ್ದನು. ಚಕ್ರವರ್ತಿಯು ತನ್ನ ಕಾರ್ಯಭಾರ ನಿರ್ವಹಣೆಯಲ್ಲಿ ಅಮಾತ್ಯನ ನೆರವನ್ನು ಪಡೆಯುತ್ತಿದ್ದನು. ಚಕ್ರವರ್ತಿಯ ನಿರಂಕುಶಾಧಿಪತ್ಯಕ್ಕೆ ಅಮಾತ್ಯ ಪರಿಷತ್ತು ಬಲವಾದ ತಡೆಯಾಗಿತ್ತು. ಸಾಮಾನ್ಯವಾಗಿ ರಾಜ್ಯದ ಉಚ್ಚಾಧಿಕಾರಿಗಳಾಗಿದ್ದು ರಾಜನೀತಿಯ ತತ್ವಾನುಷ್ಠಾನಗಳಲ್ಲಿ ಪರಿಣಿತರಾದವರನ್ನೇ ಅಮಾತ್ಯನನ್ನಾಗಿ ನೇಮಿಸಲಾಗುತ್ತಿತ್ತು. ರಾಜ್ಯಭಾರಕ್ಕೆ ಸಂಬಂಧಿಸಿದ ಮಹತ್ವದ ವಿಚಾರಗಳ ಸಮಾಲೋಚನೆ ಹಾಗೂ ಚಕ್ರವರ್ತಿಯು ತೆಗೆದುಕೊಳ್ಳುವ ನಿರ್ಣಯಗಳಲ್ಲಿ ಅಮಾತ್ಯರ ಪಾತ್ರ ಮಹತ್ವದ್ದಾಗಿತ್ತು[೧೭೪]. ಈ ಅನೇಕ ಮಹಾಪ್ರಧಾನರು ದಂಡನಾಯಕ, ಅಂತಃಪುರಾಧ್ಯಕ್ಷ, ದಂಡನಾಯಕ ಮುಂತಾದ ಹುದ್ದೆಗಳನ್ನು ಸಹ ನಿರ್ವಹಿಸುತ್ತಿದ್ದರು. ಆಳುಪರ ವೀರಸೋಯಿದೇವನ ಕಾಲದಲ್ಲಿ ಅವನ ಮಹಾಪ್ರಧಾನನಾಗಿ ಸಿಂಗಣ ಸಾಹಣಿ ಬೊಪ್ಪಣನು ಕಂಡುಬರುತ್ತಾನೆ[೧೭೫]. ಗಂಗ ಎರಡನೆಯ ಮಾರಸಿಂಹನ ಮಹಾಮಾತ್ಯನಾಗಿ ಮಾಬಲಯ್ಯನೆಂಬುವನಿದ್ದ ವಿಷಯ ಕ್ರಿ.ಶ. ೯೭೨ರ ಆರಣಿಯ ಶಾಸನದಿಂದ ತಿಳಿದುಬರುತ್ತದೆ[೧೭೬]. ಅಲ್ಲದೇ ಗಂಗ ಎರಡನೆಯ ಎರೆಗಂಗನ ಮಹಾಮಾತ್ಯನಾದ ಗುರಿಪಾಳನು ಶ್ರವಣಬೆಳಗೊಳದ ಚಿಕ್ಕಬೆಟ್ಟದ ಶಾಸನವೊಂದರಲ್ಲಿ ಉಲ್ಲೇಖಿಸಲ್ಪಟ್ಟಿದ್ದಾನೆ[೧೭೭]. ಸಿಂದ ಪೆರ್ಮಾಡಿದೇವನ ಕಾಲದಲ್ಲಿ ದಂಡನಾಯಕ ಚಾವುಣಯ್ಯನು ಶ್ರೀಮನ್ಮಹಾಪ್ರಧಾನ, ಪಟ್ಟಸಾಹಣಿ ಹಾಗೂ ಪೆರ್ಗಡೆ ಎಂದು ಹಲವು ಹುದ್ದೆಗಳನ್ನು ನಿರ್ವಹಿಸುತ್ತಿದ್ದುದು ತಿಳಿದುಬರುತ್ತದೆ[೧೭೮]. ಮಂಡಳಾಧಿಪತಿ ತಿಕ್ಕಪ್ಪಯ್ಯರಸ ಎರಡಾರುನೂರನ್ನು ಕಲ್ಯಾಣ ಚಾಲುಕ್ಯ ಮೂರನೆಯ ಸೋಮೇಶ್ವರನ ಆಧೀನನಾಗಿ ಆಳುತ್ತಿದ್ದಾಗ, ಅವನ ಮಹಾಪ್ರಧಾನ ದಂಡನಾಯಕ ಸೋವರಸನೆಂಬುವನು ಹಳ್ಳೂರಿನ ಶಾಸನದಲ್ಲಿ ಕಂಡುಬರುತ್ತಾನೆ[೧೭೯]. ಕ್ರಿ.ಶ. ೧೧೭೪ರ ಉಮರಾಣಿಯ ಶಾಸನ ತಿಳಿಸುವಂತೆ ಶಿಲಹಾರ ಹೆಮ್ಮಾಡಿದೇವರಸನ ಕಾಲದಲ್ಲಿ ಮಹಾಪ್ರಧಾನ, ಶ್ರೀಕರಣ ಮದುವಣಯ್ಯ ದಂಡನಾಯಕ

ಈ ಹುದ್ದೆಯನ್ನು ಅಲಂಕರಿಸಿದ್ದು ತಿಳಿದುಬರುತ್ತದೆ[೮೦]. ಗಂಗ ಮಹಾಮಂಡಳೇಶ್ವರ ಎಕ್ಕಲರಸನ ಮಹಾಪ್ರಧಾನನಾಗಿ ಮಹಾದೇವ ದಂಡನಾಯಕನು ಕ್ರಿ.ಶ. ೧೧೯೮ರ ಸೊರಬ ತಾಲೂಕಿನ ಶಾಸನದಲ್ಲಿ ಉಲ್ಲೇಖಿತನಾಗಿದ್ದಾನೆ[೮೧].

**ಸರ್ವಾಧಿಕಾರಿ:**

ಸರ್ವಾಧಿಕಾರಿಯು ಉಳಿದ ಎಲ್ಲ ಮಂತ್ರಿಗಳಿಗಿಂತ ಹೆಚ್ಚು ಪ್ರಭಾವವುಳ್ಳವನಾಗಿದ್ದನು. ಈತನು ರಾಜ ಮತ್ತು ಉಳಿದ ಮಂತ್ರಿಗಳ ನಡುವಿನ ಸೇತುವೆಯಂತಿದ್ದನು. ಇವನು ರಾಜನಿಗೆ ಪ್ರತಿನಿತ್ಯದ ಆಡಳಿತದಲ್ಲಿ ಸಹಾಯವನ್ನು ನೀಡುವವನಾಗಿದ್ದನು. ಒಂದೇ ಮಾತಿನಲ್ಲಿ ಹೇಳುವದಾದರೆ ರಾಜನ ನಂತರ ಇಡೀ ರಾಜ್ಯದ ಆಡಳಿತವನ್ನು ನೋಡಿಕೊಳ್ಳುವಲ್ಲಿ ಈತನೇ ಪ್ರಮುಖನಾದವನಾಗಿದ್ದನು. ಗಂಗರ ಎರೆಯಂಗ ನೀತಿಮಾರ್ಗನ ಸರ್ವಾಧಿಕಾರಿಯಾಗಿ ನರಸಿಂಗನೆಂಬುವನಿದ್ದನೆಂದು ತಿಳಿಯುತ್ತದೆ[೮೨]. ಕ್ರಿ.ಶ. ೧೧೪೪ರ ಹೊಸೂರು ಶಾಸನ ತಿಳಿಸುವಂತೆ ಮಹಾಮಂಡಳೇಶ್ವರ ಹೆಮ್ಮಾಡಿದೇವನ ಸರ್ವಾಧಿಕಾರಿಯಾಗಿ ನಾಮಿಯಣ್ಣದಂಡನಾಯಕ ಆಡಳಿತ ನಿರ್ವಹಿಸುತ್ತಿದ್ದನು[೮೩]. ಕ್ರಿ.ಶ. ೧೨ನೆಯ ಶತಮಾನದ ಕಂದಗಲ್ಲ ಶಾಸನವು ಮಹಾಮಂಡಳೇಶ್ವರ ಗೋಮದೇವರಸನ ಸರ್ವಾಧಿಕಾರಿಯಾದ ಆಚಣ್ಣನನ್ನು ಉಲ್ಲೇಖಿಸಿದೆ[೮೪]. ಚಾಲುಕ್ಯ ಎರಡನೆಯ ಜಗದೇಕಮಲ್ಲನ ಮಹಾಮಂಡಳೇಶ್ವರನಾದ ಸೇವುಣ ಹೆಮ್ಮಾಡಿದೇವನ ಸರ್ವಾಧಿಕಾರಿಯಾಗಿ ಮಹಾಪಸಾಯಿತ ಹಿರಿಯ ಹೆಗ್ಗಡೆ ಹಂದೆಯ ನಾಯಕನು ಹಗರಟ್ಟಿಗೆ-೨೦೦ನ್ನು ಆಳುತ್ತಿದ್ದನೆಂದು ತಿಳಿದುಬರುತ್ತದೆ[೮೫]. ಕ್ರಿ.ಶ. ೧೨೪೬ರ ಶಾಸನವೊಂದು ರಟ್ಟ ಮಹಾಸಾಮಂತ ಕಾರ್ತವೀರ್ಯನ ಸರ್ವಾಧಿಕಾರಿಯಾದ ಚೌಡಿಸೆಟ್ಟಿಯರು ಕೂಂಡಿನಾಡನ್ನು ಆಳುತ್ತಿದ್ದುದಾಗಿ ಹೇಳಿದೆ[೮೬].

**ಸಂಧಿವಿಗ್ರಹಿ:**

ಸಂಧಿವಿಗ್ರಹಿಯು ಮಂತ್ರಿ ಮಂಡಲದಲ್ಲಿದ್ದ ಮತ್ತೊಬ್ಬ ಪ್ರಮುಖ ವ್ಯಕ್ತಿಯಾಗಿದ್ದನು. ಈತನು ಆಧುನಿಕ ಕಾಲದ ವಿದೇಶಾಂಗ ಮಂತ್ರಿಯಂತೆ ಕಾರ್ಯನಿರ್ವಹಿಸುತ್ತಿದ್ದನು. ನೆರೆಹೊರೆಯ ದೇಶಗಳೊಡನೆ ರಾಜನು ವ್ಯವಹರಿಸುವಾಗ ಬಹುಮುಖ್ಯ ಪಾತ್ರನ್ನಿವನು ವಹಿಸುತ್ತಿದ್ದನು. ಯುದ್ಧ ಮತ್ತು ಒಪ್ಪಂದಗಳನ್ನು ನಿಶ್ಚಯಿಸುವ ಕಾರ್ಯ ಇವನದಾಗಿತ್ತು. ಇವನು ಹಲವು ದೇಶಗಳೊಡನೆ ವ್ಯವಹರಿಸಬೇಕಾಗಿದ್ದುದರಿಂದ ಅನೇಕ ಭಾಷೆ ಮತ್ತು ಲಿಪಿಗಳನ್ನು ಬಲ್ಲವನಾಗಿರುತ್ತಿದ್ದನು. ವಾಚಯತಿ ಲಿಖಿತ ಕವತೇ ಗಮಯತಿ ಸರ್ವಾ ಲಿಪೀಶ್ಚ ಭಾಷಾಶ್ಚ। ಆತ್ಮಪರಿಸ್ಥಿತಿ ಕುಶಲಃ। ಸಪ್ರತಿಭಃ ಸಂಧಿವಿಗ್ರಹೀ ಕಾರ್ಯಃ॥ ಎಂದು ಈತನ ಗುಣಗಳನ್ನು ಸೋಮದೇವನು ತನ್ನ ಯಶಸ್ತಿಲಕದಲ್ಲಿ ಉಲ್ಲೇಖಿಸಿದ್ದಾನೆ[೮೭]. ಶಾಸನಗಳಲ್ಲಿ ಹೇರಿಲಾಳಕನ್ನಡ ಸಂಧಿವಿಗ್ರಹಿ[೮೮], ಹೇರಿಸಂಧಿವಿಗ್ರಹಿ[೮೯], ಹಿರಿಕನ್ನಡಸಂಧಿವಿಗ್ರಹಿ[೯೦] ಎಂಬ ಉಲ್ಲೇಖಗಳು ಕಂಡುಬರುತ್ತವೆ. ಹೇರಿ ಎಂಬುದು ಹಿರಿಯ ಎಂಬುದರ ರೂಪಾಂತರವಾಗಿರಬಹುದು. ವಿದೇಶಗಳಿಂದ ಬಂದ ದೂತರುಗಳನ್ನು ಸ್ವಾಗತಿಸಿ ರಾಜನ ಬಳಿಗೆ ಕರೆದುಕೊಂಡು ಹೋಗುವದು ಮತ್ತು ಬೇರೆರಾಷ್ಟ್ರಗಳ ರಾಜರುಗಳಿಗೆ ಪತ್ರಗಳನ್ನು ಸಿದ್ಧಪಡಿಸುವ ಕೆಲಸಗಳನ್ನು ಈತನು

ಕೈಕೊಳ್ಳುತ್ತಿದ್ದನು[೯೧]. ಸಂಧಿವಿಗ್ರಹಿಗಳ ಮತ್ತೊಂದು ಮುಖ್ಯ ಕರ್ತವ್ಯವೆಂದರೆ ಶಾಸನಗಳ ಮತ್ತು ದಾನಪತ್ರಗಳ ಪಾಠವನ್ನು ಸಿದ್ಧಪಡಿಸುವದಾಗಿತ್ತು.

ಕ್ರಿ.ಶ. ೬೯೨ರ ಸೊರಬದ ತಾಮ್ರಶಾಸನವೊಂದು ತಿಳಿಸುವಂತೆ ಅಳುಪ ಚಿತ್ರವಾಹನನ ಮಹಾಸಂಧಿವಿಗ್ರಹಿಯಾಗಿ ರಾಮಪುಣ್ಯವಲ್ಲಭನಿದ್ದನು[೯೨]. ಕ್ರಿ.ಶ. ೯೮೧ರಲ್ಲಿ ಕದಂಬ ಮಹಾಮಂಡಳೇಶ್ವರ ಶಾಂತಿವರ್ಮನು ಬನವಾಸೆಯನ್ನು ಆಳುತ್ತಿದ್ದಾಗ, ಅವನ ಸಂಧಿವಿಗ್ರಹಿಯಾಗಿ ಕನ್ನಯ್ಯನೆಂಬುವನಿದ್ದನೆಂದು ತಿಳಿಯುತ್ತದೆ[೯೩]. ಕ್ರಿ.ಶ. ೯೮೮ರ ಬಂಕಾಪುರ ಶಾಸನ ತಿಳಿಸುವಂತೆ ಕದಂಬ ಮಹಾಮಂಡಳೇಶ್ವರ ಹರಿಕೇಸರಿಯ ಕಾಲದಲ್ಲಿ ಸಂಧಿವಿಗ್ರಹಿಯಾಗಿ ಮೈಲಯ್ಯನೆಂಬುವನಿದ್ದನು[೯೪]. ಕಲ್ಯಾಣ ಚಾಲುಕ್ಯ ಅಹಾವಮಲ್ಲದೇವನ ಮಹಾಮಂಡಳೇಶ್ವರನಾದ ಶಾಂತಿವರ್ಮನ ಕಾಲದಲ್ಲಿ ಸೀಯಮ್ಮನು ಸಂಧಿವಿಗ್ರಹಿಯಾಗಿದ್ದನೆಂದು ಗೊತ್ತಾಗುತ್ತದೆ[೯೫]. ಮಹಾಮಂಡಳೇಶ್ವರ ರಟ್ಟರ ಮಹಾಸಂಧಿವಿಗ್ರಹಿಯಾಗಿ ದಂಡನಾಯಕ ಕಾಳಿದಾಸಭಟ್ಟರಳಿಯಂಕವಿತಾಮನೋಹರ ನೆಂಬುವನಿದ್ದನೆಂದು ತಿಳಿದುಬರುತ್ತದೆ. ಕ್ರಿ.ಶ. ೧೦೯೫ರ ಯಡೂರು ಶಾಸನದಲ್ಲಿ ಕದಂಬ ಮಹಾಮಂಡಳೇಶ್ವರ ದುದ್ಧರಸನ ಸಂಧಿವಿಗ್ರಹಿಯಾಗಿ ದುದ್ಧಮಲ್ಲನೆಂಬುವನು ಇದ್ದನೆಂದು ಉಲ್ಲೇಖಿಸಲಾಗಿದೆ[೯೬]. ಹೀಗೆ ಸಂಧಿವಿಗ್ರಹಿಯು ವಿದೇಶಾಂಗ ವ್ಯವಹಾರಗಳ ಖಾತೆಯನ್ನು ನೋಡಿಕೊಳ್ಳುವದರ ಜೊತೆಗೆ ದಾನಪತ್ರಗಳು ಹಾಗೂ ಶಾಸನಗಳ ಮೇಲ್ವಿಚಾರಣೆಯನ್ನೂ ಮಾಡುತ್ತಿದ್ದನು. ಅಲ್ಲದೇ ಒಬ್ಬೊಬ್ಬ ರಾಜನ ಬಳಿಯಲ್ಲಿ ಹಲವಾರು ಸಂಧಿವಿಗ್ರಹಿಗಳಿದ್ದರು. ಮಹಾಸಂಧಿವಿಗ್ರಹಿಗಳು ಅವರಿಗೆ ಮುಖ್ಯಸ್ಥನಾಗಿರುತ್ತಿದ್ದನು. ಕೆಲವೊಮ್ಮೆ ಮಹಾಪ್ರಧಾನಿ ಮಹಾದಂಡನಾಯಕರು ಸಂಧಿವಿಗ್ರಹಿಗಳಾಗಿರುತ್ತಿದ್ದರು.

**ದಂಡನಾಯಕ:**

ದಂಡನಾಯಕರೆಲ್ಲರೂ ವೀರರಾಗಿದ್ದುದರಿಂದಲೂ, ದಂಡ ಶಬ್ದಕ್ಕೆ ಸೈನ್ಯವೆಂಬ ಅರ್ಥವಿರುವದರಿಂದಲೂ ದಂಡನಾಯಕರೆಂದರೆ ಸೇನಾಧಿಪತಿ ಎಂದು ಕರೆಯಲಾಗುತ್ತದೆ. ದಂಡನಾಯಕನಾದವನು ಶೂರನು, ಯುದ್ಧಚತುರನು, ಅನುಭವಿಯು ಮತ್ತು ಅರ್ಥಶಾಸ್ತ್ರವನ್ನು ಬಲ್ಲವನಾಗಿರಬೇಕೆಂದು, ತನ್ನ ಒಡೆಯನಿಗೆ ಅಜ್ಞಾರಾಧಕನಾಗಿದ್ದು, ಸೈನಿಕರ ದೃಷ್ಟಿಯಲ್ಲಿ ಪ್ರೀತಿವಾತ್ಸಲ್ಯವನ್ನು ಪಡೆದವನಾಗಿರಬೇಕೆಂದು ಸೋಮದೇವನು ತನ್ನ ಯಶಸ್ತಿಲಕದಲ್ಲಿ ಉಲ್ಲೇಖಿಸಿದ್ದಾನೆ[೯೭]. ಸಾಮಂತರಸರ ಅನೇಕ ಶಾಸನಗಳೂ ಕೂಡಾ ಮಹಾಪ್ರಚಂಡದಂಡನಾಯಕ ಹಾಗೂ ದಂಡನಾಯಕರ ಕುರಿತು ಸವಿಸ್ತಾರವಾಗಿ ಹೇಳುತ್ತವೆ. ಅಲ್ಲದೇ ಇವರೂ ಸಹ ಕೆಲವು ಪ್ರದೇಶಗಳ ಮೇಲೆ ಆಡಳಿತ ನಡೆಸುತ್ತ ಸೈನ್ಯದ ಹೊಣೆಯನ್ನು ನಿಭಾಯಿಸುತ್ತಿದ್ದರು.

ಕ್ರಿ.ಶ. ೪೦೦ರ ಶಾಸನವೊಂದು ಗಂಗ ಮೂರನೆಯ ಮಾಧವವರ್ಮನ ಕಾಲದಲ್ಲಿ ಚಾರುದತ್ತನೆಂಬುವನನ್ನು ಸೇನಾಪತಿಯೆಂದು ಕರೆದಿದೆ[೯೮]. ಕ್ರಿ.ಶ. ೯೦೩ರಲ್ಲಿನ ರಾಷ್ಟ್ರಕೂಟ ಎರಡನೆಯ ಕೃಷ್ಣನ ಶಾಸನದಲ್ಲಿ

ಪ್ರಚಂಡದಂಡನಾಯಕನಾದ ದಾಮಪಯ್ಯನು ಗಂಗ ದುರ್ವಿನೀತರಸನ ದಂಡನಾಯಕನೆಂದು, ಈತನು ಮಣ್ಣೆಯಲ್ಲಿದ್ದುಕೊಂಡು ಗಂಗ ಸಾಮ್ರಾಜ್ಯದ ಇಡೀ ದಕ್ಷಿಣದ ಕಾರ್ಯಭಾರ ನಿರ್ವಹಿಸುತ್ತಿದ್ದನೆಂದು ಹೇಳಲಾಗಿದೆ[೨೯೯]. ಕ್ರಿ.ಶ. ೯೬೮ರ ಗಂಗ ಎರಡನೆಯ ಮಾರಸಿಂಹನ ಕಾಲದ ಶಾಸನವೊಂದು ಅವನ ಮಹಾಪ್ರಚಂಡ ದಂಡನಾಯಕನಾದ ಚಿಕ್ಕಯ್ಯನನ್ನು ಉಲ್ಲೇಖಿಸಿದೆ[೩೦೦]. ಕ್ರಿ.ಶ. ೧೧೧೪ರಲ್ಲಿ ಶಿಲಾಹಾರ ಮಹಾಮಂಡಳೇಶ್ವರ ಇಂದರಸನ ದಂಡನಾಯಕನಾಗಿ ಪ್ರಭುಕೇಸರಿನಾಯಕನಿದ್ದನೆಂದು ಅಕ್ಕಲಕೋಟದ ಶಾಸನ ತಿಳಿಸುತ್ತದೆ[೩೦೧]. ಚಾಲುಕ್ಯ ಮೂರನೆಯ ಸೋಮೇಶ್ವರನ ಮಹಾಮಂಡಳೇಶ್ವರನಾದ ಕಲಚೂರಿ ಹೆರ್ಮಾಡಿದೇವರಸನ ದಂಡನಾಯಕನಾಗಿ ನಾಗದೇವಯ್ಯನೆಂಬುವನು ಇಂಗಳೇಶ್ವರದ ಕ್ರಿ.ಶ. ೧೧೨೮ರ ಶಾಸನದಲ್ಲಿ ಕಾಣಿಸಿಕೊಂಡಿದ್ದಾನೆ[೩೦೨]. ಕೊಂಗಾಳ್ವ ವೀರಚೋಳಕೊಂಗಾಳ್ವದೇವನ ದಂಡನಾಯಕನಾದ ಬಲ್ಲೇಯನ ಉಲ್ಲೇಖವು ಕ್ರಿ.ಶ.೧೧೭೫ರ ನಂದಿಗುಂದ ಶಾಸನದಲ್ಲಿ ಬರುತ್ತದೆ[೩೦೩].

## ಇತರ ಅಧಿಕಾರಿಗಳು:

### ಅರಮನೆಯ ಅಧಿಕಾರಿಗಳು:

ಅಂತಃಪುರಾಧ್ಯಕ್ಷ, ಅಂತಃಪುರವೆರ್ಗಡೆ, ಮನೆವೆರ್ಗಡೆ ಎಂಬುವುಗಳು ಅಂತಪುರವನ್ನು ನೋಡಿಕೊಳ್ಳುವ ಅಧಿಕಾರಿಗಳನ್ನು ಸೂಚಿಸುತ್ತವೆ. ಅಂತಃಪುರದ ಸಿಬ್ಬಂದಿವರ್ಗದ ಮೇಲಿನ ಅಧಿಕಾರಿಗಳಾಗಿರುವ ಇವರು ರಾಜಪರಿವಾರದವರ ರಕ್ಷಣೆ, ಯೋಗಕ್ಷೇಮದ ಹೊಣೆಯನ್ನು ಹೊರುತ್ತಿದ್ದರು. ಅಲ್ಲದೇ ಶಾಸನಗಳಲ್ಲಿ ಕಂಡುಬರುವ ಮನೆಮಗತಿನ್ ಎಂಬ ಪದವೂ ಕೂಡ ಅರಮನೆಯ ಆಡಳಿತಕ್ಕೆ ಸಂಬಂಧಿಸಿತ್ತು ಎಂದು ತಿಳಿದುಬರುತ್ತದೆ. ಕ್ರಿ.ಶ. ೧೧೦೦ರ ಮಲಘಾಣದ ಶಾಸನದಲ್ಲಿ ಅಂತಪುರವೆರ್ಗಡೆಯ ಉಲ್ಲೇಖ ಕಂಡುಬರುತ್ತದೆ[೩೦೪]. ಚಾಲುಕ್ಯ ಜಯಸಿಂಹದೇವನ ಸಾಮಂತನಾದ ಬ್ರಹ್ಮದೇವನೆಂಬುವನು ಬನವಾಸಿ-೧೨೦೦೦ವನ್ನಾಳುತ್ತಿದ್ದಾಗ, ಅವನ ಮನೆವೆರ್ಗಡೆಯಾಗಿ ಅಲ್ಲಯ್ಯದೇವನು ಕಂಡುಬರುತ್ತಾನೆ[೩೦೫]. ಮಹಾಮಂಡಳೇಶ್ವರ ಹೆಮ್ಮಾಡಿದೇವರಸನು ತರ್ದವಾಡಿ-೧೦೦೦ವನ್ನು ಪ್ರತಿಪಾಳಿಸುತ್ತಿದ್ದಾಗ ಅವನ ಮನೆವೆರ್ಗಡೆಯಾಗಿ ಸಾಯಿಪಯ್ಯನಿದ್ದನೆಂದು ಶಾಸನದಿಂದ ತಿಳಿದುಬರುತ್ತದೆ[೩೦೬]. ಗಂಗ ಎರಡನೆಯ ರಾಚಮಲ್ಲನ ಕಾಲದಲ್ಲಿ ಅಗರಯ್ಯನೆಂಬುವನು ಅವನ ಮನೆಮಗತಿನ್‌ನಾಗಿ ನೀತಿಮಾರ್ಗ ಪೆರ್ಮಾನಡಿಗೆ ಕೀಳ್ಗುಂಟೆಯಾದನೆಂದು ತಿಳಿದುಬರುತ್ತದೆ[೩೦೭]. ಕ್ರಿ.ಶ. ೧೦ನೆಯ ಶತಮಾನದ ಶಾಸನವೊಂದರಿಂದ ಚಾಲುಕ್ಯವಂಶದ ಸಾಮಂತ ಗೊಗ್ಗಿಗೆ ಎರೆಯಂಗ ಎಂಬ ಮನೆವೆಗತಿ ಇದ್ದನೆಂದು ತಿಳಿಯುತ್ತದೆ[೩೦೮].

### ಸಾಹಣಿಗಳು:

ಶಾಸನಗಳಲ್ಲಿ ಕಂಡುಬರುವ ಸಾಹಣಿ ಎಂಬ ಪದವು ಮೇಲ್ವಿಚಾರಕ ಎಂಬರ್ಥವನ್ನು ನೀಡುತ್ತದೆ. ಶಾಸನಗಳಲ್ಲಿ ಗಜಸಾಹಣಿ[೩೦೯] ಎಂದು ಕಂಡುಬರುವದು ಆನೆಗಳ ಮುಖ್ಯಾಧಿಕಾರಿಯನ್ನು ಸೂಚಿಸುತ್ತದೆ. ಅಲ್ಲದೇ ತುರುಗಸಾಹಣಿಯು ಕುದುರೆಗಳ ಮೇಲ್ವಿಚಾರಕನಾಗಿದ್ದಾನೆ. ಇವರು ಆಯಾ ಪ್ರಾಣಿಗಳನ್ನು ನೋಡಿಕೊಳ್ಳುವ, ತರಬೇತಿ ನೀಡುವ ವಿಭಾಗಗಳ

ಮುಖ್ಯಸ್ಥರಾಗಿದ್ದಾರೆ. ಮಹಾಮಂಡಳೇಶ್ವರ ಮನ್ನೆಯ ಕುಪ್ಪರಸನ ಆಳ್ವಿಕೆಯ ಕಾಲದಲ್ಲಿನ ಅಕ್ಕಲಕೋಟ ಶಾಸನದಲ್ಲಿ ಹಣಿವಸಾಹಣಿ ಎಂಬುವನು ಕಂಡುಬರುತ್ತಾನೆ[೨೦೦]. ಇಲ್ಲಿಯೇ ದೊರೆತ ಇದೇ ಮಹಾಮಂಡಳೇಶ್ವರನ ಇನ್ನೊಂದು ಶಾಸನದಲ್ಲಿ ಬಾದಾವಿಯ ಸಿಂಗೇಯಸಾಹಣಿಯ ಉಲ್ಲೇಖಬರುತ್ತದೆ[೨೦೧]. ಶಾಂತರ ಮಹಾಮಂಡಳೇಶ್ವರ ರಾಯಶಾಂತರದೇವನ ದಂಡಸಾಹಣಿಯ ಉಲ್ಲೇಖ ನಮಗೆ ಕ್ರಿ.ಶ. ೧೦೫೮ರ ಉದಿಯಾವರದ ಶಾಸನದಲ್ಲಿ ದೊರೆಯುತ್ತದೆಯಾದರೆ ಅವನ ಹೆಸರು ತೃಟಿತಗೊಂಡಿದೆ[೨೦೨]. ಯಾದವ ಸಿಂಗಣದೇವನ ಕಾಲದ ಅಕ್ಕಲಕೋಟ ಶಾಸನದಲ್ಲಿ ರಣಧವಳಯ್ಯ ಸಾಹಣಿಯ ಉಲ್ಲೇಖವಿದೆ[೨೦೩]. ಕ್ರಿ.ಶ. ೧೨೦೬ರ ಮಂಕಣಿಯ ಶಾಸನದಿಂದ ರಾಯದಂಡನಾಯಥ ಯಾದವ ಸಿಂಘಣನ ಶ್ರೀಸಹದೇವ ದಂಡನಾಯಕನು ಕರಿತುರಗಪಟ್ಟಸಾಹಣಪತಿಯಾಗಿದ್ದನೆಂದು ತಿಳಿದುಬರುತ್ತದೆ[೨೦೪].

**ಪಡುವಳ(ಸೈನ್ಯಾಧಿಕಾರಿ):**

ಇವರನ್ನು ಕುರಿತು ಶಾಸನಗಳಲ್ಲಿ ಹಡಬಳ, ಪಡೆವಳ ಮತ್ತು ಪಡುವಳ ಎಂದು ಉಲ್ಲೇಖಬರುತ್ತದೆ. ಪಡೆವಳ ಎಂಬುದಕ್ಕೆ ಕಿಟ್ಟೆಲ್‌ರವರು ತಮ್ಮ ನಿಘಂಟುವಿನಲ್ಲಿ ಸೇನಾನಿ ಎಂದಿದ್ದಾರೆ[೨೦೫]. ದಂಡನಾಯಕ ಅಥವಾ ಸೇನಾಪತಿಯು ಇಡೀ ಸೈನ್ಯದ ಮುಖ್ಯಸ್ಥನಾದರೆ, ಪಡುವಳರು ಸೈನ್ಯದ ತುಕಡಿಗಳಿಗೆ ಮುಖ್ಯಸ್ಥರಾಗಿರುತ್ತಿದ್ದರು. ರಾಷ್ಟ್ರಕೂಟ ಕನ್ನರದೇವನ ಸಾಮಂತನಾದ ಮಾಚಿಗನು ಎಡೆನಾಡು-೭೦ನ್ನು ಆಳುತ್ತಿದ್ದಾಗ ಅವನ ಕೈಕೆಳಗೆಮ ಕಿರುವುಣಸೆಯ ಅರಿಗನೆಂಬುವನು ಪಡೆವಳನಾಗಿದ್ದನೆಂದು ಕ್ರಿ.ಶ. ೯೫೮ರ ಕೆಳಗಿನ ಕಿರುಗುಣಸ ಶಾಸನ ತಿಳಿಸುತ್ತದೆ[೨೦೬]. ಕದಂಬ ಮಹಾಮಂಡಳೇಶ್ವರ ಹರಿಕಾಂತದೇವನ ಪಡವಳನಾಗಿ ಗುತ್ತಯ್ಯನು ಅಧಿಕಾರ ನಡೆಸುತ್ತಿದ್ದನೆಂದು ಕ್ರಿ.ಶ. ೧೦೭೨ರ ತಿಳವಳ್ಳಿ ಶಾಸನದಿಂದ ತಿಳಿದುಬರುತ್ತದೆ[೨೦೭]. ಶಾಂತಾರ ಮಹಾಮಂಡಳೇಶ್ವರ ರಾಯಶಾಂತಾರದೇವನ ಪಡುವಳನಾಗಿ ಬಾಗೆನಾಡಿನ ಪಡುವಳ ಬೈಯಲಯ್ಯನೆಂಬುವನು ಇದ್ದುದಾಗಿ ತಿಳಿದುಬರುತ್ತದೆ[೨೦೮]. ಕ್ರಿ.ಶ. ೧೦೭೮ರ ಬೆಳೆಗೆರೆ ಶಾಸನದಲ್ಲಿ ಮಹಾಸಾಮಂತ ಸಾಂತಯ್ಯನ ಹಡವಳನಾದ ಬಮ್ಮಯ್ಯನ ಉಲ್ಲೇಖ ದೊರೆಯುತ್ತದೆ[೨೦೯]. ಕದಂಬ ಮಹಾಮಂಡಳೇಶ್ವರ ಕೀರ್ತಿದೇವನು ಬನವಾಸಿ-೧೨೦೦೦ವನ್ನಾಳುತ್ತಿದ್ದಾಗ ಅವನ ಕೈಕೆಳಗೆ ಕೀರ್ತಿದೇವನೆಂಬುವನು ಪಡೆವಳನಾಗಿದ್ದನೆಂದು ತಿಳಿದುಬರುತ್ತದೆ[೨೧೦].

**ನಿಯೋಗಿ:**

ಇದು ಒಂದು ಹುದ್ದೆಯ ಹೆಸರಾಗಿದ್ದು, ಇವರು ವಿದೇಶಾಂಗ ಇಲಾಖೆಗೆ ಸಂಬಂಧಪಟ್ಟಿದ್ದು ಮಹಾಪ್ರಚಂಡದಂಡನಾಯಕ, ಮಹಾಸಾಮಂತಾಧಿಪತಿ ಶ್ರೇಣಿಯ ಸಂಧಿವಿಗ್ರಹಿಗಳ ಕೈಕೆಳಗಿನ ಅಧಿಕಾರಿಗಳಾಗಿದ್ದರು. ನಿಯೋಗಿ ಎಂದರೆ ಒಂದು ವಿಶೇಷ ಕಾರ್ಯಕ್ಕಾಗಿ ನೇಮಿಸಲ್ಪಟ್ಟ ಅಧಿಕಾರಿ ಎಂದು ನಿಘಂಟುವಿನಲ್ಲಿ ಹೇಳಲಾಗಿದೆ. ಈ ನಿಯೋಗಿಗಳನ್ನು ರಾಯಭಾರಿ ಎಂದು ಕರೆಯಲಾಗುತ್ತಿತ್ತು. ಇವರು ಶತ್ರುರಾಜನೊಂದಿಗೆ ನೇರವಾಗಿ

ಮಾತನಾಡುವವರಾಗಿದ್ದಾರೆ. ಮಹಾಮಂಡಳೇಶ್ವರ ಯಾದವ ಕನ್ನರದೇವನ ಕಾಲದಲ್ಲಿ ನೀಯೋಗಿ ದುರಂಧರರಾದ ಚೇಟರಸ ಮತ್ತು ಕಾಚರಸರೆಂಬುವರು ಕಂಡುಬರುತ್ತಾರೆ[೨೨೧]. ಹೀಗೆ ಮಹಾಸಾಮಂತರು, ಮಹಾಮಂಡಳೇಶ್ವರರುಗಳು ನೀಯೋಗಿಗಳನ್ನು ಹೊಂದಿರುತ್ತಿದ್ದರು.

**ತಂತ್ರಪಾಳ:**

ತಂತ್ರಪಾಳನೆಂದರೆ ರಹಸ್ಯಗಳ ಪಾಲಕನಾಗಿದ್ದಾನೆ. ರಾಜ್ಯದಲ್ಲಿ ನಡೆಯುವ ಹಾಗೂ ಪರರಾಜ್ಯದಲ್ಲಿನ ವಿದ್ಯಮಾನಗಳನ್ನು ರಹಸ್ಯವಾಗಿ ಸಂಗ್ರಹಿಸಿ ಸಂಧಿವಿಗ್ರಹಿಗೆ ಅರುಹುವ ಕಾರ್ಯವನ್ನು ಇವನು ಮಾಡುತ್ತಿದ್ದನು. ಸಂಧಿವಿಗ್ರಹಿಯ ಕಾರ್ಯಲಯಕ್ಕೆ ಸಂಬಂಧಿಸಿದ ಇನ್ನೊಂದು ಇಲಾಖೆ ಈ ಗೂಢಚಾರ ಇಲಾಖೆಯಾಗಿತ್ತು. ಗಂಗ ಮಾಧವವರ್ಮನ ಮೈಸೂರಿನ ತಾಮ್ರಪಟಗಳ ಪ್ರಕಾರ ಅವನ ರಹಸ್ಯಾಧಿಕೃತನಾಗಿ ಸೋಮಶರ್ಮನು ಕಂಡುಬರುತ್ತಾನೆ[೨೨೨]. ಕ್ರಿ.ಶ. ೧೨೦೪ರಲ್ಲಿ ಆಳುಪರ ವೀರಕುಲಶೇಖರನು ಬಂಕೇಶ್ವರ ದೇಗುಲಕ್ಕೆ ದಾನ ನೀಡಿದಾಗ, ಆ ಸ್ಥಾನದ ತಂತ್ರಿಯೂ ಕೂಡ ಅಲ್ಲಿದ್ದಂತೆ ಶಾಸನ ಉಲ್ಲೇಖಿಸುತ್ತದೆ[೨೨೩]. ಹಂಡರಗಲ್ ಗ್ರಾಮದ ಶಾಸನವೊಂದು ತಿಳಿಸುವಂತೆ ಮಹಾಮಂಡಳೇಶ್ವರ ಯಾದವ ಪೆರ್ಮಾಡಿದೇವರಸನ ತಂತ್ರಪಾಳನಾದ ತೊಂಡರಸನನ್ನು ಹೆಮ್ಮಾಡಿದೇವರಕಟ್ಟಿದಲಗು ಎನ್ನಲಾಗುತ್ತಿತ್ತು.

**ಪೆರ್ಗಡೆಗಳು:**

ಶಾಸನಗಳಲ್ಲಿ ಪೆರ್ಗಡೆ, ಹೆಗ್ಗಡೆ ಮತ್ತು ಸುಂಕವೆರ್ಗ್ಗಡೆ ಮುಂತಾದ ಪದಗಳು ಕಂಡುಬರುತ್ತವೆ. ಜಿ. ಎಸ್.ದೀಕ್ಷಿತರು "ನಾಡು ಅಥವಾ ಗ್ರಾಮದ ಮುಖ್ಯಸ್ಥ ಗಾವುಂಡ, ಪೆರ್ಗಡೆ ಎಂಬುವರು ನಾಡುಗಳ ಅಥವಾ ಹಳ್ಳಿಗಳ ಇಲ್ಲವೆ ಯಾವುದೇ ವಿಭಾಗದ ಮುಖ್ಯಸ್ಥರಾಗಿರುತ್ತಾರೆ. ತೆರಿಗೆ ಸಂಗ್ರಹಿಸುವ ಅಧಿಕಾರ ಹೊಂದಿರುವ ಪೆರ್ಗಡೆಗಳನ್ನು ಸುಂಕದ ಪೆರ್ಗಡೆ ಎನ್ನಲಾಗಿದೆ" ಎಂದು ಅಭಿಪ್ರಾಯಪಟ್ಟಿದ್ದಾರೆ[೨೨೪]. ಚಿದಾನಂದಮೂರ್ತಿಯವರು ಪೆರ್ಗಡೆ ಎಂಬುದು ಸಂಸ್ಕೃತದ ಮಹತ್ತರ ಎಂಬುವದರ ಸಮಾನಾಂತರ ಪದವಾಗಿದ್ದು, ಇವೆರಡೂ ದೊಡ್ಡ ಅಧಿಕಾರಿಗಳನ್ನು ಸೂಚಿಸುವ ಪದಗಳೆಂದು ಹೇಳಿದ್ದಾರೆ[೨೨೫]. ಗಾವುಂಡನ ಅಧಿಕಾರ ಕೇವಲ ಒಂದು ಹಳ್ಳಿಗೆ ಸೀಮಿತವಾದರೆ, ಪೆರ್ಗಡೆಗಳು ಒಂದಕ್ಕಿಂತ ಹೆಚ್ಚಿನ ಗ್ರಾಮಗಳನ್ನು ಹೊಂದಿರುತ್ತಿದ್ದರು.

ಗಂಗ ಶ್ರೀಪುರುಷನ ಕಾಲದ ಕಮರವಳ್ಳಿ ಶಾಸನ ತಿಳಿಸುವಂತೆ ಅವನ ಪೆರ್ಗಡೆಯಾದ ಅಗ್ಗಿರವೆರ ಎಂಬುವನು ಅರಿವುರದ ಪೆರ್ಗ್ಗಡೆತನ ಗೈಯುತ್ತಿದ್ದಾಗ, ಭೂಮಿದಾನ ನೀಡಿದ ಉಲ್ಲೇಖವಿದೆ[೨೨೬]. ಕ್ರಿ.ಶ.ಸು. ೯-೧೦ನೆಯ ಶತಮಾನದ ಕರೆಹಳ್ಳಿ ಶಾಸನ ತಿಳಿಸುವಂತೆ ನೊಳಂಬನ ಪೆರ್ಗಡೆ ತ್ರಿಭುವನಯ್ಯನು ಸಿವಯ್ಯನಕೆರೆಯನ್ನು ಆಳುತ್ತಿದ್ದು, ಕೆರೆಯ ಬಿತ್ತುವಾಟವನ್ನು ದಾನ ನೀಡಿದ ಉಲ್ಲೇಖವಿದೆ[೨೨೭]. ಮಂಗಳೂರು ತಾಲೂಕಿನ ಬಂಟ್ರದ ಕ್ರಿ.ಶ. ೯ನೆಯ ಶತಮಾನದ ಶಾಸನವೊಂದು ನೃಪಮಲ್ಲರಾಜ ಮತ್ತು ಕದಂಬಕುಲದ ರಾಜನೊಬ್ಬನು ರಾಜ್ಯವಾಳುತ್ತಿದ್ದಾಗ, ಅವರಿಬ್ಬರು

ಮತ್ತು ರಾಚಮಲ್ಲನ್ ದುಗರಾಜ ಹಾಗೂ ನರಸಿಂಹನ್ ದುಗರಾಜ ಎಂಬೀ ನಾಲ್ವರೂ ಸೇರಿ ಇನ್ನುಮುಂದೆ ತಮ್ಮಲ್ಲಿ ವೈರ ಕಾದಾಟಗಳು ಬೇಡವೆಂದು ಒಪ್ಪಂದಕ್ಕೆ ಬಂದರು. ಆಗ ಅನೇಕ ಅಧಿಕಾರಿಗಳ ಜೊತೆಯಲ್ಲಿ ಎನೆಂಬಾರುವಿನ ಪೆರ್ಗ್ಗಡೆಗಳು ಇದ್ದರೆಂದು ಉಲ್ಲೇಖಿಸಿದೆ[೨೨೮]. ಚೆಲ್ಲಕೇತನ ಮನೆತನದ ಸಾಮಂತ ಬಂಕೇಯನು ಆಳುತ್ತಿದ್ದಾಗ, ಅವನ ಮಗ ಕುಂದಟ್ಟಿಯು ನಿಡಗುಂದಗೆ-೧೨ನ್ನು ಆಳುತ್ತಿದ್ದು, ನಿಡಗುಂದೆ-೧೨ರ ಪೆರ್ಗಡೆ ಕುಪ್ಪಣ್ಣನು ಕಟ್ಟಿಸಿದ ದೇಗುಲಕ್ಕೆ ದಾನ ನೀಡಿದ ವಿವರ ಕ್ರಿ.ಶ. ೮೭೪-೭೫ರ ಶಿಗ್ಗಾಂವ ಶಾಸನ ತಿಳಿಸಿದೆ[೨೨೯]. ಕದಂಬವಂಶದ ಮಹಾಮಂಡಳೇಶ್ವರ ಸತ್ಯಾಶ್ರಯದೇವನ ಆಳ್ವಿಕೆಯಲ್ಲಿ ಶ್ರೀಕದಂಬೇಶ್ವರ ದೇವರಿಗೆ ದಾನವನ್ನು ನೀಡಿದ ಉಲ್ಲೇಖವಿರುವ ಕ್ರಿ.ಶ. ೧೦೫೫ರ ಶಿಗ್ಗಾಂವ ಶಾಸನವನ್ನು ಪೆರ್ಗಡೆ ಕೇತಿಸೆಟ್ಟಿಯು ಬರೆದನೆಂದು ತಿಳಿದುಬರುತ್ತದೆ[೨೩೦]. ಕ್ರಿ.ಶ. ೧೦೮೯ರಲ್ಲಿ ರಾಯಶಾಂತಾರ ತೈಲಪದೇವನ ಆಳ್ವಿಕೆಯಲ್ಲಿ ಪೆರ್ಗಡೆ ಕನ್ನಯ್ಯಾ ಬಡಗಿನಾಡ-೩೦ರ ಮೊದಲಬಾಡ ಬೆಸವೂರದಲ್ಲಿ ಕನ್ನೇಶ್ವರ ದೇಗುಲ ನಿರ್ಮಿಸಿ ಅದಕ್ಕೆ ದಾನ ನೀಡುತ್ತಾನೆ. ಅಲ್ಲದೇ ಅದೇ ಶಾಸನದಲ್ಲಿ ಪೆರ್ಗಡತಿ ಕನಕಬ್ಬೆಯೂ ದಾನ ನೀಡಿದ ವಿವರಗಳಿವೆ[೨೩೧]. ಕ್ರಿ.ಶ. ೧೦೯೧ರ ಕಿರಂಗೂರು ಶಾಸನದಲ್ಲಿ ಚೆಂಗಾಳ್ವದೇವನಾಳ್ವಿಕೆಯಲ್ಲಿ ಅವನು ಮತ್ತು ಅವನ ಮರಿಯಪೆರ್ಗಡೆ ಹಿಳ್ದುವಯ್ಯನೆಂಬುವನು ಸೇರಿ ಆಹಾರ ದಾನಕ್ಕಾಗಿ ೫೦ಖಂಡುಗ ಗದ್ದೆಯನ್ನು ನೀಡಿದ ವಿವರ ದೊರೆಯುತ್ತದೆ[೨೩೨]. ಕ್ರಿ.ಶ. ೧೧೪೫ರಲ್ಲಿ ಮಹಾಮಂಡಳೇಶ್ವರ ಸೇವುಣ ಹೆಮ್ಮಾಡಿಯರಸನ ಹಿರಿಯ ಹೆಗ್ಗಡೆ ಹಂದೆಯನಾಯಕ ಹಗರಟ್ಟಿಗೆ-೩೦೦ನ್ನು ತ್ರಿಭೋಗಾಭ್ಯಂತರಸಿದ್ಧಿಯಿಂದ ಆಳುತ್ತಿದ್ದಾಗ ಬೇಲೂರಿನ ಮೂಲಸ್ಥಾನದೇವರಿಗೆ ದಾನನೀಡಿದ ವಿವರಗಳಿವೆ[೨೩೩]. ಹೊಯ್ಸಳ ಒಂದನೆಯ ನರಸಿಂಹನ ಮಹಾಸಾಮಂತ ಬಿಟ್ಟಿದೇವನು ಹುಳಿಯೇರುವೃತ್ತಿಯನ್ನಾಳುತ್ತಿದ್ದಾಗ ಅವನ ಪಾದಪದ್ಮೋಪಜೀವಿಯಾದ ಹೆರ್ಗಡೆ ಬೀಚ ಶಿವದೇವಾಲಯ ಮತ್ತು ಕೆರೆಗಳನ್ನು ಕಟ್ಟಿಸಿದ ಉಲ್ಲೇಖ ಕ್ರಿ.ಶ. ೧೧೯೯ರ ಕಂಪನಹಳ್ಳಿ ಶಾಸನದಿಂದ ತಿಳಿಯುತ್ತದೆ[೨೩೪]. ಕ್ರಿ.ಶ. ೧೨೬೧ರ ಕೋಟೇಶ್ವರದ ಶಾಸನವೊಂದು ವೀರಪಾಂಡ್ಯಆಳುಪನಾಳ್ವಿಕೆಯಲ್ಲಿ ಅವನ ಪೆರ್ಗಡೆ ನರಸಿಂಗವೆರ್ಗಡೆಯನ್ನು ಉಲ್ಲೇಖಿಸುತ್ತದೆ[೨೩೫].

ಮಹಾಮಂಡಳೇಶ್ವರ ಸಿಂದ ಪೆರ್ಮಾಡಿಯ ಕಾಲದಲ್ಲಿ ಸಿಂದನೂರದ ಸುಂಕವೆರ್ಗಡೆ ನಾಗದೇವಯ್ಯನು ಅಲ್ಲಿನ ಎಲ್ಲಾ ಸುಂಕವನ್ನು ರಾಮೇಶ್ವರ ದೇವರಿಗೆ ಬಿಟ್ಟನೆಂದು ತಿಳಿಯುತ್ತದೆ[೨೩೬]. ಗೋವೆಯ ಕದಂಬ ಮಹಾಮಂಡಳೇಶ್ವರ ಎರಡನೆಯ ಜಯಕೇಶಿಯ ಆಳ್ವಿಕೆಯಲ್ಲಿ ಮಂದೂರ ಸ್ವಯಂಭುದೇವರಿಗೆ ಸುಂಕವೆರ್ಗಡೆ ಶಂಕರಯ್ಯನಾಯಕನು ಸುಂಕಬಟ್ಟೆ, ಪನ್ನಾಯವನ್ನು ಬಿಟ್ಟ ಉಲ್ಲೇಖ ಕ್ರಿ.ಶ. ೧೧೩೮ರ ಮದನಭಾವಿ ಶಾಸನದಿಂದ ತಿಳಿಯುತ್ತದೆ[೨೩೭]. ಕ್ರಿ.ಶ. ೧೨ನೆಯ ಶತಮಾನದ ಶಾಸನವೊಂದರಲ್ಲಿ ಸಿಂದವಂಶದ ಮಹಾಮಂಡಳೇಶ್ವರ ಬೊಪ್ಪರಸನ ಆಳ್ವಿಕೆಯಲ್ಲಿ ಸುಂಕವೆರ್ಗಡೆ ಮೇದಿಮಯ್ಯಗಳು ಮುಳಗುಂದ-೧೨ರ ಜೊತೆ ಹಲವು ಕಂಪಣಗಳ ನಾಡರಸುಗೈಯ್ಯುತ್ತಿದ್ದ ಉಲ್ಲೇಖವಿದೆ[೨೩೮].

**ನ್ಯಾಯಾಡಳಿತ :**

ದುಷ್ಟನಿಗ್ರಹ ಮತ್ತು ಶಿಷ್ಟಪರಿಪಾಲನೆಗಳು ರಾಜನ ಪ್ರಮುಖ ಕರ್ತವ್ಯಗಳಾಗಿದ್ದವು. ಇವೆರಡನ್ನು ಸರಿಯಾಗಿ ನಡೆಸಲು ರಾಜನು ಆಜ್ಞೆಗಳನ್ನು ಹೊರಡಿಸುತ್ತಿದ್ದನು. ಹಾಗೆಯೇ ಶಿಷ್ಟರಿಗೆ ನ್ಯಾಯ ದೊರಕುವಂತೆ ದುಷ್ಟರಿಗೆ ಸರಿಯಾದ ಶಿಕ್ಷೆಯಾಗುವಂತೆ ಕ್ರಮ ಕೈಗೊಳ್ಳುತ್ತಿದ್ದನು. ಅನ್ಯಾಯವನ್ನು ನಿರ್ಮೂಲನೆ ಮಾಡಬೇಕಾದರೆ ದಂಡಹಾಕುವುದು ಅವಶ್ಯವೆಂದು ಕಾಮಾಂದಕ ಹೇಳಿದರೆ, ಜಗದಲ್ಲಿ ಶಿಷ್ಟ ಎನಿಸಿಕೊಳ್ಳುವವನನ್ನು ದುಷ್ಟರು ದುರ್ಬಲನೆಂದು ತಿಳಿದು ದುಷ್ಟರೇ ಹೆಚ್ಚಾದಾಗ ದಂಡದಿಂದಲೇ ಅಂಥವರನ್ನು ನಿರ್ಮೂಲನೆ ಮಾಡುವುದು ಯೋಗ್ಯ ಉಪಾಯವೆಂದು ಮನು ಹೇಳುತ್ತಾನೆ[೩೯].

ಸಾಮಂತ ಅರಸರುಗಳ ನ್ಯಾಯಾಡಳಿತದ ಕುರಿತು ನೇರವಾಗಿ ಶಾಸನ ಹಾಗೂ ಸಾಹಿತ್ಯಕೃತಿಗಳಿಂದ ಹೆಚ್ಚಿನ ವಿಷಯ ತಿಳಿದು ಬರುವುದಿಲ್ಲ. ಆದರೂ ಅವರ ಕಾಲದ ನ್ಯಾಯದ ಕುರಿತು ಶಾಸನಗಳು ಹೇಳುವ ದುಷ್ಟನಿಗ್ರಹ, ಶಿಷ್ಟ ಪರಿಪಾಲನೆಯಿಂದ ರಾಜ್ಯಂಗೆಯುತ್ತಮಿರೆ, ಎಂಬ ಶಾಸನೋಕ್ತಿಯಿಂದ ಆ ಕಾಲದಲ್ಲಿ ಅರಸ ದುಷ್ಟರನ್ನು ಶಿಕ್ಷಿಸಿ, ಶಿಷ್ಟರನ್ನು ಪರಿಪಾಲಿಸಲು ಶ್ರಮಿಸುತ್ತಿದ್ದನೆಂದು ತಿಳಿದುಕೊಳ್ಳಬಹುದಾಗಿದೆ. ಮುಖ್ಯವಾಗಿ ಕೇಂದ್ರದಲ್ಲಿ ಅರಸನೇ ಮುಖ್ಯ ನ್ಯಾಯಾಧೀಶನಾದರೆ, ಸಾಮ್ರಾಜ್ಯದ ಉಳಿದ ಭಾಗಗಳಲ್ಲಿ ಆಡಳಿತ ನಡೆಸುವ ಮಹಾಮಂಡಳೇಶ್ವರ ಅಥವಾ ಮಹಾಸಾಮಂತರು, ನಾಳ್ಗಾವುಂಡರು, ಗಾವುಂಡರು ತಮ್ಮ ಆಳ್ವಿಕೆಗೊಳಪಟ್ಟ ಪ್ರದೇಶಗಳಲ್ಲಿ ಮುಖ್ಯ ನ್ಯಾಯಾಧೀಶರಾಗಿದ್ದರು. ಸಣ್ಣಪುಟ್ಟ ವ್ಯಾಜ್ಯಗಳನ್ನು, ತಂಟೆ-ತಕರಾರುಗಳನ್ನು ಹಿರಿಯರು ಕೂಡಿ ಗ್ರಾಮಗಳಲ್ಲಿ ತಾವೇ ಪರಿಹರಿಸುತ್ತಿದ್ದರು. ದೊಡ್ಡ ಹಾಗೂ ಗಂಭೀರ ಅಪರಾಧಗಳನ್ನು ಸಾಮಂತರು, ಮಹಾಮಂಡಳೇಶ್ವರರು, ದಂಡನಾಯಕರು, ಹಿರಿಯ ಅಧಿಕಾರಿಗಳು ಬಗೆಹರಿಸುತ್ತಿದ್ದರು. ಅದಕ್ಕಿಂತ ದೊಡ್ಡ ಅಪರಾಧಗಳೇನಾದರೂ ಇದ್ದರೆ ಚಕ್ರವರ್ತಿಗಳೇ ನ್ಯಾಯ ತೀರ್ಮಾನ ಮಾಡಿ ತೀರ್ಪು ನೀಡುತ್ತಿದ್ದರು. ಅಪರಾಧಗಳ ವಿಚಾರಣೆ ನಡೆಸಿ ಅಪರಾಧಿಗಳಾದವರಿಗೆ ಯೋಗ್ಯವಾದ ಶಿಕ್ಷೆ-ದಂಡನೆ ವಿಧಿಸುವುದು, ಯಾವ ವಿಷಯದಲ್ಲಾಗಲೀ ಜಗಳ-ತಂಟೆಗಳು ಉದ್ಭವಿಸಿದಾಗ, ಯೋಗ್ಯರೀತಿಯ ನ್ಯಾಯಕ್ಕೆ ಕೊಂಡು ನಿರ್ಣಯ ನೀಡುವುದು ಅವರ ಕರ್ತವ್ಯವಾಗಿತ್ತು. ನ್ಯಾಯವಿಲ್ಲದ ಅರಸನ ಊರಲ್ಲಿರುವುದು ಮರ್ಯಾದೆಗೇಡು ಎಂದು ನಯಸೇನ ಹೇಳಿರುವುದನ್ನಿಲ್ಲಿ ಗಮನಿಸಬಹುದಾಗಿದೆ. ಬೇರೆ ಬೇರೆ ಅಪರಾಧಗಳಿಗೆ ಕೊಡಲಾಗುತ್ತಿದ್ದ, ವಿವಿಧ ತರಹದ ಶಿಕ್ಷೆಗಳ ವಿವರ ಅವನ ಧರ್ಮಾಮೃತದಲ್ಲಿ ಕಂಡುಬರುತ್ತದೆ[೪೦].

ಕ್ರಿ.ಶ.೮೦೦ರ ಶಾಸನವೊಂದು ಹೊಲವನ್ನು ಅಳೆಯುವಾಗ ಅಧಿಕಾರಿಯೊಬ್ಬನು ನಾಲ್ಕು ಎತ್ತಿನ ಹೊಲವನ್ನು ಆರು ಎತ್ತಿನ ಹೊಲವೆಂದು ನಿರ್ಧರಿಸಿ ಮೋಸಮಾಡಿದನೆಂದೂ, ಅದನ್ನು ತಿಳಿದು ರಾಜನು ಹಿಂದಿನಂತೆಯೇ ಗದ್ದೆಯನ್ನು ಅಳೆದುಕೊಟ್ಟನೆಂದು ತಿಳಿಸುತ್ತದೆ[೪೧]. ಹೀಗೆ ಆಸ್ತಿಯನ್ನು ಕೊಂಡುಕೊಳ್ಳುವಾಗ ಆಗುವ ಮೋಸದಲ್ಲಿ ರಾಜನು ಮಧ್ಯ

ಪ್ರವೇಶ ಮಾಡಿ ಅದನ್ನು ಸರಿಪಡಿಸುತ್ತಿದ್ದನು. ಇದರಿಂದ ರಾಜನು ಅನ್ಯಾಯಗಳನ್ನು ಸಹಿಸಿಕೊಳ್ಳದೆ ಸರಿಪಡಿಸುತ್ತಿದುದು ಸ್ಪಷ್ಟವಾಗುತ್ತದೆ. ಸಣ್ಣ ಪುಟ್ಟ ವ್ಯಾಜ್ಯಗಳೇನಾದರೂ ತಲೆದೋರಿದ್ದರೆ, ಊರ-ಹಿರಿಯರು ಕೂಡಿ ಅವುಗಳನ್ನು ಪರಿಹರಿಸುತ್ತಿದ್ದರು. ಕೆಲವೊಮ್ಮೆ ರಾಜನವರೆಗೂ ಕೆಲವು ದೂರುಗಳು ಬರುತ್ತಿದ್ದವು. ಇಂತಹ ಅಪರಾಧಕ್ಕೆ ಇಷ್ಟು ಶಿಕ್ಷೆ ಅಥವಾ ದಂಡವೆಂದು ಆಗಿನ ಆಡಳಿತಗಾರರು ಮೊದಲೇ ನಿರ್ಧರಿಸಿದಂತೆ ಕಾಣುತ್ತದೆ. ಕ್ರಿ.ಶ.೭೫೦ರ ಶಾಸನವೊಂದು ಬೈಯ್ದವಂಗೆ ಪಣ-೧, ಹೊಡೆದವಂಗೆ-೬ಪಣ, ಇರಿದವಂಗೆ-೧೨ಪಣ ದಂಡ ವಿಧಿಸಿರುವುದನ್ನು, ಅಲ್ಲದೇ ಆ ದಂಡದಿಂದ ಬಂದ ಹಣವನ್ನು ಆ ಊರಿನ ಕೆರೆಯ ಜೀರ್ಣೋದ್ಧಾರಕ್ಕೆ ಬಿಟ್ಟಿರುವುದನ್ನು ಹೇಳುತ್ತದೆ[೨೪೨].

ಅಧಿಕಾರಕ್ಕಾಗಿ, ಸಂಪತ್ತಿನ ಆಸೆಗಾಗಿ, ದುಷ್ಟರು ನಾಡಿನ ಮೇಲೆ, ಊರುಗಳ ಮೇಲೆ ದಾಳಿ ಮಾಡುತ್ತಿದ್ದಂತಹ ಪ್ರಸಂಗಗಳನ್ನು ಊರಳಿವು, ತುರುಗೋಳ್, ಪೆಣ್ಬುಯಲ್ ಮತ್ತು ವೀರಗಲ್ಲುಗಳು ಹೇಳುತ್ತವೆ. ಹೀಗೆ ಮತ್ತೊಬ್ಬ ಅಧಿಕಾರಿ ಬೇರೊಬ್ಬರ ಅಧಿಕಾರಕ್ಕಾಗಿ, ಅವರ ಮೇಲೆ ಅತಿಕ್ರಮಣ ಕೈಕೊಂಡಾಗ ಅಂಥವರನ್ನು ಅವರ ಮೇಲಿನ ಅಧಿಕಾರಿಗಳಾಗಲೀ ಅಥವಾ ರಾಜನಾಗಲೀ ಶಿಕ್ಷಿಸಬೇಕಾಗುತ್ತಿತ್ತು. ಮಹಾಮಂಡಳೇಶ್ವರ, ಮಹಾಸಾಮಂತ, ಮನ್ನೆಯರಸ ಹಾಗೂ ನಾಳ್ಗಾವುಂಡರುಗಳ ವಿಶೇಷಣಗಳನ್ನು ನೋಡಿದರೆ ರಾಜಾಜ್ಞೆಗಳನ್ನು ತಪ್ಪಿ ನಡೆದವರಿಗೆ ವಿಧಿಸುತ್ತಿದ್ದ ಶಿಕ್ಷೆಗಳು ಸಾಕಷ್ಟು ಕ್ರೂರವಾಗಿಯೇ ಇರುತ್ತಿದ್ದವೆಂದು ಊಹಿಸಬಹುದಾಗಿದೆ. ಇಂಥವುಗಳಲ್ಲಿ ತಪ್ಪು ಮಾಡಿದ ವ್ಯಕ್ತಿಯ ಬಾಯಿಯನ್ನು ಸುಡುವುದು, ನೇಣು ಹಾಕುವುದು, ಹಗ್ಗದಿಂದ ಕಟ್ಟಿಹಾಕುವುದು, ಸೆರೆಮನೆ ವಾಸಗಳು ಪ್ರಮುಖವಾಗಿದ್ದವು. ರಾಷ್ಟ್ರಕೂಟರ ಕಾಲದಲ್ಲಿ ಅವರಸಾಮಂತ ಗಂಗ ಶಿವಮಾರ ಅವಿಧೇಯತೆ ತೋರಿದಾಗ ಅವನನ್ನು ಸೆರೆಮನೆಯಲ್ಲಿಟ್ಟಿರುವುದನ್ನು ಇಲ್ಲಿ ನೆನೆಯಬಹುದು. ಮೇಲಿನ ಶಿಕ್ಷೆಗಳ ಜೊತೆಗೆ ಇನ್ನು ಕೆಲವು ಶಿಕ್ಷೆಗಳು ಪ್ರಾಚೀನ ಕರ್ನಾಟಕದಲ್ಲಿ ಜಾರಿಯಲ್ಲಿದ್ದವು.

ವಿವಾದವೊಂದನ್ನು ನಿರ್ಣಯಿಸಲು ಪ್ರಮಾಣಭೂತ ಸಾಕ್ಷಿಗಳು ದೊರಕದೆ ಹೋದಾಗ ದಿವ್ಯ ಎಂಬ ಪದ್ಧತಿಯನ್ನು ಅನುಸರಿಸಿ ಅಪರಾಧಿಯನ್ನು ಕಂಡುಹಿಡಿಯುವ ಪದ್ಧತಿ ಜಾರಿಯಲ್ಲಿತ್ತು. ಕರ್ನಾಟಕದಲ್ಲಿ ಸಪ್ತದಿವ್ಯ ಪದ್ಧತಿ ಆಚರಣೆಯಲ್ಲಿದ್ದ ವಿಷಯ ತಿಳಿಯುತ್ತದೆ. ಕೋಶ(ಕೋಪ), ರವಿ, ತುಂಡಲ, ಅಗ್ನಿ, ತಪ್ತಮಾನಿಷ, ಜಲ, ವಿಷ, ಇವೇ ಆ ಸಪ್ತದಿವ್ಯಗಳಾಗಿದ್ದವು[೨೪೩]. ದಿವ್ಯವನ್ನು ಹಿಡಿಯುವ ವ್ಯಕ್ತಿಯನ್ನು ಶೋಧ್ಯ ಎಂದು ಕರೆಯಲಾಗುತ್ತಿತ್ತು. ಶೋಧ್ಯನು ದಿವ್ಯಹಿಡಿಯುವ ಮುಂಚೆ ವಿವಾದಕ್ಕೆಡೆಯಾದ ತಪ್ಪನ್ನು ತಾನು ಮಾಡಿಲ್ಲವೆಂದು ಪತ್ರವೊಂದರಲ್ಲಿ ಬರೆದಿಡಬೇಕಾಗಿತ್ತು. ಕಾಸಿದ ತುಪ್ಪದಲ್ಲಿ ಕೈ ಎದ್ದುವುದು ಇತ್ಯಾದಿಗಳು ಹೆಚ್ಚು ಪ್ರಚಲಿತದಲ್ಲಿದ್ದವು. ನಯಸೇನನೂ ಸಹ ದಿವ್ಯಗಳ ಕುರಿತು ಧರ್ಮಾಮೃತದಲ್ಲಿ ಹೇಳಿದ್ದಾನೆ[೨೪೪].

**ನಗರ ಅಥವಾ ಪಟ್ಟಣಗಳ ಆಡಳಿತ :**

ಮಾನಸಾರದ ಪ್ರಕಾರ ಒಂದು ಊರು ಪುರ ಎನ್ನಿಸಿಕೊಳ್ಳಬೇಕಾದರೆ, ಅದರ ಸುತ್ತ-ಮುತ್ತ ಆರಾಮಗಳೂ, ತೋಟಗಳು ಇರಬೇಕು. ಬಹುವಿಧದ ಜನರು ವಾಸವಾಗಿರಬೇಕು. ಮಾರಾಟಗಾರರಿಂದ ಮತ್ತು ಕೊಳ್ಳುವವರಿಂದ

ಕಿಕ್ಕಿರಿದು ತುಂಬಿ ಗದ್ದಲದಿಂದ ಕೂಡಿರಬೇಕು. ಏಳು ದೇವತೆಗಳ ದೇವಸ್ಥಾನಗಳಿಂದ ರಾರಾಜಿಸುತ್ತಿರಬೇಕು[೨೪೫]. ಹಳ್ಳಿ-ಗ್ರಾಮ ಮತ್ತು ಪುರ-ಪಟ್ಟಣಕ್ಕೂ ಮಧ್ಯೆ ಒಂದು ಗೆರೆಯನ್ನೆಳೆಯುವುದು ಕಷ್ಟವಾದರೂ ಮಾನಸಾರದ ವರ್ಣನೆಯು ಪಟ್ಟಣದ ಚಿತ್ರಣವನ್ನು ತಕ್ಕ ಮಟ್ಟಿಗೆ ನೀಡುತ್ತದೆ. ಹೀಗೆ ಪುರ-ಪಟ್ಟಣಗಳು ಸಕಲ ನಾಗರಿಕ ಸೌಲಭ್ಯಗಳನ್ನು ಪಡೆದ ಊರು ಗ್ರಾಮಗಳ ವಿಸ್ತೃತ ರೂಪಗಳೆನ್ನಬಹುದು. ಸಾಮಂತ ಅರಸುಮನೆತನಗಳ ಶಾಸನಗಳನ್ನಭ್ಯಸಿಸಿದಾಗ ಅಲ್ಲಿ ಉಲ್ಲೇಖಗೊಂಡ ರಾಜಧಾನಿ, ಉಪವಿಭಾಗಗಳ ಮುಖ್ಯ ಸ್ಥಳಗಳು, ನೆಲೆವಿಡು ಹಾಗೂ ಅಗ್ರಹಾರಗಳು, ಪಟ್ಟಣಗಳಾಗಿದ್ದವು. ಪಟ್ಟಣಗಳು ಬಹುಮಟ್ಟಿಗೆ ವ್ಯಾಪಾರಿ ಕೇಂದ್ರಗಳು. ಬಹುಶಃ ವ್ಯಾಪಾರದಿಂದಲೇ ಊರುಗಳು ಪಟ್ಟಣಗಳಾಗಿರಬೇಕು. "ಸೆಟ್ಟಿ ಬಿಟ್ಟಲ್ಲೇ ಪಟ್ಟಣ" ಎನ್ನುವ ಗಾದೆ ಮಾತಿಗೆ ಅರ್ಥವಿರಲೇಬೇಕು[೨೪೬]. ಉದಾ: ಪಟ್ಟಣಗಳು ಮೊದಲು ಒಂದು ಚಿಕ್ಕ ಹಳ್ಳಿಯಾಗಿದ್ದು, ನಂತರ ಅದು ನಗರ-ಪಟ್ಟಣವಾಯಿತು. ಆದರೆ ಪಟ್ಟಣಗಳಲ್ಲಿ ಹೆಚ್ಚಾಗಿ ರಾಜನು ಕಂದಾಯ ಸಂಗ್ರಹಕ್ಕಾಗಿ ಮತ್ತದರ ಕಾರ್ಯ ಚಟುವಟಿಕೆಗಳಿಗಾಗಿ ನೇಮಿಸಿದ್ದ ಅಧಿಕಾರಿಗಳು ಇರುತ್ತಿದ್ದರು. ಪೌರಕಾರ್ಯಕ್ಕೆ ಪ್ರತ್ಯೇಕವಾದ ಸಭೆ ಇರದಿದ್ದರೂ ಪಟ್ಟಣದ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ನಗರ ಅಥವಾ ನಖರ ಎಂಬ ವರ್ತಕ ಶ್ರೇಣಿಯು ಮಾತ್ರ ಇರುತ್ತಿತ್ತಲ್ಲದೇ, ಅದು ಪೌರ ಸಮಾಜದಲ್ಲಿ ಪ್ರಮುಖ ಪಾತ್ರವಹಿಸುತ್ತಿತ್ತು. ಪಟ್ಟಣದಲ್ಲಿ ವಾಸಮಾಡುತ್ತಿದ್ದ ವರ್ತಕರು, ಬ್ರಾಹ್ಮಣರು, ಉಳಿದ ವೃತ್ತಿಯ ಜನರು ತಮ್ಮದೇ ಆದ ಪ್ರತ್ಯೇಕ ಶ್ರೇಣಿ-ಸಂಘಗಳನ್ನು ಹೊಂದಿದ್ದರು. ಈ ಸಂಘದ ಸದಸ್ಯರು ರಾಜನ ಶಾಸನಗಳನ್ನು ತಮ್ಮ ಜನರು ಅನುಸರಿಸುವಂತೆ ನೋಡಿಕೊಳ್ಳುತ್ತಿದ್ದರು. ಇಂತಹ ಸಾಮೂಹಿಕ ಸಭೆಗಳಲ್ಲಿ ನಖರರು ಪ್ರಭಾವಶಾಲಿಗಳಾಗಿ ಕಾರ್ಯನಿರ್ವಹಿಸುತ್ತಿದ್ದರು.

ನಮ್ಮ ಅಧ್ಯಯನದ ಅವಧಿಯ ಹೆಚ್ಚಿನ ನಗರ ಪಟ್ಟಣಗಳೆಲ್ಲ ನಾಡಿನ ಉಪ-ವಿಭಾಗಗಳ ಮುಖ್ಯ ಕೇಂದ್ರ ಸ್ಥಳಗಳಾಗಿರುವುದರಿಂದ ಅವುಗಳ ಆಡಳಿತವನ್ನು ಸಾಮಂತ, ಮನ್ನೆಯ, ನಾಳ್ಗಾವುಂಡ, ವರ್ತಕಸಂಘದ ಮುಖ್ಯಸ್ಥ, ಪಟ್ಟಣಶೆಟ್ಟಿ, ಪಟ್ಟಣಸ್ವಾಮಿ, ಸುಂಕಪೆರ್ಗ್ಗಡೆಗಳು, ದಂಡನಾಯಕರು, ಮೊದಲಾದವರು ನೋಡಿಕೊಂಡು ಹೋಗುತ್ತಿದ್ದರು. ಪಟ್ಟಣಗಳಲ್ಲಿ ನಡೆಯುವ ಸಂತೆ-ಪೇಟೆಗಳಲ್ಲಿ ಮಾರಾಟವಾಗುವ ವಸ್ತುಗಳ ಮೇಲಿನ ಸುಂಕವನ್ನು ಆಯಾ ವಿಭಾಗದ ಸುಂಕಾಧಿಕಾರಿ, ಸುಂಕಪೆರ್ಗ್ಗಡೆಗಳೇ ಸಂಗ್ರಹಿಸುತ್ತಿದ್ದರು. ಒಟ್ಟಿನಲ್ಲಿ ಕೇಂದ್ರ ಸರಕಾರದ ರಾಜಧಾನಿ ಪಟ್ಟಣದ ಆಡಳಿತ ವ್ಯವಸ್ಥೆಯ ಮಾದರಿಯಲ್ಲಿಯೇ ನಗರ-ಪಟ್ಟಣಗಳು ಆಡಳಿತ ವ್ಯವಸ್ಥೆ ಅವುಗಳ ಅಧಿಕಾರಿ ವರ್ಗವು ಇರುತ್ತಿತ್ತು.

ಕ್ರಿ.ಶ.೯೦೨ ಶಾಸನವೊಂದರಿಂದ ತಿಳಿದು ಬರುವಂತೆ, ಮುಳಗುಂದವು ಈ ಕಾಲದಲ್ಲಿಯ ಒಂದು ಪ್ರಮುಖ ನಗರವಾಗಿದ್ದು ಅಲ್ಲಿ ನಗರಸಭೆಯ ಆಡಳಿತವಿತ್ತು. ಅದರ ಆಡಳಿತವನ್ನು ೧೨೦ ಮಹಾಜನರು ನೋಡಿಕೊಳ್ಳುತ್ತಿದ್ದರು[೨೪೭]. ಕ್ರಿ.ಶ.೯೭೫ರ ಶಾಸನವೊಂದು ಆ ನಗರವನ್ನು ೫ ಭಾಗಗಳಾಗಿ (ವಾರ್ಡುಗಳಾಗಿ) ವಿಂಗಡಿಸಲಾಗಿತ್ತೆಂದು ಉಲ್ಲೇಖಿಸಿದೆ[೨೪೮]. ಶ್ರೀಮದನಾದಿಪಟ್ಟಣವೆಂದು ಇದನ್ನು ಉಲ್ಲೇಖಿಸಲಾಗಿದೆಯಲ್ಲದೇ, ಇದು

ಬಹುದೊಡ್ಡ ವ್ಯಾಪಾರಿ ಕೇಂದ್ರವಾಗಿದ್ದು, ಇಲ್ಲಿ ಹತ್ತಿ, ಬೆಲ್ಲ, ಭತ್ತ, ಮರ, ಬಿದಿರು, ಎಣ್ಣೆ ಮುಂತಾದವುಗಳ ವ್ಯಾಪಾರವು ಎತ್ತು, ಕತ್ತೆ, ಬಂಡೆಗಳ ಮೂಲಕ ನಡೆಯುತ್ತಿತ್ತು[೨೫೯]. ಈ ಪಟ್ಟಣದಲ್ಲಿ ೩೦೦ ಸೆಟ್ಟಿಗಾವುಂಡಗಳು, ೧೨೦ ಮಹಾಜನಗಳು, ಐವತ್ತೆರಡು ಸಾಲಿಗರು, ೧೨೨ ತೆಲ್ಲಿಗರು, ೫೮ ಮಾಲೆಗಾರರು, ಪಂಚಮಠಸ್ಥಾನಗಳು ಇದ್ದವೆಂದು ತಿಳಿದುಬರುತ್ತದೆ[೨೬೦]. ಈ ೧೨೦ ಮಹಾಜನರೇ ಕಲ್ಯಾಣಿ ಚಾಲುಕ್ಯರ ಕಾಲದವರೆಗೂ ಮುಂದುವರೆದದ್ದನ್ನು ಅಲ್ಲಿನ ಕ್ರಿ.ಶ. ೧೦೬೨ರ ಶಾಸನದಿಂದ ತಿಳಿಯುತ್ತದೆ[೨೬೧]. ಗೊಂಕದೇವನ ರಾಜಧಾನಿಯಾದ ತೇರದಾಳವನ್ನು ಪುರವೆಂದು ಕರೆಯಲಾಗಿದೆ. ಅಲ್ಲಿಯ ಧರ್ಮಗಳನ್ನು ಅಲ್ಲಿನ ಹನ್ನೆರಡು ಗಾವುಂಡಗಳು ರಕ್ಷಿಸುತ್ತಿದ್ದರು[೨೬೨]. ಗೊಂಕದೇವನು ಅಲ್ಲಿ ಗೊಂಕಜಿನಾಲಯವನ್ನು ಕಟ್ಟಿಸಿ ಅದಕ್ಕೆ ದತ್ತಿಗಳನ್ನು ಬಿಡುವಾಗ ಆ ಹನ್ನೆರಡು ಗಾವುಂಡಗಳನ್ನು, ಆ ಪುರದ ನಖರಗಳನ್ನು ಬರಮಾಡಿಕೊಂಡನೆಂದು ತಿಳಿದುಬರುತ್ತದೆ. ತರ್ದವಾಡಿ-೧೦೦೦ದಲ್ಲಿನ ಬಣಂಜುಪಟ್ಟಣ[೨೬೩]ವೆನಿಸಿದ ಇಂಗಳೇಶ್ವರವು "ಊರ್ಜ್ಜಿತ ವಿಭವಾಭ್ಯುದಯ ಸರ್ವವೇದ ಶಾಸ್ತ್ರೋಚಿತ ಸದ್ವಿವೇಕನಯ ನಿರ್ಮ್ಮಳ ಧರ್ಮಸಂವ್ರಿದ್ಧಿ ಲೋಕರೋಮಾಂಚನಗಣ್ಯ ಪುಣ್ಯಕ್ರಿತಿತತ್ಪರ ಸತ್ಪಥವರ್ತ್ತಿ ಸಜ್ಜನ"ರಿಂದ ಕರ್ನಾಟ ಕಾಶೀಪುರವೆನಿಸಿತ್ತು[೨೬೪]. ಶಿಲಹಾರ ಮಹಾಸಾಮಂತರ ರಾಜಧಾನಿಯಾದ ಮುತ್ತಗೆಯು ವ್ಯಾಪಾರೀ ಕೇಂದ್ರವಾಗಿದ್ದು, ಅಲ್ಲಿನ ನಖರರಿಂದ ವಡ್ಡವ್ಯವಹಾರಿಗಳಿಂದ ಪ್ರಸಿದ್ಧವಾಗಿತ್ತು[೨೬೫]. ಮೂವತ್ತಾರು ಬೀಡಿನ ಸೆಟ್ಟಿಯರು, ಗೌಡ, ಸೆಟ್ಟಿಗುತ್ತ, ಮುಂಮುರಿದಂಡ, ಗವರೆ-ಗಾತ್ರಿಗ, ಸುಂಕಿಗರನ್ನು ನೆರೆಯಿಸಿ ಮಾಡಿಸಿದ ಧರ್ಮ-ಸಂತೆ ಧರ್ಮದಾವರೆಗಳಿಂದ ಪ್ರಸಿದ್ಧಗೊಂಡ ರಾಜಧಾನಿ ಬೇವಿನೂರು ಹಲವು ವೇದಶಾಸ್ತ್ರಾಗಮ ವಿದ್ಯಾಭ್ಯಾಸಿ ವಿಪ್ರರಿಂದ, ಪ್ರೌಢೇಕ್ಷುಗದಂಡಂಗಳಿಂದ ಉದ್ಯಾನಗಳಿಂದ, ಭೂಲೋಕದ ಪಟ್ಟಣಗಳಿಗೆ ಸರಿದೊರೆಯಿಲ್ಲದಂತಾಗಿತ್ತು[೨೬೬]. ಸವದತ್ತಿಯ ರಟ್ಟವಂಶದ ನಾಲ್ಕನೆಯ ಕಾರ್ತವೀರ್ಯನ ಕಾಲಕ್ಕೆ ಅವರ ರಾಜಧಾನಿಯಾದ ಬೆಳಗಾವಿ ಅಥವಾ ವೇಣುಗ್ರಾಮವು ಅತ್ಯಂತ ಸಂಪದ್ಭರಿತವಾದ, ಪ್ರಮುಖ ಪಟ್ಟಣವಾಗಿತ್ತೆಂದು ಅಲ್ಲಿನ ಕ್ರಿ.ಶ. ೧೨೦೧ರ ಶಾಸನದಿಂದ ತಿಳಿದುಬರುತ್ತದೆ[೨೬೭]. ಅಲ್ಲದೇ ಬೆಳಗಾವಿಯು ಲಾಟ, ಕೇರಳ ಮುಂತಾದ ದೇಶಗಳಿಂದ ವ್ಯಾಪಾರಿಗಳನ್ನು ಆಕರ್ಷಿಸುತ್ತಿತ್ತು ಎಂದು ಶಾಸನವೊಂದು ಉಲ್ಲೇಖಿಸಿದೆ[೨೬೮]. ಸಿಂದಗೆಯು ಎಲ್ಲೆಡೆಯಲ್ಲಿಯೂ ತಾವರೆ ನಯಿದಲು, ಕೊಸಗು, ಸಂಪಗೆ, ಮಲ್ಲಿಗೆ ಮೊಲ್ಲೆಗಳಿಂದ ತುಂಬಿದ ಪೆರ್ಗ್ಗೊಳ ಕೆರೆ, ಭಾವಿಯಿಂದ, ದೇವತಾಚಯ, ಹೂವಿನತೋಟ, ಕಳವೆಗದ್ದೆಗಳಿಂದ ಇಂದ್ರನ ಪುರಕ್ಕಣೆಯಾಗಿತ್ತು[೨೬೯]. ಅಷ್ಟಾದಶ ಪಟ್ಟಣಿಗರು, ಎಂಟುನಾಡುಗಳು, ಅಯ್ಯಾವೊಳೆ ಐನೂರ್ವ್ವರುಸ್ವಾಮಿಗಳು, ಸೆಟ್ಟಿಗುತ್ತರು, ಸೆಟ್ಟಿಯರು, ಗಂಧವಣಿಗರು ಮೊದಲಾದವರಿಂದ ತುಂಬಿದ್ದ ಯರಗಲ್ ಕ್ರಿತಯುಗ, ತ್ರೇತೆ, ದ್ವಾಪರ, ಕಲಿಯುಗ ಮೊದಲಾಗೆ ಬ್ರಹ್ಮವಿಷ್ಣುಮಹೇಶ್ವರ ಮತಗಳಿಂದ ಚೌಷಷ್ಠಿಯೋಗಪೀಠದಿಂದ ಶೋಭಿಸುತ್ತಿತ್ತು[೨೭೦]. ಸಿಂದಮನೆತನದ ರಾಜಧಾನಿಯಾದ ಕುರುಗೋಡು ಪಟ್ಟಣವು ಧನದನಗಳನ್ನು ದಾನವಾಗಿ ನೀಡುವದರಿಂದ, ಕೊಳ್ಳುವ-ಮಾರುವ ಜನಗಳಿಂದ ಹಾಗೂ ವಿವೇಕಿಗಳಿಂದ ಕೂಡಿದ ಭೋಗಾವತಿ ಎನಿಸಿದ್ದತಲ್ಲದೇ[೨೭೧], ಉದ್ಯಮ ಪರಾಯಣರ್ ದುಷ್ಪರ್ಗ್ಗೆದುಷ್ಪರ್ ಸಿಷ್ಟರ್ಗ್ಗೆ, ಸಿಷ್ಟರ್ ಎನಿಸಿದ ಪಟ್ಟಣಸ್ವಾಮಿಗಳಿಂದಾಗಿ ಅಭಿನವ ದ್ವಾರಾವತೀಪುರವೆನಿಸಿತ್ತು[೨೭೨]. ಅದು ಸೆಟ್ಟಿ, ನಖರ, ಪಟ್ಟಣಸ್ವಾಮಿ, ತಂಬುಲಿಗ,

ಮುಮ್ಮುರಿದಂಡ, ಗವರೆ-ಗಾತ್ರಿಗ, ನಾನಾದೇಶಿಗಳ ನೆಲೆಯಾಗಿತ್ತು. ಬಲ್ಲಕುಂದೆಯು ಶಿಲಾಮಯ ದೇವಾಲಯಗಳಿಂದ ಕೂಡಿ ತೀರ್ಥಕ್ಷೇತ್ರವೆನಿಸಿದ್ದಿತಲ್ಲದೆ ಅದೊಂದು ನಗರವೂ ಆಗಿತ್ತು[೨೬೩]. ಕುಡಿತಿನಿಯು ಸ್ವಾಮಿ ಕಾರ್ತಿಕೇಯ ದೇವಾಲಯದಿಂದಾಗಿ ಶ್ರೀ ಸ್ವಾಮಿದೇವರ ಪಟ್ಟಣವಾಗಿತ್ತು[೨೬೪]. ವರಸಸ್ಯ ಸಮೃದ್ಧಿ ಫಳದಿಂ ಕೋಟೆ, ಗೋಪುರ, ಆರಾಮ, ಬಾಳೆ-ನಿಂಬೆ-ಮಾವು-ತೆಂಗು-ಕಬ್ಬಿನ ತೋಟಗಳಿಂದ, ತಾವರೆಕೊಳ, ಕೆರೆ-ಭಾವಿ-ಬಹಿರ್ವನಗಳಿಂದ ಕೋಳೂರು ಪುರವು ಶೋಭಿಸುತ್ತಿತ್ತು[೨೬೫].

ಕ್ರಿ.ಶ. ೮ನೆಯ ಶತಮಾನದಲ್ಲಿ ಆಳುಪ ಚಿತ್ರವಾಹನನ ಆಳ್ವಿಕೆಯ ಕಾಲದಲ್ಲಿ ಮಂಗಲಪುರದ ಉಲ್ಲೇಖವಿದೆ[೨೬೬]. ಆಳುಪ ಪೃಥ್ವೀಸಾಗರನ ಆಳ್ವಿಕೆಯ ಕಾಲಕ್ಕೆ ಉದಯಪುರ ನಗರವೊಡಗೂಡಿ ಪೊಟ್ಟಿಪೊಂಬುಚ್ಚ ನಗರಕ್ಕೆ ನೀರು ನೆಲಗಳಿಂದ ಬರುವ ಸುಂಕದಲ್ಲಿ ಅರ್ಧವನ್ನು ಅಲ್ಲಿನ ನಖರಗಳಿಗೆ ಬಿಟ್ಟ ಉಲ್ಲೇಖ ಕ್ರಿ.ಶ. ೯ನೆಯ ಶತಮಾನದ ಶಾಸನದಲ್ಲಿ ಕಂಡುಬರುತ್ತದೆ[೨೬೭]. ನಂತರ ವಿಜಯಾದಿತ್ಯ ಆಳುಪೇಂದ್ರನ ಆಳ್ವಿಕೆಯಲ್ಲಿ ಇದೇ ದಾನವನ್ನು ಮುಂದುವರೆಸಿದ ಉಲ್ಲೇಖವಿದೆ[೨೬೮]. ಆಳುಪ ವಿಜಯಾದಿತ್ಯನ ಇನ್ನೊಂದು ಶಾಸನದಲ್ಲಿ ಕೊಳಲ ನಖರಕ್ಕೆ ಆಡಳಿತಗಾರರನ್ನಾಗಿ ಕರಸೀನಾಯ್ಗನನ್ನು ನೇಮಕಮಾಡಲಾಯ್ತು. ಆಗ ಉದಯಪುರದ ನಖರರು ಜತೆಗಿದ್ದರು[೨೬೯]. ಶಾಂತರ ತೈಲಪದೇವನ ಕಾಲದ ಶಾಸನವೊಂದು ಅವನ ಕಾಲದಲ್ಲಿ ಪಟ್ಟಣಸ್ವಾಮಿ ನೊಕ್ಕಯ್ಯ ಸೆಟ್ಟಿ ದೇಗುಲವೊಂದನ್ನು ಕಟ್ಟಿಸಿದ ವಿಷಯ ಉಲ್ಲೇಖಿಸಿದೆ[೨೭೦]. ಕ್ರಿ.ಶ. ೧೧೫೪ರ ಶಾಸನವೊಂದು ತಿಳಿಸುವಂತೆ ಆಳುಪರ ಕವಿಯಾಳುಪೆಂದ್ರ ರಾಜ್ಯವಾಳುತ್ತಿದ್ದಾಗ ಹೊಸಪಟ್ಟಣ ಬಸುರೆಪುರದ ನಖರೇಶ್ವರ ದೇವರಿಗೆ ದಾನ ನೀಡುವಾಗ ಅಲ್ಲಿನ ಸಮಸ್ತ ನಖರರುಗಳು ಹಾಗೂ ಒಕ್ಕಲುಗಳು ಹಾಜರಿದ್ದರು[೨೭೧].

**ಅಗ್ರಹಾರಗಳ ಆಡಳಿತ :**

ಅಗ್ರಹಾರವು ಅಗ್ರ=ಶ್ರೇಷ್ಠ+ಆಹಾರ=ಸ್ಥಳ ಎಂಬೆರಡು ಸಮಾಸ ಪದವಾಗಿದ್ದು, ಅದು ಶ್ರೇಷ್ಠರಿಗೆ ನೀಡಿದಂತಹ ಸ್ಥಳ ಅಥವಾ ಊರು ಎಂಬರ್ಥವನ್ನು ನೀಡುತ್ತದೆ[೨೭೨]. ಅಗ್ರಹಾರಗಳು ಬ್ರಾಹ್ಮಣರಿಗೆ ದತ್ತಿಯಾಗಿ ಬಿಟ್ಟುಕೊಟ್ಟಿದ್ದ ಊರುಗಳಾಗಿದ್ದವು. ಅಲ್ಲಿನ ಆದಾಯವೆಲ್ಲ ಬ್ರಾಹ್ಮಣರಿಗೆ ಸಲ್ಲುತ್ತಿತ್ತು. ಅಂತಹ ಆಗ್ರಹಾರಗಳ ಒಡೆಯರಾಗಿ ಮಹಾಜನರಿದ್ದರು. ಸಾಮಂತಅರಸುಮನೆತನಗಳ ಆಳ್ವಿಕೆಯ ಕಾಲದಲ್ಲಿ ಅನೇಕ ಅಗ್ರಹಾರಗಳಿದ್ದುದು ತಿಳಿದುಬರುತ್ತದೆ. ಅಗ್ರಹಾರಗಳ ಆಳ್ವಿಕೆಯನ್ನು ನೋಡಿಕೊಳ್ಳುವ ಮಹಾಜನ ಸಂಸ್ಥೆಯ ಬಗೆಗೆ ಹೆಚ್ಚಿಗೆ ತಿಳಿದುಬರುವದಿಲ್ಲ. ಆದರೆ ಈ ಸಂಸ್ಥೆಯಲ್ಲಿ ಹತ್ತರಿಂದ-ಐದುನೂರು ಅಥವಾ ಅದಕ್ಕಿಂತಲೂ ಹೆಚ್ಚು ಸಂಖ್ಯೆಯ ಮಹಾಜನರಿರುತ್ತಿದ್ದುದು ಕಂಡುಬರುತ್ತದೆ. ಅದರ ಸಂಖ್ಯೆ ಬಹುಶಃ ಆಯಾ ಅಗ್ರಹಾರದ ಬ್ರಾಹ್ಮಣರ ಗೃಹಸ್ಥರ ಸಂಖ್ಯೆಯನ್ನು ಸೂಚಿಸುವಂತೆ ಕಾಣುತ್ತದೆ. ಅಗ್ರಹಾರಗಳ ಸಂಪೂರ್ಣ ಕಾರ್ಯಚಟುವಟಿಕೆಗಳು ಮಹಾಜನರಿಂದಲೇ ನಿಯಂತ್ರಿಸಲ್ಪಡುತ್ತಿದ್ದವು. ದೇವಸ್ಥಾನಗಳ ನಿರ್ಮಾಣ, ವಿದ್ಯಾಭ್ಯಾಸ, ಅಲ್ಲದೇ ಸಾಮಾಜಿಕ ಕಾರ್ಯಗಳಾದ ಕೆರೆ-ಭಾವಿ ನಿರ್ಮಾಣ, ಅರವಟ್ಟಿಗೆಗಳ

ಸ್ಥಾಪನೆ, ಔಷಧಿ, ಚಿಕಿತ್ಸಾಲಯಗಳ ನಿರ್ಮಾಣ ಕಾರ್ಯಗಳನ್ನು ನಡೆಸಲು ದಾನದತ್ತಿಗಳನ್ನು ಮಹಾಜನರು ನೀಡಿದ್ದು ಅನೇಕ ಶಾಸನಗಳಿಂದ ತಿಳಿದುಬರುತ್ತದೆ. ಅಲ್ಲದೇ ಕೆಲವೊಮ್ಮೆ ಸಾಮಾನ್ಯಜನರಿಂದ, ಆಡಳಿತ ನಡೆಸುವ ಅರಸರು, ಸಾಮಂತರು, ಅಧಿಕಾರಿಗಳು ಮತ್ತು ಸಮಾಜದ ಎಲ್ಲವರ್ಗದ ಜನರಿಂದಲೂ ದಾನದತ್ತಿಗಳನ್ನು ಬಿಡಲು ಕೇಳಿಕೊಳ್ಳುತ್ತಿದ್ದರು. ಅಗ್ರಹಾರದ ನ್ಯಾಯ ಪರಿಪಾಲನೆಯು ಮಹಾಜನರ ಕರ್ತವ್ಯಗಳಲ್ಲಿ ಒಂದಾಗಿತ್ತು[೨೬೩]. ಇಂತಹ ಮಹಾಜನರ ಉಲ್ಲೇಖ ಶಾಸನಗಳಲ್ಲಿ ದೊರೆಯುತ್ತದೆ.

ವಿಜಯಾದಿತ್ಯನು ಕಿಸುವೊಳಲು ನೆಲೆವೀಡಿನಿಂದ ಆಳುತ್ತಿದ್ದಾಗ ಬಗ್ಗುವೂರನ್ನು ಬಣ್ಣಮಯ್ಯನಿಗೆ ಅಗ್ರಹಾರವನ್ನಾಗಿ ಮಾಡಿ ಬಿಡುತ್ತಾನೆ[೨೬೪]. ಸಿಂದವಂಶದ ಮಹಾಮಂಡಳೇಶ್ವರ ಎರಡನೆಯ ರಾಚಮಲ್ಲನು ಕೊತ್ತಲಜಿಂತೆ ಗ್ರಾಮವನ್ನು ಅಗ್ರಹಾರವನ್ನಾಗಿ ಮಾರ್ಪಡಿಸಿಕೊಡುತ್ತಾನೆ[೨೬೫]. ಕದಂಬವಂಶದ ಮಹಾಮಂಡಳೇಶ್ವರ ವೀರಸೋಮದೇವನು ಮೂರುಹಳ್ಳಿಗಳೊಡಗೂಡಿದ ಕೆಲ್ಲಿಗುಂಡ ಎಂಬ ಗ್ರಾಮದ ಸರ್ವಸ್ವಾಮ್ಯವನ್ನು ಎಪ್ಪತ್ತಾರು ಬ್ರಾಹ್ಮಣರಿಗೆ ಬಿಟ್ಟುಕೊಟ್ಟ ಉಲ್ಲೇಖ ಶಾಸನವೊಂದರಲ್ಲಿದೆ[೨೬೬]. ಗಂಗ ಶ್ರೀಪುರುಷನ ಮಹಾಸಾಮಂತನಾದ ಮುದುಕೊಂಗುಣಿಯದಿಯರಸ ಅರಿದಾಳ್ಕೆ-೭೦ನ್ನು ಆಳುತ್ತಿದ್ದಾಗ, ಕೆಸುಗೊಳಲ್ ವೊಡೆಯ ಮಹಾಜನರು ಅವನಿಂದ ಬ್ರಹ್ಮದೇಯವನ್ನು ಪಡೆದ ಉಲ್ಲೇಖ ಶಾಸನವೊಂದರಿಂದ ತಿಳಿಯುತ್ತದೆ[೨೬೭]. ಗಂಗ ಕೊಂಗುಣಿವರ್ಮನ ಕಾಲದಲ್ಲಿ ಎರೆಯರಸನೆಂಬುವನಿಗೆ ಅಗ್ರಹಾರವನ್ನು ಬಿಟ್ಟುಕೊಟ್ಟ ವಿಷಯ ತಿಳಿದುಬರುತ್ತದೆ[೨೬೮]. ಕ್ರಿ.ಶ. ೮೬೫ರಲ್ಲಿ ರಾಷ್ಟ್ರಕೂಟ ಅಮೋಘವರ್ಷನ ಸಾಮಂತನಾದ ಕುಪ್ಪೇಯನು ಪುರಿಗೆರೆ ನಾಡನ್ನು ಆಳುತ್ತಿದ್ದಾಗ, ಎಳ್ಪುನ್ಸೆಯ ೪೦ ಮಹಾಜನರು, ಗೊರವರು ಮತ್ತು ಇತರ ಅಧಿಕಾರಿಗಳು ಕೂಡಿ ದಾನವನ್ನು ನೀಡುತ್ತಾರೆ[೨೬೯]. ಕ್ರಿ.ಶ. ೯೦೪ರಲ್ಲಿ ಗಂಗವಂಶದ ನೀತಿಮಾರ್ಗ ಎರೆಗಂಗನು ಆಳ್ವಿಕೆ ಮಾಡುತ್ತಿದ್ದಾಗ, ಶಿವರಯ್ಯ ಎಂಬುವನು ಶಿವನಯ್ಯಮಂಗಲ ಎಂಬ ಅಗ್ರಹಾರವನ್ನು ಸ್ಥಾಪಿಸಿದನಲ್ಲದೇ, ಅದನ್ನು ೧೨೦ ವೃತ್ತಿಗಳನ್ನಾಗಿ ವಿಭಾಗಿಸಿ, ಅದರಲ್ಲಿ ೬೦ನ್ನು ಅಲ್ಲಿ ನೆಲೆಸುವ ಬ್ರಾಹ್ಮಣರಿಗೆ ದಾನ ನಿಡಿದ್ದಾನೆ[೨೭೦]. ರಾಷ್ಟ್ರಕೂಟರ ಸಾಮಂತನಾದ ಧೋರನ ಬೇಡಿಕೆಯ ಮೇರೆಗೆ ಗೋವಿಂದನು ದಂಡಾಪುರದ ಕೆರೆಗೆ ಭೂಮಿಯನ್ನು ದಾನವನ್ನಾಗಿ ಬಿಟ್ಟಾಗ ಅದಕ್ಕೆ ಸಾಕ್ಷಿಯಾಗಿ ಅಲ್ಲಿನ ೨೦೦ ಮಹಾಜನರು ಇದ್ದರೆಂದು ಕ್ರಿ.ಶ. ೯೧೮ರ ಶಾಸನ ತಿಳಿಸಿದೆ[೨೭೧]. ಮಹಾಮಂಡಳೇಶ್ವರ ಕಲಚೂರಿ ಮೈಳುಗಿಯ ಆಳ್ವಿಕೆಯಲ್ಲಿ ಶ್ರೀಮನುಮಹಾಗ್ರಹಾರ ತೆಲಸಂಗದ ಎರಡಯ್ನೂರು ಮಹಾಜನಗಳು ಮತ್ತು ಮುಂತಾದವರು ಸೇರಿ ಛತ್ರವನ್ನು ನಡೆಸಲು ದಾನವನ್ನು ನೀಡಿದ ಉಲ್ಲೇಖ ಕ್ರಿ.ಶ. ೧೧೪೭ರ ತೆಲಸಂಗದ ಶಾಸನದಲ್ಲಿ ಬರುತ್ತದೆ[೨೭೨].

**ಗ್ರಾಮಾಡಳಿತ :**

ರಾಜ್ಯದ ಅರ್ಥವ್ಯವಸ್ಥೆಯಲ್ಲಿ ಪ್ರಮುಖ ಪಾತ್ರವಹಿಸುತ್ತಿದ್ದ ಹಳ್ಳಿಗಳು ರಾಜ್ಯಾಡಳಿತದಿಂದ ದೂರವಿದ್ದರೂ, ಯುದ್ಧ-ಗಲಭೆಗಳಂತಹ ವಿಶೇಷ ಸಂದರ್ಭಗಳಲ್ಲಿ ಕೇಂದ್ರದೊಂದಿಗೆ ಸಂಪರ್ಕಹೊಂದಿ ಸಹಾಯ-ಸಹಕಾರ ನೀಡುವದು

ಮತ್ತು ಪಡೆಯುವದು ಅವಶ್ಯಕವಾಗಿತ್ತು. ಉಳಿದ ಕಾಲದಲ್ಲಿ "ಒಂದೊಂದು ಹಳ್ಳಿಯೂ ರಾಜನಿಗೆ ಸಲ್ಲಿಸಬೇಕಾದ ತೆರಿಗೆಗಳನ್ನು ಸಲ್ಲಿಸಿಬಿಟ್ಟರೆ ಸಾಕಾಗುತ್ತಿತ್ತು". ವರ್ಷದುದ್ದಕ್ಕೂ ಅವು ಪ್ರತ್ಯೇಕ ರಾಜ್ಯಗಳಂತೆ ಸ್ವತಂತ್ರವಾಗಿ ಬದುಕುತ್ತಿದ್ದವು[೨೮೩]. ಊರು, ಹಳ್ಳಿ, ಗ್ರಾಮಗಳು ಮೊದಲು ಕೆಲವು ಜನರು ಒಂದು ಕಡೆ ನೆಲೆಯೂರಿ ಬೆಳೆದ ಸ್ಥಳಗಳಾಗಿದ್ದವು. ವಡ್ಡಾರಾಧನೆಯು ಕೂಡಾ ಗ್ರಾಮ, ನಗರಗಳನ್ನು ಕುರಿತು ಉಲ್ಲೇಖಿಸುತ್ತದೆ ಹಾಗೂ ಊರನ್ನಾಳುವ ಗಾವುಂಡ, ತಳಾರನ ಕುರಿತು ಹೇಳುತ್ತದೆ[೨೮೪]. ನಯಸೇನನು ಸಹ ತಳಾರ, ಗಾವುಂಡ, ಗಾವುಂಡಿ, ಭಂಟ, ಬಾರಿಕರನ್ನು ತಿಳಿಯಪಡಿಸುತ್ತಾನೆ[೨೮೫]. ಊರಾಡಳಿತಗಾರರ ಕುರಿತು ಶಾಸನಗಳು ಊರೊಡೆಯ, ಊರ್ಗಾವುಂಡ ಮತ್ತು ಗಾವುಂಡರೆಂಬ ಹೆಸರಿನಿಂದ ಕರೆಯುತ್ತವೆ.

ಕರ್ನಾಟಕದ ಹಳ್ಳಿಗಳ ಆಡಳಿತ ವ್ಯವಸ್ಥೆಯಲ್ಲಿ ಹೆಚ್ಚು ಮಹತ್ವದ ಪಾತ್ರವನ್ನು ನಿರ್ವಹಿಸಿದವರೆಂದರೆ ಗಾವುಂಡರಾಗಿದ್ದಾರೆ. ಅವರು ಮೊದಲಿನಿಂದಲೂ ವಂಶಪಾರಂಪರ್ಯವಾಗಿ ಮುಂದುವರೆದುಕೊಂಡು ಬರುತ್ತಿದ್ದರು. ಶಾಸನಗಳು ಅದನ್ನು ಮೂಲಿಗ ಎಂಬ ಪಾರಿಭಾಷಿಕ ಪದದಿಂದ ಕರೆದಿವೆ. ಇವರಲ್ಲಿ ಮುಖ್ಯವಾಗಿ ಎರಡು ಪ್ರಕಾರಗಳಿವೆ. ಒಂದು ಊರಿಗೆ ಸೀಮಿತಗೊಂಡವರು ಗಾವುಂಡ, ಊರ್ಗಾವುಂಡ ಎನಿಸಿಕೊಂಡರೆ, ಒಂದಕ್ಕಿಂತ ಹೆಚ್ಚಿನ ಊರುಗಳ ಮೇಲ್ವಿಚಾರಣೆಯನ್ನು ಮಾಡುತ್ತಿದ್ದವರು ಪ್ರಭುಗಾವುಂಡರಾಗಿದ್ದಾರೆ.

**ಪ್ರಭುಗಾವುಂಡರು:**

ಪ್ರಭುಗಾವುಂಡ, ಮಹಾಪ್ರಭು ಹಾಗೂ ಪ್ರಭುಗಳು ಎಂಬ ಉಲ್ಲೇಖ ಶಾಸನಗಳಲ್ಲಿ ಅನೇಕ ಸಲ ಕಂಡುಬರುತ್ತದೆ. ಈ ಪ್ರಭುಗಾವುಂಡರನ್ನು ಕುರಿತು ವಿದ್ವಾಂಸರು ಅನೇಕ ಅಭಿಪ್ರಾಯಗಳನ್ನು ಮಂಡಿಸಿದ್ದಾರೆ. ಡಾ.ಜಿ.ಎಸ್.ದೀಕ್ಷಿತರು ಗ್ರಾಮದ ಗಾವುಂಡನನ್ನೇ ಪ್ರಭುಗಾವುಂಡನೆಂದು ಕರೆಯಲಾಗಿದೆ ಎಂಬ ಅಭಿಪ್ರಾಯವನ್ನು ತಾಳಿದ್ದಾರೆ[೨೮೬]. ಡಾ.ಚಿದಾನಂದಮೂರ್ತಿಯವರು ಕೂಡ ಊರಗಾವುಂಡನನ್ನೇ ಪ್ರಭುಗಾವುಂಡನೆಂದು ಕರೆಯುತ್ತಾರೆಂಬ ಅಭಿಪ್ರಾಯವನ್ನೇ ವ್ಯಕ್ತಪಡಿಸಿದ್ದಾರೆ. ಅವರು ನಾಡಿನ ಆಯಾ ಊರಿಗೆ ಮುಖ್ಯಸ್ಥನಾಗಿ ಪ್ರಭುಗಾವುಂಡ ಅಥವಾ ಊರಗಾವುಂಡನಿರುತ್ತಿದ್ದನು ಎಂದಿದ್ದಾರೆ[೨೮೭]. ಆದರೆ ಪ್ರಭುಗಾವುಂಡ ಎಂಬುದು ಊರುಗಾವುಂಡ ಅಥವಾ ಗ್ರಾಮದ ಗಾವುಂಡರಿಗಿಂತ ಹೆಚ್ಚಿನ ಹುದ್ದೆಯನ್ನು ನಿರ್ದೇಶಿಸುತ್ತದೆ. ಬಹುಷಃ ಇವರು ಗ್ರಾಮದ ಗಾವುಂಡರಿಗಿಂತ ಮೇಲಿನ ಅಧಿಕಾರಿಗಳಿರಬೇಕು. ಇವರು ಮಹಾಸಾಮಂತರ ಕೈಕೆಳಗಿನ ಅಧಿಕಾರಿಗಳಾಗಿದ್ದರು.

ಗಂಗ ಶ್ರೀಪುರುಷನ ಕಾಲದ ಕ್ರಿ.ಶ. ೮ನೆಯ ಶತಮಾನದ ಶಾಸನವೊಂದು ಗಂಗ ಶ್ರೀಪುರುಷನ ಮಹಾಪ್ರಭು ಗೋಪಯ್ಯನೆಂಬುವನು ಸಮಾಧಿಮರಣವನ್ನು ಹೊಂದಿದ ವಿಷಯ ಶಾಸನವೊಂದರಲ್ಲಿ ಬರುತ್ತದೆ[೨೮೮]. ಮಹಾಮಂಡಳೇಶ್ವರ ಶಿಲಹಾರ ಕವಿಲಾಸರಸನ ಆಳ್ವಿಕೆಯ ಕಾಲದಲ್ಲಿ ಪ್ರಭುಚಂದ್ರಾದಿತ್ಯಯ್ಯನು ಹಂದೆಕ್ಕಾಡಿಯ ಅಲ್ಲಿಯ ಚಂದ್ರೇಶ್ವರ ದೇವರಿಗೆ ದತ್ತಿಬಿಟ್ಟ ವಿಷಯ ಶಾಸನವೊಂದರಲ್ಲಿದೆ[೨೮೯]. ಕದಂಬ ಮಹಾಮಂಡಳೇಶ್ವರ

ಎರಡನೆಯ ಜಯಕೇಶಿಯ ಕಾಲದಲ್ಲಿ ಅವನ ನಾಲ್ವರು ಪ್ರಭುಗಳು ಸೇರಿಕೊಂಡು ದಾನವನ್ನು ನೀಡಿದ ವಿವರ ಸಿದ್ದಾಪೂರದ ಶಾಸನದಿಂದ ತಿಳಿದುಬರುತ್ತದೆ[೨೯೦]. ಮುಳಗುಂದ ಸಿಂದಮನೆತನದ ಮನ್ನೆಯ ಬೊಪ್ಪರಸನು ಮುಳಗುಂದ-೧೨ರ ಆಳ್ವಿಕೆಯಲ್ಲಿದ್ದಾಗ, ಅವನ ಪಾದಪದ್ಮೋಪಜೀವಿಯಾದ ಹೊಸವೂರ ಮಹಾಪ್ರಭು ಹೊಲ್ಲಗಾವುಂಡನು ದಾನವನ್ನು ನೀಡಿದ ಉಲ್ಲೇಖ ಹೊಸೂರಿನ ಶಾಸನದಿಂದ ತಿಳಿದುಬರುತ್ತದೆ[೨೯೧]. ಸಿಂದರ ಕಾಲದ ಕುಡಿತಿನಿ ಶಾಸನದಲ್ಲಿ ಸಬಾಲ . . ಎಪ್ಪತ್ತರ ಪ್ರಭುಗಾವುಂಡರ ಸನ್ನಿಧಾನದಲ್ಲಿ ದಾನನೀಡಿದ ಉಲ್ಲೇಖವಿದೆ[೨೯೨]. ಸಿರಗುಪ್ಪ ಶಾಸನವು ಮಹಾಸಾಮಂತ ಮನ್ನೆಯ ಚೋಕರಸನ ಪಾದಪದ್ಮೊಪಜೀವಿಯಾದ ಪ್ರಭುಗಾವುಂಡನನ್ನು ಪ್ರಭುಗಳು ಎಂದು ಉಲ್ಲೇಖಿಸಿದೆ. ಆದರೆ ಅವನ ಆಡಳಿತಕ್ಕೆ ಸೇರಿದ ಗ್ರಾಮಗಳ ಸಂಖ್ಯೆ ಮತ್ತು ಅವನ ಹೆಸರನ್ನು ಅದು ಉಲ್ಲೇಖಿಸಿಲ್ಲ[೨೯೩]. ಸಿಂದಮನೆತನಕ್ಕೆ ಸೇರಿದ ಓರುವಾಯಿ ಶಾಸನವು ಅಲ್ಲಿಯ ಪ್ರಭುಗಾವುಂಡನು ದೊರವಡಿ-೭೦ನ್ನು ಆಳುತ್ತಿದ್ದನೆಂದು ಉಲ್ಲೇಖಿಸಿದೆ. ಆದರೆ ಅಲ್ಲಿ ಪ್ರಭುಗಾವುಂಡನ ಹೆಸರು ತಿಳಿದುಬರುವದಿಲ್ಲ[೨೯೪]. ಹೊಯ್ಸಳ ಒಂದನೆಯ ನರಸಿಂಹನ ಆಧೀನನಾದ ಸಾಮಂತ ಮಾಚಿಯು ಎಣ್ಣೆನಾಡಿನ ಸಮಸ್ತ ಪ್ರಭುಗಾವುಂಡುಗಳು ಸೇರಿ ಅಲ್ಲಿನ ಕೇಶವದೇವರಿಗೆ ಹಳ್ಳಿಯೊಂದನ್ನು ದಾನವಾಗಿ ನೀಡಿದ ವಿವರ ಹರಳುಕೋಟೆ ಶಾಸನದಿಂದ ತಿಳಿಯುತ್ತದೆ[೨೯೫].

**ಗಾವುಂಡರು:**

ಗ್ರಾಮದ ಆಡಳಿತವನ್ನು ನೋಡಿಕೊಳ್ಳುತ್ತಿದ್ದವನು ಗಾವುಂಡನಾಗಿದ್ದನು. ಸಾಮಾನ್ಯವಾಗಿ ಒಂದು ಊರಿನಲ್ಲಿ ಒಬ್ಬ ಗಾವುಂಡನಿರುತ್ತಿದ್ದನು. ಆದರೆ ಹಲವು ಜನ ಗಾವುಂಡರು ಒಂದೇ ಊರಿನಲ್ಲಿರುವದನ್ನು ಡಾ. ಚಿದಾನಂದಮೂರ್ತಿಯವರು ಉಲ್ಲೇಖಿಸಿದ್ದಾರೆ[೨೯೬]. ಗಾವುಂಡರು ತಮ್ಮ ಗ್ರಾಮದ ಆಡಳಿತವನ್ನು ನೋಡಿಕೊಳ್ಳುವದರ ಜೊತೆಗೆ ಆದರ ರಕ್ಷಣೆ ಹಾಗೂ ಅಲ್ಲಿಯ ಸುಂಕವನ್ನು ಸಂಗ್ರಹಿಸುವ ಕೆಲಸವನ್ನು ನಿರ್ವಹಿಸುತ್ತಿದ್ದರು. ಇವರೂ ಪ್ರಭುಗಾವುಂಡರಂತೆ ವೀರರಾಗಿದ್ದರಿಂದ ತಮ್ಮ ಮಹಾಮಂಡಳೇಶ್ವರ ಇಲ್ಲವೇ ಮಹಾಸಾಮಂತರ ಪರವಾಗಿ ಯುದ್ಧಗಳಲ್ಲಿ ಭಾಗವಹಿಸುತ್ತಿದ್ದರು. ಗ್ರಾಮದ ಕುಂದುಕೊರತೆಗಳನ್ನು ಪರಿಹರಿಸುವದರ ಜೊತೆಗೆ ಅಲ್ಲಿನ ಸ್ತ್ರೀ-ಗೋವುಗಳ ಅಪಹರಣ ಸಂದರ್ಭದಲ್ಲಿ ಹೋರಾಡಿ ಅವರನ್ನು ರಕ್ಷಿಸಿದ ಬಗ್ಗೆ ವಿವರಗಳು ದೊರೆಯುತ್ತವೆ. ಅಲ್ಲದೇ ಗಾವುಂಡರು ಕೂಡಾ ಕೆಲ ದಾನ ದತ್ತಿಗಳನ್ನು ಕೈಕೊಂಡಿದ್ದನ್ನು ನಾವು ಕಾಣುತ್ತೇವೆ.

ಗಂಗ ಶ್ರೀಪುರುಷನ ಆಳ್ವಿಕೆಯ ಕಾಲದಲ್ಲಿ ಅದ್ದೆಪರನೆಂಬುವನು ಕಟ್ಟಿಸಿದ ಕೆರೆಗೆ ಕುತ್ತಟ್ಟು ಗಾವುಂಡನು ದಾನ ನೀಡಿದ ಉಲ್ಲೇಖ ಕ್ರಿ.ಶ. ೭೮೮ರ ಶಾಸನವೊಂದರಲ್ಲಿದೆ[೨೯೭]. ರಾಷ್ಟ್ರಕೂಟ ಅಮೋಘವರ್ಷನ ಸಾಮಂತನಾದ ಕುಪ್ಪೆಯರಸ ಪುರಿಗೆರೆ-೩೦೦ನ್ನು ಆಳುತ್ತಿದ್ದಾಗ, ಕಲ್ಲಮನೆಂಬುವನು ಊರ್ಗಾಮುಂಡಗೈಯುತ್ತಿರುವಾಗ ಕುಪ್ಪರಸನಿಗೆ ಬಿನ್ನವಿಸಿಕೊಂಡು ಸಿಗ್ಗಾಮೆಯ ಕಳ್ಳವಳ್ಳದೆರೆಯನ್ನು ಕಲ್ಕರೇತಿ ಭಟಾರರಿಗೆ ಬಿಟ್ಟಿರುವದು ಕ್ರಿ.ಶ.೮೬೭ರ ಶಿಗ್ಗಾಂವ ಶಾಸನದಿಂದ ತಿಳಿದುಬರುತ್ತದೆ[೨೯೮]. ಗಂಗ ಭೂತುಗನ ವೀರನೊಬ್ಬನು ಯುದ್ಧದಲ್ಲಿ ಮಡಿದಾಗ ಅವನ ನೆನಪಿಗಾಗಿ

ಬಾಣಗಾವುಂಡನೆಂಬುವನು ಅವನಿಗೆ ಬಾಳ್ಗಚ್ಚು ನೀಡುವ ವಿವರ ಕ್ರಿ.ಶ.ಸು. ೯ನೆಯ ಶತಮಾನದ ಶಾಸನವೊಂದರಲ್ಲಿದೆ[೨೯೯]. ಕ್ರಿ.ಶ.ಸು. ೯ನೆಯ ಶತಮಾನದ ಇನ್ನೊಂದು ಶಾಸನದಿಂದ ತಿಳಿಯುವಂತೆ ಗಂಗ ಎರಡನೆಯ ನೀತಿಮಾರ್ಗನ ಆಳ್ವಿಕೆಯಲ್ಲಿ ಪರ್ಮಾಡಿಯರಸನ ಸೂಳೆ ಜೋಗಬ್ಬೆಯ ಮಗಳಾದ ಸೀಗೆನಾಡ ಪೆರ್ಮಾಡಿಗಾವುಂಡನ ಮಡದಿ ಚಾವುಣ್ಡಬ್ಬೆಯು ದೇಗುಲವೊಂದನ್ನು ಮಾಡಿಸಿದಳು[೩೦೦]. ಗಂಗ ಹರಿವರ್ಮನು ತಳವನಪುರ ನೆಲೆವೀಡಿನಿಂದ ಆಳುತ್ತಿದ್ದಾಗ, ಅವನ ಪಾದಪದ್ಮೋಪಜೀವಿಯಾದ ಕೋರಾತ್ಯಗಾವುಂಡ ನೆಂಬುವನು ಹೆಂಜಾರದ ಕಾಳಗದಲ್ಲಿ ವೈರಿಗಳನ್ನು ಕೊಂದು, ರಾಣಿವಾಸದ ಭಂಡಾರವನ್ನು ದೋಚಿತಂದುದ್ದಕ್ಕೆ ತೊರೆಬಡಗನಾಡಿನಲ್ಲಿನ ಅಪ್ಪೊಗಾಲ ಗ್ರಾಮವನ್ನು ಪಡೆದ ವಿಷಯ ಕ್ರಿ.ಶ.೯೬೯ರ ತಗಡೂರು ಶಾಸನದಿಂದ ತಿಳಿದುಬರುತ್ತದೆ[೩೦೧]. ಮಹಾಮಂಡಳೇಶ್ವರ ಕದಂಬ ಚಟ್ಟಯ್ಯ ಬನವಾಸಿಯನ್ನು ಆಳುತ್ತಿದ್ದಾಗ ಕುಪ್ಪಯ್ಯ ಅಳ್ಳಿಗಬ್ಬೆಗ್ರಾಮದ ಊರ್ಗಾವುಂಡಗೈಯುತ್ತಿದ್ದಾಗ ಅಲ್ಲಿನ ವೀರನೊಬ್ಬನ ಮರಣದ ಕುರುಹಾಗಿ ವೀರಗಲ್ಲೊಂದನ್ನು ನಿಲ್ಲಿಸಿದ ವಿಷಯ ಕ್ರಿ.ಶ. ೯೭೨ರ ಶಾಸನವೊಂದರಿಂದ ತಿಳಿದುಬರುತ್ತದೆ[೩೦೨]. ಬೂದನೂರಿನ ಗಾವುಂಡರಾದ ಚಾವಯ್ಯ ಮತ್ತು ಜಯಮ್ಮರುಗಳು ಸೋವರಾಸಿ ಭಟಾರರು ಕಟ್ಟಿಸಿದ ಕೆರೆಗೆ ಬಿತ್ತುವಾಟ್ಟವನ್ನು ಬಿಟ್ಟುಕೊಟ್ಟ ಉಲ್ಲೇಖ ಕ್ರಿ.ಶ.ಸು. ೧೦ನೆಯ ಶತಮಾನದ ಗಂಗ ಸತ್ಯವಾಕ್ಯ ಗೋವಿಂದರರ ಶಾಸನದಿಂದ ತಿಳಿದುಬರುತ್ತದೆ[೩೦೩]. ಅದೇ ಕಾಲದ ಇನ್ನೊಂದು ಶಾಸನದಿಂದ ಬಯಲ್ನಾಡು ಕದಂಬವಂಶದ ಚಾಗಿಯ ಆಳ್ವಿಕೆಯ ಕಾಲದಲ್ಲಿ ಸತ್ತಿಯರಮಣನೆಂಬುವನು ಕಠಾರಿಕಾಳಗದಲ್ಲಿ ವೀರಮರಣವನ್ನಪ್ಪಿದಾಗ ಅವನಿಗೆ ಕಲ್ನಾಡನ್ನು ನೀಡುವಾಗ ಅಲ್ಲಿನ ಗಾವುಂಡ ನರಸಿಂಘಗಾವುಂಡರು ಇದ್ದರೆಂದು ತಿಳಿದುಬರುತ್ತದೆ[೩೦೪]. ಚಾಲುಕ್ಯ ಮತಿವರ್ಮನ ಆಳ್ವಿಕೆಯಲ್ಲಿ ಇಡುಗೋಡಿನ ಶಿವರಗಾವುಂಡನು ಕೋಗೋಡಿನ ಗಾವುಂಡಗಳೊಡನೆ ಗಡಿವಿವಾದಕ್ಕಾಗಿ ಕಾದಾಡಿ ವೀರಮರಣ ಹೊಂದಿದ ವಿವರ ಕೋಗೊಡು ಶಾಸನದಿಂದ ತಿಳಿದುಬರುತ್ತದೆ[೩೦೫]. ಕ್ರಿ.ಶ. ೧೦೧೨ರಲ್ಲಿ ಮಹಾಮಂಡಳೇಶ್ವರ ಚಟ್ಟಯ್ಯದೇವ ಬನವಾಸಿ-೧೨೦೦೦ನ್ನು ಆಳುತ್ತಿದ್ದಾಗ ನೆಲ್ಲೂರ ಅಮ್ಮಣಗಾವುಂಡ ಹಾಗೂ ಅವನ ಹೆಂಡತಿ ಪಿಟ್ಟಬ್ಬೆಗಾವುಂಡಿಯರು ಸೇರಿ ದೇಗುಲವೊಂದನ್ನು ಕಟ್ಟಿಸಿ ಅಲ್ಲಿ ಶಿವಲಿಂಗವನ್ನು ಪ್ರತಿಷ್ಠಾಪಿಸಿದಂತೆ ತಿಳಿದುಬರುತ್ತದೆ[೩೦೬]. ಕ್ರಿ.ಶ. ೧೧ನೆಯ ಶತಮಾನದ ಶಾಸನವೊಂದರಲ್ಲಿ ಕೊಂಗಾಳ್ವ ಮುಂಜನು ಪಟ್ಟಕಟ್ಟಿಸಿಕೊಂಡಾಗ ಮಾಲವ್ವಿಗ್ರಾಮವನ್ನು ದಾನವಾಗಿತ್ತನು, ಇದಕ್ಕೆ ಕಣ್ಣವಂಗಲ ಗಾವುಂಡ ರಾಚಮ್ಮನ ವಂಶವು ಸಾಕ್ಷಿಯಾಗಿತ್ತೆಂದು ಉಲ್ಲೇಖವಿದೆ[೩೦೭]. ಕ್ರಿ.ಶ. ೧೧೪೮ರ ಹೊಸೂರಿನ ಚಾಲುಕ್ಯ ಜಗದೇಕಮಲ್ಲನ ಮಹಾಮಂಡಳೇಶ್ವರ ಚಾಮುಂಡರಸನ ಕಾಲದ ಶಾಸನವೊಂದು ಹೊಲ್ಲಗಾವುಂಡನ ಮೂರು ತಲೆಮಾರಿನ ವಂಶಾವಳಿಯನ್ನು ನೀಡುತ್ತದೆ. ಅದರ ಪ್ರಕಾರ ಹೊಲ್ಲಗಾವುಂಡನ ತಂದೆ ಮಹಾಪ್ರಭು ನಾಕಿಗಾವುಂಡ, ಅಜ್ಜ ಬೊಪ್ಪಗಾವುಂಡರ ಉಲ್ಲೇಖ ಬರುತ್ತದೆ[೩೦೮]. ಸಿಂಧ ಮಹಾಸಾಮಂತ ಬೊಪ್ಪರಸನ ಕಾಲದಲ್ಲಿ ಅವನು ಗಾವುಂಡನೊಬ್ಬನ ಹೊಲದಲ್ಲಿನ ಕೆಲ ಭಾಗವನ್ನು ಮುಳಗುಂದದ ಭೀಮೇಶ್ವರ ದೇವರಿಗೆ ಬಿಟ್ಟದ್ದನ್ನು ಮುಳಗುಂದ ಶಾಸನದಿಂದ ತಿಳಿದುಬರುತ್ತದೆ[೩೦೯].

**ಗ್ರಾಮಸಭೆ ಮತ್ತು ಅದರ ಅಧಿಕಾರ ವರ್ಗ:**

ಊರಾಡಳಿತದಲ್ಲಿ ಗಾವುಂಡನು ಪ್ರಮುಖನಾಗಿದ್ದರೂ, ಊರಿನ ಯಾವುದೇ ತೀರ್ಮಾನಗಳನ್ನು ಬಗೆಹರಿಸಲು ಅವನು ಗ್ರಾಮದ ಇತರೇ ಸದಸ್ಯರೊಂದಿಗೆ ಚರ್ಚಿಸಿ ಒಮ್ಮತಕ್ಕೆ ಬರಬೇಕಾಗುತ್ತಿತ್ತು. ಇದನ್ನೇ ಗ್ರಾಮಸಭೆ, ಜನತಾಸಭೆ ಎಂದು ಕೆಲವರು ಕರೆದಿದ್ದಾರೆ[೩೧೦]. ಗ್ರಾಮಾಡಳಿತದಲ್ಲಿ ಗಾವುಂಡನ ಜೊತೆಗೆ ಹಲವು ಅಧಿಕಾರಿಗಳಿರುತ್ತಿದ್ದು, ಆಡಳಿತದಲ್ಲಿ ಅವನಿಗೆ ಸಹಕಾರ ನೀಡುತ್ತಿದ್ದರು. ಸ್ಥೂಲವಾಗಿ ಹೇಳುವದಾದರೆ ಗ್ರಾಮಸಭೆಗೆ ಗಾವುಂಡ ಮುಖ್ಯಸ್ಥನಾದರೆ, ಸೇನಭೋವ ಅಥವಾ ಕುಳಕರಣಿ ಲೆಕ್ಕಪತ್ರವ್ಯವಹಾರ, ತಳಾರ-ಗ್ರಾಮರಕ್ಷಣೆಯ ಭಾರ ಹೊರುತ್ತಿದ್ದರು. ಇವರಲ್ಲಿ ಗ್ರಾಮದ ಮುಖ್ಯಸ್ಥನೇ ಗ್ರಾಮಸಭೆಯ ಮುಖ್ಯಸ್ಥನಾಗಿದ್ದರಿಂದ ಅಂತಿಮ ತೀರ್ಪು ಅವನದೇ ಆಗಿತ್ತು.

ಕ್ರಿ.ಶ. ೭೮೮ರ ಹಿಲೋಳದ ಶಾಸನವೊಂದು ಗ್ರಾಮಸಭೆಯ ಅಧಿಕಾರಿಗಳು ಹಾಗೂ ಅದರ ಕರ್ತವ್ಯಗಳ ಕುರಿತು ಉಲ್ಲೇಖಿಸಿದೆ[೩೧೧]. ರಾಷ್ಟ್ರಕೂಟ ಕರ್ಕರಾಜನ ಕಾಲದಲ್ಲಿ ಸಾಮಂತ ಚಂದ್ರಾದಿತ್ಯನು ದಾನ ನೀಡುವಾಗ ಗ್ರಾಮ ಸಭೆಯ ನಾಲ್ಕು ಜನ ಅಧಿಕಾರಿಗಳಾದ ಮಹಾಅಧಿಕೃತನಾದ ಬ್ರಾಹ್ಮಣ ಈಶ್ವರಭಟ್ಟ, ಅಧ್ಯಕ್ಷನಾದ ವಾಸುದೇವಭಟ್ಟ, ಮಹಾಪ್ರತಿಹಾರ ಅಯ್ಯಮಂತನಾದ ಕಡಂಗವೀರಭಟ್ಟ ಮತ್ತು ಬಾವುಲ್ಲ ವಾಳೇಶ್ವರಭಟ್ಟರುಗಳ ಸಮ್ಮುಖದಲ್ಲಿ ದಾನ ನೀಡಿದ್ದನ್ನು ಶಾಸನ ಹೇಳುತ್ತದೆ. ಸವದತ್ತಿ ರಟ್ಟವಂಶದ ಮಹಾಮಂಡಳೇಶ್ವರ ಕಾರ್ತವೀರ್ಯನು ರಾಜಧಾನಿ ವೇಣುಗ್ರಾಮದ ನೆಲೆವೀಡಿನಲ್ಲಿದ್ದಾಗ, ಅಲ್ಲಿನ ಮಹಾಜನಗಳಿಗೆ ಮೊದಲು ನೀಡಲ್ಪಟ್ಟ ದಾನವನ್ನು ಅಲ್ಲಿನ ಸಮಸ್ತ ಮೂಲಿಗರು ಮತ್ತು ಗಾವುಂಡರ ಸಮ್ಮುಖದಲ್ಲಿ ಮುಂದುವರೆಯಿಸಿದ್ದನ್ನು ಕ್ರಿ.ಶ. ೧೧೯೯ರ ಬೆಳಗಾವಿಯ ಶಾಸನ ತಿಳಿಸಿದೆ[೩೧೨].

**ಸೇನುಭೋವ-ಕುಳಕರಣಿ:**

ಸೇನಭೋವನು ಊರಿನ ಭೂಕಂದಾಯದ ಲೆಕ್ಕಪತ್ರಗಳನ್ನಿಡುವ ಅಧಿಕಾರಿ ಎನ್ನಬಹುದು. ವಾಸ್ತವವಾಗಿ ಇವನ ಸ್ಥಾನ-ಮಾನ ಗಾವುಂಡನಿಗಿಂತ ಕೆಳಗಿನದಾಗಿತ್ತು. ಪ್ರತಿಯೊಂದು ಗ್ರಾಮಕ್ಕೂ ಒಬ್ಬೊಬ್ಬ ಸೇನುಭೋವನಿರುತ್ತಿದ್ದನು. ನಯಸೇನನ "ದ್ವೇಶವೆಲ್ಲವಕ್ಕರವನರಿಯದ ನಿತರಿಂದಕ್ಕರಮಿಲ್ಲೆನಲಾರದು ಸೇನುಭೋವರು ಮಕ್ಕರಿಗರುಮರಿವೊಡೆ ಸಾಲ್ಗುಂ" ಎಂಬ ಉಕ್ತಿಯಿಂದ ಸೇನುಭೋವರು ಮಾತ್ರ ಅಕ್ಷರವಿದ್ಯೆ ಕಲಿತಿದ್ದರೆ ಸಾಕೆಂಬ ಮನೋಭಾವನೆ ನಮ್ಮ ಪ್ರಾಚೀನರಲ್ಲಿತ್ತೆಂದು ತಿಳಿಯುತ್ತದೆ[೩೧೩]. ವಿದ್ಯಾವಂತನಾದ ಈತ ಬಹಳ ಪ್ರಭಾವಶಾಲಿ ವ್ಯಕ್ತಿಯಾಗಿದ್ದು ಶಾಸನಗಳ ಪಾಠ ತಿದ್ದುವುದು ಮತ್ತು ಬರೆಯುವುದನ್ನು ಮಾಡುತ್ತಿದ್ದನು. ಕುಳಕರಣಿ ಎಂಬ ಪದವು ಕುಳ ಅಥವಾ ಕುಲ (ಸಮೂಹ) ಮತ್ತು ಕರಣ ಅಥವಾ ಕರಣಿಕತನ (ಲೆಕ್ಕಬರೆಯುವದು) ಎಂಬ ಅರ್ಥವನ್ನು ನೀಡುತ್ತವೆ. ಕುಳಕರಣಿಯು ಅಗ್ರಹಾರದ ಬ್ರಾಹ್ಮಣ ಸಮೂಹದ ಲೆಕ್ಕವನ್ನು ನೋಡಿಕೊಳ್ಳುತ್ತಿದ್ದನು. ಡಾ.ಚಿದಾನಂದಮೂರ್ತಿಯವರು ಕುಳಕರಣಿಯು ಮಹಾಜನರ ಗುಮಾಸ್ತನಿದ್ದಂತೆ. ಅವರ ಅಧೀನನಾಗಿದ್ದು, ಊರಿನ

ಲೆಕ್ಕಪತ್ರಗಳನ್ನಿಟ್ಟು ಮಹಾಜನರ ಪತ್ರವ್ಯವಹಾರಗಳನ್ನು ನೋಡಿಕೊಳ್ಳುತ್ತಿದ್ದವನಾಗಿದ್ದ ಎಂದಿದ್ದಾರೆ[೩೧೪]. ಕ್ರಿ.ಶ. ೯೫೪ರಲ್ಲಿ ರಾಷ್ಟ್ರಕೂಟ ಕನ್ನರದೇವನ ಸಾಮಂತನಾದ ಮಾಚಿಯರಸನು ಎಡೆನಾಡು, ಬನವಾಸಿ-೧೨೦೦೦ಗಳ ಆಳ್ವಿಕೆಮಾಡುತ್ತಿದ್ದಲ್ಲಿ ಮುಟಗುಪ್ಪೆಯನ್ನು ಬ್ರಾಹ್ಮಣರಿಗೆ ದಾನಕೊಟ್ಟ ಉಲ್ಲೇಖವಿರುವ ಕಕ್ಕರಸಿಯ ಶಾಸನವನ್ನು ಸೇನುಭೋವ ಮಾರಯ್ಯನೆಂಬುವನು ಬರೆದಿದ್ದಾನೆ[೩೧೫]. ಕ್ರಿ.ಶ. ೯೬೦ರಲ್ಲಿ ಎರಡನೆಯ ಭೂತುಗನ ಆಳ್ವಿಕೆಯಲ್ಲಿ ಆಚಣ್ಣನೆಂಬುವನಿಗೆ ದನ್ನೂರನ್ನು ಕಲ್ನಾಡನ್ನಾಗಿ ಅಲ್ಲಿನ ಕರಣ ಪುಣಿಗದಮಾಚಯ್ಯ ಮತ್ತು ಉಳಿದ ಪ್ರಮುಖ ಕರಣರುಗಳು ಭೂತುಗನನ್ನು ಬಿನ್ನವಿಸಿಕೊಂಡು ಬಿಟ್ಟರು[೩೧೬]. ಚಾಲುಕ್ಯ ಜಗದೇಕಮಲ್ಲನ ಮಹಾಮಂಡಳೇಶ್ವರ ಕುಮಾರ ಬಿಜ್ಜಳರಸನ ಆಳ್ವಿಕೆಯಲ್ಲಿ ಮುತ್ತಿಗೆಯ ಶಿವಲಿಂಗದೇವರಿಗೆ ಬೆಣ್ಣಗೆದೆರೆಯನ್ನು ನೀಡುವಾಗ ಹೆಬ್ಬಾಳ-೧೨ ಕಂಪಣದ ಸಮಸ್ತ ಕರಣಗಳು ಹಾಜರಿದ್ದುದು ಮುತ್ತಿಗೆಯ ಶಾಸನದಿಂದ ತಿಳಿಯುತ್ತದೆ[೩೧೭]. ಅಳುಪ ಕುಲಶೇಖರನ ಕ್ರಿ.ಶ. ೧೨೦೪-೦೫ರ ಮೂಡಬಿದ್ರೆಯ ಶಾಸನವನ್ನು ಬರೆದವನು ಸೇನುಭೋವ ಚನ್ನಯನಾಗಿದ್ದಾನೆ[೩೧೮]. ಅಲ್ಲದೇ ಕ್ರಿ.ಶ. ೧೨೬೧ರ ಕೋಟೇಶ್ವರದ ಅಳುಪ ವೀರಪಾಂಡ್ಯದೇವನ ಶಾಸನವನ್ನು ಶ್ರೀಕರಣದ ಮಾಚೈಯ್ಯ ಸೇನುಭೋವ ಬರೆದನೆಂದು ಉಲ್ಲೇಖಿಸಲಾಗಿದೆ[೩೧೯]. ಚೆಂಗಾಳ್ವ ಹರಿಹರದೇವನ ಕ್ರಿ.ಶ. ೧೨೯೬ರ ಮುಳ್ಳೂರು ಶಾಸನವೊಂದರ ಆಖರವನ್ನು ಬರೆದವನು ಶ್ರೀಕೊಪಣತೀರ್ಥದ ಸೇನುಭೋವ ಸಾತೈಯನಾಗಿದ್ದಾನೆ[೩೨೦]. ಹೊಯ್ಸಳ ಮೂರನೆಯ ಬಲ್ಲಾಳನ ಮಹಾಸಾಮಂತಾಧಿಪತಿ ಪೊರೆಯನಾಯ್ಕನ ಕಾಲದ ಎರೆಕಟ್ಟೆಶಾಸನವೊಂದನ್ನು ಸೇನುಭೋವ ಚಾವಣ್ಣ ರಚಿಸಿರುವನು[೩೨೧].

ಹೀಗೆ ಸೇನುಭೋವ ಮತ್ತು ಕುಳಕರಣಿಗಳು ಬೇರೆ ಬೇರೆಯಾಗಿದ್ದು, ಕೆಲಸದ ಸ್ವರೂಪ ಮಾತ್ರ ಒಂದೇ ಆಗಿದ್ದರಿಂದ ಇವೆರಡೂ ಪದಗಳನ್ನು ಒಂದೇ ಅರ್ಥದಲ್ಲಿ ಬಳಸತೊಡಗಿದ್ದುದು ಕಂಡುಬರುತ್ತದೆ.

**ತಳವಾರರು:**

ಆಡಳಿತದ ತೀರ ಕೆಳಗಿನ ಅಧಿಕಾರಿಗಳೆಂದರೆ ತಳಾರರಾಗಿದ್ದರು. ಗ್ರಾಮದ ರಕ್ಷಣೆ ಈತನ ಮುಖ್ಯ ಕೆಲಸವಾಗಿತ್ತು. ಹೀಗಾಗಿ ಅವರು ಗ್ರಾಮದಲ್ಲಿ ಸದಾ ಖಡ್ಗವನ್ನು ಜೊತೆಯಾಗಿಸಿಕೊಂಡು ಸಂಚರಿಸುತ್ತಿದ್ದರು. ಅದಕ್ಕಾಗಿಯೇ ಈತನನ್ನು ತಳಾರನೆಂದು ಕರೆದಿರಬಹುದು. ಈತ ಊರಲ್ಲಿ ಕಳವು, ಕೊಲೆ, ಸುಲಿಗೆ ಹಾಗೂ ದರೋಡೆಗಳು ಆಗದಂತೆ ನೋಡಿಕೊಳ್ಳುತ್ತಿದ್ದ. ಆದುದರಿಂದ ಗ್ರಾಮಾಡಳಿತಕ್ಕೆ ಸಂಬಂಧಪಟ್ಟ ಅಧಿಕಾರಿಗಳಲ್ಲಿ ಇವನೂ ಒಬ್ಬನಾಗಿದ್ದಾನೆ. ಗ್ರಾಮಗಳಲ್ಲಿ ಏನಾದರು ಅನ್ಯಾಯ ನಡೆದರೆ ಅದಕ್ಕೆ ತಳಾರನು ಹೊಣೆಯಾಗಿ ಆ ನಷ್ಟವನ್ನು ಅವನೇ ತುಂಬಿಕೊಡಬೇಕಾಗಿತ್ತು[೩೨೨].

ಕ್ರಿ.ಶ.ಸು. ೮ನೆಯ ಶತಮಾನದ ಗಂಗ ಶ್ರೀಪುರುಷಮಹಾರಾಜನ ದೇವಲಾಪುರ ಶಾಸನ ತಿಳಿಸುವಂತೆ ಆರಟ್ಟಿಗರ್ ಕೂಡಲೂರ ತಳಾರಿಕೆಯನ್ನು ನಿರ್ವಹಿಸುತ್ತಿದ್ದುದಾಗಿ ತಿಳಿಯುತ್ತದೆ[೩೨೩]. ರಾಷ್ಟ್ರಕೂಟರ ಎರಡನೆಯ ಕೃಷ್ಣನ ಕಾಲದ

ಶಾಸನವೊಂದು ಆವನ ಸಾಮಂತಾಗ್ರಣಿ ಹೊರೆಯಮನನ್ನು ಮಾನ್ಯಖೇಡದ ತಳಾರ ನೆಂದು ಹೇಳುತ್ತಾ, ಈತನು ಸಾಲವಾಡಗಿಯಲ್ಲಿ ಹೊರೆಯಮೇಶ್ವರ ದೇಗುಲವನ್ನು ಕಟ್ಟಿಸಿದನೆಂದು ಹೇಳಿದೆ[೩೪]. ಹಟ್ಟಗಾರಕಡಂಬ ಕುಲದ ಸಾಮಂತ ಕಾಡೆಯ ನಾಯಕನಾಳ್ವಿಕೆಯಲ್ಲಿ ತಳಾರಸೋವೆಯನಾಯಕನು ತನ್ನ ತಳಾರಿಕೆಯಾಯದಲ್ಲಿ ಶ್ರೀಮರುಳೇಶ್ವರದೇವರ ನಂದಾದೀವಿಗೆಗೆ ಗಾಣ ಮತ್ತು ಕೆರೆಯ ಕೆಲಸಕ್ಕಾಗಿ ಗದ್ಯಾಣವೊಂದನ್ನು ಬಿಟ್ಟಿದ್ದನ್ನು ಕ್ರಿ.ಶ. ೧೦೮೦ರ ಲಕ್ಕುಂಡಿಯ ಶಾಸನ ಉಲ್ಲೇಖಿಸುತ್ತದೆ[೩೫]. ಮಹಾಸಾಮಂತ ಜಯಕೇಶಿಯ ಕೈಕೆಳಗಿನ ಅಧಿಕಾರಿಯಾಗಿದ್ದ ತಳಾರ ನಾಗವರ್ಮನು, ಅರಿಘಟವಲ್ಲನ ಬೀಡಂ ಪರಿಕ್ಷಿಪ ತಳರ ನಾಗವರ್ಮ ಎಂದು ಹೊಗಳಿಸಿಕೊಂಡಿದ್ದಾನೆ. ಅಲ್ಲದೇ ಈತನು ಪುರಿಕರನಗರದ ೫೦೦ ಮಹಾಜನರಿಗೆ ದಾನವನ್ನು ನೀಡಿದ್ದಾನೆ[೩೬]. ಕ್ರಿ.ಶ.ಸು. ೧೨ನೆಯ ಶತಮಾನದ ಶಾಸನವೊಂದು ಚೆಂಗಾಳ್ವ ಮಹಾಮಂಡಳೇಶ್ವರ ಬೊಪ್ಪದೇವನ ಕಾಲದಲ್ಲಿ ಕೊಳಿಯೂರು ಕೋಟೆಯ ಮೇಲೆ ಹನ್ನೆರಡುಜನ ಪ್ರಭುಗಳು ಧಾಳಿಯಿಟ್ಟಾಗ, ಹನಸೋಗೆಯಲ್ಲಿ ಹುಟ್ಟಿದ ಒಣ್ಣಜ್ಜನ ಮಗ ತಳಾರ ವುತ್ತಜ್ಜ ಅವರೊಂದಿಗೆ ಕಾದಿ ವೀರಮರಣ ಹೊಂದಿದ ವಿಷಯ ತಿಳಿಸುತ್ತದೆ[೩೭]. ಕುರುಗೋಡು ಸಿಂದರ ಆಳ್ವಿಕೆಗೆ ಸಂಬಂಧಿಸಿದ ಕುಡಿತಿನಿ ಶಾಸನದಲ್ಲಿ ದಳವಾರ ಗಂಗರಾಮ್ನಾ . ನಿಗೆ ಚಿಟ್ಟಿಯ್ಯನ ಮಗ ಕಾರುಕ . . ನು ತೋಟ ಮುಂತಾದವುಗಳನ್ನು ದಾನಮಾಡಿಕೊಡುತ್ತಾನೆ[೩೮].

ಹೀಗೆ ಮೇಲಿನ ಹಂತದಿಂದ ಕೆಳಗಿನ ಹಂತದವರೆಗೂ ಸಾಮಂತ ಅರಸುಮನೆತನಗಳ ಆಡಳಿತವೂ ಕೂಡ ಅಂದಿನ ಕಾಲದಲ್ಲಿ ಅವರ ಅಧಿರಾಜರು ಅನುಸರಿಸುತ್ತಿದ್ದ ಪದ್ಧತಿಯನ್ನೇ ಹೋಲುತ್ತಿತ್ತು.

**ಅಡಿಟಿಪ್ಪಣಿಗಳು:**

೧. Moreas, The Kadamba Kula, Bombay, 1931, p-264.

೨. Inscriptions from Nanded District, Intro.P-LII.

೩. Pathan,Z.M., Some Feudatory Families (Minor Dynasties) of Medieval Karnataka-A Study, 1983, p-51-52.

೪. MAR., 1925, No-43.

೫. E.C., Vol-VII, Shikharipur, No-297.

೬. Ep.Ind., Vol-XIX, No-29 C.

೭. SII., Vol-XVIII, No-92.

೮. ಚಿದಾನಂದಮೂರ್ತಿ,ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಕ್ರಿ.ಶ.೪೫೦-೧೧೫೦, ಪು-೩೯.

೯. B.No-117/77-78.

೧೦. SII., Vol-IX (i), No-143.

೧೧. E.C., Vol-VII, Sh, No-10.

೧೨. Ep.Ind., Vol-XVI, No-8 B.

೧೩. SII., Vol-VIII, No-364.

೧೪. Ibid., Vol-XX, No-84.

೧೫. E.C., Vol-VII, Chennagiri, No-61.

೧೬. SII., Vol-XV, No-30.

೧೭. Ibid., Vol-IX (i), No-159.

೧೮. E.C., Vol-IX, Bl, No-473.

೧೯. Ep.Ind., Vol-XIII, No-2.

೨೦. KI., Vol-V, No-18.

೨೧. B.No-99/77-78.

೨೨. SII., Vol-XV, No-42.

೨೩. Ibid., Vol-IX (i), No-207.

೨೪. Ibid., No-100.

೨೫. E.C., Vol-VII, Honnali, No-14.

೨೬. SII., Vol-IX (i), No-159.

೨೭. Ibid., No-200.

೨೮. ಚಿದಾನಂದಮೂರ್ತಿ,ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಕ್ರಿ.ಶ.೪೫೦-೧೧೫೦, ಪು-೩೪೦-೪೧.

೨೯. E.C., Vol-XI, Dg, No-50.

೩೦. BKI. Vol-I.i. No-52.

೩೧. KI., Vol-II, No-7.

೩೨. BKI. I.i., No-84.

೩೩. SII., Vol-IX (i), No-109.

೩೪. A.P.G.A.S., Vol-3, Kannada Inscriptions of A.P., Gb-3.

೩೫. SII., Vol-IX (i), No-150.

೩೬. Ibid., No-190.

೩೭. Mysore and Coorg from Inscriotions, p-169.

೩೮. ಚಿದಾನಂದಮೂರ್ತಿ,ಎಂ., ಮೇಲಿನದೇ, ಪು-೩೪೦.

೩೯.SII., Vol-IX (i), No-118.

೪೦. E.C., Vol-XI, Dg, No-41.

೪೧. Ep.Ind., Vol-XVI, No-11 C.

೪೨. ಚಿದಾನಂದಮೂರ್ತಿ,ಎಂ., ಮೇಲಿನದೇ, ಪು-೩೪೦.

೪೩. SII., Vol-IX (i), No-104 & 101.

೪೪. ಸಂಕ್ಷಿಪ್ತ ಕನ್ನಡ ನಿಘಂಟು, ಕನ್ನಡ-ಕನ್ನಡ, ಬೆಂಗಳೂರು, ಕನ್ನಡ ಸಾಹಿತ್ಯ ಪರಿಷತ್ತು, ೧೯೭೫, ಪು-೨೪.

೪೫. BKI.I.i. No-43.

೪೬. Ibid., No-40.

೪೭. SII., Vol-IX (i), No-101-104.

೪೮. Ep.Ind., Vol-XVI, No-11 C.

೪೯. E.C., Vol-VII, Sk, No-136.

೫೦. SII., Vol-IX (i), No-101-167.

೫೧. ಕಿಟ್ಟೆಲ್, ಕನ್ನಡ ಇಂಗ್ಲೀಷ್ ನಿಘಂಟು, (ಪರಿಷ್ಕೃತ) ಸಂ-೩, ಪು-೧೨-೬೬.

೫೨. ನಾಗಯ್ಯ,ಜಿ.ಎಂ., ಆರನೆಯ ವಿಕ್ರಮಾದಿತ್ಯನ ಶಾಸನಗಳು ಒಂದು ಅಧ್ಯಯನ, ಪು-೧೫೩-೫೪.

೫೩. E.C., Vol-XII, Si, No-40.

೫೪. Ibid., Vol-VIII, Sb, No-468.

೫೫. Ibid., Vol-V, My, No-183.

೫೬. Ibid., Vol-VII, Ng, No-149.

೫೭. Kulkarni,V.S., Historical and Cultural Studies of the Region Around Basavakalyana: Based on Inscriptions, Ph.D. Thesis Submitted to the Karnataka University, Dharwad, No-24.

೫೮. KI., Vol-II, No-11.

೫೯. Kadambas of Goa and their Inscriptions, No-14.

೬೦. Kulkarni,V.S., Historical and Cultural Studies of the Region Around Basavakalyana: Based on Inscriptions, Ph.D. Thesis Submitted to the Karnataka University, Dharwad, No-34.

೬೧. Kadambas of Goa and their Inscriptions, No-16.

೬೨. SII., Vol-IX (i), No-200.

೬೩. Ibid., Vol-XV, No-44.

೬೪. E.C., Vol-VIII, Sb, No-203.

೬೫. Ibid., Vol-VIII, Sb, No-457.

೬೬. Ibid., Vol-VIII, Sb, No-191.

೬೭. Ep.Ind., Vol-XVI, No-11 C.

೬೮. Inscriptions in Northern Karnataka and Kolhapur State, No-4.

೬೯. SII., Vol-XI (ii), No-162.

೭೦. KI., Vol-II, No-33.

೭೧. E.C., Vol-VII, Md, No-132.

೭೨. Ibid., Md, No-15.

೭೩. ಸಂಕ್ಷಿಪ್ತ ಕನ್ನಡ ನಿಘಂಟು, ಕನ್ನಡ-ಕನ್ನಡ, ಬೆಂಗಳೂರು, ಕನ್ನಡ ಸಾಹಿತ್ಯ ಪರಿಷತ್ತು, ೧೯೭೫, ಪು-೮೬೪

೭೪. ನಾಗಯ್ಯ,ಜಿ.ಎಂ., ಆರನೆಯ ವಿಕ್ರಮಾದಿತ್ಯನ ಶಾಸನಗಳು ಒಂದು ಅಧ್ಯಯನ, ಪು-೨೩೧.

೭೫. Ep.Ind., Vol-XXI, p-289 ff.

೭೬. SII., Vol-XX, No-280.

೭೭. E.C., Vol-VII, My, No-168.

೭೮. Ibid., My, No-169.

೭೯. SII., Vol-IX (i), No-135.

೮೦. Ibid., Vol-XX, No-51.

೮೧. Ep.Ind., Vol-III, No-42.

೮೨. SII., Vol-XV, No-40.

೮೩. KI., Vol-I, No-16.

೮೪. E.C., Vol-VIII, Sb, No-476.

೮೫. Ibid., Sb, No-234.

೮೬. Ibid., Sb, No-184.

೮೭. Ibid., Sg, No-108 (Bis).

೮೮. SII., Vol-IX (ii), No-177.

೮೯. E.C., Vol-VI, Kr, No-78.

೯೦. Ibid., Vol-VII, Md, No-13.

೯೧. Ibid., Vol-XVI, Tm, No-106.

೯೨. SII., Vol-IX (i), No-163.

೯೩. E.C., Vol-XI, Jg, No-12.

೯೪. SII., Vol-IX (i), No-169.

೯೫. Ibid., No-100.

೯೬. B.No-105/85-86.

೯೭. SII., Vol-IX (i), No-135.

೯೮. E.C., Vol-VII, Honnali, No-14.

೯೯. SII., Vol-IX (i), No-159.

೧೦೦. Ibid., No-167.

೧೦೧. MAR., 1923, No-116.

೧೦೨. E.C., Vol-XI, Dg, No-134.

೧೦೩. KI., Vol-IV, No-3.

೧೦೪. SII., Vol-XVIII, No-117.

೧೦೫. E.C., Vol-VII, Chennagiri, No-61.

೧೦೬. SII., Vol-IX (i), No-209.

೧೦೭. Ibid., No-157.

೧೦೮. Fleet, The Dynasties of Kanarese Districts (Gazetteer of the Bombay Presidency, I, ii.), p-299.

೧೦೯. Kadambas of Goa and their Inscriptions, No-8A.

೧೧೦. SII., Vol-IX (i), No-146.

೧೧೧. Ibid., Vol-XVIII, No-124.

೧೧೨. Ibid., No-112.

೧೧೩. Ep.Ind., Vol-VI, No-4.

೧೧೪. SII., Vol-IX (i), No-207.

೧೧೫. KI., Vol-I, No-17.

೧೧೬. SII., Vol-IX (i), No-210.

೧೧೭. Ibid., Vol-XVIII, No-93.

೧೧೮. E.C., Vol-II, No-35.

೧೧೯. ಪಂಪಭಾರತ, ೧.೪೯.

೧೨೦. Sir Walter Elliot, On the Naubat, (Ind.Ant., Vol-V).

೧೨೧. Growse,F.S., The Phrase Pancamahasabda, (Ind.Ant., Vol-V.).

೧೨೨. Ind.Ant., Vol-XII, pp-95-96.

೧೨೩. E.C., Vol-VIII, Sb, No-153.

೧೨೪. Raghavan,V., Panch-Maha-Sabda, (Indian Linguistics-Turner Jubilee Valume-I, 1958, pp-308-09.

೧೨೫. E.C., Vol-IV, Hg, No-18.

೧೨೬. KI., Vol-I, No-17.

೧೨೭. E.C., Vol-XI, Cd, No-76.

೧೨೮. Ibid., Dg, No-41.

೧೨೯. Ibid., Vol-III, Nj, No-385.

೧೩೦. Ibid., Vol-VII, No-127.

೧೩೧. KI., Vol-II, No-13.

೧೩೨. SII., Vol-XV, No-16.

೧೩೩. Rangaswami.Iyangar., Concederation on Some Aspects of Ancient Indian Polity, p-189.

೧೩೪. ದೀಕ್ಷಿತ,ಜಿ.ಎಸ್., ಸೋಮದೇವಸೂರಿ, ನೀತಿವಾಕ್ಯಾಮೃತ, ಅಧ್ಯಾಯ-೫.

೧೩೫. SII., Vol-XV, No-42 & 47.

೧೩೬. ಋಗ್ವೇದ, ಪು-೮೦.

೧೩೭. ಅಥರ್ವವೇದ, ಸಂ-೬, ಪು-೮೭-೮೮.

೧೩೮. MAR., 1925, Ins.No-105, p-85.

೧೩೯. JBBRAS., Vol-X, p-218; KI., Vol-V, No-52.

೧೪೦. ಚಿದಾನಂದಮೂರ್ತಿ,ಎಂ., ಕ.ಶಾ.ಸಾಂ.ಅ., ಪು-೩೨೪.

೧೪೧. ದೀಕ್ಷಿತ,ಜಿ.ಎಸ್.,(ಸಂ) ಆಚಾರ್ಯ ಸೋಮದೇವ ವಿರಚಿತಂ ನಿತಿವಾಕ್ಯಾಮೃತಂ, ಅಧ್ಯಾಯ-೫.

೧೪೨. Ep.Ind., Vol-XVIII, No-26, p-235.

೧೪೩. Ibid., Vol-IX, p-19-20.

೧೪೪. E.C., Vol-I, No-65.

೧೪೫. Ibid., Vol-VIII, No-57.

೧೪೬. Ibid., Vol-I, No-81.

೧೪೭. KI., Vol-II, No-14.

೧೪೮. SII., Vol-XV, No-16.

೧೪೯. Ibid., No-47.

೧೫೦. K.I., Vol-V, No-7.

೧೫೧. S.S.Sastry, QJMS., Vol-XLIV, 1924, pp-123-24.

೧೫೨. E.C., Vol-III, Nj, No-385.

೧೫೩. KRI., Reports, 1942-43, Lokapur.

೧೫೪. K.I., Vol-V, No-7.

೧೫೫. SII., Vol-XV, No-16.

೧೫೬. Ibid., Vol-XI (i), No-7.

೧೫೭. E.C., Vol-VII, Sk, No-219.

೧೫೮. Ibid., Vol-IV, Hs, No-92.

೧೫೯. Ibid., Ch, No-82.

೧೬೦. Ep.Ind., Vol-XV, No-6; BKI. I.i. No-86.

೧೬೧. Ep.Ind., Vol-XV, No-6; Ind.Ant., Vol-XVIII, p-270-75.

೧೬೨. Ep.Ind., Vol-XIII, p-316.

೧೬೩. Ibid., Vol-XXXII, p-7.

೧೬೪. E.C., Vol-IX, Bl, No-513.

೧೬೫. Ibid., Bn, No-141.

೧೬೬. ಮಹಾಭಾರತ, ಅಧ್ಯಾಯ-೧೨, ಪುಟ-೭೬-೯೩.

೧೬೭. ಶ್ಯಾಮಶ್ಯಾಸ್ತ್ರಿ, ಟಿ.ಆರ್., ಅರ್ಥಶಾಸ್ತ್ರ, ೧-೭.

೧೬೮. ಹಂಡಕಿ, ಕೆ.ಕೆ.- ಯಶಸ್ತಿಲಕ ಆಂಡ್ ಇಂಡಿಯನ್ ಕಲ್ಚರ್, ಪುಟ-101.

೧೬೯. ಶ್ಯಾಮಶಾಸ್ತ್ರಿ, ಆರ್., (ಅನು), ಅರ್ಥಶಾಸ್ತ್ರ, ಪುಟ-೨೮.

೧೭೦. ಹಂಡಕಿ ,ಕೆ.ಕೆ., ಯಶಸ್ತಿಲಕ ಆಂಡ್ ಇಂಡಿಯನ್ ಕಲ್ಚರ್, ಪುಟ-೧೦೧.

೧೭೧. Ep.Ind., Vol-XV, p-78.

೧೭೨. SII., Vol-IX (i), No-115.

೧೭೩. E.C., Vol-VII, Sk, No-117.

೧೭೪. ಕೃಷ್ಣರಾವ,ಎಂ.ವ್ಹಿ., ಕರ್ನಾಟಕ ಇತಿಹಾಸ ದರ್ಶನ, ಪುಟ-೮೯೯-೯೦೦.

೧೭೫. SII., Vol-VII, No-308.

೧೭೬. E.C., Vol-VII, Ng, No-99.

೧೭೭. Ibid., Vol-II, Sb, No-186.

೧೭೮. KI., Vol-II, No-13.

೧೭೯. SII., Vol-XV, No-19.

೧೮೦. KI., Vol-II, No-26.

೧೮೧. E.C., Vol-VIII, Sb, No-140.

೧೮೨. Ibid., Vol-II, Sb, No-150.

೧೮೩. SII., Vol-XV, No-26.

೧೮೪. Ibid., No-44.

೧೮೫. Ibid., No-30.

೧೮೬. KI., Vol-I, No-33.

೧೮೭. ಹಂಡಕಿ ಕೆ.ಕೆ., - ಯಶಸ್ತಿಲಕ ಆ್ಯಂಡ್ ಇಂಡಿಯನ್ ಕಲ್ಚರ, ಪುಟ- ೧೦೮.

೧೮೮. BKI. I.ii., No-124.

೧೮೯. SII., Vol-IX (i), No-232.

೧೯೦. E.C., Vol-VII, Sk, No-267.

೧೯೧. ಹಂಡಕಿ ಕೆ.ಕೆ., -ಯಶಸ್ತಿಲಕ ಆ್ಯಂಡ್ ಇಂಡಿಯನ್ ಕಲ್ಚರ, ಪುಟ- ೧೦೭.

೧೯೨. E.C., Vol-VIII, Sr, No-571; Ind.Ant., Vol-XIX, p-151.

೧೯೩. Ibid., Sr, No-44.

೧೯೪. Ep.Ind., Vol-XIII, p-170.

೧೯೫. E.C., Vol-VIII, Sr, No-477.

೧೯೬. Ibid., Vol-I, Cg, No-62.

೧೯೭. ಹಂಡಕಿ,ಕೆ.ಕೆ., ಯಶಸ್ತಿಲಕ ಆ್ಯಂಡ್ ಇಂಡಿಯನ್ ಕಲ್ಚರ್, ಪುಟ-೧೦೭.

೧೯೮. E.C., Vol-XVI, Tm, No-78.

೧೯೯. E.C., Vol-XVI, Tm, No-81.

೨೦೦. Ibid., Vol-III, Nj, No-282.

೨೦೧. KI., Vol-II, No-12.

೨೦೨. SII., Vol-XV, No-12.

೨೦೩. E.C., Vol-I, Sp, No-87.

೨೦೪. SII., Vol-XX, No-64.

೨೦೫. E.C., Vol-VIII, Sr, No-191.

೨೦೬. SII., Vol-XV, No-12.

೨೦೭. E.C., Vol-V, Tn, No-257.

೨೦೮. Ibid., My, No-176.

೨೦೯. Ibid., Vol-XII, Gb, No-34; SII., Vol-IX (i), No-206.

೨೧೦. KI., Vol-II, No-33.

೨೧೧. Ibid., Vol-II, No-36.

೨೧೨. SII., Vol-VII, No-278.

೨೧೩. KI., Vol-II, No-12.

೨೧೪. SII., Vol-XV, No-155.

೨೧೫. ಮರಿಯಪ್ಪಭಟ್ಟ,ಎಂ.,(ಸಂ), ಕಿಟ್ಟೆಲ್‌ರ ಕನ್ನಡ ಇಂಗ್ಲೀಷ್ ನಿಘಂಟು, ಸಂ-೩, ಪು-೯೮೫.

೨೧೬. E.C., Vol-VIII, Sr, No-501.

೨೧೭. KI., Vol-II, No-8.

೨೧೮. E.C., Vol-VIII, Sg, No-80.

೨೧೯. Ibid., Vol-XII, Tp, No-105.

೨೨೦. Ep.Ind., Vol-XVI, p-29 B.

೨೨೧. KI., Vol-II, No-41(a).

೨೨೨. E.C., Vol-V, My, No-103.

೨೨೩. SII., Vol-VII, No-185.

೨೨೪. Dikshit,G.S., Local Self Government in Mediaeval Karnataka, Dharwad, Karnataka University, 1964, p-37.

೨೨೫. ಚಿದಾನಂದಮೂರ್ತಿ,ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಕ್ರಿ.ಶ.೪೫೦-ಕ್ರಿ.ಶ.೧೧೫೦, ಮೈಸೂರು, ಮೈಸೂರು ವಿಶ್ವವಿದ್ಯಾಲಯ, ೧೯೭೯, ಪು-೩೩೦-೩೧.

೨೨೬. E.C., Vol-III, Gp, No-67.

೨೨೭. Ibid., Vol-IV, Ch, No-352.

೨೨೮. Ep.Ind., Vol-XXXVII, p-23-26.

೨೨೯. KI., Vol-I, No-15.

೨೩೦. Ibid., Vol-I, No-17.

೨೩೧. E.C., Vol-VIII, Sg, No-103.

೨೩೨. Ibid., Vol-IV, Hs, No-35.

೨೩೩. SII., Vol-XV, No-30.

೨೩೪. E.C., Vol-XVI, No-98.

೨೩೫. SII., Vol-IX (i), No-395.

೨೩೬. KI., Vol-II, No-24.

೨೩೭. SII., Vol-XV, No-16.

೨೩೮. Ibid., No-40.

೨೩೯. ಚಿದಾನಂದಮೂರ್ತಿ, ಎಂ. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ-೩೪೨.

೨೪೦. ಮಲ್ಲಾಪೂರ,ಬಿ.ವ್ಹಿ., ನಯಸೇನ ಮತ್ತು ಅವನ ಕೃತಿಗಳು, ಪುಟ-೩೧೮.

೨೪೧. E.C., Vol-VII, Sb, No-10.

೨೪೨. SII., Vol-IX (i), No-53.

೨೪೩. ಚಿದಾನಂದಮೂರ್ತಿ,ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ , ಪುಟ-೩೪೭.

೨೪೪. ಮಲ್ಲಾಪೂರ, ಬಿ.ವ್ಹಿ. ನಯಸೇನ ಮತ್ತು ಅವನ ಕೃತಿಗಳು, ಪುಟ-319.

೨೪೫. ಚಿದಾನಂದಮೂರ್ತಿ,ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ-೩೪೯.

೨೪೬. ಚಿದಾನಂದ ಮೂರ್ತಿ, ಎಂ. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ-೩೫೨.

೨೪೭. Ep.Ind., Vol-XIII, p-190.

೨೪೮. Ibid., Vol-XI, p-259.

೨೪೯. BKI. I. ii., No-198.

೨೫೦. Ibid., i., No-97.

೨೫೧. ಸೌ.ಇ.ಇ., ಸಂಪುಟ-11, ಪುಟ-97, ಕ್ರಿ.ಶ. 1062.

೨೫೨. Ind.Ant., Vol-XIV, p-15.

೨೫೩. SII., Vol-XV, No-95.

೨೫೪. Ibid., No-12.

೨೫೫. Ibid., No-24 & 111.

೨೫೬. Ibid., XX, No-175.

೨೫೭. Ind.Ant., Vol-XXIX, p-280.

೨೫೮. Ep.Ind., Vol-XIII, pp-26.

೨೫೯. SII., Vol-XX, No-80.

೨೬೦. Ibid., No-63.

೨೬೧. Ep.Ind., Vol-XIV, No-19(i).

೨೬೨. SII., Vol-IX (i), No-297.

೨೬೩. B.No-83 & 86/77-78.

೨೬೪. SII., Vol-IX (i), No-166.

೨೬೫. Ibid., No-249.

೨೬೬. ತುಳುನಾಡಿನ ಶಾಸನಗಳು, ನಂ-೫, ಪು-೧೭.

೨೬೭. Ep.Ind., Vol-IX, pp-20.

೨೬೮. Ibid., pp-23.

೨೬೯. SII., Vol-VII, No-283.

೨೭೦. E.C., Vol-VIII, Nr, No-57.

೨೭೧. SII., Vol-IX (i), No-393.

೨೭೨. ಚಿದಾನಂದ ಮೂರ್ತಿ,ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ-೨೦೯.

೨೭೩. ಚಿದಾನಂದ ಮೂರ್ತಿ,ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ-೩೫೩.

೨೭೪. B.No-80/77-78.

೨೭೫. Ep.Ind., Vol-XIV, No-19(i).

೨೭೬. E.C., Vol-VII, Sk, No-117.

೨೭೭. Ibid., Vol-III, Hg, No-90.

೨೭೮. Ibid., Vol-I, Sp, No-90.

೨೭೯. KI., Vol-I, No-13.

೨೮೦. E.C., Vol-III, Nj, No-402.

೨೮೧. KI., Vol-II, No-4.

೨೮೨. Ibid., No-21.

೨೮೩. ಚಿದಾನಂದ ಮೂರ್ತಿ,ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ-೩೫೩.

೨೮೪. ಕಡಬಡಿ, ಬಿ.ಕೆ, ವಡ್ಡಾರಾಧನೆ, ಎ. ಸ್ಟಡಿ, ಪುಟ-೧೫೮-೬೦

೨೮೫. ಮಲ್ಲಾಪೂರ, ಬಿ.ವ್ಹಿ., ನಯಸೇನ ಮತ್ತು ಅವನ ಕೃತಿಗಳು, ಪುಟ-೨೭೬-೨೮೨.

೨೮೬. Dikshit,G.S., Local Self Government in Mediaeval Karnataka, K.U.D., 1964, p-44-45.

೨೮೭. ಚಿದಾನಂದಮೂರ್ತಿ,ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಕ್ರಿ.ಶ.೪೫೦-ಕ್ರಿ.ಶ.೧೧೫೦, ಮೈಸೂರು, ಮೈಸೂರು ವಿಶ್ವವಿದ್ಯಾಲಯ, ೧೯೭೯, ಪು-೩೪೧.

೨೮೮. E.C., Vol-V, My, No-117.

೨೮೯. KI., Vol-II, No-11.

೨೯೦. SII., Vol-XV, No-14.

೨೯೧. Ibid., No-52.

೨೯೨. SII., Vol-IX (i), No-78.

೨೯೩. Ibid., No-159.

೨೯೪. Ibid., No-253.

೨೯೫. E.C., Vol-IV, Ch, No-222.

೨೯೬. ಚಿದಾನಂದ ಮೂರ್ತಿ,ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ-೩೫೩.

೨೯೭. E.C., Vol-XVI, Si, No-123.

೨೯೮. KI., Vol-I, No-14.

೨೯೯. E.C., Vol-IV, Ch, No-237.

೩೦೦. Ibid., Ch, No-385.

೩೦೧. Ibid., Vol-III, Nj, No-262.

೩೦೨. Ibid., Vol-VIII, Sr, No-455.

೩೦೩. Ibid., Vol-VII, Md, No-54.

೩೦೪. Ibid., Vol-III, Hg, No-110.

೩೦೫. Ibid., Vol-IX, Bl, No-523.

೩೦೬. Ibid., Vol-VIII, Sr, No-471.

೩೦೭. Ibid., Vol-I, Sp, No-65.

೩೦೮. SII., Vol-XV, No-36.

೩೦೯. Ibid., Vol-XV, No-40.

೩೧೦. Dikshit,G.S., Local Self Government in Mediaeval Karnataka, p-58-96.

೩೧೧. Ep.Ind., Vol-XXXIV, No-33.

೩೧೨. KI., Vol-II, No-30.

೩೧೩. ನಯಸೇನ ಧರ್ಮಾಮೃತ, ಅಧ್ಯಾಯ-೯, ಪು-೧೦೧.

೩೧೪. ಚಿದಾನಂದ ಮೂರ್ತಿ,ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ-೨೧೩.

೩೧೫. E.C., Vol-VIII, Sr, No-474.

೩೧೬. Ibid., Vol-VII, Ml, No-50.

೩೧೭. SII., Vol-XV, No-32.

೩೧೮. Ibid., Vol-VII, No-224.

೩೧೯. Ibid., Vol-IX (i), No-395.

೩೨೦. E.C., Vol-I, Sp, No-80.

೩೨೧. Ibid., Vol-XVI, Cn, No-87.

೩೨೨. ಮಲ್ಲಾಪೂರ,ಬಿ.ವ್ಹಿ., ನಯಸೇನ ಮತ್ತು ಅವನ ಕೃತಿಗಳು. ಪುಟ-೨೭೯.

೩೨೩. E.C., Vol-V, My, No-192.

೩೨೪. SII., Vol-XV, No-46.

೩೨೫. KI., Vol-II, No-10.

೩೨೬. SII., Vol-XX, No-55.

೩೨೭. E.C., Vol-V, Kr, No-43.

೩೨೮. SII., Vol-IX (i), No-78.

# ಅಧ್ಯಾಯ-೬

# ಸಾಮಾಜಿಕ ಅಭಿವೃದ್ಧಿಯಲ್ಲಿ ಸಾಮಂತ ಅರಸುಮನೆತನಗಳ ಪಾತ್ರ

ಪರಸ್ಪರ ಸಂಬಂಧವುಳ್ಳ ಜನರ ವ್ಯವಸ್ಥಿತ ಸಮೂಹವನ್ನು ಸಮಾಜವೆಂದು ಕರೆಯಬಹುದು. ಅದರಲ್ಲಿ ವರ್ಗ, ವರ್ಣ, ಕುಟುಂಬ, ಸಂಘ, ಸಂಸ್ಥೆ ಮತ್ತು ಜನರ ಆಲೋಚನಾ ಕ್ರಮ ಮುಂತಾದ ಅಂಶಗಳಿದ್ದು, ಅವು ಆಯಾ ಸಮಾಜಿಕರ ಒಪ್ಪಿತ ಮೌಲ್ಯಕ್ಕೆ ಬದ್ಧವಾಗಿರುತ್ತವೆ. ಅಂದರೆ ಅನುಕೂಲ ಮತ್ತು ಭದ್ರತೆಗೆ ಒಂದು ಬಗೆಯ ಒಪ್ಪಂದವೇರ್ಪಟ್ಟಿರುತ್ತದೆ. ಈ ವ್ಯವಸ್ಥೆಯು ವೇದಪೂರ್ವ, ವೇದ ಮತ್ತು ವೇದೋತ್ತರ ಕಾಲದಿಂದ ಮುನ್ನಡೆದುಕೊಂಡು ಬಂದಿದ್ದು, ಅದರಲ್ಲಿ ಮಹತ್ತರವಾದ ಬದಲಾವಣೆಗಳೇನೂ ಕಾಣುವದಿಲ್ಲವಾದರೂ ಅದರಲ್ಲಿ ಕೆಲ ಬದಲಾವಣೆಗಳನ್ನು ಕಾಲಕಾಲದಲ್ಲಿ ಕಾಣಬಹುದಾಗಿದೆ. ಅಂತಹ ಬದಲಾವಣೆಗಳು ನಮ್ಮ ಅಧ್ಯಯನ ಅವಧಿಯಲ್ಲಿಯೂ ಕಂಡುಬರುತ್ತವೆ. ಈ ಬದಲಾವಣೆಗಳನ್ನು ಗುರ್ತಿಸುವಲ್ಲಿ ಆಯಾ ಕಾಲದ ಶಾಸನ, ಸಮಕಾಲೀನ ಸಾಹಿತ್ಯ, ಪ್ರಾಚ್ಯಾವಶೇಷ ಮುಂತಾದ ಆಕರಗಳು ಉಪಯುಕ್ತವಾದ ಮಾಹಿತಿಯನ್ನು ಒದಗಿಸುತ್ತವೆ.

## ವರ್ಗ-ವರ್ಣ-ಜಾತಿ:

ಪ್ರಾಚೀನ ವರ್ಣ ಪದ್ದತಿ ರೂಪಗೊಳ್ಳುವದಕ್ಕಿಂತ ಪೂರ್ವದಲ್ಲಿ, ಋಗ್ವೇದವು ಕರ್ಮಾರ, ಸ್ವರ್ಣಕಾರ, ವೈದ್ಯ, ವರ್ಧಕ್ಯ, ತಂತುವಾಯ, ತಕ್ಷ, ಮೇದ, ಸೈನಿಕ ಮತ್ತು ಪುರೋಹಿತ ಎಂದು ಸಮಾಜವನ್ನು ವೃತ್ತಿಗನುಗುಣವಾಗಿ ವರ್ಗಿಕರಣ ಮಾಡಿದನ್ನು ಉಲ್ಲೇಖಿಸಿದೆ[೧]. ಇಂತಹ ವೃತ್ತಿಗಳು ಆ ಕಾಲದಲ್ಲಿಯೇ ಜಾತಿಗಳಾಗಿ ರೂಪಗೊಂಡಿದ್ದವೆಂಬುದರ ಬಗ್ಗೆ ತೀವ್ರವಾದ ಭಿನ್ನಾಭಿಪ್ರಾಯಗಳಿವೆ. ಅಲ್ಲದೇ ಈ ವೃತ್ತಿಗಳು ವಂಶಾನುಗತಗಳಾಗಿದ್ದವೆಂದು ತೋರಿಸಲು ಯಾವ ಆಧಾರಗಳು ದೊರೆಯುವದಿಲ್ಲ. ಕಾರಣ ಋಗ್ವೇದದಲ್ಲಿ ಋಷಿಯೊಬ್ಬನು ತಾನೊಬ್ಬ ಕವಿಯೆಂದು, ತನ್ನ ತಂದೆಯು ವೈದ್ಯನೆಂದು ಮತ್ತು ತನ್ನ ಮಾತಾಮಹನು ಶಿಲ್ಪಿಯೆಂದು ಹೇಳಿಕೊಂಡಿದ್ದಾನೆ[೨]. ಹೀಗಾಗಿ ಒಂದೇ ಮನೆತನ ಹಲವರು ಬೇರೆ ಬೇರೆ ವೃತ್ತಿಗಳನ್ನು ಅನುಸರಿಸಿದ್ದು ಕಂಡುಬರುತ್ತದೆ. ಪ್ರಾಚೀನ ಮತ್ತು ಮಧ್ಯಕಾಲೀನ ಭಾರತದ ಹಿಂದೂ ಸಮಾಜ ವ್ಯವಸ್ಥೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರೆಂಬ ನಾಲ್ಕು ವರ್ಣಗಳನ್ನು ಒಳಗೊಂಡಿತ್ತು. ಇವುಗಳೇ ಸಮಾಜದ ನಾಲ್ಕು ವರ್ಗ ಅಥವಾ ಜಾತಿಗಳಾಗಿದ್ದವು. ಜಾತಿ ವ್ಯವಸ್ಥೆಯ ಮೂಲ ಬಹು ಪ್ರಾಚೀನವಾದುದು. ಅದು ಹೇಗೆ ಮತ್ತು ಯಾವಾಗ ಉದಯಿಸಿತು ಎಂಬ ವಿಷಯದ ಕುರಿತು ಸಾಕಷ್ಟು ವಾದವಿವಾದಗಳಿವೆ. ವರ್ಣವೆಂಬ ಪದವು ಜಾತಿ ಸೂಚಕವಾಗಿರದೆ ಅದು ಹೊರಗಿನಿಂದ ಬಂದ ಆರ್ಯರು ಮತ್ತು ಇಲ್ಲಿನ ಮೂಲನಿವಾಸಿಗಳ ನಡುವಿನ ಭಾಷೆ, ಮತ, ಧರ್ಮ ಮತ್ತು ಬಣ್ಣಗಳನ್ನು ಸೂಚಿಸುವ ಪದವಾಗಿದೆಂಬುದಕ್ಕೆ ಆಧಾರಗಳಿಲ್ಲ. ಸಾಮಾಜಿಕವಾಗಿ ವಿವಿಧ ವೃತ್ತಿ ಭೇದಗಳೆ ಚಾತುರ್ವರ್ಣ ವ್ಯವಸ್ಥೆಗೆಡೆಮಾಡಿಕೊಟ್ಟಿರಬೇಕೆಂಬುದಕ್ಕೆ ಸಹ

ಯಾವುದೆ ಖಚಿತವಾದ ಆಧಾರಗಳಿಲ್ಲ. ಋಗ್ವೇದದ ಪುರುಷಸೂಕ್ತದಲ್ಲಿ ವರ್ಣ ವ್ಯವಸ್ಥೆಯನ್ನು ನಾಲ್ಕು ವರ್ಗಗಳನ್ನಾಗಿ ಹೇಳುವಾಗ ಬ್ರಾಹ್ಮಣನು ಪುರುಷನ ಮುಖದಿಂದಲೂ, ಕ್ಷತ್ರಿಯನು ಬಾಹುವಿನಿಂದಲೂ, ವೈಶ್ಯನು ತೊಡೆಯಿಂದಲೂ ಹಾಗೂ ಶೂದ್ರನು ಪಾದಗಳಿಂದಲೂ ಜನಿಸಿದರೆಂದು ಉಲ್ಲೇಖಿಸಲಾಗಿದೆ. ಅಲ್ಲದೇ ಋಗ್ವೇದದ ಕೆಲವು ಮಂತ್ರಗಳು ಸಮಾಜವನ್ನು ಬ್ರಹ್ಮ, ಕ್ಷತ್ರ, ವೈಷ್ಯ, ಶೂದ್ರರೆಂದು ವಿಭಾಗಿಸಿರುವದನ್ನು ಉಲ್ಲೇಖಿಸಿವೆ. ವರ್ಣಗಳ(ಬ್ರಹ್ಮ, ಕ್ಷತ್ರಿಯ, ವೈಶ್ಯ, ಶೂದ್ರ) ಕುರಿತು ಕ್ರಿ.ಶ. ೫೦೦ರ ಒಂದು ಶಾಸನದಲ್ಲಿ ಉಲ್ಲೇಖ ಬರುತ್ತದೆ. ಮತ್ತು ರಾಜನು ವರ್ಣಾಶ್ರಮಧರ್ಮವನ್ನು ರಕ್ಷಿಸುವದು ಅವನ ಪವಿತ್ರ ಕರ್ತವ್ಯಗಳಲ್ಲಿ ಒಂದೆಂದು ಕ್ರಿ.ಶ. ೫೭೮ರ ಮತ್ತೊಂದು ಶಾಸನದಲ್ಲಿ ಉಲ್ಲೇಖಿತಗೊಂಡಿದೆ. ಆದರೆ ಈ ಹೇಳಿಕೆಗಳು ಹಿಂದಿನ ಪದ್ಧತಿಯನ್ನು ಅನುಸರಿಸಿ ಬಂದಂತಹವುಗಳೇ ಹೊರತು ಅವು ಜೀವಂತ ಸಂಪ್ರದಾಯಗಳನ್ನು ಸೂಚಿಸುವದಿಲ್ಲ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ವರ್ಗ ಅಥವಾ ವರ್ಣ ವ್ಯವಸ್ಥೆಯಲ್ಲಿ ಅಂಥಹ ಕಠೋರ ನಿಯಮಗಳು ಇರಲಿಲ್ಲ. ನಮ್ಮ ಪ್ರಾಚೀನಕಾಲದ ಸಮಾಜದಲ್ಲಿ ಕೆಲವು ಕ್ಷತ್ರಿಯರು, ವೈಶ್ಯರು ಬ್ರಾಹ್ಮಣರಾಗಿರುವದೂ ಉಂಟು. ಅಲ್ಲದೇ ಬ್ರಾಹ್ಮಣರು, ಕ್ಷತ್ರಿಯರಾಗಿರುವ ಉದಾಹರಣೆಯು ಸಿಗುತ್ತದೆ. ಇದನ್ನವಲೋಕಿಸಿದಾಗ ವರ್ಣ ವಿಭಜನೆ ಜನ್ಮಕ್ಕಿಂತ ವೃತ್ತಿಯನ್ನವಲಂಬಿಸಿ ಬಂದಿರುವದು ಎದ್ದುಕಾಣುತ್ತದೆ. ಇಂತಹ ಸಂಕರಣ ಸಮಾಜ ವ್ಯವಸ್ಥೆ ಬ್ರಾಹ್ಮಣರ ಪರವಾಗಿ ಕ್ಷತ್ರಿಯರಾದ ದ್ರೋಣ-ಅಶ್ವತ್ಥಾಮ, ಕ್ಷತ್ರಿಯರ ಪರವಾಗಿ ಬ್ರಾಹ್ಮಣರಾದ ದುರ್ಯೋಧನ-ಶಲ್ಯರು, ಶೂದ್ರರ ಪರವಾಗಿ ಕರ್ಣನು ನಿಂತು ಪರಸ್ಪರರ ಕುಲಗಳನ್ನು ಅವಹೇಳನಗೈಯುವ ಪ್ರಸಂಗವನ್ನು ಹೇಳುವದರ ಮುಖಾಂತರ ಪಂಪನು ನಂತರದ ಜಾತಿವ್ಯವಸ್ಥೆಯ ಮೇಲೆ ಬೆಳಕು ಚೆಲ್ಲುತ್ತಾನೆ. ಪಂಪಭಾರತವು ಆಗಿನ ಸಮಾಜದಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಜಾತಿಗಳ ಪ್ರಾಬಲ್ಯತೆಯನ್ನು ಹೇಳಿದೆ.

ಜಾತಿಭ್ರಷ್ಟತೆ, ಧರ್ಮಭ್ರಷ್ಟತೆ, ವೃತ್ತಿಭ್ರಷ್ಟತೆಗಳಲ್ಲಿ ಜನರು ತಮ್ಮನ್ನು ತೊಡಗಿಸಿಕೊಂಡಿರುವದನ್ನು ವಡ್ಡಾರಾಧನೆಯಲ್ಲಿ ಶಿವಕೋಟಾಚಾರ್ಯನು ಎತ್ತಿತೋರಿಸಿದ್ದಾನೆ. ಅಲ್ಲದೇ ಅಂದಿನ ಸಾಮಾಜಿಕ ವ್ಯವಸ್ಥೆಯ ವರ್ಣ, ವರ್ಗ, ಜಾತಿಗಳನ್ನು ಉಲ್ಲೇಖಿಸುತ್ತಾ ಅವನು ಅರಸ, ಸಾಮಂತ, ಮಾಂಡಲಿಕರು ಕ್ಷತ್ರಿಯರೆಂದೂ, ಬ್ರಾಹ್ಮಣರು-ಪುರೋಹಿತರೆಂದು, ಶ್ರೇಷ್ಠಿ, ಶೆಟ್ಟಿ ಮತ್ತು ಪುರದ ಒಕ್ಕಲುಮಕ್ಕಳನ್ನು-ವೈಶ್ಯರೆಂದು, ಹೊಲೆಯ, ಮಾದಿಗರನ್ನು-ಶೂದ್ರವರ್ಗದವರೆಂದು ಕರೆಯುತ್ತಾನೆ.

ಪ್ರಾಚೀನ ಕರ್ನಾಟಕದಲ್ಲಿ ವರ್ಣಪದ್ಧತಿಯ ಪರಿಪಾಲನೆ ಬಹುಮಟ್ಟಿಗೆ ಕಡಿಮೆಯಾಗಿದ್ದು ತಿಳಿದುಬರುತ್ತದೆ. ಮೇಲೆ ಉಲ್ಲೇಖಿಸಿದಂತೆ, ಸಾಮಂತ ಅರಸುಮನೆತನಗಳ ಶಾಸನಗಳು ಹಾಗೂ ಸಮಕಾಲೀನ ಶಾಸನಗಳಲ್ಲಿ ಅದು ಸಾಂಪ್ರದಾಯಿಕವಾಗಿ ಉಲ್ಲೇಖಗೊಂಡಿದ್ದರೂ ಆಚರಣೆಯಲ್ಲಿ ಇದ್ದಿಲ್ಲ. ಬೇರೆ ಬೇರೆ ವೃತ್ತಿ-ಜಾತಿಗಳ ಜನರು ಊರಿನ ಬೇರೆ ಬೇರೆ ಕೇರಿ-ಬೀದಿಗಳಲ್ಲಿ ವಾಸಿಸುತ್ತಿದ್ದ ಪ್ರಸ್ತಾಪ ನಮಗೆ ಆಗಿನ ಶಾಸನಗಳಿಂದ ಕಂಡುಬರುತ್ತದೆ. ಹೀಗಾಗಿ ಎಲ್ಲ

ಕಾಲದಲ್ಲಿಯೂ ಕುಲ ಮತ್ತು ವೃತ್ತಿ, ಸಮಾಜದಲ್ಲಿ ಮೇಲು-ಕೀಳುಗಳೆಂಬ ವರ್ಗಬೇಧವನ್ನು ಉಂಟುಮಾಡಿದ್ದನ್ನು ನಾವು ಕಾಣುತ್ತೇವೆ.

## ಪ್ರಭುವರ್ಗ:

ಸಾಮಂತ ಅರಸುಮನೆತನಗಳ ಸಮಾಜಿಕ ವ್ಯವಸ್ಥೆಯನ್ನು ಪ್ರಭುವರ್ಗ ಹಾಗೂ ಶ್ರಮಿಕವರ್ಗ ವೆಂದು ಸ್ಥೂಲವಾಗಿ ಎರಡು ವಿಭಾಗಗಳಲ್ಲಿ ವಿಂಗಡಿಸಬಹುದಾಗಿದೆ. ಪ್ರಭುವರ್ಗದಲ್ಲಿ ಬ್ರಾಹ್ಮಣ ಅಥವಾ ಪುರೋಹಿತರು, ಸಾಮಂತರು, ಮಹಾಮಂಡಳೇಶ್ವರರು ಹಾಗೂ ಅವರ ವಿವಿಧ ಅಧಿಕಾರಿಗಳನ್ನೊಳಗೊಂಡು, ಇವೆರಡೂ ವರ್ಗಗಳ ಮಧ್ಯದ ವ್ಯಾಪಾರಿಗಳು ತಮ್ಮ ಆರ್ಥಿಕ ಸುಸ್ಥಿತಿಯಿಂದ ಪ್ರಭುವರ್ಗವನ್ನೇ ಪ್ರತಿನಿಧಿಸುತ್ತಾರೆ. ಅಲ್ಲದೇ ಸಮಾಜ ವ್ಯವಸ್ಥೆಯಲ್ಲಿ ಉನ್ನತ ಸ್ಥರದಲ್ಲಿರುವ ವಿವಿಧ ಮತಗಳ ಪುರೋಹಿತರು, ಧರ್ಮ ಮತ್ತು ರಾಜಧರ್ಮವನ್ನು ನಿಯಂತ್ರಿಸುತ್ತಿದ್ದರು. ಅವರಲ್ಲಿ ಮಹಾಜನರು, ಸ್ಥಾನಾಚಾರ್ಯರು, ಜಿನಮುನಿಗಳು ಪ್ರಮುಖರಾಗಿದ್ದಾರೆ. ಇನ್ನು ಶ್ರಮಿಕವರ್ಗದಲ್ಲಿ ಸಮಾಜದ ವಿವಿಧ ವೃತ್ತಿಗಳನ್ನು ಕೈಕೊಂಡ ಜನಸಾಮಾನ್ಯರಿದ್ದರು. ಪ್ರಭುವರ್ಗದಲ್ಲಿ ಬರುವ ರಾಜ, ಸಾಮಂತ, ಮಹಾಸಾಮಂತ, ಮಹಾಮಂಡಳೇಶ್ವರ ಹಾಗೂ ಇತರ ಅಧಿಕಾರಿಗಳನ್ನು ಕುರಿತು ಇದೇ ಪ್ರಬಂಧದ ಎರಡು(೨), ಮೂರು(೩), ನಾಲ್ಕು(೪) ಹಾಗೂ ಐದನೆಯ(೫) ಅಧ್ಯಾಯಗಳಲ್ಲಿ ಹಾಗೂ ವ್ಯಾಪಾರೀ ವರ್ಗದವರನ್ನು ಕುರಿತು ಎಂಟ(೮)ನೆಯ ಅಧ್ಯಾಯದಲ್ಲಿ ವಿವರವಾಗಿ ಚರ್ಚಿಸಿರುವದರಿಂದ ಅವರನ್ನು ಮತ್ತೆ ಇಲ್ಲಿ ಪ್ರಸ್ತಾಪಿಸಲಾಗಿಲ್ಲ.

### ಮಹಾಜನರು:

ಪ್ರಾಚೀನ ಕರ್ನಾಟಕದಲ್ಲಿ ಮಹಾಜನರು ಅತ್ಯಂತ ಪ್ರಭಾವಶಾಲಿಗಳಾಗಿದ್ದರು. ವರ್ಣಾಶ್ರಮದಲ್ಲಿ ಪ್ರಥಮಸ್ಥಾನ ಪಡೆದ ಬ್ರಾಹ್ಮಣ ಜಾತಿಯೇ ಜಾತಿಗಳಲ್ಲೆಲ್ಲ ಉತ್ತಮವಾದದ್ದು ಎಂದು ಪಂಪ ಹೇಳುತ್ತಾನೆ[೧೦]. ವಿದ್ಯಾಕ್ಷೇತ್ರ, ರಾಜಕೀಯಕ್ಷೇತ್ರ ಹಾಗೂ ಸಾಮಾಜಿಕಕ್ಷೇತ್ರಗಳಲ್ಲಿ ಯಾವಾಗಲೂ ಅಗ್ರಸ್ಥಾನದಲ್ಲಿ ಇವರಿದ್ದರು. ಯಜನ,ಯಾಜನ, ಅಧ್ಯಯನ, ಅಧ್ಯಾಪನ, ದಾನ ಮತ್ತು ಪ್ರತಿಗ್ರಹಣಗಳು ಅವರ ಮುಖ್ಯ ಕರ್ತವ್ಯಗಳಾಗಿದ್ದವೆಂದು ಶಾಸನಗಳಿಂದ ತಿಳಿಯುತ್ತದೆ. ಆಚಾಪುರದ ಮಹಾಸಾಮಂತ ಗೋಣರಸನ ಕಾಲದ ಶಾಸನವೊಂದು ಮಹಾಜನರನ್ನು ಕುರಿತು ಯಮ, ನಿಯಮ, ದಾನ, ಸ್ವಾಧ್ಯಾಯ, ಧ್ಯಾನ, ಧಾರಣ, ಮೌನಾನುಷ್ಠಾನ, ಜಪ, ತಪ, ಸಮಾಧಿಶೀಲಗುಣಸಂಪನ್ನರೆಂದು ಹೇಳುತ್ತದೆ[೧೧]. ಯಾಗವನ್ನು ಮಾಡುವದು-ಮಾಡಿಸುವದು, ಓದುವದು-ಓದಿಸುವದು, ದಾನ ಮಾಡುವದು-ಸ್ವೀಕರಿಸುವದು, ಇಂತಹ ಷಟ್ಕರ್ಮಗಳನ್ನು ಅವರು ಮಾಡುತ್ತಿದ್ದರು. ಕುರುಗೋಡಿನ ಶಾಸನವೊಂದು ತಿಳಿಸುವಂತೆ, ಬ್ರಾಹ್ಮಣರ ಓಣಿಯು ತರ್ಕ, ಶಾಸ್ತ್ರಗಳ ವಿವಾದಗಳಿಂದಲೂ, ವೇದ ಮಂತ್ರಗಳ ಶಬ್ದಗಳಿಂದಲೂ, ಹೋಮಾದಿಗಳ ಧೂಮದಿಂದಲೂ, ಶೋಭಿಸುತ್ತಿತ್ತು[೧೨].

ಸಾಮಾನ್ಯವಾಗಿ ಮಹಾಜನರು ಆಗ್ರಹಾರ, ಬ್ರಹ್ಮಪುರಿ ಮತ್ತು ಘಟಿಕಾಸ್ಥಾನಗಳಲ್ಲಿ ವಾಸಿಸುತ್ತಿದ್ದರು. ಇವರಲ್ಲಿ ಕೆಲವರು ಋಗ್ವೇದ, ಸಾಮವೇದ, ಯಜುರ್ವೆದ, ಅಥರ್ವಣವೇದಗಳನ್ನು ಕರಗತಮಾಡಿಕೊಂಡವರಾಗಿದ್ದರು. ಕಾಡಿಯುರಿನ ವಿಪ್ರರನ್ನು ಕುರಿತು ವ್ಯಾಕರಣಮರ್ತ್ಥ ಶಾಸ್ತ್ರನೇಕಂ ಸಾಹತ್ಯವಿದ್ಯೆಯಿತಿಹಾಸಂ ಮಿಕ್ಕೇಕಾಕ್ಷರಮಿ ತರ್ಕ್ಕಂ ಟೀಕಂ ಬರೆಯಲ್ಕಮಗ್ರರಾಬ್ಯಾಸಿಸುವರ್ ಎಂದಿದೆ[೧೩]. ಹೀಗೆ ಅಲ್ಲಿ ಅಧ್ಯಯನ ಮಾಡುತ್ತಿದ್ದವರು ತಾವು ಕಲಿತ ವಿಷಯಗಳಿಗೆ ಟೀಕುಗಳನ್ನು ಬರೆಯಲು ಸಮರ್ಥರಾಗುತ್ತಿದ್ದರು. ಶಾಸನವೊಂದು ಶ್ರುತಿಯೊಳ್ಪಿಶ್ರುತುಸ್ಪ ಸ್ಮೃತಿಯೊಳ್ವ್ಯಾಕರಣ ಕಾವ್ಯ ನಾಟಕ ತರ್ಕ್ಕಸ್ಥಿತಿಯೊಳಪರ್ವ್ವ ಗವುದೊಳ್ವತುರ್ಮ್ಮುಖ ಪತಿಯರಯ್ಪುದಿಂಬರ್ದ್ವಿಪ್ರರ್[೧೪]. ಎಂದು ಉಲ್ಲೇಖಿಸುತ್ತಾ ಅವರಿಗೆ ಬೆಳ್ವಲ-೩೦೦ನ್ನು ಆಳುತ್ತಿದ್ದ ಸಾಮಂತ ದೇವಣ್ಣಯ್ಯನು ಚಂದ್ರಗ್ರಹಣದ ಕಾಲದಲ್ಲಿ ತುಪ್ಪದ ಸುಂಕವನ್ನು ಬಿಟ್ಟುಕೊಟ್ಟನು. ಬಾದಾಮಿ ಚಾಲುಕ್ಯರ ಸಾಮಂತನಾದ ಅಳುಪ ಚಿತ್ರವಾಹನನ ಕ್ರಿ.ಶ. ೬೯೨ರ ತಾಮ್ರಶಾಸನವೊಂದು ತಿಳಿಸುವಂತೆ ಋಗ್ವೇದದಲ್ಲಿ ಪಂಡಿತನಾದ ದಿವಾಕರಶರ್ಮನು ಎಡೆವೊಳಲವಿಷಯದಲ್ಲಿರುವ ಸಾಲಿವೊಗೆ ಗ್ರಾಮವನ್ನು ಸರ್ವಬಾಧಾಪರಿಹಾರವಾಗಿ ದಾನವನ್ನಾಗಿ ಪಡೆದುಕೊಂಡನು[೧೫].

ಸಮಾಜದಲ್ಲಿ ಉನ್ನತ ಸ್ಥಾನ ಹೊಂದಿದ್ದ ಬ್ರಾಹ್ಮಣರು ತಮ್ಮ ಪೌರೋಹಿತ್ಯದಿಂದಾಗಿ ರಾಜಕೀಯದಲ್ಲಿಯೂ ಪ್ರಮುಖ ಸ್ಥಾನವನ್ನು ಹೊಂದಿದ್ದರು. ಕೆಲವರು ಪ್ರಮುಖ ಅಧಿಕಾರಿಗಳಾಗಿ ಆಡಳಿತದಲ್ಲಿಯೂ ಉನ್ನತ ಸ್ಥಾವನ್ನು ಹೊಂದಿದ್ದರು. ಮನುಮಾರ್ಗಚರಿತ, ಋಗ್ವೇದರತ್ನಾಕರ ಎನಿಸಿದ್ದ ಸೋಮೇಶ್ವರ ಭಟ್ಟೋಪಾಧ್ಯಾಯರು ಸಿಂದರ ಕಾಲದಲ್ಲಿ ಮಹಾಪ್ರಧಾನ ದಂಡನಾಯಕರಾಗಿದ್ದರು. ಅಲ್ಲದೇ ಈತನ ಮೈದುನ ಅಚ್ಚುಪನ್ನಾಯದ ದಂಡನಾಯಕನಾಗಿದ್ದನು[೧೬]. ರಾಷ್ಟ್ರಕೂಟರ ಸಾಮಂತ ಭಟ್ಟಸ್ವಾಮಿ, ಸಾಮಂತ ಬ್ರಾಹ್ಮಣರಾಜಕ, ಸಾಮಂತ ಮಹತ್ತರ ಸೈನ್ಯ ಮತ್ತು ಸಾಮಂತ ಬ್ರಾಹ್ಮಣ ಅಗ್ಗಕರು ಬ್ರಾಹ್ಮಣರಾಗಿದ್ದರು. ಅಲ್ಲದೇ ಶಾಸನ ಮುಂದುವರೆದು ಮಹಾಬಲಾಧಿಕೃತ ಬ್ರಾಹ್ಮಣಭಟ್ಟ ಈಶ್ವರ ಹಾಗೂ ಗ್ರಾಮ ಮಹಾಸಭಾದ ಅಧ್ಯಕ್ಷನಾದ ಭಟ್ಟವಾಸುದೇವ ಮುಂತಾದ ಬ್ರಾಹ್ಮಣ ಅಧಿಕಾರಿಗಳನ್ನು ಹೆಸರಿಸುತ್ತದೆ[೧೭]. ಶಿಲಹಾರ ಮಹಾಮಂಡಳೇಶ್ವರ ಮನ್ನೆಯ ಇಂದರಸನ ಕೈಕೆಳಗೆ ಮಾಧವಭಟ್ಟರು ಹಡಪವಳಂ ದಂಡನಾಯಕರಾಗಿದ್ದರು. ಅಲ್ಲದೇ ಅವರು ದೈಠಾಣದಲ್ಲಿ ಕಂದರ್ಪೇಶ್ವರ ದೇವಾಲಯವೊಂದನ್ನು ಸಹ ನಿರ್ಮಿಸಿದ್ದ ವಿಷಯ ಕ್ರಿ.ಶ. ೧೧೧೨ರ ಅಕ್ಕಲಕೋಟ ಶಾಸನದಿಂದ ತಿಳಿದುಬರುತ್ತದೆ[೧೮]. ಅಲ್ಲದೇ ಈ ಶಾಸನವನ್ನು ಹರೀತ ಗೋತ್ರೋದ್ಭವನಾದ ನರಸಿಂಗದೇವನು ಬರೆದನೆಂದು ತಿಳಿದುಬರುತ್ತದೆ. ಬಹುಷಃ ಅವನು ಇಂದರಸನ ಸಂಧಿವಿಗ್ರಹಿಯಾಗಿರಬಹುದು.

ಕೆಲವೊಮ್ಮೆ ಬ್ರಾಹ್ಮಣೋತ್ತಮರೂ ಸಹ ದಾನ ದತ್ತಿಗಳನ್ನು ಬಿಟ್ಟು, ಅಲ್ಲದೇ ಕೆರೆ-ಕಟ್ಟೆ, ದೇವಸ್ಥಾನಗಳನ್ನು ನಿರ್ಮಿಸಿದ ಉದಾಹರಣೆಗಳೂ ಇವೆ. ಯಮನಿಯಮಸಧ್ಯಾಯ ಸನ್ನಿಸಮಾಧಿಧ್ಯಾನಧಾರಣಮೌನಾನುಷ್ಠಾನ ಪರಾಯಣರಪ್ಪ ಸೋಮರಾಸಿಭಟಾರಕನೆಂಬುವನು ಕೆರೆಯನ್ನು ಕಟ್ಟಿಸಿದ ಉಲ್ಲೇಖ ಕ್ರಿ.ಶ.೧೦ನೆಯ ಶತಮಾನದ

ಹಳೇಬೂದುನೂರಿನ ಗಂಗರ ಶಾಸನವೊಂದರಲ್ಲಿದೆ[೮೯]. ಇಂತಹ ಬ್ರಾಹ್ಮಣರಿಗೆ ಸಾಮಂತ ಅರಸರುಗಳು, ಅವರ ರಾಣಿಯರು, ಅಧಿಕಾರಿಗಳು ಇನ್ನು ಮುಂತಾದವರು, ಅನೇಕ ರೀತಿಯ ದಾನ ದತ್ತಿಗಳನ್ನು ನೀಡುವದರ ಮುಖಾಂತರ ಅವರನ್ನು ಪೋಷಿಸಿಕೊಂಡು ಬಂದಿದ್ದಾರೆ. ಗಂಗ ಮಾಧವವರ್ಮನು ಕಂಡಸಾಲಾ ಗ್ರಾಮವನ್ನು ಭಾರದ್ವಾಜಗೋತ್ರದ ನಾಗಶರ್ಮನಿಗೆ ದಾನ ನೀಡಿದ್ದಾನೆ[೯೦]. ಉಮ್ಮಚ್ಚಿಗೆಯ ಊರೊಡೆಯ ಪ್ರಮುಖ ೧೦೪-ಮಹಾಜನರ ಕೈಯಲ್ಲಿ ಮೊಲ್ಲೆಯ ಬೊಮ್ಮಣನು ಭೂಮಿಯನ್ನು ದಾನ ನೀಡಿದ ಉಲ್ಲೇಖ ಮಹಾಮಂಡಳೇಶ್ವರ ಸಿಂದ ಪೆರ್ಮಾಡಿದೇವನ ಶಾಸನವೊಂದರಿಂದ ತಿಳಿದುಬರುತ್ತದೆ. ಇದಲ್ಲದೆ ತುಲಾಪುರುಷ, ಸಿಂಹಾಸನಾರೋಹಣ, ತಂದೆಗೆ ಒಳ್ಳೆಯದಾಗಲೆಂದು[೯೧], ಗ್ರಾಮಗಳನ್ನು ಬ್ರಾಹ್ಮಣರಿಗೆ ದಾನವಾಗಿ ನೀಡಿರುವದನ್ನು ಶಾಸನಗಳಿಂದ ತಿಳಿದುಬರುತ್ತದೆ. ಹೀಗೆ ಅರಸ, ಸಾಮಂತ, ಮಹಾಮಂಡಳೇಶ್ವರ, ದಂಡನಾಯಕ ಹಾಗೂ ಸಾಮಾನ್ಯ ಜನರ ಗೌರವಕ್ಕೆ ಪಾತ್ರರಾದ ಬ್ರಾಹ್ಮಣರು ವಿಶಿಷ್ಟವಾದ ಕುಲಗೋತ್ರಗಳನ್ನು ಹೊಂದಿದ್ದರು.

ಕೆಲವು ಶಾಸನಗಳು ಅಗಸ್ತ್ಯ, ಅತ್ರೇಯ, ಬಂದುಲ, ಭಾರದ್ವಾಜ, ಭಾರ್ಗವ, ಚಂದ್ರಾತ್ರೇಯ ದಕ್ಷ, ದರ್ಬ, ದೌಮ್ಯ, ಗಾಲವ, ಗಾರ್ಗೆ, ಗೌಣ್ಯ, ಗೌತಮ, ಗೋಬಿಲ, ಹರಿದ್ರ, ಹಾರಿತ, ಜಾವಕರಣ, ಜೀವಂತಾಯಣ, ಕಣ್ವ, ಕಪಿಸ್ಥಲ, ಕಾಶಪ, ಕಾತ್ಯಾಯನ, ಕೌಂಡಿನ್ಯ, ಕೌಶಿಕ, ಕ್ರಮೈತ್, ಕೃಷ್ಣತ್ರಯ, ಕುಟಿಮಾಸ, ಕುತ್ಸ, ಮೊಡಗಲ್ಯಾ, ಮೌನ್ಯ, ಮೊಗ್ಗಲು, ಪರಾವಸ, ಪರಾಸರ, ಪಿಪ್ಪಲದ, ಸಾಂಕೃತ್ಯ, ಶಾಂಡಿಲ್ಯ, ಸಾರ್ಕರ, ಸಕರಾಕ್ಷ, ಸೌಸ್ರವಸ, ಸಾವರಣ, ಉಪಮಾನ್ಯು, ವಾಜಸೇನೆಯ, ವಶಿಷ್ಠ, ವತ್ಸ, ಇತ್ಯಾದಿ ಗೊತ್ರಗಳನ್ನು ಉಲ್ಲೇಖಿಸಿವೆ[೯೨]. ಕ್ರಿ.ಶ.ಸು. ೬ನೆಯ ಶತಮಾನದ ಗಂಗರ ಶಾಸನವೊಂದರಲ್ಲಿ ದುರ್ವಿನೀತನ ಮಗನಾದ ಪೋಲವೀರನಿಂದ ಕೌಸಿಕಗೋತ್ರದ ಷಟ್ಕರ್ಮನಿರತನಾದ ನಾಗಶರ್ಮನೆಂಬ ಬ್ರಾಹ್ಮಣನು ಸೇಂದ್ರಕವಿಷಯದಲ್ಲಿರುವ, ವಳಾವಿದೇಸದಲ್ಲಿನ ಪಲಚ್ಚೊಗೆ ಗ್ರಾಮವನ್ನು ಪಡೆದನೆಂದು ತಿಳಿದುಬರುತ್ತದೆ[೯೩]. ಕ್ರಿ.ಶ. ೭೨೫-೬ರ ಶಾಸವೊಂದು ತಿಳಿಸುವಂತೆ ಬಾರದೂರು ಎಂಬ ಗ್ರಾಮವನ್ನು ಗಂಗ ಶ್ರೀಪುರುಷನಿಂದ ವಾತಾಪಿಯ ನಿವಾಸಿಯಾದ, ವತ್ಸಗೋತ್ರದ ನಾಗಶರ್ಮನ ಪುತ್ರನಾದ ಬಾಣಶರ್ಮನು ದತ್ತಿಯಾಗಿ ಪಡೆದನು[೯೪]. ಮಹಾಮಂಡಳೇಶ್ವರ ನೊಳಂಬ ಕೊಲ್ಲಿಯರಸನ ಕಾಲದಲ್ಲಿ ಅರ್ಪೊಳೆಯ ಒಡೆಯನಾದ ಕೌಶಿಕಗೋತ್ರದ ಪೊನ್ನಿಧಿಯು ತಿಪ್ಪೆರೂರು ಗ್ರಾಮವನ್ನು ಬ್ರಹ್ಮದೇಯವಾಗಿ ಪಡೆದನು[೯೫]. ಹೀಗೆ ಬ್ರಾಹ್ಮಣರು ಸಾಮಾಜಿಕವಾಗಿ, ಧಾರ್ಮಿಕವಾಗಿ, ರಾಜಕೀಯವಾಗಿ ಮತ್ತು ಸಾಂಸ್ಕೃತಿಕವಾಗಿ ಪ್ರತಿಷ್ಠೆಯನ್ನು ಹೊಂದಿ ಎಲ್ಲರಿಂದಲೂ ಗೌರವವನ್ನು ಸಂಪಾದಿಸಿದ್ದರು.

**ಸ್ಥಾನಪತಿಗಳು:**

ಶೈವ ಸಂಪ್ರದಾಯದ ಪಾಶುಪತ, ಕಾಳಾಮುಖ ಪಂತಕ್ಕೆ ಸೇರಿದ ದೇವಸ್ಥಾನ, ಮಠಗಳ ಆಚಾರ್ಯರೇ ಸ್ಥಾನಾಚಾರ್ಯ ಅಥವಾ ಸ್ಥಾನಪತಿಗಳಾಗಿದ್ದಾರೆ. ಹತ್ತನೆಯ ಶತಮಾನದ ಕಾಲಕ್ಕಾಗಲೇ ಜೈನರ ಪ್ರಭಾವ

ಇಳಿಮುಖವಾಗುತ್ತಿದ್ದಂತೆಯೇ, ಇವರು ರಾಜಪ್ರಭುತ್ವ ಮತ್ತು ಸಮಾಜದ ಗೌರವದಿಂದ ತಮ್ಮ ಪ್ರಾಬಲ್ಯವನ್ನು ಸಾಧಿಸಿದ್ದರು. ಇವರು ನೈಷ್ಠಿಕ ಬ್ರಹ್ಮಚಾರಿಗಳಾಗಿದ್ದು ದೇವಾಲಯ ಮಠಗಳ ಆಡಳಿತ ನೋಡಿಕೊಳ್ಳುತ್ತಿದ್ದರು. ದೇವಾಲಯಗಳಲ್ಲಿ ದಿನನಿತ್ಯ ಪೂಜೆ, ಪರ್ವ, ಪವಿತ್ರಗಳೊಂದಿಗೆ ಅಲ್ಲಿ ಓದುತ್ತಿದ್ದ ತಪೋಧನರ, ಛಾತ್ರರುಗಳ ವಸತಿ-ಊಟೋಪಚಾರಗಳ ಮೇಲ್ವಿಚಾರಣೆಯನ್ನು ಕೂಡಾ ನಡೆಸಬೇಕಾಗಿತ್ತು. ಅದಕ್ಕಾಗಿ ರಾಜ, ಸಾಮಂತ, ಮಹಾಮಂಡಳೇಶ್ವರ, ರಾಣಿಯರು, ಅವರ ಅಧಿಕಾರಿಗಳು ಹಾಗೂ ಸಾಮಾನ್ಯಜನರಿಂದಲೂ ಹೇರಳವಾದ ದಾನ-ದತ್ತಿಗಳನ್ನು ಪಡೆಯುತ್ತಿದ್ದರು. ಸಾಮಂತ ಚೆಲ್ಲಕೇತನ ಬಂಕೇಯರಸನು ಕಂಕಾಳಗೊರವನಿಗೆ ಕಿರುಗುಪ್ಪದೂರ ಗ್ರಾಮವನ್ನು ದಾನವಾಗಿ ನೀಡಿದ್ದಾನೆ[೩೬]. ಕ್ರಿ.ಶ. ೮೬೬ರಲ್ಲಿ ರಾಷ್ಟ್ರಕೂಟರ ಸಾಮಂತನಾದ ಕುಪ್ಪೆಯರಸ ಪುರಿಗೆರೆ-೩೦೦ನ್ನು ಆಳುತ್ತಿದ್ದು, ಮಣಲೆಯರನು ನಾಳ್ಗಾಮುಂಡಗೈಯುತ್ತಿದ್ದಾಗ, ಕುಪ್ಪೆಯರಸ ಸಿಗ್ಗಾಮೆಯ ಕಳ್ಳವಳ್ಳದೆರೆಯನ್ನು ಕಲ್ಕರೇತಿಭಟಾರರಿಗೆ ನೀಡಿದ್ದನ್ನು ಶಿಗ್ಗಾಂವ್ ಶಾಸನ ತಿಳಿಸಿದೆ[೩೭]. ರಾಷ್ಟ್ರಕೂಟರ ಇನ್ನೊಬ್ಬ ಸಾಮಂತಾಗ್ರಣಿ ಹೊರೆಯಮನು ಸಾಲವಾಡಿಗೆಯೊಳ ನಿರ್ಮಿಸಿದ ಹೊರೆಯಮೇಶ್ವರ ದೇಗುಲವನ್ನು ಶಿವಯತಿ ಮೂರುಜಾವಿಮುನಿಯು ಜೀರ್ಣೋದ್ಧಾರಗೊಳಿಸಿದನು ಎಂದು ಸಾಲವಾಡಗೆ ಶಾಸನ ತಿಳಿಸಿದೆ[೩೮]. ಕ್ರಿ.ಶ. ೯೦೦ರ ಶಾಸನವೊಂದು ತಿಳಿಸುವಂತೆ ಗಂಗ ಭೂತುಗನ ಕಾಲದಲ್ಲಿ ನಿರ್ಗುಂದ ವಿಷಯದಲ್ಲಿನ ಕೆಡಸೂರ ಗ್ರಾಮವನ್ನು, ಮಗರೆವಿಷಯದಲ್ಲಿರುವ ಆಲೂರು ಗ್ರಾಮದ ಈಶ್ವರದೇವರ ಜೀರ್ಣೋದ್ಧಾರಕ್ಕಾಗಿ ನೇತ್ರಶಿವಾಚಾರ್ಯರಿಗೆ ಸರ್ವಬಾಧಾಪರಿಹಾರವಾಗಿ ನೀಡಲಾಯ್ತು[೩೯]. ಕ್ರಿ.ಶ. ೯೩೯ರಲ್ಲಿ ಬನವಾಸೆಯ ಚಟ್ಟಯದೇವನು ಮತ್ತು ಇನ್ನು ಹಲವರು ಕೂಡಿಕೊಂಡು ಎಡೆನಾಡಿನಲ್ಲಿನ ಕೂಳುಗಗ್ರಾಮದ ಶ್ರೀಕಂಠೇಶ್ವರ ದೇವರ ಚೈತ್ರಪವಿತ್ರ, ಆಹಾರದಾನಕ್ಕಾಗಿ ರುದ್ರಶಕ್ತಿ-ಪಂಡಿತದೇವನ ಕಾಲಂ ಕರ್ಚ್ಚಿ ದಾನವನ್ನು ಬಿಟ್ಟ ಉಲ್ಲೇಖ ಹೆಚ್ಚೆಯ ಶಾಸನದಲ್ಲಿದೆ[೪೦]. ಗಂಗ ರಕ್ಕಸಗಂಗನ ಕ್ರಿ.ಶ. ೧೦ನೆಯ ಶತಮಾನದ ಶಾಸನ ಸೋವರಾಸಿಭಟಾರರು ಕೆರೆಯೊಂದನ್ನು ಕಟ್ಟಿಸಿದ ಉಲ್ಲೇಖಮಾಡುತ್ತದೆ[೪೧]. ಚಾಲುಕ್ಯವಂಶದ ಮಹಾಸಾಮಂತ ದುರ್ಗನು ವರುಣದ ಭೂತೇಶ್ವರಿಗೆ ದೇವಭೋಗವಾಗಿ ತೊರೆವಳ್ಳಿ ಮತ್ತು ಕೆಲಭೂಮಿಯನ್ನು ನನ್ನಿಕರ್ತಾರಭಟಾರರ ಕೈಯಲ್ಲಿ ದಾನಬಿಟ್ಟದ್ದನ್ನು ಕ್ರಿ.ಶ. ೧೦ನೆಯ ಶತಮಾನದ ವರುಣದ ಶಾಸನ ಹೇಳಿದೆ[೪೨]. ಮಹಾಸಾಮಂತ ಗೋಣರಸನು ಗೋಣೇಶ್ವರ ಮತ್ತು ಸೌರ್ಯಮಾರ್ತಾಂಡ ದೇಗುಲಗಳನ್ನು ನಿರ್ಮಿಸಿ ಅವುಗಳನ್ನು ಕ್ರಿಯಾಶಕ್ತಿಪಂಡಿತರಿಗೆ ಕಾಲಂಕರ್ಚ್ಚಿ ಧಾರಾಪೂರ್ವಕ ಮಾಡಿಕೊಟ್ಟಿದ್ದನ್ನು ಕ್ರಿ.ಶ.೧೦೪೨ರ ಆಚಾಪುರದ ಶಾಸನ ಹೇಳಿದೆ[೪೩]. ಕ್ರಿ.ಶ. ೧೦೮೯ರಲ್ಲಿ ಮಹಾಮಂಡಳೇಶ್ವರ ರಾಯಶಾಂತಾರ ತೈಲಪದೇವನ ಪೆರ್ಗ್ಗಡೆ ಬಡಗಿನಾಡ ಮೂವತ್ತರ ಮೊದಲಬಾಡ ಬೆಸವೂರದ ಕನ್ನೇಶ್ವರ ದೇವರ ಅಂಗಭೋಗ, ನೃತ್ಯ-ಗೀತ-ವಾದ್ಯಕ್ಕೆ, ತಪೋಧನರ ಅಹಾರಧಾನಕ್ಕೆ ಹಾಗೂ ಖಂಡಸ್ಫುಟಿತ ಜೀರ್ಣೋದ್ಧಾರಕ್ಕಾಗಿ ಅಲ್ಲಿನ ಸ್ಥಾನಾಚಾರ್ಯ ದೇವರಾಸಿಜೀಯನಿಗೆ ದಾನವನ್ನು ನೀಡುತ್ತಾನೆ[೪೪]. ಕದಂಬವಂಶದ ಮಹಾಮಂಡಳೇಶ್ವರ ತೈಲಪದೇವ ಬನವಾಸಿ ಮತ್ತು ಹಾನಗಲ್ಲಗಳನ್ನು ಆಳುತ್ತಿದ್ದಾಗ ಕ್ರಿ.ಶ. ೧೧೦೮ರಲ್ಲಿ ಸಿಗ್ಗಾಮೆಯ ಮೂಲಸ್ಥಾನದೇವರಿಗೆ ಅಲ್ಲಿಗಧಿಕಾರಿಯಾದ ರಾಮೇಶ್ವರ ಪಂಡಿತರ ಕೈಯೊಳು

ಧರ್ಮವನ್ನು ಬಿಟ್ಟಿದ್ದನ್ನು ಅಲ್ಲಿನ ಶಾಸನ ತಿಳಿಸಿದೆ[೩೫]. ಕ್ರಿ.ಶ.ಸು. ೧೨ನೆಯ ಶತಮಾನದ ಶಾಸನವೊಂದು ಮುಳಗುಂದ ಸಿಂದವಂಶದ ಮಹಾಸಾಮಂತ ಬೊಪ್ಪರಸ ಆಳುತ್ತಿದ್ದಾಗ ಮುಳಗುಂದದ ಭೀಮೇಶ್ವರ ದೇವರ ಸ್ನಾನಪೂಜಾದಿನೈವೇದ್ಯ ಯತಿಭೋಜನಾದಿಗಳು ಅಚಂದ್ರಾರ್ಕತಾರಂ ನಡೆವಂತಾಗಿ ಅಲ್ಲಿನ ಸ್ಥಾನಪತಿಯಾದ ಈಶಾನ್ಯಶಕ್ತಿ ಪಂಡಿತರಿಗೆ ದತ್ತಿಯನ್ನು ಬಿಟ್ಟಿದ್ದನ್ನು ಹೇಳುತ್ತದೆ[೩೬]. ಹೊಯ್ಸಳ ಒಂದನೆಯ ನರಸಿಂಹನ ಸಾಮಂತನಾದ ಚಟ್ಟಯ್ಯನು ಚಟ್ಟೇಶ್ವರ ದೇವರಿಗೆ ಭುವನಭೂಷಣವೆಂಬ ದೇಗುಲವನ್ನು ಮಾಡಿಸಿ ಅದನ್ನು ಹಾಗೂ ಚಟ್ಟಸಮುದ್ರವೆಂಬ ಕೆರೆಯನ್ನು ಚಂದ್ರಶೇಖರಪಂಡಿತರಿಗೆ ಕಾಲಕರ್ಚ್ಚಿ ಧಾರಾಪೂರ್ವಕ ಮಾಡಿಕೊಟ್ಟ ವಿಷಯ ಕ್ರಿ.ಶ. ೧೧೬೦ರ ಹುಲಿಕೆರೆ ಶಾಸನದಿಂದ ವ್ಯಕ್ತವಾಗುತ್ತದೆ[೩೭]. ಕ್ರಿ.ಶ. ೧೧೨೧ರಲ್ಲಿ ಹೊಯ್ಸಳ ವಿಷ್ಣುವರ್ಧನನ ಮಹಾಸಾಮಂತನಾದ ಬರಮಯ್ಯನು ತನ್ನ ಮಡದಿ ಕಟ್ಟಿಸಿದ ಬ್ರಹ್ಮೇಶ್ವರ ದೇವಸ್ಥಾನದ ಸ್ಥಾನಾಚಾರ್ಯ ಬ್ರಹ್ಮರಾಶಿಜೀಯನಿಗೆ ಭುವನಹಳ್ಳಿಯನ್ನು ಬಿಟ್ಟುಕೊಟ್ಟನು[೩೮]. ಹೊಯ್ಸಳ ಮಹಾಸಾಮಂತ ದುಮ್ಮೆಯನಾಯಕನು ಕಲ್ಕಣಿನಾಡಿನಲ್ಲಿನ ಜೆಟ್ಟಿಗದಲ್ಲಿ ತಾನು ಕಟ್ಟಿಸಿದ ಹೆಮ್ಮೇಶ್ವರದೇವರ ಸ್ಥಾನಾಚಾರ್ಯ ಬಾಚಿಜೀಯನಿಗೆ ದತ್ತಿಬಿಟ್ಟ ಉಲ್ಲೇಖ ಕ್ರಿ.ಶ. ೧೧೭೯ರ ಶಾಸನವೊಂದರಲ್ಲಿದೆ[೩೯]. ಹೊಯ್ಸಳ ಮೂರನೆಯ ಬಲ್ಲಾಳನ ಮಹಾಸಾಮಂತ ಮಾಚಯ್ಯನು ಲಾಕುಳಾಗಮಸಮೆಯ ಸಮುದ್ಧರಣರಾದ ಪದ್ಮರಾಶಿಪಂಡಿತರ ಕಾಲಂಕರ್ಚಿ ಹೊಯ್ಸಳೇಶ್ವರ, ಬ್ರಹ್ಮೇಶ್ವರ ಮತ್ತು ಮಾಚೇಶ್ವರದೇವರ ಅಂಗಭೋಗ ಖಂಡಸ್ಫುಟಿತಜೀರ್ಣೋದ್ಧಾರ ಹಾಗೂ ನಿತ್ಯನಂದಾದೀವಿಗಾಗಿ ದತ್ತಿಯನ್ನು ನೀಡುವ ವಿಷಯ ಕ್ರಿ.ಶ. ೧೨೯೨ರ ದಬ್ಬೆಗಟ್ಟ ಶಾಸನದಲ್ಲಿದೆ[೪೦].

ದೇವಸ್ಥಾನವು ಒಂದು ಸಾಮಾಜಿಕ ಸಂಸ್ಥೆಯಾಗಿದ್ದರಿಂದ ಸಾಮಾಜಿಕವಾಗಿಯೂ ಸ್ಥಾನಾಚಾರ್ಯರ ಹೊಣೆಗಾರಿಕೆ ಹೆಚ್ಚಾಗಿರುತ್ತಿತ್ತು.

**ಜೈನಮುನಿಗಳು:**

ಪ್ರಾಚೀನ ಕರ್ನಾಟಕದಲ್ಲಿ ಪ್ರಭಾವಶಾಲಿಯಾಗಿದ್ದ ಜೈನಧರ್ಮವು ಒಂದು ಕಡೆ ತಾಂತ್ರಿಕ ಆಚರಣೆಗಳಿಗೆ ಅವಕಾಶ ಮಾಡಿ, ಮತ್ತೊಂದೆಡೆ ಪ್ರಭುವರ್ಗದವರಿಂದ ಪ್ರೋತ್ಸಾಹಪಡೆದು ಪ್ರಭಾವಶಾಲಿಯಾಗಿ ಬೆಳೆಯಿತು. ಅಲ್ಲದೇ ತಾಂತ್ರಿಕ ಆಚರಣೆಗಳ ಪ್ರೋತ್ಸಾಹದಿಂದ ಶೈವಧರ್ಮಿಯರ ಕೆಂಗಣ್ಣಿಗೆ ಗುರಿಯಾಗಿ ತೊಂದರೆಗೆ ಸಿಲುಕಿಕೊಂಡಿತು. ಇದರ ಪ್ರಭಾವ ಜಿನಮುನಿಗಳ ಮೇಲಾದಂತೆ ತೋರುತ್ತದೆ. ಏಕೆಂದರೆ ಈ ಕಾಲದ ಜಿನಮುನಿಗಳ ಕುರಿತ ಶಾಸನೋಲ್ಲೇಖಗಳು ಇದನ್ನು ಸಮ್ಮತಿಸುತ್ತವೆ. ಜೈನಧರ್ಮದ ಮುನಿಗಳ, ಸನ್ಯಾಸಿ-ಸನ್ಯಾಸಿಯರ(ಕಂತಿ) ಹಾಗೂ ಶ್ರಾವಕ-ಶ್ರಾವಕಿಯರ ಕುರಿತು ವಡ್ಡಾರಾಧನೆ ತಿಳಿಸುತ್ತದೆ[೪೧]. ಪ್ರಭುವರ್ಗದವರಿಂದ ಹೆಚ್ಚು ಪ್ರೋತ್ಸಾಹ ಹೊಂದಿದ ಜೈನ ಧರ್ಮ, ಕೆಲವೊಮ್ಮೆ ಜಿನಮುನಿಗಳೂ ಕೂಡ ಮಹಾಜನ ಹಾಗೂ ಸ್ಥಾನಪತಿಗಳಷ್ಟೇ ತಮ್ಮ ವರ್ಚಸ್ಸನ್ನು ಹೆಚ್ಚಿಸಿಕೊಂಡಿದ್ದು ತಿಳಿಯುತ್ತದೆ. ಹೀಗೆ ಪ್ರಭಾವ ಕಳೆದುಕೊಂಡ ಧರ್ಮದ ಹಿನ್ನೆಲೆಯಲ್ಲಿ ಕೆಲ ಜಿನಮುನಿಗಳಾದರೂ ತಮ್ಮ ತಪಃಪ್ರಭಾವವನ್ನು ನೆಚ್ಚಿಕೊಂಡಿದ್ದರು. ಕ್ರಿ.ಶ. ೪೬೬ರ ಮಡಕೇರಿಯ ತಾಮ್ರಶಾಸನವೊಂದು ಉಲ್ಲೇಖಿಸುವಂತೆ ಗಂಗ ಅವನೀತನು

ತಳವನನಗರದ ಶ್ರೀವಿಜಯ ಜಿನಾಲಯಕ್ಕೆ ದೇಸಿಗಗಣದ ಕೊಣ್ಡಕುನ್ದಾನ್ವಯದ ಚಂದ್ರನಂದಿಭಟಾರ ಕೈಯಲ್ಲಿ ಬದಣೆಗುಪ್ಪೆಯನ್ನು ದತ್ತಿನೀಡಿದನು[೪೨]. ಕ್ರಿ.ಶ. ೮೧೨ರ ಕಡಬ ತಾಮ್ರಪಟವು ಮಹಾಮಂಡಳೇಶ್ವರ ವಿಮಲಾದಿತ್ಯನಿಗೆ ಬಂದ ಶನಿಕಾಟವನ್ನು ಅರ್ಕಕೀರ್ತಿಯೆಂಬ ಜೈನಮುನಿ ಹೋಗಲಾಡಿಸಿದನ್ನು ಉಲ್ಲೇಖಿಸಿದೆ[೪೩]. ರಾಷ್ಟ್ರಕೂಟ ಸಾಮಂತರಾದ ಚೆಲ್ಲಕೇತನ ಮನೆತನದ ಬಂಕೇಯನು ಕೊಣ್ಣೂರಿನಲ್ಲಿ ನಿರ್ಮಿಸಿದ ಜಿನಾಲಯದ ಪರಿಪಾಲಕನಾಗಿ ದೇವೇಂದ್ರಮುನೀಶ್ವರ ನಿಯುಕ್ತನಾಗಿದ್ದನೆಂದು ಕ್ರಿ.ಶ.೮೬೦ರ ಕೊಣ್ಣೂರಿನ ಶಾಸನದಿಂದ ತಿಳಿದುಬರುತ್ತದೆ[೪೪]. ಬಲ್ಲಕುಂದೆ ಶಾಸನದಲ್ಲಿ ಕುಂದಕುಂದಾಚಾರ್ಯ ಅನ್ವಯದ ನಂದಿಸಂಗದ ದೇಶಿಗಗಣದ ವೀರಣಂದಿ ಮುನೀಂದ್ರದೇವ "ತನ್ನ ತಪಸ್ವೀಖ್ಯಾತೋಧಿಮಾಂ ಧರ್ಮಂ ಯಶೋಭ್ಯಾಂ ಎಂದು ಕೀರ್ತಿವಲ್ಲಿ"ಯಾಗಿದ್ದನು ಎಂದು ತಿಳಿಯುತ್ತದೆ[೪೫]. ಕ್ರಿ.ಶ. ೯೧೬-೧೭ರ ಕೂಲಿಗೆರೆ ಶಾಸನವೊಂದು ಮಣಲೇರ ಕನಕಗಿರಿತೀರ್ಥದ ಮೇಲೆ ಬಸದಿಯೊಂದನ್ನು ನಿರ್ಮಿಸಿ ಕೆಲವು ತೆರಿಗೆಗಳನ್ನು ಕನಕಸೇನಭಟಾರನಿಗೆ ದಾನವನ್ನಾಗಿ ನೀಡಿದ್ದನ್ನು ಉಲ್ಲೇಖಿಸಿದೆ[೪೬]. ಗಂಗ ರಾಚಮಲ್ಲನ ಪ್ರಸಿದ್ಧ ಮಂತ್ರಿಯಾದ ಚಾವುಣ್ಡರಾಯನ ಮಗ ಜಿನದೇವಣನ ಗುರು ಅಜಿತಸೇನಮುನಿ ಆಗಿದ್ದನೆಂದು ಶ್ರವಣಬೆಳಗೊಳದ ಚಿಕ್ಕಬೆಟ್ಟದ ಶಾಸನವೊಂದು ಹೇಳುತ್ತದೆ[೪೭]. ಕ್ರಿ.ಶ. ೧೧೫೯ರ ಮುಳ್ಳೂರುಶಾಸನ ತಿಳಿಸುವಂತೆ ಕೊಂಗಾಳ್ವಮನೆತನದ ರಾಜೇಂದ್ರಕೊಂಗಾಳ್ವನ ತಾಯಿ ಪೋಚಬ್ಬರಸಿಯ ಗುರುವಾಗಿ ದ್ರವಿಳಗಣದ ನಂದಿಸಂಘದರುಂಗಳಾನ್ವಯದ ಗುಣಸೇನಪಂಡಿತದೇವರಿದ್ದರು[೪೮]. ಕದಂಬವಂಶದ ಮಹಾಮಂಡಳೇಶ್ವರ ಎರೆಯಂಗದೇವನ ರಾಣಿ ಅಸವಬ್ಬರಸಿ ಕಟ್ಟಿಸಿದ ಬಸದಿಯ ಸ್ಥಾನಾಚಾರ್ಯ ಕೊಣ್ಡಕುನ್ದಾನ್ವಯದ ದೇಸಿಗಗಣದ ರವಿಚಂದ್ರಸಿದ್ಧಾಂತರ ಕೈಯಲ್ಲಿ ಅವರ ಶಿಷ್ಯೆಯಾದ ಮಾಚವ್ವೆಗಂತಿ ದಾನವನ್ನು ಬಿಟ್ಟ ವಿವರ ಕ್ರಿ.ಶ. ೧೦೯೬ರ ಶಾಸನವೊಂದರಲ್ಲಿದೆ[೪೯]. ಹೊಯ್ಸಳ ವಿಷ್ಣುವರ್ಧನನ ಮಹಾಸಾಮಂತಾಧಿಪತಿಯಾದ ಗಂಗರಾಜ ಬಿಡಿಂಗನವಿಲೆಯ ತೀರ್ಥಕ್ಕೆ ತಳವೃತ್ತಿಯನ್ನು ಮೂಲಸಂಘದ ದೇಸಿಗಗಣದ ಪುಸ್ತಕಗಚ್ಛದ ಕೊಂಡಕುಂದಾನ್ವಯದ ಶುಭಚಂದ್ರಸಿದ್ಧಾಂತದೇವರ ಕಾಲಂಕರ್ಚ್ಚಿ ಬಿಟ್ಟಿದ್ದನ್ನು ಕಂಭದಹಳ್ಳಿಯ ಕ್ರಿ.ಶ. ೧೧೧೮ರ ಶಾಸನವೊಂದು ತಿಳಿಸುತ್ತದೆ[೫೦]. ಕ್ರಿ.ಶ. ೧೧೪೨ರ ಶಾಸನ ತಿಳಿಸುವಂತೆ ಕಲುಕಣಿನಾಡನ್ನಾಳುವ ಸಾಮಂತ ಸೋಮನು ಭಾನುಕೀರ್ತಿಸಿದ್ಧಾಂತದೇವರ ಶಿಷ್ಯನಾಗಿದ್ದು, ಹೆಬ್ಬಿದಿರೂರ್ವಾಡಿಯಲ್ಲಿ ಚೈತ್ಯಾಲಯವನ್ನು ಕಟ್ಟಿಸಿ, ಮೂಲಸಂಘದ ಸೂರಸ್ತಗಣದ ಬ್ರಹ್ಮದೇವರ ಕಾಲಂಕರ್ಚ್ಚಿ ದತ್ತಿಯನ್ನು ನೀಡುತ್ತಾನೆ[೫೧]. ಹೊಯ್ಸಳ ವೀರಬಲ್ಲಾಳದೇವರ ಮಹಾಮಂಡಳೇಶ್ವರನಾದ ಗಂಗವಂಶದ ಎಕ್ಕಲರಸ ಎರಗಜಿನಾಲಯದ ಕೆಲಸಕಾರ್ಯಗಳಿಗಾಗಿ ಮೂಲಸಂಘದ ಕಾಣೂರಗ್ಗಣದ ತಿಂತ್ರಿಣಿಗಚ್ಛದ ಸಕಲಚಂದ್ರ- ಭಟ್ಟಾರಕದೇವರ ಕೈಯಲ್ಲಿ ದಾನವನ್ನು ನೀಡಿದ ವಿಷಯ ಕ್ರಿ.ಶ. ೧೧೯೮ರ ಉದ್ರಿಯ ಶಾಸನದಲ್ಲಿದೆ[೫೨].

## ಶ್ರಮಿಕ ವರ್ಗ:

ಕರಕುಶಲಕರ್ಮಿಗಳು ವಿವಿಧ ವೃತ್ತಿಗಳನ್ನಾಶ್ರಯಿಸಿದ್ದು ಅವರು ಶ್ರಮಿಕವರ್ಗದವರಾಗಿದ್ದರು. ಅಕ್ಕಸಾಲಿ, ಕಂಚಗಾರ, ಕಮ್ಮಾರ, ಕಲ್ಲುಕುಟಿಗ ಮತ್ತು ಬಡಗಿಗಳನ್ನು ಪಾಂಚಾಳರೆಂದು ಕರೆಯಲಾಗಿದೆ[೫೩].

ಚಿನ್ನದ ಕೆಲಸವನ್ನು ಮಾಡುವ ಅಕ್ಕಸಾಲಿಗರು ಅಪರೂಪವಾಗಿ ತಾಮ್ರಶಾಸನಗಳನ್ನು ಕೆತ್ತಲು, ನಾಣ್ಯಗಳನ್ನು ತಯಾರಿಸುತ್ತಿದ್ದರು[೫೪]. ಅಲ್ಲದೇ ಸಮಾಜದ ಎಲ್ಲ ಜಾತಿ-ವರ್ಗಗಳ ಜನರ ಆಭರಣಗಳನ್ನು ತಯಾರಿಸುತ್ತಿದ್ದರು. ಗಂಗ ಶ್ರೀಪುರುಷನ ಕಾಲದ ಶಾಸನವೊಂದು ಬೆಳ್ಳಿಯರರನ್ನು ಅಂದರೆ ಬೆಳ್ಳಿಯ ಸಾಮಾನುಗಳನ್ನು ತಯಾರಿಸುವವರನ್ನು ಉಲ್ಲೇಖಿಸಿದೆ[೫೫]. ಗಂಗರ ವಿವಿಧ ಆರಸರಿಗೆ ಸೇರಿದ, ಅನೇಕ ತಾಮ್ರಶಾಸನಗಳನ್ನು ವಿಶ್ವಕರ್ಮಕುಲದವರಾದ ವಿಶ್ವಕರ್ಮಾಚಾರ್ಯ ರಚಿಸಿರುವದು ತಿಳಿದುಬರುತ್ತದೆ[೫೬]. ಇದರಿಂದ ವಿಶ್ವಕರ್ಮಾಚಾರ್ಯ ಎಂಬುದು ಆರಮನೆಯ ಶಾಸನಕಾರನ ಬಿರುದಾಗಿತ್ತೆನ್ನುವದು ಇದರಿಂದ ಸ್ಪಷ್ಟವಾಗುತ್ತದೆ. ಅಲ್ಲದೇ ಇವರು ಶಾಸನವನ್ನು ಕೆತ್ತಿದ್ದಕ್ಕಾಗಿ ಗಂಗ ಒಂದನೆಯ ರಾಜಮಲ್ಲನ ಕಾಲದಲ್ಲಿ ದಾನವನ್ನು ಪಡೆದಿರುವದು ಸಾಲಿಗ್ರಾಮ ಶಾಸನದಿಂದ ಕಂಡುಬರುತ್ತದೆ[೫೭]. ಕ್ರಿ.ಶ. ೧೧ನೆಯ ಶತಮಾನದ ಗಂಗರ ಚಾಗಿಪೆರ್ಮಾಡಿಯ ಕಾಲದ ವೀರಗಲ್ಲೊಂದು ತಿಳಿಸುವಂತೆ ವೀರನಿಗೆ ಕಡೆಕೊಳದ ಊರಜನರೆಲ್ಲ ಸೇರಿ ಕಲ್ನಾಡನ್ನು ನೀಡುವಾಗ ಅವರೆಲ್ಲರ ಜೊತೆ ಅಕ್ಕಸಾಲಿಗರೂ ಇದ್ದರು[೫೮]. ಕ್ರಿ.ಶ. ೧೯೮ರ ಕುಡಿತಿನಿ ಶಾಸನ ತಿಳಿಸುವಂತೆ ಎರಣಿಗ ಮಾದೋಜನ ಮಗ ಸಾವಿಮೋಜನು, ಬೇಟೋಜನ ಮಗ ಚಿಕ್ಕಮಾದೋಜನು "ಸ್ವಾಮಿದೇವರ ನವಿಲಚ್ಚಿನ್ನ ಪೊನ್ನಂ ಲೊಕ್ಕಿಯ ಪೊನ್ನಾಣಿಯಂ ಆ ಪೊನ್ನ ತೂಕಮಾಗಿ ಪೊಯ್ದು" ಸಲ್ಲಿಸುತ್ತಿದ್ದನು[೫೯].

ಕಂಚು ಮುಂತಾದ ಲೋಹಗಳಲ್ಲಿ ಪಾತ್ರೆಗಳನ್ನು ತಯಾರಿಸುವವರು ಕಂಚಗಾರರು. ಅಲ್ಲದೇ ಇವರು ದೇವಾಲಯದಲ್ಲಿಯ ಗಂಟೆಗಳು ಮುಂತಾದವುಗಳನ್ನು ಕೂಡ ಮಾಡುತ್ತಿದ್ದರು. ಇವರು ವಿಶ್ವಕರ್ಮ ಜಾತಿಗೆ ಸೇರಿದ್ದರೂ ಕೂಡ ಇವರನ್ನು ಉಳಿದವರಿಗಿಂತ ಭಿನ್ನರಾಗಿದ್ದಂತೆ ಕ್ರಿ.ಶ. ೧೧೧೬ರ ಶಾಸನವೊಂದು ಸೂಚಿಸಿದೆ[೬೦]. ಅಲ್ಲದೇ ಕಂಚುಗಾರರು ಕಾಳಿಕಾದೇವಿಯ ಭಕ್ತರಾಗಿದ್ದರೆಂದು ಬಸವಣ್ಣನವರ ಒಂದು ವಚನದಿಂದ ತಿಳಿದುಬರುತ್ತದೆ[೬೧]. ಕ್ರಿ.ಶ. ೧೩೦೪ರ ಇಂಡಿ ತಾಲೂಕಿನ ಬರಡೋಲ ಶಾಸನ ಕಂಚಕಾರ ರೇವಿಶೆಟ್ಟಿಯನ್ನು ಉಲ್ಲೇಖಿಸಿದೆ[೬೨].

ಕಬ್ಬಿಣದ ಕೆಲಸವನ್ನು ಮಾಡುವವರನ್ನು ಕಮ್ಮಾರರೆಂದು ಕರೆಯಲಾಗುತ್ತಿತ್ತು. ಇವರು ಸಮಾಜದ ಎಲ್ಲ ವರ್ಗಗಳವರ ಮನೆಗಳಿಗೆ ಬೇಕಾದ ಉಪಕರಣಗಳನ್ನು, ಒಕ್ಕಲಿಗರಿಗೆ ಕೃಷಿ ಉಪಕರಣಗಳು ಹಾಗೂ ಆರಸರಿಗೆ ಯುದ್ಧಗಳಲ್ಲಿ ಉಪಯೋಗಿಸುವ ಕತ್ತಿ, ಗುರಾಣಿ ಮುಂತಾದ ಸಲಕರಣೆಗಳ ತಯಾರಕರಾಗಿದ್ದರು. ಕಾಸಿಕಮ್ಮಾರನಾದ ವಿಷಯವನ್ನು ಬಸವಣ್ಣನವರು ತಮ್ಮ ಒಂದು ವಚನದಲ್ಲಿ ಹೇಳುತ್ತಾರೆ. ನಯಸೇನನು ಕಮ್ಮರರಿಲ್ಲದೇ ಖಡ್ಗಾದಿ ಶಸ್ತ್ರಂಗಳಾಗದು ಎಂದಿದ್ದಾನೆ[೬೩]. ಗಂಗರ ಚಾಗಿಪೆರ್ಮಾಡಿಯ ಕ್ರಿ.ಶ.೧೧ನೆಯ ಶತಮಾನದ ವೀರಗಲ್ಲೊಂದು ಕಡೆಕೊಳದ ಊರಜನರೆಲ್ಲ ಸೇರಿ ವೀರನೊಬ್ಬನಿಗೆ ಕಲ್ನಾಡನ್ನು ನೀಡುವಾಗ ಅವರೆಲ್ಲರ ಜೊತೆ ಕಮ್ಮಾರರೂ ಇದ್ದರೆಂದು ತಿಳಿಸಿದೆ[೬೪]. ಕ್ರಿ.ಶ. ೯೭೧ ರ ಕುಡತಿನಿಯ ಶಾಸನವು "ಶ್ರೀ ಕಮ್ಮಾರಕುಳಾಹ್ವಯದ್ವಿಜವರಗ್ರಾಮಸ್ಕತ" ಎಂದು ಇವರನ್ನು ಕುರಿತು ಉಲ್ಲೇಖಿಸಿದೆ[೬೫]. ಕ್ರಿ.ಶ. ೧೦೪೨ರ ಆಚಾಪುರ ಶಾಸನ ತಿಳಿಸುವಂತೆ ಮಹಾಸಾಮಂತ ಗೋಣರಸ ಕಟ್ಟಿಸಿದ ಸೂರ್ಯಮಾರ್ತಾಂಡ ಮತ್ತು ಗೋಣೇಶ್ವರ ದೇಗುಲಗಳ ಹಡಿಸಲಿಸುವ ಕಂಬಾರ ಚಿಕ್ಕಗೆ ಮಣಬಾಳ ಐವತ್ತೆರಡು

ಗೇಣ ಗಳೆಯ ಕೆಯ್ಯಂ ಸರ್ವನಮಶ್ಯವಾಗಿ ದಾನ ನೀಡಲಾಯ್ತು[೬೬]. ಕಲ್ಕಂಬದ ಕ್ರಿ.ಶ. ೧೦೪೯ರ ಶಾಸನವೊಂದು "ಅಲ್ಲಿ . ಕುಳಂ. . ಮಾಡಿದ ಹಾಲೋಜಗೆ ಮೂರುಮತ್ತರು" ಭೂಮಿಯನ್ನು ದಾನಬಿಟ್ಟ ವಿವರ ನೀಡುತ್ತದೆ[೬೭]. ಕ್ರಿ.ಶ. ೧೧೫೬ರ ಮಲ್ಲಾಪೂರ ಶಾಸನ ಅಗ್ರಹಾರ ನಾವಿದಿಗೆಯಲ್ಲಿನ ಕೆರೆಯ ಜೀರ್ಣೋದ್ಧಾರ ಮಾಡಿಸಿದ ಜೋಗಗಾವುಂಡ ಅಲ್ಲಿನ ಕೆರೆಯ ಕೆಲಸವನ್ನು ಮಾಡಿದ ಕಮ್ಮಾರನಿಗೆ "ಮೂರುಮನೆಯ ಮಣ್ಣುಂ ಕೆರೆಯ ಕೆಯ್ಗೆ" ಕೊಟ್ಟನೆಂದು ಉಲ್ಲೇಖಿಸಿದೆ[೬೮]. ಅಲ್ಲದೇ ಈ ಕಮ್ಮಾರರ ಮೇಲೆ ಬಣ್ಣಗೆದೆರೆ ಎಂಬ ಸುಂಕವನ್ನು ಹಾಕುತ್ತಿದ್ದರೆಂದು ಕ್ರಿ.ಶ. ೧೧೮೨ರ ಹಿಪ್ಪರಗೆಯ ಶಾಸನದಿಂದ ತಿಳಿದುಬರುತ್ತದೆ[೬೯]. ಕ್ರಿ.ಶ. ೧೨೧೫ರ ನಾಗಾವಿಯ ಶಾಸನವೊಂದು ಅಲ್ಲಿನ ಮಹಾಬಳೇಶ್ವರ ದೇವಾಲಯದ ಕಮಠಕ್ಕೆ ಕೆಲಸಮಾಡಿದ ಆ ಊರಿನ ಕಮ್ಮಾರ ಬಮ್ಮೋಜನಿಗೆ ಕೂಲಿಯಾಗಿ ಹೊರೆಹುಂಜ ಆದಾಯವನ್ನು ಬಿಡಲಾಯ್ತೆಂದು ಉಲ್ಲೇಖಿಸಿದೆ[೭೦].

ಶಿಲ್ಪಿಗಳು ದೇವಾಲಯ ನಿರ್ಮಾಣ ಮತ್ತು ಶಾಸನಗಳ ಕಂಡರಣೆಯ ಕೆಲಸವನ್ನು ನಿರ್ವಹಿಸುತ್ತಿದ್ದರು. ಶಾಸನಗಳಲ್ಲಿ ಇವರಿಗೆ ಶಿಲ್ಪಿ, ರೂವಾರಿ, ಸ್ಥಪತಿ, ಸೂತ್ರಧಾರಿ, ಕಲ್ಲುಕುಟಿಗ ಮತ್ತು ಓಜರೆಂದು ಉಲ್ಲೇಖಿಸಲಾಗಿದೆ. ಶಿಲ್ಪಿಗಳು ವೀರಗಲ್ಲು, ದೇವಾಲಯ, ಶಾಸನಗಳನ್ನು ರಚಿಸಿದ ನಂತರ ಅದಕ್ಕೆ ಪ್ರತಿಪಲವಾಗಿ ಹಣ, ಧಾನ್ಯ, ಭೂಮಿಯನ್ನು ದಾನವಾಗಿ ಕೊಡುತ್ತಿದ್ದುದನ್ನು ಶಾಸನಗಳು ಉಲ್ಲೇಖಿಸುತ್ತವೆ. ಗಂಗ ಶ್ರೀಪುರುಷನ ಕ್ರಿ.ಶ. ೭೫೪ರ ಗುಂಡ್ಲಹಳ್ಳಿಯ ಶಾಸನವನ್ನು ಸಿನ್ದಾಚಾರಿ ಕೆತ್ತಿದ್ದಾನೆ[೭೧]. ಕ್ರಿ.ಶ. ೮೦೦ರಲ್ಲಿ ರಾಷ್ಟ್ರಕೂಟ ಜಗತ್ತುಂಗನ ಸಾಮಂತ ರಾಜಾದಿತ್ಯ ಬನವಾಸಿ-೧೨೦೦೦ವನ್ನಾಳುವಾಗ ನಿಲ್ಲಿಸಿದ ಸೊರಬ ತಾಲೂಕಿನ ಮನೆಮನೆ ವೀರಗಲ್ಲನ್ನು ಕುನ್ದವಾಸಿಯ ಮಗ ಮಾರಮ್ಮನೆಂಬುವನು ಕಂಡರಿಸಿದ್ದಾನೆ[೭೨]. ರಾಷ್ಟ್ರಕೂಟ ಗೋವಿಂದನ ಸಾಮಂತ ಬನವಾಸಿನಾಡನ್ನಾಳುವ ಎರೆಯಮ್ಮರಸನ ಕ್ರಿ.ಶ. ೮೦೦ರ ಮಾವಳಿ ಶಾಸನವನ್ನು ಬಾದವೋಜನು ಮಾಡಿದನೆಂದು ತಿಳಿದುಬರುತ್ತದೆ[೭೩]. ದೊಡ್ಡಕಮಲ ಗ್ರಾಮದಲ್ಲಿ ಕಾಮಶೆಟ್ಟಿ ಕಟ್ಟಿಸಿದ ಕಾಮೇಶ್ವರ ದೇವಾಲಯದಲ್ಲಿ ವಿವಿಧ ಕೆಲಸವನ್ನು ನಿರ್ವಹಿಸುತ್ತಿದ್ದವರಲ್ಲಿ "ವಿಶ್ವಕರ್ಮದ ಕಾಸಿಗಂಗೆ ಎರೆ ಆರುಮತ್ತರ ಕಿಸುಕಾಡು ಆರುಮತ್ತರನ್ನು, ಕೋಣ್ಣೋಜಜ್ಗಪ್ಷರ್ಮತ್ತಪೆಕಾವಿಜ್ಞೆ ಎರೆಪನ್ನೂರ್ಮತ್ತರ್ಹಾಡುವೊರೆ ಕಿಸುಕಾಡು ಆರುಮತ್ತರ"ನ್ನು ನೀಡಿರುವುದನ್ನು ಕ್ರಿ.ಶ. ೯೩೧ರ ಶಾಸನ ಹೇಳಿದೆ[೭೪]. ಕ್ರಿ.ಶ. ೯೫೪ರ ಗಂಗ ಎರಡನೆಯ ಭೂತುಗನ ಬಸ್ತಿಹಳ್ಳಿಯ ಪಾರ್ಶ್ವನಾಥ ಬಸದಿಯಲ್ಲಿರುವ ನಿಷದಿಶಾಸನ ತಿಳಿಸುವಂತೆ, ಆ ಬಸದಿಯನ್ನು ಪೊಲೆಯಮ್ಮೋಜ ಮಾಡಿದನಲ್ಲದೇ ಆ ನಿಷದಿಕಲ್ಲನ್ನು ಕೆತ್ತಿದವನು ಅವನ ಮಗ ಬಲ್ಲುಗನೆಂದು ತಿಳಿದುಬರುತ್ತದೆ[೭೫]. ರಾಷ್ಟ್ರಕೂಟ ಕಕ್ಕಲದೇವನ ಸಾಮಂತ ಚಟ್ಟಯ್ಯನ ಕಾಲದ ಬೆನ್ನೂರು ವೀರಗಲ್ಲನ್ನು ಎರೆಗಾರಿವೋಜನು ನಿರ್ಮಿಸಿದನು[೭೬]. ಕ್ರಿ.ಶ.೯೭೧ ರ ನೇರ್ಲಿಗೆ ವೀರಗಲ್ಲನ್ನು ಮಾಡಿದ ಶಿಲ್ಪಿಗೆ ಹತ್ತು ಕೊಳಗ ಪ್ರಮಾಣದ ಭೂಮಿಯನ್ನು ಕೊಟ್ಟರೆಂದು ಆ ವೀರಗಲ್ಲಿನ "ಕಲ್ಲಂ ಬೆಸಗೆಯ್ದ ವಿಭೋಗಂಗೆ ಕೊಟ್ಟ ಪತ್ತು ಕೊಳಗ ಮಣ್ಣಂ" ಎಂಬ ಶಾಸನಪಾಠದಿಂದ ತಿಳಿದುಬರುತ್ತದೆ[೭೭]. ಕ್ರಿ.ಶ. ೯೯೭ರ ಗಂಗ ಪೆರ್ಮಾಡಿಯ ಶಾಸನ ತಿಳಿಸುವಂತೆ ಅವನ ಪೆರ್ಗಡೆ ಕೆರೆಯನ್ನು ಕಟ್ಟಿಸಿ ಅದಕ್ಕೆ

ಕಾಲುವೆಯನ್ನು ಮಾಡಿಸಿದನು. ಆ ಕೆರೆ ಮತ್ತು ಕಾಲುವೆಯನ್ನು ಕಟ್ಟಿದ ಮಾರಿಯಕ್ಕಾಚಾರಿಗೆ ೧೦ ಖಂಡುಗ ಭೂಮಿಯನ್ನು ದಾನವಾಗಿ ನೀಡಲಾಯ್ತು[೭೮]. ಮಹಾಸಾಮಂತಾಧಿಪತಿ ಜಯಸಿಂಹದೇವ ಬನವಾಸಿ-೧೨೦೦೦ ಮತ್ತು ಸಾಂತಳಿಗೆ-೧೦೦೦ವನ್ನು ಆಳುತ್ತಿದ್ದಾಗ ತನ್ನ ತಂದೆ ಅಲ್ಲಯ್ಯದೇವನ ಪರೋಕ್ಷವಿನಯವಾಗಿ ಕುಪ್ಪಗದ್ದೆಯೊಳಗೆ ಅಳೇಶ್ವರ ದೇವಾಲಯ ನಿರ್ಮಿಸಿದನು. ಬ್ರಹ್ಮೋಜ ಆ ದೇಗುಲವನ್ನು ಕಟ್ಟಿದನು. ಅಲ್ಲದೇ ಆ ಶಾಸನವನ್ನು ಚಾಮುಂಡೋಜ ಕೆತ್ತಿದನೆಂದು ಕ್ರಿ.ಶ. ೧೦೩೩ರ ಕುಪ್ಪಗಡ್ಡೆ ಶಾಸನ ತಿಳಿಸುತ್ತದೆ[೭೯]. ಮಹಾಸಾಮಂತ ಗೋಣರಸನ ಆಚಾಪುರ ಶಾಸನವನ್ನು ಭೂಮೋಜನ ಮಗ ಬ್ರಹ್ಮೋಜ ಕಣ್ಡರಿಸಿದನು[೮೦]. ಕದಂಬ ಮಹಾಮಂಡಳೇಶ್ವರ ಹರಿಕೇಸರಿದೇವನ ಕಾಲದ ಕ್ರಿ.ಶ. ೧೦೫೫ರ ಶಿಗ್ಗಾಂವ ಶಾಸನವನ್ನು ಕಾಳೋಜನು ಕೆತ್ತಿದ್ದಾನೆ[೮೧]. ಮಹಾಮಂಡಳೇಶ್ವರ ರಾಯಶಾಂತಾರದೇವನ ಸಾಗರತಾಲೂಕಿನ ಆವಿನಹಳ್ಳಿಯ ಶಾಸನವನ್ನು ಚಾವುಂಡೋಜನ ಮೊಮ್ಮಗ ಸಾತೋಜ ಕೆತ್ತಿದ್ದಾನೆ[೮೨]. ಹೊಯ್ಸಳ ವಿಷ್ಣುವರ್ಧನನ ಮಹಾಮಂಡಳೇಶ್ವರನಾದ ಗಂಗರಾಜ ಗೊಮ್ಮಟದೇವನಿಗೆ ಸುತ್ತಾಲಯವನ್ನು ಮಾಡಿಸಿದ ವಿಷಯವನ್ನು ತಿಳಿಸುವ ಕ್ರಿ.ಶ. ೧೧೧೮ರ ಶ್ರವಣಬೆಳಗೊಳದ ಚಿಕ್ಕಬೆಟ್ಟದ ಶಾಸನವನ್ನು ಬಿರುದರರೂವಾರಿ ವರ್ದ್ಧಮಾನಾಚಾರಿ ಕಂಡರಿಸಿದನೆಂದು ತಿಳಿಯುತ್ತದೆ[೮೩]. ಮಹಾಮಂಡಳೇಶ್ವರ ವೀರಚೋಳ ಕೊಂಗಾಳ್ವನ ಕ್ರಿ.ಶ. ೧೧೭೫ರ ನಂದಿಗುಂದದ ಶಾಸನ ಅದನ್ನು ಕೆತ್ತಿದ ಗಂಗೋಜನಿಗೆ ಅಲ್ಲಿಯ ಪ್ರತಿಮನೆಯಿಂದ ಐದುಕೊಳಗ ಭತ್ತವನ್ನು ನೀಡಬೇಕೆಂದು ಹೇಳುತ್ತದೆ[೮೪]. ಹೊಯ್ಸಳರ ಮಹಾಮಂಡಳೇಶ್ವರ ಗಂಗರಾಜನ ಮಗ ಬೊಪ್ಪರಾಜ ಮಾಡಿಸಿದ ಕನ್ನೆವಸದಿಯನ್ನು ರೂವಾರಿ ದ್ರೋಹಘರಟ್ಟಾಚಾರಿ ಕಟ್ಟಿದನೆಂದು ಕಂಬದಹಳ್ಳಿ ಶಾಸನ ಉಲ್ಲೇಖಿಸುತ್ತದೆ[೮೫]. ಅಳುಪರ ಒಂದನೆಯ ಕುಲಶೇಖರನ ಕಾಲದ ಕ್ರಿ.ಶ. ೧೨೦೪-೦೫ರ ಮೂಡಬಿದ್ರೆ ಶಾಸನವನ್ನು ಈಳಿಮಯಕಾಳಿಯಾಚಾರಿ ಕಂಡರಿಸಿದನೆಂದು ತಿಳಿದುಬರುತ್ತದೆ[೮೬]. ಚೆಂಗಾಳ್ವರ ಹರಿಹರದೇವನ ಕ್ರಿ.ಶ. ೧೨೯೬ರ ಮುಳ್ಳೂರಿನ ವೀರಗಲ್ಲೊಂದನ್ನು ಕೊಂಗೊಳಲಿಯ ಬಾಚಾಚಾರಿಯ ಮಗ ಭೈರೋಜನು ಮಾಡಿದನೆಂದು ತಿಳಿಯುತ್ತದೆ[೮೭]. ಮೂರನೆಯ ಬಲ್ಲಾಳನ ಮಹಾಮಂಡಳೇಶ್ವರ ಶಾಂತಾರ ಲೋಕನಾಥದೇವನ ಕ್ರಿ.ಶ. ೧೩೩೪ರ ಹಿರಿಯಂಗಡಿ ಶಾಸನವನ್ನು ಎರಗೋಜನ ಮಗ ಮಯೋಜನು ನಿರ್ಮಿಸಿದ್ದಾನೆ[೮೮].

ರೈತರಿಗೆ ಬೇಕಾದ ಕೃಷಿಯ ಕಟ್ಟಿಗೆ ಉಪಕರಣಗಳನ್ನು, ಮನೆಗೆ ಬೇಕಾಗುವ, ದೇವಾಲಯಗಳಲ್ಲಿನ ರಥ ಮತ್ತು ಯುದ್ಧಗಳಲ್ಲಿ ಉಪಯೋಗಿಸುತ್ತಿದ್ದ ರಥಗಳನ್ನು ಬಡಗಿ ಅಥವಾ ಬಡಿಗರು ಮಾಡುತ್ತಿದ್ದರು. ವಡ್ಡಾರಾಧನೆಯ ಗುರುದತ್ತ ಭಟಾರರ ಕಥೆಯಲ್ಲಿ ಧಾತ್ರಿವಾಹನ ಅರಸು ವಿಶ್ವಕರ್ಮ ಮತ್ತು ವಿಶ್ವಮತಿ ಎಂಬ ತನ್ನ ಇಬ್ಬರು ಬಡಗಿಗಳನ್ನು ಆಹ್ವಾನಿಸಿ, ಆರು ತಿಂಗಳಲ್ಲಿ ಒಬ್ಬೊಬ್ಬರು ಐದುನೂರು ರಥಗಳನ್ನು ತಯಾರಿಸಬೇಕೆಂದು ಆಜ್ಞೆಮಾಡುತ್ತಾನೆ. ಅಲ್ಲದೇ ಅವರು ಆ ಕೆಲಸ ಪೂರೈಸಿದಾಗ ಸಂತೋಷಗೊಂಡ ಅರಸು ದಾನವನ್ನು ನೀಡುತ್ತಾನೆ[೮೯]. ಕ್ರಿ.ಶ. ೮೦೦ರ ಅಳುಪ ಚಿತ್ರವಾಹನನ ಶಾಸನದಲ್ಲಿ ಕರಕುಶಲಕರ್ಮಿಯಾದ ಬಡಗಿ ವಾದಪುಲಿಯ ಉಲ್ಲೇಖವಿದೆ[೯೦]. ನಂಜನಗೂಡ ತಾಲೂಕಿನ

ಗಂಗರ ಶಾಸನವೊಂದರಲ್ಲಿ ಬಡಗಿ ಮರಾಚಾರಿಯ ಉಲ್ಲೇಖ ದೊರೆಯುತ್ತದೆ[೯೧]. ಕ್ರಿ.ಶ. ೧೦೩೩ರ ತಮದಡ್ಡಿಯ ಶಾಸನದಲ್ಲಿ ಬಬಲೇಶ್ವರ ದೇವರ ದೇಗುಲವನ್ನು ದುರಸ್ತಿಗೊಳಿಸಿದ ಬಡಗಿ ಮಲೋಜನಿಗೆ ದತ್ತಿ ಬಿಟ್ಟ ಉಲ್ಲೇಖವಿದೆ[೯೨]. ಅಗ್ರಹಾರ ನಾವಿದಿಗೆಯಲ್ಲಿನ ಕೆರೆಯ ಜೀರ್ಣೋದ್ಧಾರ ಮಾಡಿಸಿದ ಜೋಗಗಾವುಂಡ ಅಲ್ಲಿನ ಕೆರೆಯ ಕೆಲಸವನ್ನು ಮಾಡಿದ ಬಡಗಿಗೆ "ಮೂರುಮನೆಯ ಮಣ್ಣುಂ ಕೆರೆಯ ಕೆಯ್ಗೆ" ಕೊಟ್ಟನೆಂದು ಕ್ರಿ.ಶ. ೧೧೫೬ರ ಮಲ್ಲಾಪೂರ ಶಾಸನ ಉಲ್ಲೇಖಿಸಿದೆ[೯೩]. ಕ್ರಿ.ಶ. ೧೧೬೫ರ ಮುತ್ತಗಿಯ ಶಾಸನ ಬಡಗಿ ಕೈಹಣನ ಉಲ್ಲೇಖಮಾಡುತ್ತದೆ[೯೪]. ಅಲ್ಲದೇ ಈ ಬಡಿಗರ ಮೇಲೆ ಬಣ್ಣಗೆದೆರೆ ಎಂಬ ಸುಂಕವನ್ನು ಹಾಕುತ್ತಿದ್ದರೆಂದು ಕ್ರಿ.ಶ. ೧೧೮೨ರ ಹಿಪ್ಪರಗೆಯ ಶಾಸನದಿಂದ ತಿಳಿದುಬರುತ್ತದೆ[೯೫].

ಮನೆಗೆ ಬೇಕಾಗುವ ಮಡಿಕೆ, ಕುಡಿಕೆಗಳನ್ನು ಕುಂಬಾರರು ತಯಾರಿಸುತ್ತಿದ್ದರು. ಹೊಳಲಕೆರೆ ತಾಲೂಕಿನ ಗಂಗರ ಶಾಸನವೊಂದು ಕುಂಬಾರ ಬೊಮ್ಮಣ್ಣನು ದೇವಾಲಯವೊಂದರ ಶೃಂಗಾರಕ್ಕಾಗಿ ಭೂಮಿದಾನ ಮಾಡಿದ್ದನ್ನು ಉಲ್ಲೇಖಿಸಿದೆ[೯೬]. ಕುಂಬಾರ ಬಮ್ಮಣನೆಂಬುವನು ಕುಂಬೇಶ್ವರ ದೇವಸ್ಥಾನವೊಂದನ್ನು ಕಟ್ಟಿಸಿದ ಉಲ್ಲೇಖವೊಂದು ಶಾಸನದಲ್ಲಿದೆ[೯೭]. ಹೀಗೆ ಕುಂಬಾರರೂ ಕೂಡ ಧಾರ್ಮಿಕ ಕಾರ್ಯಗಳಿಗಾಗಿ ದಾನದತ್ತಿಗಳನ್ನು ನೀಡಿ ಭಾಗವಹಿಸುತ್ತಿದ್ದರು. ಅಲ್ಲದೇ ಗಂಗ ಮೂರನೆಯ ಮಾಧವನ ಕಾಲದ ಶಾಸನವೊಂದು ಕುಂಬಾರರಿಗೆ ಸಂಬಂಧಿಸಿದ ಭೂಮಿಯೊಂದನ್ನು ದಾನನೀಡಿದ ಉಲ್ಲೇಖವಿದೆ[೯೮]. ಮಣ್ಣಿನ ಕೆಲಸ ಕೈಕೊಳ್ಳುವ ಕುಂಬಾರರು ಜೇಡಿಮಣ್ಣನ್ನು ಚೆನ್ನಾಗಿ ಮಿದ್ದು ಆದರಿಂದ ಮಡಿಕೆ ಮುಂತಾದವುಗಳನ್ನು ತಯಾರಿಸುತ್ತಿದ್ದರೆಂದು ನಯಸೇನ ಉಲ್ಲೇಖಿಸಿದ್ದಾನೆ[೯೯]. ಮಡಿಕೆಗಳನ್ನು ತಯಾರಿಸಲು, ಮಣ್ಣನ್ನು ಹದಮಾಡಿ ಜನರ ದಿನನಿತ್ಯದ ಕಾರ್ಯಕ್ಕೆ ಅವಶ್ಯಕವಾದ ಪಾತ್ರೆ-ಪಡಗಗಳನ್ನು ಮಾಡುತ್ತಿದ್ದ ಕುಂಬಾರನನ್ನು ವಡ್ಡಾರಾಧನೆ ಉಲ್ಲೇಖಿಸಿದೆ[೧೦೦].

ನೇಕಾರರನ್ನು ಜೇಡರೆಂದು ಕರೆಯಲಾಗುತ್ತಿತ್ತು. ಇವರು ಹತ್ತಿಯನ್ನು ನೂಲನ್ನಾಗಿಸಿ ಬಟ್ಟೆಯನ್ನು ತಯಾರಿಸುತ್ತಿದ್ದರು. ಗಂಗ ಮೂರನೆಯ ಮಾಧವನ ಕಾಲದ ಶಾಸನವೊಂದರಲ್ಲಿ ನೇಕಾರರಿಗೆ ಸಂಬಂಧಿಸಿದ ಭೂಮಿಯೊಂದನ್ನು ದಾನನೀಡಿದ ಉಲ್ಲೇಖವಿದೆ[೧೦೧]. ಲಕ್ಷ್ಮೇಶ್ವರದ ಶಾಸನ ಪುಲಿಗೆರೆಯ ಮುರಂಕೆರಿ ನೇಕಾರರು ಸಂಘವನ್ನು ಹೊಂದಿದ್ದರಲ್ಲದೇ, ಗುಣಮಟ್ಟವುಳ್ಳ ಬಟ್ಟೆಗಳನ್ನು ನೇಯ್ದು ವಿವಿಧೆಡೆ ಮಾರುತ್ತಿದ್ದರೆಂದು ಉಲ್ಲೇಖಿಸಿದೆ[೧೦೨]. ಅಲ್ಲದೇ ಕ್ರಿ.ಶ. ೯೭೩ರ ಸುಳ್ಳಗ್ರಾಮದ ಶಾಸನ ಅಲ್ಲಿ ಪಟ್ಟಗಾರ(ನೇಕಾರ)ರು ಇದ್ದ ವಿಷಯ ಸ್ಪಷ್ಟಪಡಿಸಿದೆ[೧೦೩]. ಹಾಗೂ ನೇಕಾರರನ್ನು ಕುರಿತ ಉಲ್ಲೇಕವು ವಡ್ಡಾರಾಧನೆಯ ಚಾಣಕ್ಯಸಿರಿಯ ಕಥೆಯಲ್ಲಿ ಬರುತ್ತದೆ[೧೦೪]. ಅಲ್ಲದೇ ಜೇಡರನ್ನು ಮೊಗ್ಗದ ಕರಣಂಗಳು ಎಂದು ರೂಗಿಯ ಶಾಸನ ಕರೆದಿದ್ದರೆ[೧೦೫], ಮನಗೂಳಿಯ ಶಾಸನ ಸಾಲಿಗಸಮಯಂಗಳು ಎಂದು ಹೆಸರಿಸಿದೆ[೧೦೬]. ಕ್ರಿ.ಶ. ೧೧೭೧ರ ಕಿಕ್ಕೇರಿಯ ಸಾಮಂತ ಭರಮಯ್ಯನ ಶಾಸನದಲ್ಲಿ ವಡ್ಡರಹಳ್ಳಿಯಲ್ಲಿ ಮಗ್ಗದೆರೆಯನ್ನು ಆಕರಿಸಿದ ವಿಷಯ ತಿಳಿದುಬರುತ್ತದೆ[೧೦೭]. ಅಲ್ಲದೇ ದೇಡಮಗ್ಗರ ಮೇಲೆ ಬಣ್ಣಗೆದೆರೆ ಎಂಬ ಸುಂಕವನ್ನು ಹಾಕುತ್ತಿದ್ದರೆಂದು ಕ್ರಿ.ಶ. ೧೧೮೨ರ ಹಿಪ್ಪರಗೆಯ ಶಾಸನದಿಂದ ತಿಳಿದುಬರುತ್ತದೆ[೧೦೮].

ತೆಲ್ಲಿಗ ಅಥವಾ ಗಾಣಿಗರು ಗಾಣಗಳಿಂದ ಎಣ್ಣೆ ತೆಗೆಯುತ್ತಿದ್ದರು. ಅನೇಕ ಶಾಸನಗಳಲ್ಲಿ ಗಾಣಗಳ ಉಲ್ಲೇಖವಿದ್ದು ಅವುಗಳಿಂದ ಎಣ್ಣೆಯನ್ನು ತೆಗೆಯುತ್ತಿದ್ದರೆಂದು ತಿಳಿದುಬರುತ್ತದೆ. ಮಹಾಮಂಡಳೇಶ್ವರ ರಾಜೇಂದ್ರ ಕೊಂಗಾಳ್ವದೇವನ ಕ್ರಿ.ಶ. ೧೦೫೯ರ ಮುಳ್ಳೂರು ಶಾಸನದಲ್ಲಿ ತನ್ನ ತಂದೆ ಮಾಡಿಸಿದ ಬಸದಿಗೆ ದಾನವನ್ನು ನೀಡುವಾಗ ಭೂಮಿದಾನದ ಜೊತೆಗೆ ಒಂದು ಗಾಣವನ್ನು ದಾನಬಿಟ್ಟಿದ್ದಾನೆ[೧೦೯]. ಹೊಯ್ಸಳ ವಿಷ್ಣುವರ್ಧನನ ಸಾಮಂತ ಭರಮಯ್ಯನ ಕಾಲದಲ್ಲಿ ಅವನ ಮಡದಿ ಬಮ್ಮವ್ವೆ ಕಟ್ಟಿಸಿದ ಬ್ರಹ್ಮೇಶ್ವರ ದೇಗುಲಕ್ಕೆ ದತ್ತಿಯನ್ನು ಬಿಟ್ಟಾಗ ತಲ್ಲಿಗ ಮಾರಗೌಡನ ಗಾಣದ ಸುಂಕವನ್ನು ನಂದಾದೀವಿಗೆಗೆ ಬಿಟ್ಟ ವಿಷಯ ಕ್ರಿ.ಶ. ೧೧೭೧ರ ಕಿಕ್ಕೇರಿಯ ಶಾಸನದಿಂದ ತಿಳಿಯುತ್ತದೆ[೧೧೦]. ಸಾಮಂತ ನರಸಿಂಗನಾಯಕನ ಅನುಮತಿಯಿಂದ ಜಿನಪಾರ್ಶ್ವದೇವರ ನಂದಾದೀವಿಗೆಗೆ ಒಂದು ಗಾಣವನ್ನು ಅವನ ಪಾದಪದ್ಮೋಪಜೀವಿಯಾದ ನಾರಣವೆಗ್ಗಡೆಯು ಬಿಟ್ಟನೆಂದು ಹಟ್ಟಣದ ಶಾಸನ ಉಲ್ಲೇಖಿಸಿದೆ[೧೧೧]. ಈ ಎಲ್ಲ ಉಲ್ಲೇಖಗಳಿಂದ ಎಣ್ಣೆಕಾಳುಗಳಿಂದ ಎಣ್ಣೆಯನ್ನು ತಯಾರಿಸುತ್ತಿದ್ದುದಾಗಿಯೂ, ಗಾಣಿಗರಿದ್ದುದಾಗಿಯೂ, ಅವರು ಗಾಣಗಳನ್ನು ಉಪಯೋಗಿಸುತ್ತಿದ್ದ ವಿಷಯಗಳು ಸ್ಪಷ್ಟವಾಗುತ್ತವೆ. ತೆಲ್ಲಿಗರೆಲ್ಲರೂ ಸೇರಿಕೊಂಡು ಒಂದು ಸಂಘವನ್ನು ಸ್ಥಾಪಿಸಿಕೊಂಡಿದ್ದರು. ಅದುವೇ ತೆಲ್ಲಿಗರಯ್ವತ್ತೊಕ್ಕಲು[೧೧೨], ತೆಲ್ಲಿಗಗೊತ್ತಳಿಯಾಗಿತ್ತು[೧೧೩].

ಮಾಲೆಗಾರರು ದೇವರಪೂಜೆ ಮತ್ತು ಇತರ ಕಾರ್ಯಗಳಿಗಾಗಿ ಹೂಕಟ್ಟುವ ಕೆಲಸವನ್ನು ಮಾಡುತ್ತಿದ್ದರು. ಮಹಾಸಾಮಂತ ಚಟ್ಟಯ್ಯದೇವನು ಚಟ್ಟೇಶ್ವರದೇವರ ದೇವಾಲಯವನ್ನು ಕಟ್ಟಿಸಿ ಅದಕ್ಕೆ ದಾನನೀಡಿದಾಗ ಅಲ್ಲಿನ ಮಾಲಗಾರ ಚಿಕ್ಕನಿಗೆ ಗದ್ದೆಯೊಂದನ್ನು ನೀಡಿದ್ದಾನೆ[೧೧೪]. ಮುತ್ತಗೆಯ ಶಾಸನದಲ್ಲಿ ಮಾಲಗಾರ ಕನಕಬ್ಬೆಯ ಮಗ ಮಾಲಗಾರ ದಡ್ಡಿಯಣ್ಣನ ಉಲ್ಲೇಖವಿದೆ[೧೧೫]. ಕುಂಟೋಜಿಯ ಶಾಸನದಲ್ಲಿ ಅಲ್ಲಿನ ದೇವರ ತೋಟದ ಮಾಲಗಾರನಾಗಿ ರೇವಣ್ಣ ಕಂಡುಬರುತ್ತಾನೆ[೧೧೬]. ಅಲ್ಲದೇ ಮಾಲಗಾರರು ಮಾಲಗಾರಗೊತ್ತಳಿವೊಕ್ಕಲು-೫೦೦ ಎಂಬ ಸಂಘವನ್ನು ಕೂಡಾ ಹೊಂದಿದ್ದರು[೧೧೭]. ಹಾಗೂ ಹೂದೋಟಗಳ ಉಲ್ಲೇಖವು ಹಲವಾರು ಶಾಸನಗಳಲ್ಲಿ ಕಂಡುಬರುತ್ತದೆ.

ಕುರುಬರಿಗೆ ಬೆಟ್ಟಗಳಲ್ಲಿ ವಾಸಿಸುವ ಮೂಲಕ ಈ ಹೆಸರು ಬಂದಿದೆ. ಅಲ್ಲದೇ ಮುಂದೆ ಇದು ಕುರಿಸಾಕುವವರಿಗೆ ಹಾಗೂ ಕಾಯುವವರಿಗೆ ಅನ್ವಯವಾಯಿತು. ಕ್ರಿ.ಶ. ೭೯೧ರ ಗಂಗ ಶ್ರೀಪುರುಷನ ಬಸವಟ್ಟಿ ಶಾಸನ ಕುರುಬರಿಗೆ ದಾನಮಾಡಿದ ವಿವರ ನೀಡುವದರ ಜೊತೆಗೆ, ಕುರುಂಬದೆರೆ ಎಂಬ ಕುರುಬರ ಮೇಲಿನ ತೆರಿಗೆಯನ್ನು ಕುರಿತು ಉಲ್ಲೇಖಿಸಿದೆ[೧೧೮]. ಅಲ್ಲದೇ ಈ ಕುರುಬರೂ ಕೂಡ ಕುರುಬಸೇಣಿಗರೊಕ್ಕಲು ಎಂಬ ಸಂಘವನ್ನು ಹೊಂದಿದ್ದುದಾಗಿ ತಿಳಿಯುತ್ತದೆ[೧೧೯].

ನಾವಿದರು ಕ್ಷೌರದ ಕೆಲಸವನ್ನು ಮಾಡುತ್ತಿದ್ದರು. ಇವರಿಗೆ ಶಾಶ್ವತ ದತ್ತಿ ಬಿಟ್ಟುಕೊಡುತ್ತಿದ್ದ ಉಲ್ಲೇಖ ಶಾಸನಗಳಲ್ಲಿದೆ. ಅಲ್ಲದೇ ಇವರು ಕೂಡ ಧಾರ್ಮಿಕ ಕಾರ್ಯಗಳಲ್ಲಿ ಭಾಗವಹಿಸಿದ್ದ ವಿವರಗಳೂ ಕಂಡುಬರುತ್ತವೆ. ಶಾಸನವೊಂದು ನಾವಿದ ಮುದ್ದನ ಮಗ ಆಯ್ಯಪ್ಪನಿಗೆ ಐನೂರ್ವರೆಂಬ ಸಂಘದವರು ನಾಲ್ಕುಮತ್ತರು ಭೂಮಿಯನ್ನು

ನೀಡಿದ್ದನ್ನು ತಿಳಿಸುತ್ತದೆ[೧೨೦]. ಮೂವತ್ತು ಮನುಷ್ಯ ಬ್ರಾಹ್ಮಣರುಗುರ ಕಳವ ನಾವಿದನ ಜೀವಿತಂ ಗದ್ಯಾಣ ಎನ್ನುವ ಶಾಸನೋಲ್ಲೇಖವನ್ನು ಕಂಡಾಗ ಆಯಪದ್ಧತಿಯ ಅನುಸಾರ ಅಗ್ರಹಾರಗಳಲ್ಲಿ ಬ್ರಾಹ್ಮಣರ ಉಗುರುಗಳನ್ನು ತೆಗೆಯಲು ನಾವಿದರನ್ನು ನೇಮಿಸಿಕೊಳ್ಳುತ್ತಿದ್ದರು[೧೨೧].

ಅಗಸರು ಜನರ ಬಟ್ಟೆಗಳನ್ನು ಒಗೆದು ಸ್ವಚ್ಛಗೊಳಿಸುತ್ತಿದ್ದರು. ಶಿಕಾರಿಪುರ ತಾಲೂಕಿನ ಶಾಸನವೊಂದು ದೇವಾಲಯಕ್ಕೆ ಪಟ್ಟಣದಗಸರು ವರ್ಷಕ್ಕೆ ಪ್ರತ್ಯೇಕ ವೀಸ ಹತ್ತಂ ಕೊಟ್ಟರು ಎಂದು ತಿಳಿಸುತ್ತದೆ[೧೨೨]. ಮತ್ತೊಂದು ಶಾಸನದಲ್ಲಿ ಅಗಸರಕೊತ್ತಳಿ ಎಂಬ ಸಂಘವು ಸೇರಿ ವಿನಾಯಕನೆಂಬುವನಿಗೆ ೧ಪಣವನ್ನು ನೀಡಿದ ಉಲ್ಲೇಖಬರುತ್ತದೆ[೧೨೩]. ಹೀಗೆ ಅವರದೇ ಆದ ಸಂಘವೊಂದಿದ್ದುದ್ದನ್ನು ಕೂಡಾ ನಾವು ಕಾಣುತ್ತೇವೆ.

ಈ ಮೇಲಿನ ವೃತ್ತಿಗಳಲ್ಲದೇ ಎಂಟುಹಿಟ್ಟು, ಮೂಲಿಗ, ಉಭಯನಾನಾದೇಸಿಗಳು, ಮುಮ್ಮರಿದಂಡಗಳು, ಐಯ್ಯಾವೊಳೆಐನ್ನೂರ್ವ್ವರು, ಉಗುರಮುನ್ನೂರ್ವರು, ಒಕ್ಕಲುಗಳು(ಅರವತ್ತೊಕ್ಕಲು, ಎಪ್ಪತ್ತೊಕ್ಕಲು, ಒಂದನೂರಾಎಪ್ಪತ್ತೊಕ್ಕಲು), ಸಿವಾಳಿಯ ಸಾಸಿರ್ವರು, ಗ್ರಾಮಮುನ್ನೂರ್ವರು, ತಂಬುಲಿಗ ಸಾಸಿರ್ವರು, ಎಲೆಯ ಬೋಜಂಗರು, ಬಿಲ್ಲ ಮೂನ್ನೂರ್ವರು, ಬಂಟ ಸಾಸಿರ್ವರು, ಸ್ಥಳದ ಹನ್ನವಣಿಗರು, ಬಣಂಜಿಗರಯ್ನೂರ್ವರು, ವಣಿಜಸ್ವಾಮಿಗಳೈನೂರ್ವರು, ಸ್ಥಾನದೇಳನೂರ್ವರು, ಸ್ಥಾನದಯ್ದುವರ್ಗ, ಪದಿನೆಂಟು ಪಟ್ಟಣ ಮುಂತಾದ ಪಾರಿಭಾಷಿಕಗಳು ಶಾಸನಗಳಲ್ಲಿ ದಾನದತ್ತಿಗಳನ್ನು ಬಿಡುವಾಗ ಕಾಣಿಸಿಕೊಂಡಿವೆ. ಇವು ಆಯಾ ಪ್ರದೇಶದಲ್ಲಿ ಆಯಾ ವೃತ್ತಿಯ ಜನರು ಸ್ಥಾಪಿಸಿಕೊಂಡಿದ್ದಂತಹ ಸಂಘಗಳಾಗಿವೆ. ಈ ಸಂಘಗಳನ್ನು ಕುರಿತು ಇದೇ ಪ್ರಬಂಧದ ಎಂಟನೆಯ ಅಧ್ಯಾಯದಲ್ಲಿ ಪ್ರಸ್ತಾಪಿಸಲಾಗಿದೆ. ಹೀಗೆ ಪ್ರತಿಯೊಂದು ಗುಂಪು ಕೂಡ ಒಂದೊಂದು ಸಂಘ ಅಥವಾ ಶ್ರೇಣಿಗಳನ್ನು ಹೊಂದಿದ್ದ ವಿಷಯ ತಿಳಿಯುತ್ತದೆ. ಆದರೆ ಅವುಗಳ ಕೆಲಸಕಾರ್ಯ ಮತ್ತು ಅವುಗಳ ಶಕ್ತಿಸಾಮರ್ಥ್ಯಗಳ ಬಗ್ಗೆ ತಿಳಿದುಬರುವದಿಲ್ಲ. ಹೀಗಾಗಿ ಇವು ಕೆಲಸಮಾಡುವವರು ಒಟ್ಟಾಗಿ ಬದುಕುವ ಗುಂಪುಗಳಾಗಿದ್ದವೇ ಹೊರತು ಯಾವುದೇ ರೀತಿಯ ಶಕ್ತಿಯನ್ನು ಹೊಂದಿರಲಿಲ್ಲವೆಂದು ಹೇಳಬಹುದು.

ಸಮಾಜದಲ್ಲಿ ಉನ್ನತ ಹಂತದಲ್ಲಿ ಬ್ರಾಹ್ಮಣರಿದ್ದರೆ ಅತ್ಯಂತ ಕೆಳಹಂತದಲ್ಲಿ ಅಂತ್ಯಜರೆನಿಸಿದ್ದ ಸಮಗಾರ, ಮಾದಿಗ, ಹೊಲೆಯ ಮತ್ತು ಚಂಡಾಲರಿದ್ದರು. ಶಾಸನವೊಂದು ಪೊರಗೆ ಚಂಡಾಲಾಲಯಂ ಎಂದು ಉಲ್ಲೇಖಿಸಿದೆ[೧೨೪]. ಹೀಗೆ ಊರಿನ ಹೊರಗೆ ವಾಸಿಸುತ್ತಿದ್ದವರು ಹೊಲೆಯರು ಅಥವಾ ಹರಿಜನರಾಗಿದ್ದರು. ಕ್ರಿ.ಶ. ೧೦ನೆಯ ಶತಮಾನದ ಕೊನೆಯ ಕಾಲದ ತಳಂಗೆರೆ ಶಾಸನದಲ್ಲಿ ಪುತ್ತೂರಿನ ಪೊಲೆಯರಿರುವ ಕೇರಿಯನ್ನು ಉಲ್ಲೇಖಿಸಲಾಗಿದೆ[೧೨೫]. ಇವರು ಊರಿನ ಸತ್ತ ದನಗಳನ್ನು ಎತ್ತುತ್ತಿದ್ದು, ಜನರಿಗೆ ಚರ್ಮದ ವಸ್ತುಗಳನ್ನು ಮಾಡಿಕೊಡುತ್ತಿದ್ದರು. ಇವರಿಗೆ ಸಮ್ಮಗಾರ ಎಂದು ಶಾಸನವೊಂದು ಉಲ್ಲೇಖಿಸಿದೆ[೧೨೬]. ಒಟ್ಟಿನಲ್ಲಿ ಅಂದಿನ ಸಮಾಜದಲ್ಲಿ ಇವರು ಅದೃಷ್ಟಹೀನರಾಗಿ ಕಡುಕಷ್ಟದಲ್ಲಿದ್ದರು.

**ಕುಟುಂಬ :**

ಅಂದಿನ ಸಮಾಜದಲ್ಲಿ ಕುಟುಂಬವು ಒಂದು ಅವಿಭಾಜ್ಯ ಅಂಗವಾಗಿತ್ತು. ಒಂದು ದೃಷ್ಟಿಯಲ್ಲಿ ಕುಟುಂಬವನ್ನೇ ಪ್ರಥಮ ಸಮಾಜವೆಂದು ಕರೆಯಬಹುದು. ಇದರ ಮೂಲವೇ ಗಂಡು-ಹೆಣ್ಣುಗಳ ಸಂಬಂಧವಾಗಿದೆ. ಇದನ್ನೇ ಹಿಂದೂ ಸಂಸ್ಕಾರದಲ್ಲಿ ವಿವಾಹವೆಂದು ಕರೆದಿವೆ. ಅಲ್ಲದೇ ಆಗ ಪಿತೃಪ್ರಧಾನ ಕುಟುಂಬ ವ್ಯವಸ್ಥೆ ಜಾರಿಯಲ್ಲಿದ್ದು ತಂದೆಯ ನಂತರ ಹಿರಿಯ ಮಗ ಮುಖ್ಯಸ್ಥನಾಗುತ್ತಿದ್ದನು.

**ವಿವಾಹ:**

ಸಂಸ್ಕಾರಗಳ ಕುರಿತು ಹೇಳುವಾಗ ವಿವಾಹವು ಎಲ್ಲ ಸಂಸ್ಕಾರಗಳಿಗೂ ಮೂಲ ಎಂದು ಗೃಹ್ಯಸೂತ್ರ ಹೇಳಿದೆ. ಕಾರಣ ಎಲ್ಲ ಬಗೆಯ ಆಚಾರ-ನೇಮಗಳು, ಯಜ್ಞ-ಯಾಗಗಳು ಗೃಹಸ್ತನ ಸುತ್ತ ಹರಡಿಕೊಂಡಿರುವದಾಗಿದೆ[೧೨೬]. ಪ್ರಾಚೀನ ಕಾಲದಲ್ಲಿ ಬ್ರಹ್ಮ, ದೈವ, ಅರ್ಷ, ಪ್ರಜಾಪತ್ಯ, ಅಸುರ, ಗಂಧರ್ವ, ರಾಕ್ಷಸ ಮತ್ತು ಪೈಶಾಚ ಎಂಬ ಎಂಟು ಪದ್ಧತಿಯ ವಿವಾಹಗಳಿದ್ದವು. ಅವುಗಳಲ್ಲಿ ಕರ್ನಾಟಕದಲ್ಲಿ ಕೆಲವು ಪದ್ಧತಿಗಳು ಬಳಕೆಯಲ್ಲಿದ್ದವು. ರಾಷ್ಟ್ರಕೂಟರ ಸಂಜಾನ ತಾಮ್ರಶಾಸನವು ಇಂದ್ರರಾಜನೆಂಬುವನು ಖೇಟಕಮಂಡಲದ ಯುದ್ಧದಲ್ಲಿ ಅವರ ಸಾಮಂತರಾದ ಚಾಲುಕ್ಯರಾಜಕುಮಾರಿಯನ್ನು ಅಪಹರಿಸಿ ತಂದು ರಾಕ್ಷಸವಿವಾಹ ಮಾಡಿಕೊಂಡಿದ್ದನ್ನು ಉಲ್ಲೇಖಿಸಿದೆ[೧೨೮]. ಚಾಲುಕ್ಯ ಕೀರ್ತಿವರ್ಮನ ಸಾಮಂತನಾದ ದಂತಿದುರ್ಗನು ಅವನ ಮಗಳಾದ ಲಕ್ಷ್ಮೀದೇವಿಯ ಜೊತೆ ಪ್ರೇಮಬದ್ಧವಾದ ವಿವಾಹವಾಗಿದ್ದನೆಂದು, ಅದು ಸ್ವಯಂವರ ಪದ್ಧತಿಯಿಂದ ನೆಡೆದ ವಿವಾಹವಾಗಿತ್ತೆಂದು ವಿದ್ವಾಂಸರ ಅಭಿಪ್ರಾಯವಾಗಿದೆ[೧೨೯]. ಇನ್ನು ಮಹಾಮಂಡಳೇಶ್ವರ ಶಿಲಹಾರ ಮನೆತನದ ಲಕ್ಷ್ಮೀದೇವಿಯನ್ನು ಚಾಲುಕ್ಯ ಆರನೆಯ ವಿಕ್ರಮಾದಿತ್ಯನು ಸ್ವಯಂವರಪೂರ್ವಕ ವರಿಸಿದನೆಂದು ಕವಿ ಬಿಲ್ಹಣ ಹೇಳಿದ್ದಾನೆ[೧೩೦].

ಶಾಸನಗಳು ತಮ್ಮ ಸ್ವಪುತ್ರಿಯರನ್ನು ಮದುವೆಮಾಡಿದ್ದನ್ನು ಕನ್ಯಾದಾನವೆಂದು ಕರೆಯದೇ, ಬೇರೊಬ್ಬರ ಮನೆಯ ಕನ್ಯೆಯನ್ನು ತಂದು ಬಡವರ ಅಥವಾ ಬಡಬ್ರಾಹ್ಮಣರ ಮಕ್ಕಳಿಗೆ ಮದುವೆಮಾಡಿಕೊಟ್ಟದ್ದಕ್ಕೆ, ಇಂತಹ ಮದುವೆಗೆ ಸಹಾಯ ಮಾಡಿದ್ದಕ್ಕೆ ಕನ್ಯಾದಾನವೆಂದು ಕರೆದಿವೆ. ಹೂಲಿಹಳ್ಳಿಯ ಶಾಸನವೊಂದು ಕನ್ಯಾದಾನವನ್ನು ಕುರಿತು ಉಲ್ಲೇಖಿಸಿದೆಯಾದರೂ ಶಾಸನ ತೃಟಿತವಾಗಿರುವದರಿಂದ ಹೆಚ್ಚಿಗೆ ಎನನ್ನು ಹೇಳಲಾಗದು[೧೩೦]. ಮಹಾಮಂಡಳೇಶ್ವರ ಜಯಸಿಂಹನು ಕನ್ಯಾದಾನ ನಿಮಿತ್ತವಾಗಿ ತನ್ನ ರಾಣಿಯಾದ ಮೋಚಬ್ಬರಸಿಗೆ ಪುತ್ತೂರಿನ ಬಳಿಯ ಪಾಳುನೆಲವನ್ನು ಕನ್ಯಾದಾನವನ್ನಾಗಿ ನೀಡಿದನು. ಆಗ ಅವಳು ಅದನ್ನು ಫಲವತ್ತಾಗಿಸಿ ಮನೆಯನ್ನು ಹಾಗೂ ತೋಟವನ್ನು ನಿರ್ಮಿಸಿಕೊಂಡಳೆಂದು ತಿಳಿದುಬರುತ್ತದೆ[೧೩೨]. ಮಹಾಮಂಡಳೇಶ್ವರ ವೀರಶಾಂತಾರದೇವನ ಮನೋವಲ್ಲಭೆ ಚಾಗಲದೇವಿ ಬಳ್ಳಿಗಾಮೆಯಲ್ಲಿ ಚಾಗೇಶ್ವರ ದೇವಾಲಯವನ್ನು ನಿರ್ಮಿಸಿದಾಗ ಬ್ರಾಹ್ಮಣರ ಕನ್ಯಾದಾನವನ್ನು ಮಾಡಿಸಿದ ವಿಷಯ ಹುಂಚದ ಶಾಸನವೊಂದರಿಂದ ತಿಳಿದುಬರುತ್ತದೆ[೧೩೩]. ನೊಳಂಬ ಪಲ್ಲವ ಪೆರ್ಮಾನಡಿ ಜಯಸಿಂಗದೇವನ

ಮಹಾಮಂಡಳೇಶ್ವರ ಚೆನ್ನರಸನು "ಭೂದಾನಮಸ್ವದಾನ ಗೋದಾನ ಸುವರ್ಣದಾನ"ಗಳ ಜೊತೆಗೆ ಕನ್ಯಾದಾನವನ್ನು ಮಾಡಿರುವನು[೧೩೪].

ಮದುವೆಯ ಸಮಯದಲ್ಲಿ ವರನಿಗೆ ಉಡುಗೊರೆಗಳನ್ನು ನೀಡುತ್ತಿದ್ದರು. ಹೀಗಾಗಿ ವಿವಾಹ ಪದ್ಧತಿಯಲ್ಲಿ ಕೊಡುಗೆಗಳು ಇಂದಿನಂತೆ ಸಹಜವಾಗಿದ್ದಂತೆ ತೋರುತ್ತದೆ. ಇದು ಪ್ರಭುವರ್ಗದವರಲ್ಲಿ ದೊಡ್ಡ ಪ್ರಮಾಣದಲ್ಲಿದ್ದರೆ, ಮಧ್ಯಮ ಮತ್ತು ಸಾಮಾನ್ಯ ವರ್ಗದವರಲ್ಲಿ ಅವರ ಗೌರವಕ್ಕೆ ತಕ್ಕಂತೆ ನಡೆಯುತ್ತಿತ್ತು. ಗ' ೦ ಗ' ೦' ಭೂತುಗನಿಗೆ ರಾಷ್ಟ್ರಕೂಟ ಬದ್ದೆಗದೇವ ರೇವಕನನ್ನು ಮದುವೆಮಾಡಿಕೊಟ್ಟಾಗ, ಪುಲಿಗೆರೆ-೩೦೦, ಬೆಳ್ವೊಲ-೩೦೦ ಮತ್ತು ಕಿಸುಕಾಡು-೭೦ಗಳನ್ನು ಬಳುವಳಿಯಾಗಿ ನೀಡಿದ್ದಾನೆ[೧೩೫]. ಗೋವೆಕದಂಬ ಮನೆತನದ ಚಟ್ಟಯ್ಯನಿಗೆ ಮುಮ್ಮರಿನೃಪನು ಪುತ್ರಿಯನ್ನು ನೀಡಿ ಅಳಿಯನಿಗೆ ೫ಲಕ್ಷ ಸುವರ್ಣ ನಾಣ್ಯಗಳನ್ನು ನೀಡಿರುವನು. ಅಲ್ಲದೇ ಚಟ್ಟಯ್ಯದೇವನ ಮಗನಾದ ಮಹಾಮಂಡಳೇಶ್ವರ ಒಂದನೆಯ ಜಯಕೇಶಿಯು ಚಾಲುಕ್ಯ ಆರನೆಯ ವಿಕ್ರಮಾದಿತ್ಯನಿಗೆ ತನ್ನ ಮಗಳನ್ನು ಕೊಟ್ಟು, "ಪೆರ್ಚ್ಚಿದಲಂಪಂ ಪಲವ . . . . . .ಯಂ ಕುದುರೆಯಂ ಬಣ್ಣಾರಮಂ ಲೆಕ್ಕವಿಲ್ಲದೆ ತೆಲ್ಲಂಟಿಯಂ" ನೀಡಿದನೆಂದು ತಿಳಿದುಬರುತ್ತದೆ[೧೩೬]. ಮಧ್ಯಮವರ್ಗದವರಲ್ಲಿ ದೇವಸೆಟ್ಟಿ ಎಂಬುವನಿಗೆ ಗೌರಕ್ಕಳನ್ನು ಕೊಟ್ಟು ಅವಳ ತಂದೆಯಾದ ಬಾವಿಸೆಟ್ಟಿಯರು ತಾಂಡ್ಯದ 'ಪರದವಟ್ಟಿಗೆಯುಮಂ ಪುಳುಮಾದಲು ಮುಟ್ಟಿವಾಳುಮಂ' ಕೊಡುವದರ ಜೊತೆಗೆ ಆದಿವರಿಯನ್ನು ನೀಡಿದರು ಎಂದು ತಿಳಿಯುತ್ತದೆ[೧೩೭]. ಅಲ್ಲದೇ ಹೊಯ್ಸಳ ಮೂರನೆಯ ಬಲ್ಲಾಳನ ಪಾದಪದ್ಮೋಪಜೀವಿಯಾದ ಸಾಮಂತ ಮಾಚಣ್ಣನಿಗೆ ಕೊಯೂರನ ಮಗ ರಾಮಗೌಡನು ತನ್ನ ಮಗಳನ್ನು ಕೊಟ್ಟು ತನಗೆ ಕೊಡುಗೆಯಾಗಿ ಬಂದ ಹಿರಿಯಗುಂಡಕಲ್ಲು ಗ್ರಾಮವನ್ನು ಅಳಿಯನಿಗೆ ಕೊಡುಗೆಯಾಗಿ ನೀಡಿದ ವಿಷಯ ಹಿರೇಗುಂಡಗಲ್ಲ ಶಾಸನದಿಂದ ತಿಳಿಯುತ್ತದೆ[೧೩೮].

## ಬಹುಪತ್ನಿತ್ವ:

ಪ್ರಾಚೀನ ಕಾಲದಲ್ಲಿ ಬಹುಪತ್ನಿತ್ವಕ್ಕೆ ಸಾಮಾಜಿಕ ಮನ್ನಣೆಯಿತ್ತು. ಅಲ್ಬೆರುನಿಯು ಬ್ರಾಹ್ಮಣರು ನಾಲ್ಕು ಜನರನ್ನೂ, ಕ್ಷತ್ರಿಯರು ಮೂರು ಜನರನ್ನೂ, ವೈಶ್ಯರು ಇಬ್ಬರನ್ನೂ ಮತ್ತು ಶೂದ್ರರು ಒಬ್ಬಳನ್ನು ಮದುವೆಯಾಗುತ್ತಿದ್ದರೆಂದು ಹೇಳಿದ್ದಾನೆ[೧೩೯]. ಬಹುಪತ್ನಿತ್ವವು ಅರಸರುಗಳು ಹಾಗೂ ಅಧಿಕಾರಿಗಳಲ್ಲಿ ಅಧಿಕಪ್ರಮಾಣದಲ್ಲಿ, ಜನಸಾಮಾನ್ಯರಲ್ಲಿ ವಿರಳವಾಗಿ ಕಂಡುಬರುತ್ತದೆ. ರಟ್ಟರ ನಾಲ್ಕನೆಯ ಕಾರ್ತವೀರ್ಯನಿಗೆ ಏಚಲದೇವಿ ಹಾಗೂ ಮಾದೇವಿ ಎಂಬ ಇಬ್ಬರು ರಾಣಿಯರಿದ್ದರು[೧೪೦]. ಹಾನಗಲ್ಲ ಕದಂಬವಂಶದ ಮಹಾಮಂಡಳೇಶ್ವರ ಚತ್ತಯ್ಯದೇವನಿಗೆ ಉತ್ತರ ಕೊಂಕಣ ಶಿಲಹಾರ ಇಮ್ಮಡಿ ವಜ್ಜಡನ ಮಗಳಾದ ಕುಂಡಲಾದೇವಿ ಹಾಗೂ ಚಿತ್ತಬ್ಬರಸಿ ಎಂಬ ಇಬ್ಬರು ರಾಣಿಯರಿದ್ದರು[೧೪೧]. ಜಗದೇಕಮಲ್ಲ ಜಯಸಿಂಹನ ಮಹಾಮಂಡಳೇಶ್ವರ ಕುಂದರಾಜನಿಗೆ ಜೋಗಲದೇವಿ[೧೪೨] ಮತ್ತು ಪಂಪಾದೇವಿ[೧೪೩]ಯರೆಂಬ ಇಬ್ಬರು ಮಡದಿಯರಿದ್ದರು. ಮಹಾಮಂಡಳೇಶ್ವರ

ಗಂಗರಾಜನಿಗೆ ಲಕ್ಷ್ಮೀಮತಿ[೧೪೪], ನಾಗಲದೇವಿದಂಡನಾಯಕತಿ[೧೪೫] ಎಂಬ ಇಬ್ಬರು ಮಡದಿಯರಿದ್ದರು. ನೊಳಂಬ ಮಹಾಮಂಡಳೇಶ್ವರ ಇರಿವನೊಳಂಬ ಘಟೆಯಂಕಕಾರನಿಗೆ ಮಹಾದೇವಿ[೧೪೬] ಮತ್ತು ದಿವಬ್ಬರಸಿ[೧೪೭]ಯರೆಂಬ ರಾಣಿಯರಿದ್ದುದಾಗಿ ತಿಳಿದುಬರುತ್ತದೆ. ಕುರುಗೋಡು ಸಿಂದರ ಒಂದನೆಯ ರಾಚಮಲ್ಲನಿಗೆ ಮಾಕಲದೇವಿ[೧೪೮] ಮತ್ತು ಸೋವಲದೇವಿ[೧೪೯] ಎಂಬ ಇಬ್ಬರು ರಾಣಿಯರಿದ್ದರು.

## ಮದುವೆದೆರೆ:

ಪ್ರಾಚೀನ ಕರ್ನಾಟಕದಲ್ಲಿ ಮದುವೆಗೂ ಕೂಡ ಕರ ವಸೂಲಿಮಾಡಲಾಗುತ್ತಿತ್ತು. ಇದಕ್ಕೆ ಮದುವೆದೆರೆ, ಹಂದರವಣ ಎಂದು ಕರೆಯಲಾಗುತ್ತಿತ್ತು. ಅಲ್ಲದೇ ಈ ಮದುವೆಯ ತೆರಿಗೆಯನ್ನು ಊರಹಿರಿಯರು ನಿಶ್ಚಯಿಸುತ್ತಿದ್ದರಿಂದ, ಅದು ದೇವಸ್ಥಾನ ಜೀರ್ಣೋದ್ಧಾರ ಮತ್ತು ಕೆರೆನಿರ್ಮಾಣಗಳಂತಹ ಸಾಮಾಜಿಕ ಕಾರ್ಯಗಳಿಗೆ ವಿನಿಯೋಗಿಸಲ್ಪಡುತ್ತಿರಬಹುದು. ಕ್ರಿ.ಶ. ೯೧೯ರ ದಂಡಾಪುರ ಶಾಸನವು ವಿಪ್ರರು ಮದುವೆಯಾದರೆ ಎರಡು, ಶೂದ್ರರು ಮದುವೆಯಾದರೆ ಒಂದು ದ್ರಮ್ಮವನ್ನೂ ಮದುವೆದೆರೆಯಾಗಿ ಕೊಡಬೇಕೆಂದು ಹೇಳಿದೆ[೧೫೦]. ಮಹಾಮಂಡಳೇಶ್ವರ ಮನ್ನೆಯ ಘಟ್ಟಿದೇವ ಮದುವೆಯಾದಲ್ಲಿ ಹಂದರವಣವನ್ನು ಸ್ವಯಂಭೂ ಕಲಿದೇವಸ್ವಾಮಿ ದೇವರ ನಂದಾದೀವಿಗೆಗೆ ಬಿಟ್ಟುಕೊಡಬೇಕೆಂದು ಆಜ್ಞಾಪಿಸಿದ್ದನ್ನು ಸೋಗಿಯ ಶಾಸನ ಹೇಳಿದೆ[೧೫೧].

## ವೈಧವ್ಯ ಹಾಗೂ ಸತಿಪದ್ಧತಿ:

ಪ್ರಾಚೀನ ಕರ್ನಾಟಕದಲ್ಲಿ ಪತಿಯ ಮರಣದ ನಂತರ ಸತಿಯರು ಅಗ್ನಿಪ್ರವೇಶ ಕೈಕೊಳ್ಳುತ್ತಿದ್ದರು. ಆದರೆ ಕೆಲವರು ಧರ್ಮಾಸಕ್ತರಾಗಿ ಜೀವನವನ್ನು ಕಳೆಯುತ್ತಿದ್ದಂತೆ ತಿಳಿದುಬರುತ್ತದೆ. ಗಂಡಸತ್ತು ಸ್ತ್ರೀಯರು ವಿಧವೆಯಾದರೆ ಅವಳು ಪುನಃ ವಿವಾಹವಾಗುವಂತಿರದೆ, ವಿಧವೆಯಾಗಿಯೇ ಇರಬೇಕಾಗಿತ್ತು. ಅರಸರು ಮರಣಿಸಿದರೆ ಅವರ ಮಡದಿಯರು ಇಚ್ಛೆಪಡಲಿ ಪಡದೆ ಇರಲಿ ಆಕೆ ಚಿತೆಯನ್ನು ಏರಲೇಬೇಕಾಗಿತ್ತು. ಆದರೆ ಮಕ್ಕಳನ್ನು ಹಡೆದು ವಯಸ್ಸಾದ ಹೆಂಗಸರಿಗೆ ಇದರಿಂದ ವಿನಾಯತಿ ಇದ್ದಿತು. ಅಂಥವಳನ್ನು ನೋಡಿಕೊಳ್ಳುವ ಜವಾಬ್ದಾರಿ ಮಗನಿಗೆ ಸೇರಿತ್ತೆಂದು ಅಲ್ಬೆರುನಿ ಹೇಳುತ್ತಾನೆ[೧೫೨]. ಕ್ರಿ.ಶ. ೪೫೦ರಲ್ಲಿ ಕದಂಬ ರವಿವರ್ಮನ ರಾಣಿ ತನ್ನ ಪತಿಯೊಂದಿಗೆ ಮುಕ್ತಳಾದಂತೆ ಕಂಡುಬರುತ್ತದೆ[೧೫೩]. ಇದು ಕರ್ನಾಟಕದಲ್ಲಿ ದೊರೆಯುವ ಸಹಗಮನದ ಪ್ರಥಮ ಉಲ್ಲೇಖವಾಗಿದೆ. ಸಿಂದ ಮಹಾಮಂಡಳೇಶ್ವರ ರಾಚಮಲ್ಲನ ಮಂತ್ರಿ ಬೀಚಿರಾಜನ ಮಡದಿಯರಾದ ಬೈಲಿಯಕ್ಕ ಮತ್ತು ಮಲಪನೀಯಕ್ಕರು ಸಹಗಮನ ಕೈಕೊಂಡಿದ್ದು ತಿಳಿಯುತ್ತದೆ[೧೫೪]. ಮಹಾಮಂಡಳೇಶ್ವರ ವೀರಗಂಗಪೊಯ್ಸಣದೇವನ ಆಳ್ವಿಕೆಯಲ್ಲಿ ಅರಿಸಿಣಗುಪ್ಪೆಯ ಹೆಮ್ಮಾಡಿಗವುಡನ ಮಗಳು ಮಾಳಗೌಡಿ ತನ್ನ ಪತಿ ರಾಜಗೌಡನೊಡನೆ ಅಗ್ನಿ ಪ್ರವೇಶಿಸಿದಳೆಂದು ತಿಳಿದುಬರುತ್ತದೆ[೧೫೫]. ಅಲ್ಲದೇ ವಿಧವೆಯಾದವಳು ಗಂಡನ ಮರಣಾನಂತರವೂ ಜೀವಿಸಿದ್ದು, ಅನೇಕ ಸಾಮಾಜಿಕ ಕಾರ್ಯಗಳಲ್ಲಿ ಭಾಗವಹಿಸಿದ ವಿವರಗಳು ದೊರೆಯುತ್ತವೆ. ಮಹಾಮಂಡಳೇಶ್ವರ ನೊಳಂಬ ಎರಡನೆಯ ಪೊಳಲ್ಚೊರನ

ಮಡದಿ ಕದಂಬ ವಂಶೋದ್ಭವೆ ದೀವಳಬ್ಬರಸಿ ಅವನ ಮರಣಾನಂತರ ಪೊಳಲ್ಪೊರ ಮಂಗಲ ಎಂಬ ಅಗ್ರಹಾರವನ್ನು ಮತ್ತು ಮಗ ಮಹೇಂದ್ರನ ಹೆಸರಿನಿಂದ ಒಂದು ಕೊಳ ಹಾಗೂ ವಿಷ್ಣುಗ್ರಹವೊಂದನ್ನು ನಿರ್ಮಿಸಿ ದಾನನೀಡಿರುವಳು[೧೫೬].

## ಸ್ತ್ರೀಯರ ಸ್ಥಾನಮಾನ:

ವೇದಗಳ ಕಾಲದಿಂದ ಸ್ಮೃತಿಗಳ ಕಾಲಕ್ಕೆ ಬರುವವೇಳೆಗಾಗಲೇ ಸಮಾಜದಲ್ಲಿ ಸ್ತ್ರೀಯರಿಗಿದ್ದ ಗೌರವಗಳು ಕಡಿಮೆಯಾಗತೊಡಗಿದವು. ಆದರೆ ಪ್ರಾಚೀನ ಹಾಗೂ ಮಧ್ಯಕಾಲೀನ ಸಮಾಜದಲ್ಲಿ ಸ್ತ್ರೀಯರಿಗಿರುವ ಸ್ಥಾನಮಾನಗಳ ಕುರಿತು ಶಾಸನಗಳಲ್ಲಿ ಉಲ್ಲೇಖಗಳು ದೊರೆಯುತ್ತವೆ. ಕುಲವನ್ನು ಬೆಳಗುವ ಕುಲಾಂಗನೆಯಾದ ಅವಳು ಪುರುಷರ ಹಾಗೆ ರಾಜಕೀಯ, ಧಾರ್ಮಿಕ ಹಾಗೂ ದೇವಾಲಯ, ಕೆರೆ, ಕಟ್ಟಡಗಳನ್ನು ನಿರ್ಮಿಸುವ, ದಾನಗೈಯುವ, ಸನ್ಯಸ ಸ್ವೀಕರಿಸಿ ಮಡಿಯುವಂತಹ ಸಾಮಾಜಿಕ ಚಟುವಟಿಕೆಗಳಲ್ಲಿ ಆಸಕ್ತಿಯಿಂದ ಭಾಗವಹಿಸುತ್ತಿದ್ದಳು. ಹೀಗಾಗಿ ಆಡಳಿತ, ಧಾರ್ಮಿಕ, ಸಾಮಾಜಿಕ ಚಟುವಟಿಕೆಗಳಲ್ಲಿ ಪುರುಷರೊಂದಿಗೆ ಸ್ತ್ರೀಯು ಕೂಡ ಸಮಾನವಾಗಿ ನಿಂತಿರುವದು ತಿಳಿಯುತ್ತದೆ.

ಗಂಗ ಭೂತುಗನ ಮಡದಿಯಾದ ರೇವಕನಿರ್ಮಡಿಯು ಎಡದೊರೆನಾಡನ್ನು ಆಳುತ್ತಿದ್ದಳೆಂದು ಕೇಸರಭಾವಿ ಶಾಸನ ಹೇಳಿದೆ[೧೫೭]. ಗಂಗ ಎರಡನೆಯ ಭೂತುಗನ ಮಡದಿಯಾದ ಸರಮಬ್ಬೆಯು ಕುರ್ಗಲ್ ಗ್ರಾಮವನ್ನು ಆಳುತ್ತಿದ್ದಳು[೧೫೮]. ಗಂಗ ಎರಡನೆಯ ನೀತಿಮಾರ್ಗನ ರಾಣಿ ಭೂತುಗನ ತಾಯಿ ಬುಜಬ್ಬರಸಿಯು ಪುಲಿಗೆರೆನಾಡಿನಲ್ಲಿರುವ ೭೦ ವಿಭಾಗದ ಗ್ರಾಮವಾದ ಹೆಬ್ಬಾಳವನ್ನು ಆಳುತ್ತಿದ್ದಳು[೧೫೯]. ನೊಳಂಬ ಮಹೇಂದ್ರರಾಜನ ಮಡದಿ ರಂಜಬ್ಬೆ ಮತ್ತು ಬಿಜಅಮಾದೇವಿಯರು ಬರಗೂರನ್ನು ಆಳುತ್ತಿದ್ದರು[೧೬೦]. ಸಾಂತಾರ ನಾಗಾರ್ಜುನ ಮರಣ ಹೊಂದಲು ಆತನ ಮಡದಿ ಗಾವುಂಡಿ ಜಕ್ಕೆಯಬ್ಬೆ ನಾಳ್ಗಾವುಂಡಿಯಾಗಿ ಆಡಳಿತ ನಿರ್ವಹಿಸುತ್ತಿದ್ದಳು[೧೬೧]. ಮಹಾಮಂಡಳೇಶ್ವರ ಕದಂಬ ಮಯೂರವರ್ಮನ ರಾಣಿ ಅಕ್ಕಾದೇವಿ ಬನವಾಸಿ-೧೨೦೦೦ನ್ನು ಆಳುತ್ತಿದ್ದಳು[೧೬೨].

ಸಾಮಾನ್ಯ ಮಹಿಳೆ ಕೂಡ ಅಂದಿನ ಆಡಳಿತದಲ್ಲಿ ಭಾಗವಹಿಸಿದ್ದ ವಿವರಗಳೂ ದೊರೆಯುತ್ತವೆ. ರಟ್ಟವಂಶದ ಮಹಾಸಾಮಂತ ಕಲಿವಿಟ್ಟರಸನು ಬನವಾಸಿ-೧೨೦೦೦ವನ್ನಾಳುತ್ತಿದ್ದಾಗ, ಅವನ ಕೈಕೆಳಗೆ ನಾಗರಖಂಡ-೭೦ರ ನಾಳ್ಗಾವುಂಡನಾಗಿ ಆಳುತ್ತಿದ್ದ ನಾಗಾರ್ಜುನನು ಯುದ್ಧವೊಂದರಲ್ಲಿ ಮಡಿಯಲು ಜಕ್ಕಿಯಬ್ಬೆಯನ್ನು ನಾಳ್ಗಾವುಂಡಿಯಾಗಿ ಮುಂದುವರೆದಳು[೧೬೩]. ಕೋಲಾರದ ವಿಭು ಮಾದಿರಾಜನ ಮಗಳು ಬಿಜ್ಜಯವ್ವೆ ತಂದೆ ವೀರಸ್ವರ್ಗವೇರಲು ಕೋಲಾರದ ಪ್ರಭುತ್ವ ನಿರ್ವಹಿಸಿದಳಲ್ಲದೇ ಗಂಡನಾದ ಮಲ್ಲಿಕಾರ್ಜುನನೊಂದಿಗೆ ಗೌಡಿಕೆಯನ್ನು ನಡೆಸಿದ ವಿಷಯ ಸವದತ್ತಿ ಶಾಸನದಲ್ಲಿ ಬರುತ್ತದೆ[೧೬೪]. ಅರಸಿಕೆರೆಯ ಮಹಾಪ್ರಭು ಕಲಿಯಮಗೌಡನ ಮಗಳು ಕಣಕಪಿರಿಯಾಡ ಪೆರ್ಗಡೆಯ ಮನೋವಲ್ಲಭೆ ಬಾಚಲದೇವಿ ಅರಸಿಕೆರೆಯ ಗೌಡಿಕೆಯನ್ನು ನಿರ್ವಹಿಸುತ್ತಿದ್ದಳೆಂದು ತಿಳಿದುಬರುತ್ತದೆ[೧೬೫].

ಆಡಳಿತದಲ್ಲಿ ಭಾಗಿಯಾಗುವದರ ಜೊತೆಗೆ ಸಾಮಾಜಿಕ ಕಾರ್ಯಗಳಲ್ಲಿಯೂ ಮಹಿಳೆಯರು ಭಾಗವಹಿಸಿದ್ದು ಕಂಡುಬರುತ್ತದೆ. ಅವರೂ ಸಹ ದೇವಾಲಯ ನಿರ್ಮಾಣ ಹಾಗೂ ದತ್ತಿದಾನಗಳನ್ನು ಕೈಕೊಳ್ಳುವದರಲ್ಲಿ ಹಿಂದೆ ಬಿದ್ದಿರಲಿಲ್ಲ. ಸಾಮಂತ ಎರೆಯಮ್ಮನ ಮಡದಿ ಅಪೋಲಬ್ಬೆ ಮತ್ತು ಅವರೆಮರಸನ ಮಡದಿ ಲೋಕಬ್ಬೆಯರು ಕ್ರಮವಾಗಿ ಆರು ಮತ್ತರ ಮತ್ತು ನಾಲ್ಕು ಮತ್ತರ ಭೂಮಿಯನ್ನು ಸಿರಗುಂಬಿಯ ಬಲದೇವ ದೇವರಿಗೆ ನೀಡಿದರೆಂದು ತಿಳಿದುಬರುತ್ತದೆ[೧೬೬]. ನಾಗರಖಂಡ-೭೦ರ ಆಳ್ವಿಕೆ ನಡೆಸುತ್ತಿದ್ದ ಜಕ್ಕಿಯಬ್ಬೆ ಬಂದಳಿಕೆಯ ಮಹಾಜನರಿಗೆ ನಾಲ್ಕು ಮತ್ತರ ಭೂಮಿಯನ್ನು ದಾನ ನೀಡಿದಳೆಂದು ತಿಳಿದುಬರುತ್ತದೆ[೧೬೭] ಮಹಾಮಂಡಳೇಶ್ವರ ಪಲ್ಲವನೊಳಂಬ ಪೆರ್ಮಾಡಿಯ ಮಡದಿ ಗವಣಗಬ್ಬೆ ಮದರಕಲ್ಲ ರಾಜ್ಯಾಡಳಿತದಲ್ಲಿ ವಿಷ್ಣುಪಾದ ಮಾಡಿಸಿದ ಶಿವಾಲಯಕ್ಕೆ ೧೪ ಮತ್ತರ ಭೂಮಿ ಬಿಟ್ಟುಕೊಟ್ಟಳು[೧೬೮]. ವೀರನೊಳಂಬ ಪಲ್ಲವ ಪೆರ್ಮಾಡಿದೇವನ ಮಹಾದೇವಿ ರೇವಲದೇವಿ ಕಾಳಪ್ರಿಯದೇವರಿಗೆ ಆರು ಮತ್ತರು ಹಾಗೂ ಎರಡು ವಿಷ್ಣುದೇವಾಲಯಗಳಿಗೆ ೧೨ ಮತ್ತರು ಭೂಮಿ ನೀಡಿರುವದು ತಿಳಿದುಬರುತ್ತದೆ[೧೬೯]. ಕದಂಬವಂಶದ ಮಹಾಮಂಡಳೇಶ್ವರ ರಾಜಾದಿತ್ಯ ಬನವಾಸಿಯನ್ನು ಆಳುವಾಗ ಅವರೆವರಸನ ಮಡದಿ ಲೋಕಬ್ಬೆ ರಾಜಮಾನದಲ್ಲಿ ನಾಲ್ಕು ಮತ್ತರು ಭೂಮಿಯನ್ನು ತಿರಿಗೆಮ್ಮ ಮತ್ತು ತಳಗೆರೆ ಎಂಬ ಗ್ರಾಮಗಳನ್ನು ಬೆಳ್ದಿವರಿಗೆ ಬಿಟ್ಟುಕೊಟ್ಟಿರುವರು[೧೭೦]. ಕದಂಬ ಮಹಾಮಂಡಳೇಶ್ವರ ಜಯಕೇಶಿಯ ಮಡದಿ ಮೈಳಲದೇವಿ ಗೂಗೀಕಟ್ಟಿಯಲ್ಲಿ ಕೇಶವದೇವರ ಪ್ರತಿಷ್ಟೆಮಾಡಿಸಿರುವಳು[೧೭೦]. ಅಲ್ಲದೇ ಅಗ್ರಹಾರ ಮುತ್ತಿಗೆಯ ಬಾಚರಸ ಮತ್ತು ಅವನತ್ತಿಗೆ ಕೋಮಲದೇವಿಯರು ೨೦ ಮತ್ತರು ಭೂಮಿಯನ್ನು ಪ್ರಸನ್ನಕೇಶವ ದೇವರ ವ್ಯಾಖ್ಯಾನಕ್ಕೆ ಬಿಟ್ಟುಕೊಟ್ಟಿರುವರು[೧೭೨]. ಮಹಾಪಸಾಯ್ತ ಗೋಪಾಳದೇವಣ್ಣನ ಮಡದಿ ಮಾಯ್ದೇವಿಯಕ್ಕ ಬೇಲೂರಿನ ಕೇಶವನಾಥದೇವರಿಗೆ ಮೂರು ವನಮಾಲೆಗಳನ್ನು ನಡೆಸುವಂತಾಗಿ ವೈಷ್ಣವ ಮಹಾಜನರ ಕೈಯಲ್ಲಿ ಮೂರು ಗದ್ಯಾಣಗಳನ್ನು ನೀಡಿದ ಉಲ್ಲೇಖ ಬೇಲೂರಿನ ಶಾಸನವೊಂದರಲ್ಲಿದೆ[೧೭೩].

## ವೇಶ್ಯೆ(ಸೂಳೆ)ಯರು :

ವಿವಾಹ ವ್ಯವಸ್ಥೆ ಉದಯವಾದಂದಿನಿಂದ ಅಸ್ತಿತ್ವಕ್ಕೆ ಬಂದ ಗ್ರಹಿಣಿ ಸಮಾಯದ ಜೊತೆಯಲ್ಲಿಯೇ ಈ ಸೂಳೆಸಮಾಜವೂ ಬೆಳೆದುಬಂದಿದೆ. ಋಗ್ವೇದದಲ್ಲಿ ಗಣಿಕೆಯರು ಎಂದು ಉಲ್ಲೇಖಿತಗೊಂಡ ವೇಶ್ಯಾಧರ್ಮವನ್ನು ಕುರಿತು ಗೌತಮ, ಮನು, ನಾರದ, ಮತ್ಸ್ಯಪುರಾಣ ಮುಂತಾದ ಪ್ರಾಚೀನ ಕೃತಿಕಾರರು ಪ್ರಸ್ತಾಪಿಸಿರುವದರಿಂದ ಅದರ ಕಾಲಮಾನ ಹಾಗೂ ವ್ಯಾಪ್ತಿಯನ್ನು ಅರಿಯಬಹುದಾಗಿದೆ. ದೇವಾಲಯಗಳ ಅಂಗ ಹಾಗೂ ರಂಗಭೋಗಗಳಿಗಾಗಿ ದೇವಾಲಯ ಸೇವೆಗೆ ನಿಂತ ಸ್ತ್ರೀಯರನ್ನು ಶಾಸನಗಳು ಸೂಳೆಯರೆಂದೇ ಹೆಸರಿಸಿವೆ. ಶಾಸನಗಳಲ್ಲಿ ಸಿಗುವ ಸೂಳೆಯರ ಉಲ್ಲೇಖಗಳಿಂದ ವ್ಯಕ್ತಿಯೊಬ್ಬನೊಂದಿಗೆ ಇರುವ, ದೇವರ ಹೆಸರಿನಲ್ಲಿ ಬಿಟ್ಟ ಮತ್ತು ಹಣಕ್ಕಾಗಿ ದೇಹವನ್ನು ಮಾರಿಕೊಳ್ಳುವಂತವರನ್ನು ವ್ಯಕ್ತಿಸೂಳೆ, ದೇವಸೂಳೆ ಹಾಗೂ ಸಮಾಜಸೂಳೆಯೆಂದು ಚೆನ್ನಕ್ಕಾ ಎಲಿಗಾರರು ವರ್ಗೀಕರಿಸಿದ್ದಾರೆ[೧೭೪].

ವ್ಯಕ್ತಿಸೂಳೆಯು ವಿವಾಹಿತ ಇಲ್ಲವೇ ಅವಿವಾಹಿತ ಪುರುಷರು ಇಟ್ಟುಕೊಂಡ ಸ್ತ್ರೀಯಾಗಿದ್ದಳು. ಇವರನ್ನು ಪರಂಪರಾಗತ ಸೂಳೆಯರು, ಪರಂಪರಾಗತವಲ್ಲದ ಸೂಳೆಯರೆಂದು ವರ್ಗಿಕರಿಸಬಹುದಾಗಿದೆ. ಗಂಡು ಇಟ್ಟುಕೊಂಡ ಹೆಣ್ಣುಗಳ ಸಂಖ್ಯೆಯ ಮೇಲೆ ಸಮಾಜದಲ್ಲಿ ಅವನಿಗೆ ದೊರೆಯುವ ಗಣ್ಯತೆಯು ಇದನ್ನು ಪೋಷಿಸಿರಬಹುದು. ಸೂಳೆಯರು ವ್ಯಕ್ತಿಯೊಬ್ಬನನ್ನು ನಂಬಿ ಬದುಕಿಕೊಂಡು ಬಂದ ಸ್ತ್ರೀಯರು ಇವರಲ್ಲಿ ಕೆಳವರ್ಗದ ಸ್ತ್ರೀಯರೇ ಹೆಚ್ಚು. ಗೆದ್ದುತಂದ ವಿವಾಹಿತ ಅಥವಾ ಅವಿವಾಹಿತ ಮತ್ತು ವಿಧವಾ ಸ್ತ್ರೀಯರನ್ನು ಸೂಳೆಯರನ್ನಾಗಿಟ್ಟುಕೊಂಡ ಉಲ್ಲೇಖಗಳು ದೊರೆಯುತ್ತವೆ. ರಟ್ಟವಂಶದ ಪಿತ್ತುಗನು ಶಾಂತಿವರ್ಮ ಅರಸನಿಗೆ "ಮಾರಂತರನೇಕರಂ ತವಿಸಿ ವಸ್ತುಗಳಂ ಮದವಾರಣಂಗಳಂ ಕಾನ್ತೆಯರಂ ತುರಂಗಚಯಮಂ ಪಿಡಿದಿತ್ತು" ಅವನಿಂದ ದಂತಿಯನ್ನು ಕಾಣಿಕೆಯಾಗಿ ಗಳಿಸಿದನೆಂದು ಸವದತ್ತಿಯ ಶಾಸನದಲ್ಲಿ ಬರುತ್ತದೆ[೬೫]. ಗಂಗ ನೀತಿಮಾರ್ಗ ಪೆರ್ಮಾನಡಿಗಳ ಸೂಳೆ ಜೋಗಬ್ಬೆಯ ಉಲ್ಲೇಖ ಚಾಮರಾಜನಗರ ತಾಲೂಕಿನ ಹೆಗ್ಗೊಠಾರ ಗ್ರಾಮದ ಶಾಸನದಲ್ಲಿದೆ[೬೬]. ಅಲ್ಲದೇ ಪೃಥುವಿಗಂಗನ ಸೂಳೆ ಬೀರಕ್ಕನನ್ನು ಬೇವಿನಕುಪ್ಪೆ ಗ್ರಾಮದ ಶಾಸನ ಉಲ್ಲೇಖಿಸಿದೆ[೬೭]. ತೊಂಡನೂರಿನ ಬೀಡಿನಲ್ಲಿ ರಾಜಕನೆಂಬವ ಬಿಟ್ಟಿಯನ ಸೂಳೆಯೊಬ್ಬಳನ್ನು ಕೊಂದು ತಾನು ಸುರಲೋಕ ಪಡೆದಂತೆ ತಿಳಿದುಬರುತ್ತದೆ[೬೮].

ಈ ರಾಜವೇಶ್ಯೆಯರು ಭೋಗಕ್ಕೆ ಮಾತ್ರ ಸೀಮಿತರಾಗಿರದೆ, ಧಾರ್ಮಿಕ ಹಾಗೂ ಸಾಮಾಜಿಕ ಕ್ಷೇತ್ರದಲ್ಲಿ ದೇವಾಲಯ ನಿರ್ಮಾಣ, ಜೀರ್ಣೋದ್ಧಾರ, ಆರಾಧನೆಯಂತಹ ಕಾರ್ಯಗಳಲ್ಲಿ ಭಾಗವಹಿಸಿರುವದು ತಿಳಿಯುತ್ತದೆ. ಅಯ್ಯಣಯ್ಯನ ವಾರವಧು, ವಿಜಯಬ್ಬೆ ದೇವಸ್ಥಾನವೊಂದಕ್ಕೆ ಸ್ತಂಭದಾನ ಮಾಡಿರುವದು ವಿಜಾಪೂರದ ಶಾಸನವೊಂದರಲ್ಲಿದೆ[೬೯].

ವ್ಯಕ್ತಿಯ ಭೋಗವಸ್ತು ವ್ಯಕ್ತಿಸೂಳೆಯಾದರೆ, ದೇವರ ಭೋಗಕ್ಕೆ ಒಪ್ಪಿಸಲ್ಪಟ್ಟವಳು ದೇವಸೂಳೆ. ಇವಳು ಅಜನ್ಮಪರ್ಯಂತ ದೇವರ ಸೇವೆಗೈಯ್ಯುತ್ತ ಬಾಳಬೇಕಿತ್ತು. ದೇವಾಲಯಕ್ಕೆ ಸೂಳೆಯರನ್ನು ಬಿಡುವ ಪದ್ಧತಿ ಯಾವಾಗ ಪ್ರಾರಂಭವಾಯಿತೆನ್ನುವದು ಖಚಿತವಾಗಿ ತಿಳಿಯುವದಿಲ್ಲ. ಈಗ ತಿಳಿದಿರುವಂತೆ ಬಾದಾಮಿ ಚಾಲುಕ್ಯ ವಿಕ್ರಮಾದಿತ್ಯನ ಮಡದಿ ಲೋಕಮಹಾದೇವಿ ಕಟ್ಟಿಸಿದ ಲೋಕೇಶ್ವರ ದೇವಾಲಯದ ಸೂಳೆಯರಾದ ಗೋವಿಂದಪೊಡ್ಡಿ, ಬಾದಿ(ಲಿ)ಪೊಡ್ಡಿಯರೇ ಪ್ರಾಚೀನರು[೭೦]. ಕದಂಬೇಶ್ವರ ದೇಗುಲದಲ್ಲಿ ನಾಲ್ಕುಜನ ಕಂಬದ ಸೂಳೆಯರಿದ್ದರೆಂದು, ಅವರಿಗೆ ೨೦ ಮತ್ತರು ಭೂಮಿಯನ್ನು ಕೊಟ್ಟಿರುವದು ತಿಳಿದುಬರುತ್ತದೆ[೭೧].

ದೇವಸ್ಥಾನಕ್ಕೆ ಹೊಂದಿಕೊಂಡಂತೆ ಅಲ್ಲಿನ ಕಾರ್ಯಕಲಾಪಗಳಿಗೆ ಅನುಕೂಲವಾಗಲೆಂದು ಅದರ ಸುತ್ತಲೂ ಸೂಳೆಯರಿಗಾಗಿ ವಾಸಸ್ಥಳಗಳನ್ನು ನಿರ್ಮಿಸುತ್ತಿದ್ದರು. ಅದನ್ನು ಸೂಳೆಗೇರಿ ಎಂದು ಕರೆಯಲಾಗಿದೆ. ಅಕ್ಕಾದೇವಿಯ ಪೆರ್ಗಡೆ ನಾಗದೇವಯ್ಯ ನಾಗೇಶ್ವರ ದೇಗುಲವನ್ನು ನಿರ್ಮಿಸಿ, ಅಲ್ಲಿ ಸುಮಾರು ೧೬ ಜನ ಸೂಳೆಯರನ್ನು ನಿಯಮಿಸಿ ದೇವಸ್ಥಾನದ ಎರಡೂ ಪಕ್ಕದಲ್ಲಿಯೂ ಒಂದೊಂದು ಸೂಳೆಗೇರಿಗಳನ್ನು ಮಾಡಿಸಿದನೆಂದು ತಿಳಿಯುತ್ತದೆ[೭೨].



ಸೌದತ್ತಿಯಲ್ಲಿನ ಅಂಕೇಶ್ವರ ದೇವಾಲಯಕ್ಕೆ ಸೇರಿದಂತೆ ಸೂಳೆಗೇರಿಯೊಂದು ಇತ್ತೆಂದು ಅಲ್ಲಿನ ಶಾಸನ ಉಲ್ಲೇಖಿಸಿದೆ[೧೯೩]. ಕ್ರಿ.ಶ. ೧೧೧೭ರ ಕುರುಗೋಡಿನ ಶಾಸನ ಅಲ್ಲಿನ ಸೂಳೆಗೇರಿಯು ಸ್ಮರರಾಜಧಾನಿಯಂತೆ ಕಾಣುತ್ತಿತ್ತೆಂದು ತಿಳಿಸಿದೆ[೧೯೪]. ಈ ಸೂಳೆಯರ ಮೇಲೆಯೂ ತೆರಿಗೆಗಳನ್ನು ಹಾಕುತ್ತಿದ್ದಂತೆ ತಿಳಿಯುತ್ತದೆ. ಅದನ್ನು ಸೂಳೆದೆರೆ, ಸೂಳೆವಣ, ಕನ್ನಡಿದೆರೆ, ಕನ್ನಡಿವಣ ಎಂದು ಕರೆಯಲಾಗುತ್ತಿತ್ತು.

## ತೊತ್ತು:

ವ್ಯಕ್ತಿ ಸೂಳೆಗಾರಿಕೆಯಂತಹ ಇನ್ನೊಂದು ವ್ಯವಸ್ಥೆಯೆಂದರೆ ತೊತ್ತು ಸಂತಾನ. ಈ ಪದ್ಧತಿ ಬೆಳಕಿಗೆ ಬಂದ ಕಾಲದ ಬಗ್ಗೆ ನಿರ್ಧಿಷ್ಟ ಉಲ್ಲೇಖಗಳು ದೊರೆಯುವದಿಲ್ಲ. ಆದರೆ ವೇದಕಾಲದಲ್ಲಿಯೇ ಇದರ ಬಗ್ಗೆ ಸುಳಿವುಸಿಗುತ್ತದೆ. ಯುದ್ಧದಂತಹ ಮಾರಣಹೋಮದ ಕಾಲಕ್ಕೆ ಸೋತವರ, ಸೆರೆಸಿಕ್ಕವರ ಮಡದಿ-ಮಕ್ಕಳನ್ನು ಗೆದ್ದ ದೊರೆಯು ತನ್ನ ಸೊತ್ತೆಂದು ಅವರನ್ನು ಬಳಸಿಕೊಳ್ಳುತ್ತಿದ್ದನು. ಇದಕ್ಕಿಂತಲೂ ಮುಖ್ಯವಾಗಿ ಆರ್ಥಿಕ ತೊಂದರೆಗಾಗಿ ತಮ್ಮ ಮಕ್ಕಳನ್ನು ಶ್ರೀಮಂತರಿಗೆ ಮಾರುವದರ ಮೂಲಕ ತನ್ನನ್ನೇ ತಾನು ಮಾರಿಕೊಳ್ಳುವ ಪದ್ಧತಿ ಇದರ ಮೂಲಕ ಬೆಳಕಿಗೆ ಬಂದಿದೆ. ಈ ತೊತ್ತುಗಳು ಯಾವಾಗಲೂ ಮತ್ತೊಬ್ಬರ ವಶದಲ್ಲಿ ಇರುತ್ತಿದ್ದರು. ಈ ತೊತ್ತುಗಳನ್ನು ದೇವರ ಕಾರ್ಯಕ್ಕಾಗಿ ಬಿಟ್ಟುಕೊಟ್ಟ ಉದಾಹರಣೆಗಳು ಇವೆ. ಬಿಜಾಪೂರದ ಶಾಸನವೊಂದರಲ್ಲಿ ರೆಬ್ಬಕಬ್ಬೆ ಎಂಬುವಳು ತನ್ನ ತೊತ್ತು ಮಾಚಬ್ಬೆಯನ್ನು ಸಕಳೇಶ್ವರ ದೇವರಿಗೆ ಬಿಟ್ಟುಕೊಟ್ಟಂತೆ ತಿಳಿದುಬರುತ್ತದೆ[೧೯೫]. ಪ್ರಾಚೀನ ಕಾಲದಲ್ಲಿ ಹೆಣ್ಣಿಗೆ ಸಲ್ಲುವ ಮರ್ಯಾದೆಯನ್ನು ವ್ಯಕ್ತಪಡಿಸುತ್ತ ಶಾಸನವೊಂದು "ಪೂರ್ವದಲಿ ಹೆಂಣಿಗೆ ಸಲ್ಲುವ ಸ್ವಾಸ್ತ ಮರಿಯಾದೆ ಕೊಟ್ಟ ಕ್ರಯ ಹೆಣ್ಣಿಂಗೆ ಹೆಣ್ಣುಮಕ್ಕಳಿಗೆ ತೊತ್ತಿನ ಮಕ್ಕಳಿಗೆ ಸಲುವುದು" ಎಂದು ಹೇಳುತ್ತದೆ[೧೯೬]. ಅಲ್ಲದೇ ಬೌರಿಂಗಪೇಟೆಯ ಶಾಸನವೊಂದು ಸಂತೆಯಲ್ಲಿ ತೊತ್ತುಗಳನ್ನು ಮಾರುತ್ತಿದ್ದ ವಿಷಯ ಉಲ್ಲೇಖಿಸಿದೆ[೧೯೭]. ಬಸವಣ್ಣನವರು ತಮ್ಮ ಒಂದು ವಚನದಲ್ಲಿ ತೊತ್ತುಗಳ ಕುರಿತು ಆನು ನಿಮ್ಮ ಶರಣರಿಗೆ ಮಂಡೆಯ ಬೋಳಿಸಿಕೊಂಡು ಗಂಡುತೊತ್ತಾದೆನಯ್ಯ ಎಂದಿದ್ದಾರೆ[೧೯೮]. ತೊತ್ತುಗಳ ಮೇಲೆ ತೆರಿಗೆಯನ್ನು ಆಕರಿಸುತ್ತಿದ್ದಂತೆ ತೋರುತ್ತದೆ. ಹುಣಸೂರಿನ ಶಾಸನವೊಂದು ತೊತ್ತುದೆರೆಯ ಉಲ್ಲೇಖವನ್ನು ಮಾಡುತ್ತದೆ[೧೯೯].

## ಸಂಪ್ರದಾಯ, ನಂಬಿಕೆ ಮತ್ತು ಆಚರಣೆಗಳು :

ಸಂಪ್ರದಾಯಗಳು ನಿತ್ಯವ್ಯವಹಾರದ ಪದ್ಧತಿ ಹಾಗೂ ಅವುಗಳ ಹಿನ್ನೆಲೆಯಲ್ಲಿರುವ ಕಲ್ಪನೆಗಳೂ, ಉದ್ದೇಶಗಳೂ ಬೆರೆತು ರೂಪುಗೊಂಡವು. ನಂಬುಗೆಗಳು ಮಾನವನ ಮನಸ್ಸಿನ ಪ್ರಕ್ರಿಯೆಗಳಾಗಿವೆ. ಹೀಗಾಗಿ ಮಾನವನ ಜೀವನವು ಬಹುತೇಕ ಸಂಪ್ರದಾಯ ಹಾಗೂ ನಂಬಿಕೆಗಳ ಮೇಲೆಯೇ ನಿಂತಿದೆ ಎನ್ನಬಹುದು. ಆಯಾ ಪ್ರದೇಶ-ಸಮಯಕ್ಕನುಗುಣವಾಗಿ ಸಮಾಜ ಕೆಲವೊಂದು ಸಂಪ್ರದಾಯ ಹಾಗೂ ನಂಬಿಕೆಗಳನ್ನು ರೂಢಿಸಿಕೊಂಡು ಮುಂದುವರಿಸಿಕೊಂಡು ಬಂದಿದೆ. ಇದಕ್ಕೆ ಪ್ರಮುಖ ಕಾರಣ ಧಾರ್ಮಿಕ ಪದ್ಧತಿಯಾಗಿದೆ. ಅದರ ಹಿನ್ನೆಲೆಯಲ್ಲಿ ದತ್ತಿ-ದಾನ, ಪಾಪ ಪುಣ್ಯ, ಹಬ್ಬ ಹರಿದಿನ, ಮುಂತಾದ ಕಲ್ಪನೆಗಳು ಬೆಳೆದು ಬಂದವು.

**ದತ್ತಿ-ದಾನ :**

ತನ್ನ ಶ್ರೇಯಸ್ಸಿಗಾಗಿ ಹಾಗೂ ಪುಣ್ಯಾರ್ಜನೆಗಾಗಿ ದಾನಬಿಡುವ ಪದ್ಧತಿ ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕದ ಜನಜೀವನದ ಒಂದು ಮೌಲ್ಯವಾಗಿತ್ತು. ಹಿಂದಿನವರು ರೂಢಿಸಿಕೊಂಡು ಬಂದ ಯಜ್ಞಯಾಗಾದಿಗಳ ಪ್ರಾಬಲ್ಯ ಕಡಿಮೆಯಾದಾಗ, ಅವುಗಳಿಂದ ದೊರೆಯಬಹುದೆಂದು ಭಾವಿಸಿದ್ದ ಪುಣ್ಯವನ್ನು ದಾನವ್ರತಗಳಿಂದ ಹೊಂದಬಹುದೆಂದು ಅಂದಿನವರು ಭಾವಿಸಿದ್ದರು. ಹೀಗಾಗಿ ದಾನಗಳು ಯಜ್ಞಯಾಗಾದಿಗಳ ಸ್ಥಾನವನ್ನು ತುಂಬಲು ಬಂದವುಗಳೆಂದು ಬೇಕಾದರೂ ಹೇಳಬಹುದು[೯೦]. ಮನುಸ್ಮೃತಿಯಲ್ಲಿ ಇದನ್ನು ಸಮರ್ಥಿಸುವಂತೆ ಕೃತಯುಗದಲ್ಲಿ ತಪಸ್ಸು, ತ್ರೇತಾಯಗದಲ್ಲಿ ಜ್ಞಾನವೂ, ದ್ವಾಪರದಲ್ಲಿ ಯಜ್ಞವೂ ಹಾಗೂ ಕಲಿಯುಗದಲ್ಲಿ ದಾನವೂ ಶ್ರೇಷ್ಠವಾದ್ದು ಎಂದು ಉಲ್ಲೇಖಿಸಿದೆ[೯೧].ಮತ್ಸ್ಯಪುರಾಣ, ಹೇಮಾದ್ರಿಯ ವ್ರತಖಂಡ, ಬಲ್ಲಾಳಸೇನನ ದಾನಸಾಗರ ಮುಂತಾದ ಕೃತಿಗಳಲ್ಲಿ ವಿಸ್ತಾರವಾಗಿ ಹದಿನಾರು ಮಹಾದಾನಗಳನ್ನು ಉಲ್ಲೇಖಿಸಲಾಗಿದೆ[೯೨]. ಅವು ಹೀಗಿವೆ-

೧)ತುಲಾಪುರುಷ, ೨)ಹಿರಣ್ಯಗರ್ಭ, ೩)ಬ್ರಹ್ಮಾಂಡ, ೪)ಕಲ್ಪಪಾದಪ, ೫)ಗೋಸಹಸ್ರ, ೬)ಹಿರಣ್ಯಕಾಮಧೇನು, ೭)ಹಿರಣ್ಯಾಶ್ವ, ೮)ಪಂಚಲಾಂಗಲ, ೯)ಧರಾ, ೧೦)ಹಿರಣ್ಯಶ್ವರಥ, ೧೧)ಹೇಮಹಸ್ತಿರಥ, ೧೨)ವಿಷ್ಣುಚಕ್ರ, ೧೩)ಕಲ್ಪಲತಾ, ೧೪)ಸಪ್ತಸಾಗರ, ೧೫)ರತ್ನಧೇನು ಹಾಗೂ ೧೬)ಮಹಾಭೂತಘಟ.

ಸಾಮಾನ್ಯವಾಗಿ ಅರಸರುಗಳು, ಸಾಮಂತರು, ವಿವಿಧ ಅಧಿಕಾರಿಗಳು, ಪುರೋಹಿತವರ್ಗದವರು ಮತ್ತು ಇತರರು ಈ ಕಾರಣಗಳಿಗಾಗಿ ದಾನಬಿಟ್ಟ ಉಲ್ಲೇಖಗಳು ಕರ್ನಾಟಕದಾದ್ಯಂತ ಅನೇಕ ಶಾಸನಗಳಲ್ಲಿ ದೊರೆಯುತ್ತವೆ. ಪ್ರಭುವರ್ಗದವರು ಹೆಚ್ಚಾಗಿ ಪುತ್ರೋತ್ಸವ, ಪಟ್ಟಾಭಿಷೇಕ, ಶ್ರಾದ್ಧ ಮುಂತಾದ ಸಂದರ್ಭಗಳಲ್ಲಿ ದಾನ-ದತ್ತಿಗಳನ್ನು ಬಿಡುತ್ತಿದ್ದುದು ತಿಳಿಯುತ್ತದೆ. ಶಾಸನವೊಂದು ಕೊಂಗಾಳ್ವ ಮುಂಜನ ಪಟ್ಟಾಭಿಷೇಕವನ್ನು ತಿಳಿಸುತ್ತಾ, ಪಟ್ಟಾಭಿಷೇಕದ ಸಮಯದಲ್ಲಿ ಮಾಲವ್ವಿ ಎಂಬ ಗ್ರಾಮವನ್ನು ನಾಡಕೊಡುಗೆಯೆಂದು ಬಿಟ್ಟದ್ದನ್ನು ಉಲ್ಲೇಖಿಸಿದೆ[೯೩]. ಮಹಾಮಂಡಳೇಶ್ವರ ಶಾಂತಾರ ತೈಲಪದೇವ ಭುಜಬಲಶಾಂತಾರನು ಪಟ್ಟವನ್ನು ಕಟ್ಟಿಸಿಕೊಂಡು, ಹೊಂಬುಚದ ತೀರ್ಥದ ಬಸದಿಗೆ ದತ್ತಿಯನ್ನು ಬಿಟ್ಟ ವಿಷಯ ಹುಂಚದ ಶಾಸನದಲ್ಲಿದೆ[೯೪]. ಅಲ್ಲದೇ ದಾನಗಳನ್ನು ಹಬ್ಬ-ಹರಿದಿನ, ಸೂರ್ಯ ಅಥವಾ ಚಂದ್ರಗ್ರಹಣ, ಸಂಕ್ರಾಂತಿಯದಿನಗಳಂದು ಬಿಡುವದು ಹೆಚ್ಚು ಪ್ರಶಸ್ತವೆನ್ನುವ ನಂಬಿಕೆಯಿತ್ತು. ಅನೇಕ ದಾನಗಳನ್ನು ಇಂತಹ ದಿನಗಳಲ್ಲಿಯೇ ಬಿಟ್ಟುದುದು ಇದನ್ನು ಸಮರ್ಥಿಸುತ್ತದೆ. ಅಲ್ಲದೇ ದಾನಗಳನ್ನು ಸಾಮಾನ್ಯವಾಗಿ ದೇವಾಲಯಗಳ ಪರಿಸರದಲ್ಲಿಯೇ ಬಿಡಲಾಗುತ್ತಿತ್ತು. ಕ್ರಿ.ಶ. ೮ನೆಯ ಶತಮಾನದ ಗಂಗರ ಶ್ರೀಪುರುಷನ ಕಾಲದ ದೇವರಹಳ್ಳಿ ಶಾಸನ[೯೫]ದಲ್ಲಿ "ಜಿನಭವನಾಯ ಖಂಡಸ್ಫುಟಿತನವಸಂಸ್ಕಾರ ದೇವಪೂಜಾ ದಾನಧರ್ಮ್ಮ ಪ್ರವರ್ತ್ತನಾರ್ತ್ಥಂ" ದತ್ತಿಯನ್ನು ಬಿಟ್ಟದ್ದನ್ನು ನೋಡಿದಾಗ ದೇವಾಲಯದಲ್ಲಿಯೆ ದಾನಧರ್ಮಗಳು ನಡೆಯುತ್ತಿದ್ದುದು ತಿಳಿದುಬರುತ್ತದೆ. ಅಲ್ಲದೇ ಕುರುಗೋಡಿನ ಶಾಸನವೊಂದು ದೇವಾಲಯದಲ್ಲಿ ಧರ್ಮಕಾರ್ಯ ಮಾಡುವದನ್ನು ಸೂಚಿಸುತ್ತದೆ[೯೬].

## ಪಾಪ-ಪುಣ್ಯ:

ಸಮಾಜದ ಸ್ವಾಸ್ಥ್ಯವನ್ನು ಕಾಪಾಡಿಕೊಳ್ಳಲು ಪಾಪ-ಪುಣ್ಯ, ಸ್ವರ್ಗ-ನರಕಗಳ ಕಲ್ಪನೆ ಹುಟ್ಟಿಕೊಂಡು, ಅದು ಮುಂದೆ ಒಂದು ನಂಬಿಕೆಯಾಗಿ ಬೆಳೆದುಬಂದಿತು. ತಾನು ಮಾಡಿದ ಕರ್ಮಕ್ಕೆ ಅನುಗುಣವಾಗಿ ಪಾಪ-ಪುಣ್ಯ ಬರುವದೆಂಬ ನಂಬಿಕೆ ಅಂದು ಬಳಕೆಯಲ್ಲಿತ್ತು. ತಮ್ಮ ತಂದೆ-ತಾಯಿಗಳಿಗೆ ಇಲ್ಲವೇ ಮಕ್ಕಳಿಗೆ ಪುಣ್ಯಲಭಿಸಲೆಂದು ಅಂದಿನವರು ದೇವರುಗಳಿಗೆ ದಾನಬಿಡುವದರ ಮುಖಾಂತರ ಅದನ್ನು ಪಡೆಯಬಹುದೆಂದು ನಂಬಿದ್ದರು. ಚೆಲ್ಲಕೇತನ ಮನೆತನದ ಬಂಕೆಯನ ಮಗ ಕುಂದಟ್ಟೆಯು ತನ್ನ ತಂದೆಗೆ ಒಳ್ಳೆಯದಾಗಲೆಂದು ನಿಡಗುಂದಿಗೆ-೧೨ರ ಪೆರ್ಗಡೆ ಕುಪ್ಪಣ್ಣ ಕಟ್ಟಿಸಿದ ದೇಗುಲಕ್ಕೆ ೧ ಮತ್ತರು ತೋಟ, ೫ ಮತ್ತರು ಭೂಮಿ ದಾನವಾಗಿ ನಿಡಿದನು[೧೯೭]. ಕದಂಬರ ಪೆರ್ಮಾದೇವ ಮತ್ತು ದಡಿಯಮರಸರು ಪುಣ್ಯವಾಗಲೆಂದು ಕೊಪ್ಪಳದ ಬಸದಿಗೆ ಕಳಸಾರೋಹಣ ಮಾಡಿದರಲ್ಲದೇ ದಾನ ನೀಡಿದರು[೧೯೮]. ಶಾಸನಗಳ ಫಲಶೃತಿಗಳಲ್ಲಿ ಸಾಮಾನ್ಯವಾಗಿ ಪಂಚಮಹಾಪಾತಕಗಳನ್ನು ಹೇಳಲಾಗಿದೆ. ಬಿಟ್ಟಿರುವ ದಾನಗಳನ್ನು ಕಾಪಾಡುವವರಿಗೆ ಶ್ರೇಯಸ್ಸು ಹಾಗೂ ಅವುಗಳನ್ನಪಹರಿಸಿದವರಿಗೆ ಪಾಪಗಳು ಅಂಟುತ್ತವೆಂದು ಶಾಸನಗಳ ಶಾಪಾಶಯದಲ್ಲಿ ಹೇಳಲಾಗಿದೆ. ಇವುಗಳ ಉದ್ದೇಶ ಮುಖ್ಯವಾಗಿ ಕೊಟ್ಟದಾನ ದುರುಪಯೋಗವಾಗದಂತೆ ನೋಡಿಕೊಳ್ಳುವದಾಗಿತ್ತು. ಪಾಪಗಳಿಂದುಂಟಾದ ದೋಷ ನಿವಾರಣೆಗಾಗಿಯೇ ದಾನ, ಧರ್ಮ, ವೃತ ಮುಂತಾದ ಆಚರಣೆಗಳು ಹುಟ್ಟಿಕೊಂಡಿರಬೇಕು.

## ಹಬ್ಬಹರಿದಿನ:

ಸಂಸ್ಕೃತದ ಪರ್ವವು ಕನ್ನಡದಲ್ಲಿ ಅಪಬ್ರಂಶವಾಗಿ ಪಬ್ಬ, ಹಬ್ಬ ಎಂದಾಗಿದೆ. ಶಾಸನಗಳು ಹಬ್ಬಗಳಲ್ಲಿ ಪಂಚಪರ್ವಗಳನ್ನು ಉಲ್ಲೇಖಿಸಿವೆ[೧೯೯]. ಡಾ.ಚಿದಾನಂದಮೂರ್ತಿಯವರು ಅಂದು ದೇವಾಲಯಗಳಲ್ಲಿ ನಡೆಯುತ್ತಿದ್ದ ಎರಡು ಪೂಜಾ ಉತ್ಸವಗಳಾದ ಚೈತ್ರ ಮತ್ತು ಪವಿತ್ರಗಳ ಜೊತೆಗೆ ಮಂತ್ರಪುಷ್ಪ ದವನಾರೋಪಣ ಫಲಪೂಜೆ, ಕಾರ್ತಿಕಾಕೃತಿಕಾ ದೀಪಪೂಜೆ ಮತ್ತು ವಸಂತೋತ್ಸವಗಳು ಸೇರಿ ಐದು ಹಬ್ಬಗಳಾಗುತ್ತವೆ ಎಂದಿದ್ದಾರೆ[೨೦೦]. ಆದರೆ ಡಾ.ಎಸ್.ಕೆ.ಕೊಪ್ಪಾ ಅವರು ಇದನ್ನೊಪ್ಪದೆ ಡಾ.ಬೆಟಗೇರಿ ಕೃಷ್ಣಶರ್ಮರು ಹೇಳುವ ಒಂದು ವರ್ಷದ ಅವಧಿಯಲ್ಲಿ ಬರುವ ಹನ್ನೆರಡು ಹುಣ್ಣಿವೆ, ಅಮವಾಸ್ಯೆ ಮತ್ತು ಸಂಕ್ರಮಣಗಳ ಜೊತೆಗೆ ಪ್ರತಿಪಕ್ಷದಲ್ಲಿಯೂ ಬರುವ ಅಷ್ಟಮಿ, ಚತುರ್ದಶಿ ತಿಥಿಗಳೆರಡನ್ನು ಸೇರಿಸಿ ಪಂಚಪರ್ವಗಳೆಂದು ಕರೆದಿರುವದನ್ನು ಒಪ್ಪಿದ್ದಾರೆ[೨೦೧]. ಅಲ್ಲದೇ ಅವರು ಸಂಕ್ರಮಣ, ವನದುಯ್ಯಪರ್ವ, ದೀಪಾವಳಿ, ನೂಲಪರ್ವ, ಯುಗಾದಿಪರ್ವಗಳು ಪಂಚಪರ್ವಗಳೆಂದು ಗುರುತಿಸಿದ್ದಾರೆ.

ಶಾಸನವೊಂದು ದೀಪಾವಳಿಯನ್ನು ದೀಪೋತ್ಸವಭಂಗವೆಂದು ಕರೆಯುತ್ತಿದ್ದು, ಅದನ್ನು ಪಾರ್ವತಿ ಅಥವಾ ಭಗವತಿಯ ಹೆಸರಿನಲ್ಲಿ ಆಚರಿಸಲಾಗುತ್ತಿತ್ತು[೨೦೨]. ಮತ್ತೊಂದು ಶಾಸನದಲ್ಲಿ ಈ ಹಬ್ಬವನ್ನು ಕಾರ್ತಿಕದ ಅಮವಾಸ್ಯೆ ಎಂದು ಉಲ್ಲೇಖಿಸಿದೆ[೨೦೩]. ಹಾಗೂ ಶಾಸನಗಳಲ್ಲಿ ಮಹಾನವಮಿ[೨೦೪], ಮಾರ್ಗಶೀರದ ಅಮವಾಸ್ಯೆ (ಎಳ್ಳ ಅಮವಾಸ್ಯೆ)[೨೦೫],

ಕಾರ್ತಿಕ ಪೌರ್ಣಮೆ(ಗೌರಿಹುಣ್ಣಿಮೆ)[೨೦೬], ಐಂದ್ರಪರ್ವ[೨೦೭], ಶ್ರಾವಣಶುದ್ಧ(ನಾಗರ ಪಂಚಮಿ)[೨೦೮], ನೂಲಪರ್ವ್ವ[೨೦೯], ಪಾಲ್ಗುಣಶುದ್ಧ(ಹೋಳಿಹುಣ್ಣಿಮೆ)[೨೧೦] ಮುಂತಾದ ಪರ್ವಗಳ ಉಲ್ಲೇಖಬರುತ್ತದೆಯಾದರೂ ಈ ಹಬ್ಬಗಳಿಗೆ ದಾನನೀಡಿದ್ದನ್ನು ಬಿಟ್ಟರೆ ಹೆಚ್ಚಿನ ವಿವರಗಳನ್ನು ಶಾಸನಗಳು ಒದಗಿಸುವದಿಲ್ಲ.

## ಆತ್ಮ ಬಲಿದಾನ:

ಪ್ರಾಚೀನ ಕರ್ನಾಟಕದ ಜನರು ನಂಬಿದ್ದ ಅನೇಕ ಮೌಲ್ಯಗಳಲ್ಲಿ ಪ್ರಮುಖವಾದವುಗಳೆಂದರೆ ಆತ್ಮಬಲಿದಾನ ಮತ್ತು ವೀರಮರಣಗಳಾಗಿವೆ. ಇವೆರಡರ ಅಂತಿಮ ಧ್ಯೇಯವು ಪ್ರಾಣಾರ್ಪಣೆಯಾಗಿದ್ದರೂ ಅದನ್ನನುಸರಿಸುವ ಮಾರ್ಗಗಳು ಬೇರೆ ಬೇರೆಯಾಗಿವೆ. ಇವುಗಳು ಅಸ್ವಾಭಾವಿಕ ಮರಣಗಳಾಗಿದ್ದರೂ ಆತ್ಮಹತ್ಯೆಯಲ್ಲ. ಹೇಡಿಯಾದವನು ಆತ್ಮಹತ್ಯೆಯನ್ನು ಮಾಡಿಕೊಂಡರೆ, ಸತ್ವಶಾಲಿಯಾದವನು ಸ್ವಾಗತಿಸುತ್ತಾನೆ.

## ಧಾರ್ಮಿಕ ಆತ್ಮಬಲಿದಾನ:

ಮಾನವ ಜೀವನದ ಕೊನೆಯಗುರಿ ಮುಕ್ತಿ. ಇದು ಅವನ ಮರಣದ ನಂತರ ದೊರೆಯುವ ಶ್ರೇಷ್ಠಫಲ. ದೇವರನ್ನು ತೃಪ್ತಿಗೊಳಿಸಲು ಧಾರ್ಮಿಕ ಕಾರ್ಯಗಳ ಆಚರಣೆಯಿಂದ ಪಡೆಯಬಹುದಾದ ಸ್ವರ್ಗವನ್ನು ದೇವರ ಪ್ರೀತ್ಯರ್ಥವಾಗಿ ಪ್ರಾಣವನ್ನು ಕೊನೆಗೊಳಿಸಿಕೊಳ್ಳುವದರಿಂದ ಪಡೆಯಬಹುದೆಂಬ ಭಾವನೆ ಅಂದಿನ ಸಮಾಜದಲ್ಲಿ ಬೆಳೆದುಬಂದಿತು.

## ಜಲಪ್ರವೇಶ, ಅಗ್ನಿಪ್ರವೇಶ ಹಾಗೂ ಊರ್ದ್ವಪತನ:

ಪವಿತ್ರಕ್ಷೇತ್ರಗಳಲ್ಲಿ, ಸಂಕ್ರಮಣ, ಗ್ರಹಣದಿನಗಳಂತಹ ಶುಭದಿನಗಳಂದು, ಹಿಂದೂ ಧಾರ್ಮಿಕ ಆತ್ಮಬಲಿದಾನಗಳು ಜಲಪ್ರವೇಶ, ಅಗ್ನಿಪ್ರವೇಶ ಹಾಗೂ ಊರ್ದ್ವಪತನಗಳ ಮುಖಾಂತರ ನಡಯುತ್ತಿದ್ದವು[೨೧೧]. ಜಲಪ್ರವೇಶ ಮತ್ತು ಎತ್ತರಪ್ರದೇಶದಿಂದ ಧುಮುಕುವ ಮರಣದ ಕುರಿತು ಚೀನಾದ ಪ್ರವಾಸಿ ಹುಯೆನ್‌ತ್ಸಾಂಗ ತನ್ನ ಪ್ರವಾಸಿಕಥನದಲ್ಲಿ ವಿವರಿಸಿದ್ದಾನೆ[೨೧೨]. ಚಾಲುಕ್ಯ ಸೋಮೇಶ್ವರನು ಮಹಾಜ್ವರ ಪೀಡಿತನಾಗಿ ತುಂಗಭದ್ರಾ ನದಿಯಲ್ಲಿ ಮುಳುಗಿ ಪ್ರಾಣಬಿಟ್ಟುದು ಜಲಪ್ರವೇಶದ ಉದಾಹರಣೆಯಾಗಿದೆ[೨೧೩]. ಅಗ್ನಿಪ್ರವೇಶದ ಮೂಲಕ ಜಯನಾಗನ್[೨೧೪], ಸಾಹಣಿ ಮಲ್ಲಯ್ಯನ ಮಗ ಚಂಡ[೨೧೫], ಕೋಣವತ್ತಿಯ ಕೇತವ್ವೆಯ ಮಗ ಬೊಪ್ಪ[೨೧೬]ರು ಪ್ರಮುಖರಾಗಿದ್ದಾರೆ. ಇನ್ನು ಎತ್ತರಪ್ರದೇಶಗಳಿಂದ ಬಿದ್ದು ಮರಣಿಸುವ ಪದ್ಧತಿಯ ಉಲ್ಲೇಖ ಶಾಸನವೊಂದರಲ್ಲಿ ನವಲಕ್ಷಿರಾಜನ ಮಡದಿಯೊಬ್ಬಳು ಕಮ್ಮರಿವುಯ್ದು ಮಡಿದಳೆಂದು ತಿಳಿಸುವದರ ಮೂಲಕ ಕಂಡುಬರುತ್ತದೆ[೨೧೭].

## ಸಮಾಧಿಮರಣ:

ಜೈನಧರ್ಮದ ಪ್ರಕಾರ ಜೀವ ಅಥವಾ ಆತ್ಮ ಚೈತನ್ಯವುಳ್ಳದ್ದು, ಶಾಶ್ವತವಾದುದು ಹಾಗೂ ಅನಂತವೂ ಆಗಿದೆ. ಇಂತಹ ಜೀವ ಯಾವುದೋ ಕಾರಣದ ಮೂಲಕ ತನ್ನ ನೆಲೆತಪ್ಪಿ ಅಜೀವದೊಡನೆ ಬೆರೆತು ಒಂದಾಗಿ ಕರ್ಮದ

ಆವರಣಗಳಿಂದ ಮುಚ್ಚಿಕೊಂಡು ಅದರಲ್ಲಿ ಸಿಲುಕಿಕೊಂಡಿರುತ್ತದೆ. ಇಂತಹ ಕರ್ಮವನ್ನು ಕಳಚಿಕೊಳ್ಳದೇ ಅದಕ್ಕೆ ಮೋಕ್ಷವಿಲ್ಲ. ಪ್ರಯತ್ನಪೂರ್ವಕವಾಗಿ ತಪಸ್ಸಿನ ಮಾರ್ಗದಿಂದ ಅದನ್ನು ಕಳಚಿಕೊಳ್ಳಬಹುದಿತ್ತು. ಅದರಲ್ಲಿ ಉಪವಾಸವೂ ಒಂದು ವಿಧ. ಇದಕ್ಕೆ ಬದ್ಧನಾದ ವ್ಯಕ್ತಿ ಜೀವನದುದ್ದಕ್ಕೂ ಪಕ್ಷೋಪವಾಸ ಮತ್ತು ಮಾಸೋಪವಾಸಗಳನ್ನು ನಡೆಸಿ, ಇನ್ನು ತಾನು ಬದುಕುವದಿಲ್ಲವೆಂದು ನಿಶ್ಚಯವಾದೊಡನೆ, ಪ್ರಾಣಹೋಗುವವರೆಗೂ ಕೈಕೊಳ್ಳುವ ಉಪವಾಸ ವ್ರತವೇ ಸಲ್ಲೇಖನವಾಗಿದೆ. ಆಪತ್ತಿನ ಕಾಲದಲ್ಲಿ, ಮುಪ್ಪಿನಿಂದ ಜರ್ಜತನಾಗಿದ್ದರೆ, ಗುಣಪಡಿಸಲಾರದ ವ್ಯಾಧಿಗೊಳಗಾಗಿದ್ದರೆ, ಜೀವನದಾಸೆ ಬತ್ತಿಹೋಗಿದ್ದರೆ, ಅಂತವರು ಸಲ್ಲೇಖನ ವ್ರತವನ್ನು ಕೈಕೊಳ್ಳಬೇಕೆಂದು ರತ್ನಕರಂಡಕ ಹೇಳುತ್ತದೆ[೨೦೮].

ಚೆಲ್ಲಕೇತನ ಸಾಮಂತ ಕಲಿವಿಟ್ಟರಸನ ಆಳ್ವಿಕೆಯಲ್ಲಿ ನಾಗರಖಂಡ-೭೦ರ ನಾಳ್ಗಾವುಂಡಿಕೆ ನಡೆಸುತ್ತಿದ್ದ ಜಕ್ಕಿಯಬ್ಬೆ, ತನ್ನ ನಾಳ್ಗಾವುಂಡಿಕೆಯ ಅಧಿಕಾರವನ್ನು ಮಗಳಿಗೆ ವಹಿಸಿ, ಬಂದಳಿಕೆ ತೀರ್ಥಕ್ಕೆ ಬಂದು ಸಮಾಧಿಮರಣವನ್ನಪ್ಪಿದಳು[೨೦೯]. ಗಂಗ ಶ್ರೀಪುರುಷನ ಆಳ್ವಿಕೆಯಲ್ಲಿ ಮಹಾಪ್ರಭು ಗೋವಪ್ಪಯ್ಯನು ಸಮಾಧಿಮರಣವನ್ನಪ್ಪಿದ್ದು ತಿಳಿದುಬರುತ್ತದೆ[೨೧೦]. ಗಂಗ ಎರಡನೆಯ ಭೂತುಗನ ಕಾಲದಲ್ಲಿ ಮೋನಿಭಟಾರರೆಂಬ ಮುನಿಯು ಸನ್ಯಸನವಿಧಿಯಿಂದ ಮರಣಿಸಿದ್ದು ತಿಳಿದುಬರುತ್ತದೆ[೨೧೧]. ಅಲ್ಲದೇ ಗಂಗರ ದೊರೆ ಎರಡನೆಯ ಮಾರಸಿಂಹನು ಬಂಕಾಪೂರದಲ್ಲಿ ಮೂರು ದಿನಗಳವರೆಗೆ ಅಜಿತಸೇನಭಟ್ಟಾರಕರ ಪಾದಸನ್ನಿಧಿಯಲ್ಲಿ ಆರಾಧನಾ ವಿಧಿಯಿಂದ ಮರಣಹೊಂದಿದ್ದನ್ನು ಶ್ರವಣಬೆಳಗೊಳದ ಶಾಸನವೊಂದು ತಿಳಿಸಿದೆ[೨೧೨]. ಕ್ರಿ.ಶ. ೧೦ನೆಯ ಶತಮಾನದ ಶಾಸನವೊಂದು ಚಾಲುಕ್ಯವಂಶದ ಸಾಮಂತ ದುರ್ಗನ ರಾಣಿ ಪಿಟ್ಟಬ್ಬೆಯು ಈ ವಿಧಿಯಿಂದ ಮರಣಿಸಿದ್ದನ್ನು ಹೇಳುತ್ತದೆ[೨೧೩]. ರಣಮೂರ್ಖವಂಶದ ಧೋರನ ಮಗ ವಿದ್ಯಾಧರನ ಹೆಂಡತಿ ಸಾವಿಯಬ್ಬೆಯೂ ಕೂಡ ಇದೇ ರೀತಿಯಲ್ಲಿ ಮರಣಿಸಿದ್ದ ವಿಷಯ ಶ್ರವಣಬೆಳಗೊಳದ ಬಸದಿಯೊಂದರಲ್ಲಿನ ಶಾಸನದಲ್ಲಿದೆ[೨೧೪]. ಚಾಮುಂಡರಾಜಶ್ರೇಷ್ಠಿಯ ಮನಃಪ್ರಿಯೆ ದೇಮಿಯಕ್ಕ ಸಲ್ಲೇಖನ ವಿಧಿಯಿಂದ ಮರಣಿಸಿದಳು[೨೧೫].

ಹೀಗೆ ಸಲ್ಲೇಖನ, ಆರಾಧನಾ ಮುಂತಾದ ವಿಧಾನಗಳಿಂದ ಸಮಾಧಿಮರಣ ಹೊಂದಿದವರ ಸ್ಮಾರಕವಾಗಿ ನಿಷದಿ ಕಲ್ಲುಗಳನ್ನು ನಿಲ್ಲಿಸಿ ದಾನದರ್ಮಗಳನ್ನು ಕೈಕೊಂಡ ಉದಾಹರಣೆಗಳೂ ಸಾಕಷ್ಟಿವೆ. ಅಲ್ಲದೇ ಆ ನಿಷದಿಗೆಗಳಿಗೆ ಪೂಜೆಸಲ್ಲಿಸಲೂ ಕೂಡ ದಾನದತ್ತಿಗಳನ್ನು ಬಿಡಲಾಗಿದೆ. ಕ್ರಿ.ಶ. ೯೫೪ರಲ್ಲಿ ಮೋನಿಭಟಾರ ಮರಣಿಸಲು ಅವನ ನಿಷದಿಗೆಯನ್ನು ಅಭಯನಂದಿಭಟಾರರ ಶಿಷ್ಯನಾದ ಕಿರಿಯ ಮೋನಿಭಟಾರನು ನಿಲ್ಲಿಸಿದ್ದು ತಿಳಿಯುತ್ತದೆ[೨೧೬]. ಮಹಾಮಂಡಳೇಶ್ವರನಾದ ಗಂಗರಾಜ ತನ್ನ ತಾಯಿ ಪೋಚಕಾಂಬೆಗಾಗಿ, ಸತಿ ಲಕ್ಕವ್ವೆಗಾಗಿ ನಿಷದಿಯನ್ನು ನಿಲ್ಲಿಸಿದ್ದಾನೆ[೨೧೭]. ಚಾಲುಕ್ಯ ವಂಶದ ಸಾಮಂತದುರ್ಗನ ಮಡದಿ ಪಿಟ್ಟಬ್ಬೆಗೆ ಮೈಸೂರು ತಾಲೂಕಿನ ವರಕೋಡುವಿನಲ್ಲಿ ನಿಷಧಿಯನ್ನು ನಿಲ್ಲಿಸಲಾಗಿದೆ[೨೧೮]. ಮಹಾಪ್ರಭು ಗೋಪಯ್ಯನು ಸಮಾಧಿಯೊಳು ಮುಡುಪಿದಾಗ, ಗಂಗ ಶ್ರೀಪುರುಷನು ಕಲ್ನಾಡುಬಿಟ್ಟದ್ದು ತಿಳಿದುಬರುತ್ತದೆ[೨೧೯]. ನೇಮಯ್ಯನೆಂಬುವನು ಹೆದ್ದೆಸೆಯಲ್ಲಿದ್ದು ಮುಡುಪಿದಾಗ ಅವರ ನಿಷಧಿಕಲ್ಲಿಗೆ ಮಾರುಗೋಡು ಭೂಮಿಬಿಟ್ಟ ಉಲ್ಲೇಖವೊಂದಿದೆ[೨೨೦].

**ಲೌಕಿಕ ಆತ್ಮ ಬಲಿದಾನ:**

ಪ್ರಿಯವ್ಯಕ್ತಿಗಳಿಗಾಗಿ ಸಂಬಂಧಿಸಿದಂತೆ ಪತಿಗಾಗಿ ಕೈಕೊಳ್ಳುವ ಸತಿ ಸಹಗಮನ, ಸ್ವಾಮಿಯ ಸಲುವಾಗಿ ಆತನ ಆಳುಗಳು, ವೇಳೆವಾಳಿ, ಲೆಂಕರು, ಗರುಡರು ಕೈಕೊಳ್ಳುವ ಮರಣಗಳು ಲೌಕಿಕ ಆತ್ಮ ಬಲಿದಾನದ ವಿವಿಧ ರೂಪಗಳಾಗಿವೆ.

**ಮಹಾಸತಿ:**

ಪತಿಯೊಡನೆ ಸಹಗಮನ ಮಾಡಿದ ಸತಿಯರ ಸ್ಮಾರಕ ಶಿಲೆಗಳೇ ಮಹಾಸತಿಕಲ್ಲುಗಳಾಗಿವೆ. ಪತಿಯ ಯಾವುದೇ ರೀತಿಯ ಮರಣದ ನಂತರ ಅವನ ಮಡದಿ ಪ್ರಮುಖವಾಗಿ ಅಗ್ನಿಪ್ರವೇಶದ ಮುಖಾಂತರ ಅಥವಾ ಇತರೆ ವಿಧಾನಗಳ ಮೂಲಕ ತನ್ನ ಪ್ರಾಣವನ್ನು ಬಲಿಕೊಡುತ್ತಿದ್ದಳು. ಬಲಾತ್ಕಾರದ ಸಹಗಮನಕ್ಕೆ ಅಂದಿನ ಸಮಾಜದಲ್ಲಿ ಅವಕಾಶವಿದ್ದಿಲ್ಲ. ಆದರೂ ಕೆಲವು ಕಡೆಗಳಲ್ಲಿ ಧಾರ್ಮಿಕ ವಿಧಿ ನಡೆಯುತ್ತಿತ್ತು. ಇದರ ವಿವರಗಳನ್ನು ಇದೇ ಅಧ್ಯಾಯದ ವೈಧವ್ಯ ಮತ್ತು ಸತಿಪದ್ಧತಿ ಎಂಬಲ್ಲಿ ವಿವರಿಸಲಾಗಿದೆ.

**ಕೀಳ್ಗುಂಟೆ, ವೇಳೆವಾಳಿ ಮತ್ತು ವೆಂಕವಾಳಿ :**

ಒಡೆಯನಿಗಾಗಿ ಸೇವಕ ಕೈಕೊಳ್ಳುವ ಆತ್ಮ ಬಲಿದಾನ ವೇಳೆವಾಳಿಯಾಗಿದೆ. ಪ್ರಾಚೀನ ಕರ್ನಾಟಕದಲ್ಲಿ ಮೊದಲು ಇಂತಹ ಬಲಿದಾನಕ್ಕೆ ಕೀಳ್ಗುಂಟೆ, ಕಿಳ್ಗುಣಿ, ಕೀಳ್ಗೊಣ್ಟೆ ಎಂದು ಕರೆದಿದ್ದು ತಿಳಿದುಬರುತ್ತದೆ. ಕೀಳ್ಗುಂಟೆ ಹೋಗುವದೆಂದರೆ ತನ್ನ ಒಡೆಯನ ಸಮಾಧಿಯ ಅತವಾ ಚಿತಾಕುಂಡದ ಕೆಳಗೆ ಅವನಿಗೆ ಪ್ರೀಯನಾದ ವ್ಯಕ್ತಿಯನ್ನು ಮಲಗಿಸುವದಾಗಿತ್ತು ಎಂದು ರೈಸ್‌ರು ಅರ್ಥೈಸಿದ್ದಾರೆ. ಕೀಳ್ಗುಣಿ ವ್ಯಕ್ತಿಯನ್ನು ಜೀವಸಹಿತ ಅಲ್ಲವೇ ಆತ್ಮಾಘಾತ ಮಾಡಿಕೊಂಡ ಬಳಿಕ ಒಡೆಯನ ಶವದ ಕೆಳಗೆ ಮಲಗಿಸುತ್ತಿರಬಹುದು. ಅಲ್ಲದೇ ಶಾಸನಗಳಲ್ಲಿ ಮನೆಮಗನ್[೨೩೦], ಮನೆವಗತಿ[೨೩೧], ಮನೆಮಗತಿ[೨೩೨], ಎಂದು ಕಂಡುಬರುವ ಪದಗಳೂ ಕೂಡ ಇದೇ ಅರ್ಥದಲ್ಲಿ ಬಳಕೆಯಾಗಿವೆ. ಕ್ರಿ.ಶ.೮೬೫ರ ಮೇವುಂಡಿ ಶಾಸನದಲ್ಲಿ ರಟ್ಟಯಣ್ಣನು ಕೀಳ್ಗುಂಟ ಗೈದ ಉದಾಹರಣೆ ಇದೆ[೨೩೪]. ನಂದಿಗುಡಿಯ ಶಾಸನವೊಂದು ಮಲ್ಲಿಗನೆಂಬುವನು ಕೀಳ್ಗುಣಿಯಾದ ಉಲ್ಲೇಖ ಸಿಗುತ್ತದೆ[೨೩೫]. ಕ್ರಿ.ಶ. ೧೦ನೆಯ ಶತಮಾನದ ಗಂಗರ ಎರಡನೆಯ ರಾಚಮಲ್ಲನ ಕಾಲದ ಶಾಸನವೊಂದು "ಶ್ರೀಮರ್ತ ಪೆರ್ಮಾನಡಿಗಳ್ ಸ್ವರ್ಗ್ಗ ಮೇರಿದಂ ಏರಿದೊಡೆ ಪೆರ್ಮ್ಮಾನಡಿಗಳ ಮನೆಮಗತ್ತಿನ್ ಅಗರಯ್ಯಂ ನೀತಿಮಾರ್ಗ್ಗ ಪೆರ್ಮ್ಮಾನಡಿಗೆ ಕೀಳ್ಗುಂಟೆ"ಯಾದನೆಂದು ವಿವರಿಸಿದೆ[೨೩೬]. ಚಾಲುಕ್ಯವಂಶದ ಮಹಾಸಾಮಂತ ಗೊಗ್ಗಿಯ ಮನೆವಗತಿಯಾದ ಎರೆಬೀರಯ್ಯನು ವೀರಮರಣ ಹೊಂದಿದ ವಿವರ ವರುಣದ ಶಾಸನವೊಂದರಲ್ಲಿದೆ[೨೩೭].

ಕಾಲಾನಂತರದಲ್ಲಿ ಇದಕ್ಕೆ ಪ್ರತಿಯಾಗಿ ಇಲ್ಲವೇ ಜೊತೆಯಾಗಿ ವೇಳೆವಾಳಿ ಎಂಬ ಪದ ಬಳಕೆಗೊಂಡಿದೆ. ವೇಳೆವಾಳಿ ಎಂಬುದು ಪ್ರತಿಜ್ಞಾಪಾಲಕ ವ್ಯಕ್ತಿಯ ಸೂಚನೆಯಾಗಿದೆ. ತನ್ನ ಒಡೆಯನಿಗಾಗಿ ವ್ಯಕ್ತಿಯೊಬ್ಬನು

ಪ್ರತಿಜ್ಞೆಯನ್ನು ಕೈಕೊಂಡು ಮರಣಿಸುವದು ಈ ಪದ್ಧತಿಯಾಗಿತ್ತು. ಗಂಗರ ಭೂತುಗನು ವೀರಮರಣ ಹೊಂದಿದನಂತರ ಅವನ ವೇಳೆವಾಳಿಯಾದ ಎಚ್ಚೆಬಸವನೆಂಬುವನು ತನ್ನ ತಲೆಯನ್ನು ಕಡಿದುಕೊಂಡು ಮರಣಿಸಿದನು[೨೩೮]. ರಾಷ್ಟ್ರಕೂಟ ಕಕ್ಕಲದೇವನ ಆಳ್ವಿಕೆಯಲ್ಲಿ ಅವನ ಮಹಾಸಾಮಂತನಾದ ಶಾಂತಿವರ್ಮನ ವೇಳೆವಾಳಿಯಾದ ಲೋಕಟೆಗನ್ ಎಂಬುವನು ಅರಸನಿಗೆ ಪುತ್ರಪ್ರಾಪ್ತಿಯಾದಾಗ ತನ್ನ ತಲೆಯನ್ನು ಕಡಿದುಕೊಂಡು ಮರಣಿಸಿದನು[೨೩೯]. ಹೀಗೆ ಅರಸನಿಗೆ ಪುತ್ರಪ್ರಾಪ್ತಿಯಾಗಲೆಂದು ಕೂಡ ಅವನ ವೇಳೆವಾಳಿಗಳು ಹರಸಿಕೊಂಡು ಮರಣಿಸಿದ ಉದಾಹರಣೆಗಳೂ ದೊರೆಯುತ್ತವೆ. ಗಂಗರ ನೀತಿಮಹಾರಾಜನು ಸನ್ಯಸನವಿಧಿಯಿಂದ ಮರಣಿಸಿದಾಗ, ಅವನ ವೇಳೆವಾಳಿಯಾದ ಗೋಣಿಗೆಲ್ಲನು ಮರಣಿಸಿದ ವಿವರ ಕ್ರಿ.ಶ. ೧೧ನೆಯ ಶತಮಾನದ ಶಾಸನವೊಂದರಲ್ಲಿದೆ[೨೪೦]. ನೊಳಂಬರ ರಕ್ಕಸನೊಳಂಬ ಪಾಳಿಗನ ವೇಳೆವಾಳಿಯಾದ ಅರಸಿಗನ ಮೈದುನನೊಬ್ಬನು ಮರಣಿಸಿದ ವಿಷಯ ಮೈಸೂರು ತಾಲೂಕಿನ ಶಾಸನವೊಂದರಲ್ಲಿದೆ[೨೪೧]. ಕೊಂಗಾಳ್ವ ರಾಜೇಂದ್ರಚೋಳದೇವನ ಪತ್ನಿ ಪದ್ಮಲದೇವಿ ಮಡಿಯಲು ಇಬ್ಬರು ದಂಪತಿಗಳು ರಾಣಿಗೆ ವೇಳೆವಾಳಿಯಾಗಿದ್ದು ಶಾಸನವೊಂದರಿಂದ ತಿಳಿದುಬರುತ್ತದೆ[೨೪೨]. ಹೀಗೆ ಹೆಣ್ಣುಮಕ್ಕಳೂ ಕೂಡ ಈ ಪದ್ಧತಿಯನ್ನು ಅನುಸರಿಸುತ್ತಿದ್ದುದು ತಿಳಿದುಬರುತ್ತದೆ. ಕ್ರಿ.ಶ. ೧೧ನೆಯ ಶತಮಾನದ ಅಳುಪರ ಪಾಂಡ್ಯಪಟ್ಟಿಯೊಡೆಯನ ಕಾಲದಲ್ಲಿ ವೇಳೆವಾಳಿಯಾದ ಬೀರವಡಿ ಚಂದಯ್ಯನೆಂಬುವನು ಅವನ ವೇಳೆವಾಳಿಯಾಗಿದ್ದು ವೇಳೆವಾಳಿಗೆ ತಪ್ಪಿನಡೆದನೆಂದು ತಿಳಿದುಬರುತ್ತದೆ[೨೪೩]. ಹೀಗೆ ಕೆಲವೊಮ್ಮೆ ವೇಳೆವಾಳಿಗೆ ತಪ್ಪಿನಡೆದ ಉದಾಹರಣೆಗಳೂ ದೊರೆಯುತ್ತವೆ.

ನಂತರದ ಕಾಲದಲ್ಲಿ ಈ ವೇಳೆವಾಳಿ ಪದ್ಧತಿಯು ಲೆಂಕವಾಳಿ ಎಂಬ ಹೆಸರಿನಿಂದ ಮುಂದುವರೆಯಿತು. ಇದನ್ನು ಗರುಡ ಪದ್ಧತಿ ಎಂದು ಕರೆಯುತ್ತಿದ್ದರೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಗಂಗ ಎರಡನೆಯ ರಾಚಮಲ್ಲನ ಕಾಲದಲ್ಲಿ ಗಂಗವಜ್ರನ ಲೆಂಕನೆಂದು ಕರೆದುಕೊಂಡ ಬೋಯಿಗನೆಂಬುವನು ಒಂದು ಕಾಳಗದಲ್ಲಿ ತನ್ನ ಜೀವನವನ್ನು ಕಳೆದುಕೊಂಡಿದ್ದು ತಿಳಿದುಬರುತ್ತದೆ[೨೪೪]. ಹೊಯ್ಸಳ ಒಂದನೆಯ ಸೋಮೇಶ್ವರನ ಮಹಾಸಾಮಂತ ಕಬ್ಬಾಹುನಾಡನ್ನಾಳುವ ಕನ್ನೆಯನಾಯಕನನ್ನು ಲೆಂಕವಾಳಿಯ ನಾಯಕನೆಂದು ಕರೆಯಲಾಗಿದ್ದು, ಈತನು ಸೋಮೇಶ್ವರ ದೇವನೊಡನೆ ತನ್ನ ಹೆಂಡತಿಯರಾದ ಪುಮ್ಮವ್ವೆ, ಜವನವ್ವೆ, ಕಲ್ಲವ್ವೆ ಹಾಗೂ ಹತ್ತುಮಾನಿಸ ಲೆಂಕತಿಯರು, ಇಪ್ಪತ್ತೊಂದು ಮಾನಿಸ ಲೆಂಕರುಗಳನ್ನು ಸೇರಿಸಿಕೊಂಡು ಗಜಮಸ್ತಕದಲ್ಲಿ ಆರುಬಾರಿ ಗರುಡನನ್ನಪ್ಪಿ ಮರಣಿಸಿದನೆಂದು ಶಾಸನೋಲ್ಲೇಖವಿದೆ[೨೪೫]. ಇದೇ ರೀತಿಯಾಗಿ ಮುಂದೆ ಹೊಯ್ಸಳರ ಮೂರನೆಯ ನರಸಿಂಹನ ಕಾಲದಲ್ಲಿ ಮೇಲಿನ ಮಹಾಸಾಮಂತ ಕನ್ನೆಯನಾಯಕನ ಮಗನಾದ ರಂಗೇಯನಾಯಕನು ತನ್ನ ಹೆಂಡತಿಯರಾದ ಕೇತವ್ವೆ, ಹೊನ್ನವ್ವೆ, ಮಂಚವ್ವೆನಾಯಕಿತಿಯರೊಡನೆ ಹತ್ತುಮಾನಿಸ ಲೆಂಕತಿಯರು, ಇಪ್ಪತ್ತೊಂದು ಮಾನಿಸ ಲೆಂಕರುಗಳನ್ನು ಸೇರಿಸಿಕೊಂಡು ಗಜಮಸ್ತಕದಲ್ಲಿ ಆರುಬಾರಿ ಗರುಡನನ್ನಪ್ಪಿ ಮರಣಿಸಿದ್ದು ತಿಳಿದುಬರುತ್ತದೆ[೨೪೬]. ಇದನ್ನು ಅವಲೋಕಿಸಿದಾಗ ಗರುಡ ಪದ್ಧತಿಯೂ ಕೂಡ ಲೆಂಕವಾಳಿ ಪದ್ಧತಿಯ ಸಮನಾಗಿತ್ತೆಂದು ತಿಳಿದುಬರುತ್ತದೆ. ಅಲ್ಲದೇ ಲೆಂಕರುಗಳು

ವಂಶಪಾರಂಪರ್ಯವಾಗಿ ಮುಂದುವರೆಯುತ್ತಿದ್ದುದು ಹಾಗೂ ಇಡೀ ಕುಟುಂಬವೇ ತಮ್ಮನ್ನು ರಾಜನ ಸೇವೆಗಾಗಿ ಮುಡಿಪಾಗಿದ್ದುದು ತಿಳಿದುಬರುತ್ತದೆ.

**ವೀರಮರಣ :**

ಯುದ್ಧಮಾರ್ಗದಲ್ಲಿ ನಡೆದು ವೀರಮರಣ ಹೊಂದಿದ ಯೋಧನಿಗೂ ಮೋಕ್ಷ ಸಿಗುವದೆಂಬ ನಂಬಿಕೆಯೂ ಕೂಡ ಅಂದಿನ ಸಮಾಜದಲ್ಲಿ ಬೆಳದುಬಂದಿತ್ತು. ಇದಕ್ಕೆ ಪ್ರತಿಯಾಗಿ ವೀರತ್ವದಿಂದ ಹೋರಾಡಿ ಶೌರ್ಯಪರಾಕ್ರಮ ಮೆರೆದವರಿಗೆ ಅಂದು ಮನ್ನಣೆ ದೊರೆಯುತ್ತಿತ್ತು. ಯುದ್ಧ ರಂಗದಲ್ಲಿ ಗೆದ್ದುಬಂದವರಿಗೆ ಕಂಕಣ-ಕಡಗಗಳು ದೊರೆಯುತ್ತಿದ್ದವು. ವೀರಮರಣವನ್ನು ಪಡೆದರೆ ಅವರನ್ನು ಕುರಿತ ಭಕ್ತಿಗೌರವ ನೆತ್ತರುಕೊಡುಗೆ, ಬಾಳ್ಗಚ್ಚು, ಕಲ್ನಾಡು, ವೀರಸ್ವರ್ಗದ ಸಾಮಿಪ್ಯ ಅವರಿಗೆ ದೊರೆಯುತ್ತಿತ್ತು. ಹೀಗಾಗಿ ಇಂತಹ ಗಂಡುಗುಣಕ್ಕೆ ಬೆಲೆಕೊಟ್ಟವರು ತಮ್ಮ ಬದುಕಿನಲ್ಲಿ ಅಂದು ಅಳವಡಿಸಿಕೊಂಡ ನೀತಿ ಇದಾಗಿತ್ತು. ಪರಿಣಾಮ ಆ ಕಾಲದಲ್ಲಿ ವ್ಯಕ್ತಿ, ಸಮಾಜ ಹಾಗೂ ದೇಶಕ್ಕೆ ಅಪಾಯ ಒದಗಿದ ಸಂದರ್ಭಗಳಲ್ಲಿ ವೀರರುಗಳು ಕಾದಿ ವೀರಸ್ವರ್ಗವೇರುತ್ತಿದ್ದರು. ಸಮಾಜವು ಅವರಲ್ಲಿ ದೈವತ್ವವನ್ನು ಕಾಣುತ್ತಿತ್ತು. ವೀರಮರಣಗಳು ರಾಜ ಅಥವಾ ತನ್ನ ಒಡೆಯನೊಂದಿಗೆ ಯುದ್ಧದಲ್ಲಿ ಭಾಗವಹಿಸಿದಾಗ, ತುರುಗೋಳ್, ಪೆಣ್ಬುಯಲ್, ಊರಳಿವು ಮತ್ತು ಇತರ ಸಂದರ್ಭಗಳಲ್ಲಿ ಸಾಮಾನ್ಯವಾಗಿದ್ದವು.

**ಯುದ್ಧದಲ್ಲಿನ ವೀರಮರಣ:**

ಯುದ್ಧ ಸಂದರ್ಭದಲ್ಲಿ ಕಾಲ್ದಳದಲ್ಲಿನ ಮುಂಚೂಣಿಯ ವೀರಯೋಧರು ತಮ್ಮ ಒಡೆಯನ ಪ್ರಾಣರಕ್ಷಣೆ ಕೈಕೊಂಡಾಗ ಜರುಗುವ ವೀರಮರಣ ಇದಾಗಿತ್ತು. ರಾಷ್ಟ್ರಕೂಟರು ಹಾಗೂ ಗಂಗರಿಗೆ ಕ್ರಿ.ಶ. ೭೭೫ರಲ್ಲಿ ನಡೆದ ಯುದ್ಧದ ದೃಶ್ಯವೊಂದನ್ನು ಬಣ್ಣಿಸುವ ಹಿರೇಗುಂಡಗಲ್‌ನ ವೀರಗಲ್ಲು, ಗಂಗರ ದಂಡನಾಯಕ ಸೀಯೆಗೆಲ್ಲನ ಪರವಾಗಿ ಕೋಮಾರನೆಂಬುವನು ವೀರಸ್ವರ್ಗವನ್ನು ಹೊಂದಿದ ವಿಷಯ ತಿಳಿಸಿದೆ[೨೪೭]. ಶಾಂತಾರನ ಆಳು ಯುದ್ಧವೊಂದರಲ್ಲಿ ಹೋರಾಡಿ ಸತ್ತ ಉಲ್ಲೇಖ ಉದಿಯಾವರದ ಶಾಸನವೊಂದರಲ್ಲಿದೆ[೨೪೮]. ಆದರೆ ಅದರಿಂದ ಆಗ ನಡೆದ ಯುದ್ಧ ಯಾವುದೆಂದು ತಿಳಿಯುವದಿಲ್ಲ. ಆಳುಪರ ಅರಸನಾದ ಪೃಥ್ವೀಸಾಗರನು ದಾಯಾದಿ ಕಲಹದಿಂದಾಗಿ ತಾನೇ ರಾಜನೆಂದು ರಾಜಧಾನಿಯ ಹೊರಗೆ ಪಟ್ಟಾಭಿಷಕ್ತನಾಗಿ, ಉದಯಪುರವನ್ನು ಬಲಾತ್ಕಾರದಿಂದ ಪ್ರವೇಶಿಸುವಾಗ ನಡೆದ ಯುದ್ಧದಲ್ಲಿ ನಂದವಿಲ್ಮಡಿಯರ ಮಗ ಪಲಿಪರೆ ಎಂಬಾತನು ವೀರಮರಣ ಹೊಂದಿದನು[೨೪೯]. ಕದಂಬಮನೆತನದ ಮಹಾಮಂಡಳೇಶ್ವರ ಗೊರವದೇವನಾಳ್ವಿಕೆಯಲ್ಲಿ ಶ್ರೀವಲ್ಲಭನು ಮಾಡಿದ ಧಾಳಿಯ ಸಮಯದಲ್ಲಿ ನಡೆದ ಯುದ್ಧದಲ್ಲಿ ಕಾವಗಾವುಂಡನೆಂಬುವನು ವೀರಸ್ವರ್ಗಕ್ಕೇರಿದ ವಿವಿರ ದೊರೆಯುತ್ತದೆ[೨೫೦]. ಕ್ರಿ.ಶ. ೧೧೦೪-೦೫ರ ಶಾಸನವೊಂದು ವಿವರಿಸುವಂತೆ ಕೊಂಗಾಳ್ವ ತ್ರಿಭುವನಮಲ್ಲನ ಆಳ್ವಿಕೆಯಲ್ಲಿ ಸಾಲಿಗ್ರಾಮದ ಮೇಲೆ ಚೆಂಗಾಳ್ವರ ಧಾಳಿಯಾಗಲು ಮಾಸಯ್ಯನೆಂಬುವನು ವೀರತ್ವದಿಂದ ಹೋರಾಡಿ ಮರಣಿಸಿದನು[೨೫೧]. ಹೊಯ್ಸಳ ಮೂರನೆಯ ನರಸಿಂಹನ ಕಾಲದಲ್ಲಿ

ಕಲುಕುಣಿ ನಾಡಾಳ್ವ ಸಾಮಂತ ಮಾಚಿದೇವನೊಡಗೂಡಿ ಗುಡ್ಡಗಾಡಿನ ಪ್ರದೇಶವೊಂದರ ಮೇಲೆ ದಂಡೆತ್ತಿಹೋದಾಗ ಮಾಚಿದೇವನ ಮಗ ಗುಜ್ಜಯನಾಯಕನು ಸ್ವರ್ಗ್ಗಕ್ಕೇರಿದನೆಂದು ತಿಳಿದುಬರುತ್ತದೆ[೨೫೨]. ಚೆಂಗಾಳ್ವರ ಮಲ್ಲಿದೇವ ಮತ್ತು ಹರಿಹರದೇವರಸರ ಕಾಲದಲ್ಲಿ ಗಡಿಕಾಳಗವೊಂದರಲ್ಲಿ ಚಿಕ್ಕೆಯನಾಯಕನು ಹೋರಾಡಿ ಮರಣಿಸಿದ ವಿವರ ಸೋಮವಾರಪೇಟೆ ತಾಲೂಕಿನ ಶಾಸನವೊಂದರಲ್ಲಿದೆ[೨೫೩].

**ತುರುಗೋಳ್:**

ಗೋವುಗಳು ಪ್ರಾಚೀನ ಕಾಲದಲ್ಲಿ ಪರಮಪೂಜ್ಯವಾದ ವಸ್ತುವಾಗಿದ್ದವಲ್ಲದೇ, ಸಂಪತ್ತೂ ಕೂಡಾ ಆಗಿದ್ದವು. ಹೀಗಾಗಿ ಅವುಗಳನ್ನು ಸೆರೆಹಿಡಿಯುವದರ ಮೂಲಕ, ಯುದ್ಧ ಸಾರುವ ಸಂಕೇತವೂ ಅಂದಿನ ದಿನಗಳಲ್ಲಿತ್ತು. ಕೆಲವೊಮ್ಮೆ ಗೋವುಗಳನ್ನು ಕದಿಯುವದರ ಮೂಲಕ ತಮ್ಮ ವೈರತ್ವವನ್ನು ಸಾಧಿಸಿಕೊಳ್ಳುತ್ತಿದ್ದರು. ಇಂತಹ ಸೆರೆ ಅಥವಾ ಕದ್ದೊಯ್ಯುವಿಕೆ ಲೌಕಿಕವಾಗಿ ದೊಡ್ಡ ಹಾನಿಯಾಗಿದ್ದರೆ, ಸೆರೆ ಹಿಡಿಯುವದನ್ನು ನೋಡಿ ಸುಮ್ಮನಿರುವದು ಮಹಾಪಾಪವೆನಿಸಿತ್ತು. ಹೀಗಾಗಿ ತುರುಸೆರೆ ಪ್ರಸಂಗದಲ್ಲಿ ಹೋರಾಡಿ ಅವುಗಳನ್ನು ಬಿಡಿಸಿಕೊಳ್ಳುವದು ಪ್ರತಿಯೊಬ್ಬನ ಆದರಲ್ಲಿಯೂ ವೀರಪ್ರಜೆಯ ಜೀವನದ ಪ್ರಮುಖ ಕರ್ತವ್ಯಗಳಲ್ಲೊಂದಾಗಿತ್ತು. ಈ ಪ್ರಸಂಗದಲ್ಲಿ ವೀರತನ ಮೆರೆದು ವೀರಮರಣವನ್ನು ಗಳಿಸಿದವರ ಸ್ಮರಣಾರ್ಥ ನಿಲ್ಲಿಸುವ ಕಲ್ಲುಗಳೇ ತುರುಗೋಳ್ ಸ್ಮಾರಕಗಳಾಗಿವೆ. ಕ್ರಿ.ಶ. ೯೦೦ರಲ್ಲಿ ಗಂಗರ ಮೂರನೆಯ ರಾಚಮಲ್ಲನ ಆಳ್ವಿಕೆಯಲ್ಲಿ ಪೊರಸಿದೇವನೆಂಬುವನು ತುರುಗಾಳಗದಲ್ಲಿ ಮರಣಿಸಿದರೆ[೨೫೪], ಕ್ರಿ.ಶ. ೯೭೦ರಲ್ಲಿ ರಾಷ್ಟ್ರಕೂಟರ ಸಾಮಂತನಾದ ಗಬ್ಬಿಂದ್ರಅರಸು ಬನವಾಸಿ-೧೨೦೦೦ವನ್ನಾಳುವಾಗ ಬಾರಂಗಿಯ ಪೆಬ್ಬಗಾವುಂಡನೆಂಬುವನು ತುರುಗಾಳಗದಲ್ಲಿ ಮರಣಿಸಿದ್ದಾನೆ[೨೫೫]. ಬನವಾಸಿಯನ್ನು ಮಹಾಮಂಡಳೇಶ್ವರ ಚಟ್ಟಯ್ಯದೇವನಾಳುತ್ತಿದ್ದಾಗ, ಹೊರವಯ್ಯನೆಂಬುವನು ತುರುಗಾಳಗದಲ್ಲಿ ಮರಣಿಸಿದ್ದನ್ನು ಕ್ರಿ.ಶ.೯೭೩ರ ಶಾಸನವೊಂದು ಉಲ್ಲೇಖಿಸಿದೆ[೨೫೬]. ಕ್ರಿ.ಶ.೧೦೦೪ರ ಎರಡು ವೀರಗಲ್ಲುಗಳು ತಿಳಿಸುವಂತೆ, ಚಾಲುಕ್ಯ ಸತ್ಯಾಶ್ರಯವಲ್ಲಭನ ಕಾಲದಲ್ಲಿನ ಸಾಮಂತ ಕೇಸರಿಭೀಮ ಬನವಾಸಿ-೧೨೦೦೦ವನ್ನು ಆಳುತ್ತಿದ್ದಾಗ ಹಯಸೆಟ್ಟಿಯೆಂಬುವನು ತುರುಕಾಳಗದಲ್ಲಿ ಮರಣಿಸಿದನು[೨೫೭]. ಚೆಂಗಾಳ್ವರ ಕುಲೋತ್ತುಂಗಚೋಳ ಭುಜಬಳಚೆಂಗಾಳ್ವದೇವನಾಳ್ವಿಕೆಯಲ್ಲಿ ಬಲ್ಲಸೆಟ್ಟಿಯು ತುರುಗಾಳಗದಲ್ಲಿ ಮೆಣಿಸಿದನೆಂದು ಕ್ರಿ.ಶ. ೧೧೭೪ರ ಶಾಸನವೊಂದು ಉಲ್ಲೇಖಿಸಿದೆ[೨೫೮]. ಮಹಾಮಂಡಳೇಶ್ವರ ಕದಂಬ ಮಲ್ಲಿದೇವನ ಕಾಲದಲ್ಲಿ ಹಾವಣಿಗೆಯ ಗೋಗ್ರಹಣದಲ್ಲಿ ಅಂಚೆಯ ಸೋವೆಯನಾಯಕ ಹೋರಾಡಿ ಮಡಿದಿದ್ದನ್ನು ಶಾಸನವೊಂದು ತಿಳಿಸಿದೆ[೨೫೯]. ಮಹಾಸಾಮಂತ ಕುರೆಯನಾಯಕನು ಕಬ್ಬಾಹುನಾಡನ್ನು ಆಳುತ್ತಿದ್ದಾಗ, ಪಟ್ಟಣಸ್ವಾಮಿ ಮಲ್ಲೆಯನು ತುರುಗಾಳಗದಲ್ಲಿ ಮರಣಿಸಿದನು[೨೬೦]. ಹೀಗೆ ಕರ್ನಾಟಕದ ಅನೇಕ ಶಾಸನಗಳು ವಿವಿಧ ಪ್ರದೇಶಗಳಲ್ಲಿ ವಿವಿಧ ಕಾಲದಲ್ಲಿ ಗೋಗ್ರಹಣ ಪ್ರಸಂಗದಲ್ಲಿ ವೀರರುಗಳು ಹೋರಾಟಮಾಡಿದ್ದನ್ನು ತಿಳಿಸುತ್ತವೆ.

**ಪೆಣ್ಬುಯಲ್:**

ನೆರೆರಾಜ್ಯದವರು ಅಥವಾ ಕಳ್ಳರು ಒಂದು ಊರನ್ನು ದೋಚಿದಾಗ ಅಥವಾ ದಾಳಿಯಿಟ್ಟಾಗ ಸ್ತ್ರೀಯರನ್ನೂ ಅಪಹರಿಸುತ್ತಿದ್ದರು. ಅಲ್ಲದೇ ಅವರ ಮಾನಭಂಗಕ್ಕೂ ಪ್ರಯತ್ನಿಸುತ್ತಿದ್ದರು. ಅಥವಾ ಸೀರೆ ಸೆಳೆಯುವದರ ಮೂಲಕ ಯುದ್ಧವನ್ನು ಸಾರುತ್ತಿದ್ದರು. ಇಂತಹ ಪ್ರಸಂಗಗಳಲ್ಲಿ ಗ್ರಾಮದ ರಕ್ಷಣೆಗಾಗಿ ವೀರರುಗಳು ಹೆಣ್ಣುಗಳ ಶೀಲ ಮತ್ತು ಮಾನಕ್ಕೆ ಮರ್ಯಾದೆಯನ್ನು ನೀಡಿ ಅವರನ್ನು ಬಿಡಿಸುತ್ತಿದ್ದರು. ಇದನ್ನು ಪೆಣ್ಬುಯಲ್ ಪ್ರಸಂಗವೆನ್ನಲಾಗಿದೆ. ಹಾನಗಲ್ಲ ಕದಂಬ ಮಹಾಮಂಡಳೇಶ್ವರ ತೈಲಪನ ಕಾಲದಲ್ಲಿ ಬಳ್ಳರ ಬೀಡು ಎಂಬ ಗ್ರಾಮದಲ್ಲಿನ ಸ್ತ್ರೀಯರ ಮಾನಭಂಗಕ್ಕೆ ಯತ್ನಿಸಿದಾಗ, ಅಲ್ಲಿಯ ಸ್ತ್ರೀಯರು ಉಯ್ಯಲಿಡುವದನ್ನು ಕೇಳಿದ ಕಲುಕೆರೆಯ ಬಸವ ಅವರನ್ನು ಬಿಡಿಸಿ ವೀರಮರಣವನವನಪ್ಪಿದನು[೨೬೧]. ಹೊಯ್ಸಳರ ಮಹಾಸಾಮಂತನಾದ ಕಬ್ಬಾಹುನಾಡನ್ನಾಳುವ ಬಲ್ಲೆಯನಾಯಕನ ಕಟ್ಟಿದಲಗು ಎಂದು ಕರೆದುಕೊಂಡ ಕೇತಣನು ಈ ಪೆಣ್ಬುಯಲ್ ಪ್ರಸಂಗದಲ್ಲಿ ಹೆಣ್ಣುಮಕ್ಕಳನ್ನು ರಕ್ಷಿಸಿದ ವಿಷಯ ಕ್ರಿ.ಶ. ೧೨೨೪ರ ಶಾಸನವೊಂದರಲ್ಲಿದೆ[೨೬೨]. ಹಾರುವನಹಳ್ಳಿಯ ದಾರಿಯಲ್ಲಿ ಹೆಣ್ಣುಗಳ ಉಡೆಉರ್ಚ್ಚಲು ಅವಕಾಶ ನೀಡದೆ ಪರಾಕ್ರಮದಿಂದ ಹೋರಾಡಿ, ಅವರನ್ನು ಕಾಪಾಡಿ ಗ್ರಾಮಕ್ಕೆ ಹಿಂದಿರುಗಿಸಿದ ಉಲ್ಲೇಖ ಒಂದು ಶಾಸನದಲ್ಲಿದೆ[೨೬೩].

**ಊರಳಿವು:**

ಪ್ರಾಚೀನ ಕಾಲದಲ್ಲಿ ಆಗಾಗ ಜರುಗುವ ಯುದ್ಧ, ಹೋರಾಟಗಳಲ್ಲಿ ದಂಡೆತ್ತಿ ಬಂದ ರಾಜರ ಸೈನ್ಯ ಅಥವಾ ನೆರೆಹಳ್ಳಿಯ ಧಾಳಿಕಾರರುಗಳು ಆಗಾಗ ಊರುಗಳನ್ನು ಲೂಟಿಮಾಡಿ ಇನ್ನು ಕೆಲಬಾರಿ ಕೊಳ್ಳಿಯಿಟ್ಟು ನಾಶಗೊಳಿಸುತ್ತಿದ್ದರು. ಇಂತಹ ಸಂದರ್ಭದಲ್ಲಿ ದೃಢ ಮನಸ್ಸಿನಿಂದ ನಿಂತು ವೈರಿಗಳ ವಿರುದ್ಧ ಹೋರಾಡುವ ಗ್ರಾಮದ ಮಾನ-ಪ್ರಾಣಗಳನ್ನು ರಕ್ಷಿಸುವ ಧ್ಯೇಯ ವೀರರುಗಳದ್ದಾಗಿತ್ತು. ಈ ಪ್ರಸಂಗವನ್ನು ಊರಳಿವಿನ ಪ್ರಸಂಗವೆಂದು ಶಾಸನಗಳು ಬಣ್ಣಿಸಿವೆ. ರಾಷ್ಟ್ರಕೂಟರ ಜಗತ್ತುಂಗನ ಸಾಮಂತ ರಾಜಾದಿತ್ಯನ ಕಾಲದಲ್ಲಿ ಪೆಣರ್ರೈ ಎಂಬುವನು ಮನೆಮನೆ ಗ್ರಾಮವನ್ನು ಮುತ್ತಿದಾಗ ಊರಳಿವಿನ ಸಂದರ್ಭದಲ್ಲಿ ಅಲ್ಲಿನ ಅಂಗರಸಿಂಗನೆಂಬುವನು ಹೋರಾಡಿ ಮರಣಿಸಿದ್ದನ್ನು ಅಲ್ಲಿನ ಕ್ರಿ.ಶ. ೮೦೦ರ ಶಾಸನವೊಂದು ತಿಳಿಸಿದೆ[೨೬೪]. ಗಂಗ ಪೆರ್ಮಾನಡಿಯ ಕ್ರಿ.ಶ. ೯ನೆಯ ಶತಮಾನದ ಶಾಸನವೊಂದು ತಿಳಿಸುವಂತೆ ರಾಜನು ಧಾಳಿಯಿಟ್ಟಾಗ ಕಲಊರದ ಊರಳಿವಿನಲ್ಲಿ ಬಮ್ಮನೆಂಬುವನು ಹೋರಾಡಿ ಮರಣಿಸಿದನು[೨೬೫]. ಚಲ್ಲಕೇತನ ಮನೆತನದ ಮಹಾಸಾಮಂತ ಬಂಕೇಯರಸನು ಊರೊಂದರ ಮೇಲೆ ಧಾಳಿಯಿಟ್ಟಾಗ ಅಲ್ಲಿನ ಘಣ್ಣಮ್ಮನೆಂಬುವನು ಊರಳಿವಿನಲ್ಲಿ ಕಾದಿ ಸತ್ತನೆಂದು ಕ್ರಿ.ಶ.೯ನೆಯ ಶತಮಾನದ ಶಾಸನವೊಂದು ಹೇಳುತ್ತದೆ[೨೬೬]. ಸಾಮಂತ ಕೇಸರಿಭೀಮನ ಆಳ್ವಿಕೆಯಲ್ಲಿ ನಾಗರಖಂಡದ ಮೇಲಿನ ಧಾಳಿಯವೇಳೆಯಲ್ಲಿ ತೊದಳ್ಳಿಯ ಊರಳಿವಿನಲ್ಲಿ ಅಮ್ಮಂಗಗಾವುಂಡನು ಮರಣಿಸಿದ ವಿಷಯವನ್ನು ಶಾಸನವೊಂದು ಉಲ್ಲೇಖಿಸಿದೆ[೨೬೭]. ಕದಂಬ ಕೀರ್ತಿದೇವನ

ಆಳ್ವಿಕೆಯಲ್ಲಿ ಇಡುಗೋಡು ಸಾಂತ್ತಗಾವುಂಡನ ಗಾವುಂಡಿಕೆಯಲ್ಲಿ ಆತನ ಭಾವಮೈದುನ ಊರಳಿವಿನಲ್ಲಿ ಮಡಿದಿರುವದು ತಿಳಿಯುತ್ತದೆ[೨೬೮].

**ಇತರ ಸಂದರ್ಭಗಳಲ್ಲಿ:**

ಮೇಲಿನ ವೀರಮರಣದ ಪ್ರಸಂಗಗಳಲ್ಲದೇ ಕಳ್ಳರನ್ನು ಎದುರಿಸುವಲ್ಲಿ ಪ್ರಾಣತೆತ್ತವರು, ಕ್ರೂರಪ್ರಾಣಿಗಳನ್ನು ಬೇಟೆಯಾಡಿ ಊರಿನ ಸುರಕ್ಷತೆಯನ್ನು ಕಾಯ್ದು ಮರಣಹೊಂದಿದವರೂ ಕೂಡ ಶಾಸನಗಳಲ್ಲಿ ಸ್ಥಾನಪಡೆದಿರುವರು. ಆಕಸ್ಮಿಕವಾಗಿ ಜರುಗುವ ಇಂಥ ಬಲಿದಾನಕ್ಕೆ ವೀರರು ಸದಾ ಸಿದ್ಧರಾಗಿರುತ್ತಿದ್ದರು. ಸಾರೆಕೊಪ್ಪದ ವೀರಗಲ್ಲೊಂದು ತಿಳಿಸುವಂತೆ ಕುಪ್ಪಟ್ಟೂರು ಮತ್ತು ನೇರಳಿಗೆಯವರಿಗೆ ಸೀಮಾಸಂಬಂಧವಾಗಿ ಕಾಳಗ ನಡೆಯುತ್ತದೆ. ಇದರಲ್ಲಿ ಕುಪ್ಪಟ್ಟೂರಿನ ಕೀರ್ತಿಯಣ್ಣನು ವೀರಾವೇಶದಿಂದ ಹೋರಾಡಿ ಮಡಿಯುತ್ತಾನೆ[೨೬೯]. ತಿವರಮಯ ನಾಯಕನೆಂಬುವನು ಕಳ್ಳರೊಂದಿಗೆ ಹೋರಾಡಿ ಕಳ್ಳರಿಗೆ ಅಂಬುಗಳನ್ನಿಕ್ಕಿ ಸುರಲೋಕಕ್ಕೆ ಸಂದ ವಿಷಯ ಶಾಸನವೊಂದರಲ್ಲಿದೆ[೨೭೦]. ದುಗ್ಗಣ್ಣ ಎಂಬುವ ವೀರನೊಬ್ಬನು ಹರಿಹರಕ್ಕೆ ಹೋಗಿ ಬರುವಾಗ ದಾರಿಯಲ್ಲಿ ಕಳ್ಳರು ಅವನನ್ನು ಅಡ್ಡಹಾಕಲು ಅವರಲ್ಲಿ ಹಲವರನ್ನು ಇರಿದುಕೊಂದು ತಾನೂ ಮಡಿಯುತ್ತಾನೆ[೨೭೧]. ವೀರಣ್ಣನ ತಮ್ಮ ಪೊಡಲೆಯ ಹಂದಿಬೇಟೆಗೆ ಹೋದಲ್ಲಿ ಕಲಿತನಂ ಬೆರೆಸಿ ತಳ್ತಿರಿದು ಸುರಲೋಕ ಪ್ರಾಪ್ತನಾದ ವಿಷಯ ಶಿಕಾರಿಪುರ ತಾಲೂಕಿನ ಶಾಸನವೊಂದರಲ್ಲಿದೆ[೨೭೨]. ಹುಲಿಯೊಂದು ಬಹಳ ದಿನಗಳಿಂದ ಜನರಿಗೆ ತೊಂದರೆ ನೀಡುತ್ತಿದ್ದಾಗ, ಗಉಳೋಜಿ ಎಂಬುವನು ಆ ಹುಲಿಯನ್ನು ಕಡಿದು ತಾನೂ ಮೃತನಾಗುತ್ತಾನೆ[೨೭೩]. ಬೆಂಡಿಕೆರೆಯ ಒಡೇರ ಬೇಚೆಯನಾಯಕ ಹುಲಿಯನಿರಿದು ಸಿವಲೋಕಕೆ ಪ್ರಾಪ್ರವಾದ ವಿಷಯ ವೀರಗಲ್ಲೊಂದರಿಂದ ತಿಳಿದುಬರುತ್ತದೆ[೨೭೪].

ಹೀಗೆ ವೀರಮರಣವನ್ನಪ್ಪಿದ ನಂತರ ಅವರ ಕುಟುಂಬದ ಜೀವನ ನಿರ್ವಹಣೆಗಾಗಿ, ಅವರ ಒಡೆಯರುಗಳು ದಾನದತ್ತಿಗಳನ್ನು ನೀಡುತ್ತಿದ್ದರು. ಅದಕ್ಕೆ ಕಲ್ನಾಡು, ಬಾಳ್ಗಳ್ಚು ಮತ್ತು ಕೊಡುಗೆಯೆಂದು ಕರೆಯಲಾಗುತ್ತಿತ್ತು. ಎರಡನೆಯ ರಾಚಮಲ್ಲನ ಕಾಲದಲ್ಲಿ ಉತ್ತರಿಳ್ಳಗರ ಕೋಟೆಯಲ್ಲಿ ನೊಳಂಬನೊಡನೆ ರಾಚೆಯಗಂಗನೆಂಬುವನು ವೀರಸ್ವರ್ಗವನ್ನು ಹೊಂದಿದಾಗ ಅವನಿಗೆ ರಾಚಮಲ್ಲ ಮತ್ತು ಎರೆಯಪ್ಪರಿಬ್ಬರೂ ಸೇರಿ ಇಗ್ಗಳಿ ಮತ್ತು ದುದುಗೆರೆಯನ್ನು ಕಲ್ನಾಡನ್ನಾಗಿ ನೀಡಿದರು ಎಂದು ತಿಳಿಯುತ್ತದೆ[೨೭೫]. ಗಂಗ ನಾಲ್ಕನೆಯ ರಾಚಮಲ್ಲನ ಕಾಲದಲ್ಲಿ ಪಲ್ಲವರ ವಿರುದ್ಧ ಪೇರೂರು ಎಂಬಲ್ಲಿ ನಡೆದ ಕಾಳಗದಲ್ಲಿ ಇಸರಗಂಡನೆಂಬುವನು ಮಡಿದಾಗ, ಕೊತ್ತತ್ತಿ ಗ್ರಾಮವನ್ನು ಕಲ್ನಾಡನ್ನಾಗಿ ನೀಡಲಾಯ್ತು[೨೭೬]. ಬಯಲ್ನಾಡ ಕದಂಬರ ಮನೆತನದ ಚಾಗಿಯ ಆಳ್ವಿಕೆಯಲ್ಲಿ ಕಠಾರಿಕಾಳಗದಲ್ಲಿ ಮರಣಿಸಿದ ಮಣಲಿಯ ಸತ್ತಿಯಾರಮಣನು ಮರಣಿಸಿದಾಗ ೨೦೦ ಭತ್ತದಮಣ್ಣನ್ನು ಕಲ್ನಾಡಾಗಿ ಪಡೆದನೆಂದು ತಿಳಿದುಬರುತ್ತದೆ[೨೭೭]. ಗಂಗರ ಎರೆಯಪ್ಪರಸ ಕೋಳಾಲಪುರದಲ್ಲಿದ್ದಾಗ, ಕೊಂಗಲ್ನಾಡಿನಲ್ಲಿರುವ ಕೆಲ ಭೂಮಿಯನ್ನು ವೀರನೊಬ್ಬನಿಗೆ ಬಾಳ್ಗಚ್ಚಾಗಿ ನೀಡಿದ ವಿಷಯ ತಿಳಿಯುತ್ತದೆ[೨೭೮].

## ಆಹಾರ ಪಾನೀಯಗಳು:

ಪ್ರಾಚೀನ ಭಾರತದಲ್ಲಿ ಭೋಜನವನ್ನು ಒಂದು ಭೋಗವನ್ನಾಗಿ ಪರಿಗಣಿಸಿದ್ದರಿಂದ ಅಡುಗೆಯನ್ನು ಒಂದು ಕಲೆಯಾಗಿ ಅವರು ಕಲಿಯುತ್ತಿದ್ದರು. ನಳ-ಭೀಮಸೇನರು ಪಾಕಶಾಸ್ತ್ರದಲ್ಲಿ ಪರಿಣಿತರಾಗಿದ್ದರಿಂದ ಅವರ ಹೆಸರುಗಳಿಂದಲೇ ಆ ಶಾಸ್ತ್ರಗಳು ರಚನೆಗೊಂಡವು[೭೯]. ಎರಡನೆಯ ಚಾವುಂಡರಾಯನ ಲೋಕೋಪಕಾರಗಳಲ್ಲಿ ಪಾಕ ಶಾಸ್ತ್ರಕ್ಕೆ ಸಂಬಂಧಿಸಿದ ಭಾಗವಿದ್ದುದು ಕಂಡುಬರುತ್ತದೆ. ವಡ್ಡಾರಾಧನೆಯು ಅಂದಿನ ಜನರ ಸೇವಿಸುವ ಆಹಾರ ಪಾನೀಯಗಳ ಕುರಿತು ತಿಳಿಸುತ್ತದೆ. ಅಂದಿನ ಜನರು ಕುದಿಸಿದ ಅಕ್ಕಿಯ ಅನ್ನ(ಕುಳ), ಇದನ್ನು ರಾಜನ್ನದ ಕುಳ ಎಂತಲೂ ಕರೆದಿದೆ. ವಾಸಿಸಿದಕ್ಕೆ(ತುಣುಕಾದ ಅಕ್ಕಿ), ಪೆರವಕ್ಕಿ(ತರೆ ಅಕ್ಕಿ), ಹಾಲು-ಸಕ್ಕರೆ ಕೂಡಿಸಿ ಮಾಡಿದ ತುಯತ್(ರುಚಿ ಅಡುಗೆ), ಸಕ್ಕರೆ-ಬೆಲ್ಲ, ಲಡ್ಡುಗೆ, ಮಂಡಿಗೆಗಳು, ಎಳ್ಳಿಂದ ಮಾಡಿದ ಎಳ್ಳುಂಡೆ, ರಾಜನ್ನದ ಕುಳ, ಪೆಸರ(ಮೊಸರು), ತೊವೆ, ಬೆಣ್ಣೆ ಗಾಸಿದ ಆಮೋದ ಸುಗಂದ, ಪರಿಮಳತುಪ್ಪ, ಹಲವು ತರಹದ ಬಾಡುಗಳು(ಕಾಯಿಪಲ್ಯೆ), ಪುರಿಗೆ, ಇಡ್ಡಳಿಗೆ, ಸೊಡಿಗೆ, ಲಾವಣಿಗೆ, ಗೃತಪುರಗಳಂತಹ ಅನೇಕ ಆಹಾರಗಳು ಉನ್ನತವರ್ಗದವರು ಸೇವಿಸುವ ಅಹಾರಗಳಾಗಿದ್ದವು. ಮತ್ತು ಸಾಮಾನ್ಯವರ್ಗದವರು ಅಂಬಲೆ, ಕುಳಿ(ಸಾದಾ ಅಕ್ಕಿ), ಅವರೆ, ಅಳೆ, (ಮೊಸರು-ಹಾಲು-ಮಜ್ಜಿಗೆ) ಗಳಾಗಿದ್ದವು. ಅಲ್ಲದೇ ತಳಿಗೆ(ತಾಟು), ಕಂಚು(ಗೋಲುತಟ್ಟೆ), ಅಡ್ಡಣಿಗೆ, ಸಟ್ಟುಗೆ(ಚಮಚ) ಮುಂತಾದವುಗಳು ಗೃಹೋಪಯೋಗಿ ಸಾಮಗ್ರಿಗಳಾಗಿದ್ದವು[೮೦]. ಎರಡನೆಯ ಸೋಮೇಶ್ವರನು ತನ್ನ ಮಾನಸೋಲ್ಲಾಸದಲ್ಲಿ ಮಂಡಕ (ಮಂಡಿಗೆ), ದೋಸಕ(ದೋಸೆ), ಇಡ್ಡಲಕೆ( ಇಡ್ಡಲಿಗೆ), ಸೇವಿಕಾ(ಸೇವಗೆ), ಮಜ್ಜಿಕಾ(ಮಜ್ಜಿಗೆ)ಗಳೆಂಬ ಮೀಸಲಡಿಗೆಗಳನ್ನು ಹೇಳಿದ್ದಾನೆ. ಮುಂದೆ ಹುಣಸೆ, ಕವಳಿ, ಅಂಬಟೆಕಾಯಿ, ಲಿಂಬೆ, ಮಂಗರವಳ್ಳಿಗಳೆಂಬ ಹುಳಿ ಪದಾರ್ಥಗಳನ್ನು ಹಾಗೂ ಖಾರಗಡ್ಡೆಗಳಾದ ಶುಂಠಿ, ಕಾರಗೆಣಸು ಮತ್ತು ಮೆಣಸುಗಳನ್ನು ಹೆಸರಿಸಿದ್ದಾನೆ[೮೧]. ಕವಿಚರಿತೆಯ ಪ್ರಕಾರ ಪ್ರಮುಖವಾದ ಸಿಹಿ ಅಡುಗೆಗಳೆಂದರೆ ಹೋಳಿಗೆ, ಲಡ್ಡು ಮತ್ತು ಶ್ರೀಕರಣೆಗಳಾಗಿದ್ದವು[೮೨]. ಶಾಸನಗಳಲ್ಲಿ ಜೋಳ, ಭತ್ತ, ಬೇಳೆ, ಸಕ್ಕರೆ-ಬೆಲ್ಲ, ಉಪ್ಪು, ಸಾಂಬಾರ ವಸ್ತುಗಳಾದ ಅರಿಷಿಣ, ಮೆಣಸು, ಜೀರಗೆ, ಅಜವಾನ, ಆಲ್ಲಗಳನ್ನೂ, ಜಿಡ್ಡು ಪದಾರ್ಥಗಳಾದ ಹಾಲು, ತುಪ್ಪ, ಬೆಣ್ಣೆ, ಮೊಸರು, ಎಣ್ಣೆಗಳನ್ನೂ, ಆಲ್ಲದೇ ವ್ಯಂಜನ ಪದಾರ್ಥಗಳಾದ ಬಾಡು-ಕಾಯಿಗಳನ್ನು ಉಲ್ಲೇಖಿಸಲಾಗಿದೆ.

## ವೇಷ ಭೂಷಣಗಳು :

ಯೋಗ್ಯತೆ ಮತ್ತು ಸ್ಥಿತಿಗನುಗುಣವಾಗಿ ಜನರು ವೇಷ-ಭೂಷಣಗಳನ್ನು ಧರಿಸುತ್ತಿದ್ದರು. ಬಿಳಿ ವಸ್ತ್ರಗಳನ್ನು ~~ನಾಗರಿಕರು ವಿಶೇಷವಾಗಿ ಧರಿಸುತ್ತಿದ್ದರು. ರಾಜನನ್ನು ಹಿಂಬಾಲಿಸುವ ಚೇಟಿಗಾ~~ರರು ತಮ್ಮ ಕೇಶಗಳನ್ನು ಕೆಸರಿನ ಬಣ್ಣದ ಬಟ್ಟೆಗಳಿಂದ ಕಟ್ಟುತ್ತಿದ್ದರು. ಅಶ್ವಾರೋಹಿಗಳು ಕೆಂಪು ವಸ್ತ್ರಗಳನ್ನು ತೊಡುತ್ತಿದ್ದರು. ಸಾಮಾನ್ಯಜನರೂ ತಮ್ಮ ಯೋಗ್ಯತೆಗನುಸಾರವಾಗಿ ಶಿರೋಭೂಷಣ ಧರಿಸುತ್ತಿದ್ದರು. ಶ್ರೀಮಂತರ ಪರಿಚಾರಕರೂ ತಮ್ಮ ವೇಷ-ಭೂಷಣಗಳಿಂದ

ಆಕರ್ಷಣೀಯರಾಗಿದ್ದರು. ದರಿದ್ರ ಪಥಿಕರು ಮಾತ್ರ ಲಂಗೋಟ ಧಾರಿಗಳಾಗಿದ್ದರೂ ಮಣ್ಣಿನ ಮಣಿಗಳ ಮಾಲೆಗಳಿಂದ ಭೂಷಿತರಾಗಿ ಲತಾ ಬಳ್ಳಿಯಿಂದ ತಮ್ಮ ಕೇಶಗಳನ್ನು ಕಟ್ಟುತ್ತಿದ್ದರು. ಶ್ರೀಮಂತರು ಹಾಗೂ ರಾಜಪರಿವಾರದವರು ಚೀನಾಂಶುಕ, ಪಟ್ಟಾಂಶುಕ ಮುಂತಾದ ಪಾರದರ್ಶಕ ವಸ್ತ್ರಗಳನ್ನುಡುತ್ತಿದ್ದರೆಂದು ತ್ರಿವಿಕ್ರಮಭಟ್ಟನು ತನ್ನ ನಳಚಂಪೂ ಕೃತಿಯಲ್ಲಿ ವಿವರವಾಗಿ ಹೇಳಿದ್ದಾನೆ[೨೮೩].

## ಸಾರ್ವಜನಿಕ ಚಟುವಟಿಕೆಗಳು :

ಧರ್ಮವು ಮಾನವನ ನಿತ್ಯಚಟುವಟಿಕೆಗಳಿಗೆ ಮೂಲ ಪ್ರೇರಣೆಯಾಗಿದೆ. ಮನುಷ್ಯ ಸಮಾಜದ ಲೌಕಿಕ ಕಟ್ಟಳೆಗಳನ್ನು ಪಾಲಿಸಿ ಅಷ್ಟರಿಂದಲೇ ತೃಪ್ತಿಹೊಂದಲಿಲ್ಲ. ಅದರಿಂದಾಗಿ ಅವನ ವಯಕ್ತಿಕ ಹಂಬಲ ಸಾಮಾಜಿಕ ಜೀವನದಲ್ಲಿ ಸತ್ಕಾರ್ಯಗಳ ಮೂಲಕ ಪುಣ್ಯಗಳಿಸುವದಾಯಿತು. ಇಂತಹ ಕಾರ್ಯದಲ್ಲಿ ಜಾತಿ, ಮತ, ಪಂಥಗಳನ್ನು ಮೀರಿ ಅಂದಿನ ಜನರು ಮುನ್ನೆಡೆದಿದ್ದರು. ಹೀಗಾಗಿ ದೇವಾಲಯ, ಕೆರೆ, ಕಟ್ಟೆ, ಸತ್ರಗಳು ಅಸಂಖ್ಯ ಪ್ರಮಾಣದಲ್ಲಿ ನಿರ್ಮಿತವಾದರೆ ಅವುಗಳ ಸುವ್ಯವಸ್ಥೆಯ ಕಾರ್ಯವೂ ನಡೆಯುತ್ತಿತ್ತು.

## ಕೆರೆ-ಕಟ್ಟೆ-ಕಾಲುವೆ-ಭಾವಿಗಳ ನಿರ್ಮಾಣ :

ದಾನಗಳಲ್ಲಿ ಜಲದಾನವೂ ಒಂದಾಗಿತ್ತು. ಅದಕ್ಕಾಗಿ ಇದನ್ನು ಪೂರೈಸುವ ಪ್ರಮುಖ ಕಾರ್ಯವಿಧಾನ ಕೆರೆನಿರ್ಮಾಣವಾಗಿತ್ತು. ಇದು ಒಂದು ದೃಷ್ಟಿಯಿಂದ ಧರ್ಮಕಾರ್ಯವೆನಿಸಿದ್ದರೂ, ಇನ್ನೊಂದು ದೃಷ್ಟಿಯಿಂದ ಸಾರ್ವಜನಿಕ.ಕಾರ್ಯವೆನಿಸಿತ್ತು. ಕೃತಕ ನೀರಾವರಿ ವ್ಯವಸ್ಥೆಯನ್ನು ಸಮುದ್ರ, ಕೆರೆ, ಏರಿ, ಕುಳಿ, ಸರೋವರ, ತಟಾಕ, ತೀರ್ಥ, ಕಟ್ಟೆ, ಕೊಳ, ಕುಟ್ಟೈ, ಕುಂಟೆ, ಡೋಣೆ, ದಿಗ್ಗಿಗೆ, ಭಾವಿ ಎಂಬ ಬೇರೆ ಬೇರೆ ಶಬ್ದಗಳಿಂದ ಕರೆಯಲಾಗುತ್ತಿತ್ತು. ತಮ್ಮ ಹೆಸರನ್ನು ಚಿರಸ್ಥಾಯಿಗೊಳಿಸಲು, ಕೆಲವುಸಲ ಮರಣಹೊಂದಿದ ತಮ್ಮ ಹಿರಿಯರು, ಪ್ರಿಯ ವ್ಯಕ್ತಿಗಳ ಸ್ಮಾರಕವಾಗಿ ಇವುಗಳ ನಿರ್ಮಾಣ ಕಾರ್ಯ ಕೈಕೊಳ್ಳುತ್ತಿದ್ದರು. ಉನ್ನತವರ್ಗದವರು ಒಬ್ಬೊಬ್ಬರೇ ಈ ಕಾರ್ಯವನ್ನು ಸ್ವತಂತ್ರವಾಗಿ ಮಾಡಿದ್ದರೆ, ಕೆಲವೊಮ್ಮೆ ಸಾಮಾಜಿಕರಿಂದಲೂ ತಟಾಕ ನಿರ್ಮಾಣ, ಜೀರ್ಣೋದ್ಧಾರ, ತೂಬು ನಿರ್ಮಾಣ ಕಾರ್ಯಗಳು ನಡೆಯುತ್ತಿದ್ದವು.

ಗಂಗರ ಶ್ರೀಪುರುಷನ ಕಾಲದಲ್ಲಿ ಕೊಂಗಣಿಕೆರೆ[೨೮೪]ಯನ್ನು ಹನ್ನೆರಡು ಜನಸೇರಿ ಕಟ್ಟಿಸಿದರೆ, ಅಕಳೆಸಮುದ್ರವೆಂಬ ಕೆರೆಯನ್ನು ಅಕಳೇತಿ ಎಂಬುವಳು[೨೮೫]. ಮತ್ತು ಆದೆಪ್ಪರ ಎಂಬುವನು ಕೆರೆಯೊಂದನ್ನು ನಿರ್ಮಿಸಿದ ವಿವರಗಳು ದೊರೆಯುತ್ತವೆ[೨೮೬]. ರಾಷ್ಟ್ರಕೂಟರ ಮಹಾಸಾಮಂತಾಧಿಪತಿಯಾದ ಮಾಚಿಯರಸನು ಬನವಾಸಿ-೧೨೦೦೦ವನ್ನಾಳುತ್ತಿದ್ದಾಗ ಮಾಕಳನ ತನ್ನ ಹೆಸರಿನ ಕೆರೆ ಮತ್ತು ದೇವಾಲಯವನ್ನು ನಿರ್ಮಿಸಿದ್ದನು[೨೮೭]. ಮೂರನೆಯ ಕೃಷ್ಣನ ಸಾಮಂತನಾದ ಚೆಲ್ಲಕೇತನ ಲೋಕಟೆಯು ಲೋಕಾಪುರದಲ್ಲಿ ಲೋಕಸಮುದ್ರವೆಂಬ ಕೆರೆಯನ್ನು ಕಟ್ಟಿಸಿದನು[೨೮೮]. ಮೋರಿಯರ ಕಲಿವಿಟ್ಟನು ನೀರ್ಗೊಂಡಿ ಗ್ರಾಮವನ್ನಾತ್ತಿರುವಾಗ ಹುಬ್ಬಳ್ಳಿಯಲ್ಲಿ ಕೆರೆಯೊಂದನ್ನು

ನಿರ್ಮಿಸಿದ್ದಾನೆ[೮೯]. ಸಾಲೂರಿನಲ್ಲಿ ಸಾಂತರ ಚಂದಿಗನು ಕೆರೆಯೊಂದನ್ನು ಕಟ್ಟಿಸಿ, ಅದರ ನಿರ್ವಹಣೆಗೆ ಭೂಮಿದಾನ ಮಾಡಿದನೆಂದು ಶಾಸನವು ತಿಳಿಸುತ್ತದೆ[೯೦]. ಕದಂಬಕುಲದ ಮಹಾಮಂಡಳೇಶ್ವರ ಶಾಂತಿವರ್ಮನು ಬನವಾಸಿಯನ್ನಾಳುತ್ತಿದ್ದಾಗ ಕನ್ನಯ್ಯನೆಂಬುವನು ದೇಗುಲ ಮತ್ತು ಕೆರೆಯೊಂದನ್ನು ಕಟ್ಟಿಸಿದನು. ಅದನ್ನು ಅರಸ ಬಂದು ನೋಡಿ ದಾನವನ್ನು ಬಿಟ್ಟನೆಂದು ತಿಳಿದುಬರುತ್ತದೆ[೯೧]. ಮಹಾಮಂಡಳೇಶ್ವರ ಗೋಣರಸ ಸಾಂತಳಿಗೆ ನಾಡಿನಲ್ಲಿನ ಮೋರಟ್ಟಿಗೆರೆಯಲ್ಲಿ ಕುಲಸಮುದ್ರವೆಂಬ ಕೆರೆಯನ್ನು ಕಟ್ಟಿಸಿದನೆಂದು ಆಚಾಪುರದ ಶಾಸನ ತಿಳಿಸಿದೆ[೯೨]. ಹೊಯ್ಸಳ ವಿಷ್ಣುವರ್ಧನನ ಮಹಾಸಾಮಂತ ಮಾಚಯನಾಯಕನು ಹಿರಿಯಕೆರೆಯನ್ನು ಕಟ್ಟಿಸಿದನೆಂದು ಶಾಸನವೊಂದರಿಂದ ತಿಳಿದುಬರುತ್ತದೆ[೯೩]. ಕದಂಬ ಮಹಾಮಂಡಳೇಶ್ವರ ಹರಿಕಾಂತದೇವನ ದಂಡನಾಯಕನಾದ ಗುತ್ತಯ್ಯನು ತಿಳವಳ್ಳಿಯಲ್ಲಿನ ಪಿರಿಯಕೆರೆಯನ್ನು ನಿರ್ಮಿಸಿದನು[೯೪]. ಹೊಯ್ಸಳ ಎರೆಯಂಗನ ಸಾಮಂತನಾದ ಕುಂದಮಾರಾಯನು ಕೆನ್ನೆಗೆರೆಯನ್ನು ಕಟ್ಟಿಸಿದನೆಂದು ದೇವಿಹಳ್ಳಿ ಶಾಸನದಿಂದ ತಿಳಿದುಬರುತ್ತದೆ[೯೫]. ಕದಂಬರ ಮಹಾಮಂಡಳೇಶ್ವರ ದುದ್ದರಸನು ಕರೆಯನ್ನು ಕಟ್ಟಿಸಿದ ಉಲ್ಲೇಖ ಯೆಡೂರು ಶಾಸನವೊಂದರಲ್ಲಿದೆ[೯೬]. ಹೊಯ್ಸಳ ಒಂದನೆಯ ನರಸಿಂಹನ ಸಾಮಂತ ಚಟ್ಟಯ್ಯನು ಚಟ್ಟಸಮುದ್ರವನ್ನು ಕಟ್ಟಿಸಿದನೆಂದು ಹುಲಿಕೆರೆಯ ಎರಡು ಶಾಸನಗಳು ಉಲ್ಲೇಖಿಸಿವೆ[೯೭].

ಗಂಗ ಎರಡನೆಯ ರಾಚಮಲ್ಲನ ಕಾಲದಲ್ಲಿ ತಲೆನೆರೆಯಲ್ಲಿ ಒಡ್ಡನ್ನು ನಿರ್ಮಿಸಲಾಯಿತೆಂದು ತಿಳಿದುಬರುತ್ತದೆ[೯೮]. ಅಲ್ಲದೇ ಗಂಗ ಶಿವಮಾರನ ಕಾಲದಲ್ಲಿ ಕೆರೆಗೋಡು ವಿಷಯದಲ್ಲಿ ಕಿಳಿನಿ ನದಿಗೆ ಒಡ್ಡು ನಿರ್ಮಿಸಲಾದ ವಿಷಯ ಮಂಡ್ಯ ತಾಲೂಕಿನ ಹಳ್ಳೆಗೆರೆ ಶಾಸನದಲ್ಲಿದೆ[೯೯]. ಕ್ರಿ.ಶ. ೮-೯ನೆಯ ಶತಮಾನದ ಶಾಸನವೊಂದರಲ್ಲಿ ಪೆರ್ಗಡೆ ಚಾಮುಣ್ಡಯ್ಯನೆಂಬುವನು ತೂಬು(ಕಾಲುವೆ) ಒಂದನ್ನು ಮಾಡಿಸಿದ ವಿಷಯವಿದೆ[೧೦೦]. ರಾಷ್ಟ್ರಕೂಟ ಕನ್ನರದೇವನ ಮಹಾಸಾಮಂತಾಧಿಪತಿಯಾದ ಮಾಚಿಯರಸ ಬನವಾಸಿಯನ್ನು ಆಳುತ್ತಿದ್ದಾಗ, ಎಡೆನಾಡ ಪೆರ್ಗಡೆಯಾದ ನಾಕಿಯಚಟ್ಟಯ್ಯನ ಸಹೋದರನಾದ ಪೆರ್ಗ್ಗಡೆ ವೇಳೆಯಮ್ಮನು ಭಾವಿಯೊಂದನ್ನು ತೋಡಿಸಿದನೆಂದು ತಿಳಿಯುತ್ತದೆ[೧೦೧]. ಚಾಲುಕ್ಯ ವಿಕ್ರಮಾದಿತ್ಯನ ಮಹಾಮಂಡಳೇಶ್ವರನಾದ ಚಟ್ಟಯ್ಯನ ಕಾಲದಲ್ಲಿ ನೆಲ್ಲೂರ ಅಮ್ಮಣಗಾವುಂಡ ಮತ್ತು ಮುದ್ದಯ್ಯರೆಂಬುವರು ಸೇರಿ ಭಾವಿಯೊಂದನ್ನು ತೋಡಿಸಿದರು ಎಂದು ಕ್ರಿ.ಶ. ೧೧೧೨ರ ಶಾಸನವೊಂದು ಉಲ್ಲೇಖಿಸಿದೆ[೧೦೨].

**ಅರವಟ್ಟಿಗೆ:**

ಪ್ರಯಾಣದಿಂದ ಬಳಲಿದವರಿಗಾಗಿ ಅವರ ಬಾಯಾರಿಕೆ ನೀಗಿಸಲು ಮಾರ್ಗಮಧ್ಯದಲ್ಲಿ ಅರವಟ್ಟಿಗೆಗಳನ್ನು ನಿರ್ಮಿಸಲಾಗುತ್ತಿತ್ತು. ಸೊರಬ ತಾಲೂಕಿನ ಶಾಸನವೊಂದರಲ್ಲಿ ಲೋಕಗಾವುಂಡ ಮತ್ತು ಆತನ ಹೆಂಡತಿ ಕಾಳಿಕಬ್ಬೆಗಾವುಂಡಿಯರು ಸೇರಿ ಅರವಂಟಗೆಯನ್ನು ನಿರ್ಮಿಸಿದ್ದರೆಂದು ಉಲ್ಲೇಖವಿದೆ[೧೦೩]. ಶಾಂತಾರ ರಾಣಿಯಾದ ಚಟ್ಟಲದೇವಿ ಕೆರೆ-ಭಾವಿ-ಬಸದಿ-ದೇಗುಲ ಅರವಂಟಗೆ ತೀರ್ಥಶತ್ರ ಅರವೆಗಳ ನಿರ್ಮಾಣ ಮಾಡಿಸಿದ್ದು ಹುಂಚದ

ಶಾಸನದಲ್ಲಿದೆ[೨೦೪]. ಸಿಂಧರ ಬಳ್ಳಾರೆಯ ಅಜ್ಜರಸನ ಕಾಲದಲ್ಲಿ ಕಲ್ಲಿಸೆಟ್ಟಿಯೆಂಬುವನು ಅರವಟ್ಟಿಗೆಯನ್ನು ನಿರ್ಮಿಸಿದ್ದನು. ಅದಕ್ಕೆ ಅಜ್ಜರಸನು ದತ್ತಿಯನ್ನು ಬಿಟ್ಟನು[೨೦೫]. ನಾಣಮಯ್ಯ ಎಂಬಾತನು ತನ್ನ ಅರವೆಯಲ್ಲಿ ಅರವಟ್ಟಿಗೆಯನ್ನು ಸ್ಥಾಪಿಸಿದ್ದನೆಂದು ಶಾಸನವೊಂದರಿಂದ ತಿಳಿದುಬರುತ್ತದೆ[೨೦೬].

**ಛತ್ರ:**

ಕೆರೆ-ಕಟ್ಟೆ, ಕಾಲುವೆ ಹಾಗೂ ಅರವಟ್ಟಿಗೆಗಳನ್ನು ನಿರ್ಮಿಸುವದಷ್ಟೇ ಅಂದಿನ ಜನರಿಗೆ ಮುಖ್ಯವಾಗಿರದೇ. ಬೇರೆ ಪ್ರದೇಶಗಳಿಂದ ಬರುವ ಯಾತ್ರಾರ್ಥಿಗಳಿಗೆ ಮತ್ತು ವಿದ್ಯಾ-ಕೇಂದ್ರಗಳಲ್ಲಿ ಕಲಿಯುವ ವಿದ್ಯಾರ್ಥಿತಪೋಧನರ ಆಹಾರಕ್ಕೆ ಅನುಕೂಲವಾಗಲೆಂದು ಅನೇಕರು ಅನ್ನಸತ್ರಗಳನ್ನು ಸ್ಥಾಪಿಸಿ ಅವುಗಳ ನಿರ್ವಹಣೆಗೆ ದಾನದತ್ತಿಗಳನ್ನು ಬಿಟ್ಟಿದ್ದಾರೆ. ಚಂಗಗಾವುಂಡನು ಸತ್ಯರಾಶಿ ಭಟಾರರಿಗೆ ವಿದ್ಯಾದಾನಕ್ಕಾಗಿ ಸತ್ರವನ್ನು ಮಠಕ್ಕೆ ದಾನವಾಗಿ ನೀಡಿದ್ದಾನೆ[೨೦೭]. ನೊಳಂಬವಂಶದ ವೀರನೊಳಂಬನ ಮಡದಿ ಮಾಳಲದೇವಿ ಸತ್ರಗಳನ್ನು ನಿರ್ಮಿಸಿದಂತೆ ಶಾಸನೊಲ್ಲೇಖವಿದೆ[೨೦೮]. ಶಾಂತಾರವಂಶದ ರಾಣಿ ಚಟ್ಟಲದೇವಿಯು ಸತ್ರವೊಂದನ್ನು ಕಟ್ಟಿಸಿದ ಉಲ್ಲೇಖ ಹುಂಚದ ಶಾಸನವೊಂದರಲ್ಲಿದೆ[೨೦೯]. ಸಿರಗುಪ್ಪದ ಸತ್ರಕ್ಕೆ ಎಂಟು ಮನೆಯ ನಿವೇಶನಗಳನ್ನು ಬಿಟ್ಟುಕೊಟ್ಟ ಉಲ್ಲೇಖವು ಅಲ್ಲಿನ ಶಾಸನವೊಂದರಲ್ಲಿದೆ[೨೧೦]. ದಂಡನಾಯಕತಿ ರೆಬ್ಬಲದೇವಿ ಹೂವಿನಹಡಗಲಿಯ ನಾನಾದೇಶದ್ವಿಜಸನ್ಸ್ಥಾನದ ಸತ್ರಕ್ಕೆ ಗಡಿಂಬದ ಮಾನದಿಂದ ೨೦ ಮತ್ತರು ಭೂಮಿಯನ್ನು ನೀಡಿರುವಳು[೨೧೧]. ಸಿಂದಿಗೆರೆಯಲ್ಲಿ ಕೇಮನ ಕೇಸಿಯಣ್ಣನಾಯಕನು ಸತ್ರಕ್ಕೆಂದು ಹಾರಿಕಾಯ ತಿಪ್ಪೆಸುಂಕ ಇತ್ಯಾದಿಗಳನ್ನು ಬಿಟ್ಟಿದ್ದನೆಂದು ತಿಳಿಯುತ್ತದೆ[೨೧೨]. ಚಾಲುಕ್ಯ ಜಗದೇಕಮಲ್ಲದೇವನ ಮಂಡಳಾಧೀಶ್ವರನಾದ ಕಲಚೂರಿ ಮೈಳುಗಿಯ ಆಳ್ವಿಕೆಯಲ್ಲಿ ಅಗ್ರಹಾರ ತೆಲಸಂಗದ ಮಹಾಜನಗಳು, ಮೂವತ್ತಾರುಬೀಡಿನ ಸೆಟ್ಟಿಯರು, ತಳದ ಬಣಂಜಿಗ ಸೆಟ್ಟಿಯರು, ಸಮಸ್ತಕರಣಂಗಳು ಸೇರಿ ಸತ್ರವೊಂದಕ್ಕೆ ದತ್ತಿಯನ್ನು ಬಿಟ್ಟಿದ್ದಾರೆ[೨೧೩]. ಕುಡಿತಿನಿಯ ಸ್ವಾಮಿ ಕಾರ್ತಿಕೇಯನ ದರ್ಶನಕ್ಕಾಗಿ ಬರುವ ಯಾತ್ರಿಕರಿಗಾಗಿ ಸತ್ರವೊಂದನ್ನು ನಿರ್ಮಿಸಲಾಗಿತ್ತು. ಅದಕ್ಕೆ ಮಲ್ಲರಸನೆಂಬುವನು ಕೆಲವು ದತ್ತಿಗಳನ್ನು ಬಿಟ್ಟನೆಂದು ತಿಳಿಯುತ್ತದೆ[೨೧೪]. ಹಾವಿನಹಾಳ ಕಲ್ಲಿಸೆಟ್ಟಿಯು ಹಸಿದವರಿಗೆ ಅನ್ನವನ್ನು ನೀಡುವದಕ್ಕಾಗಿಯೇ ಕುರುಗೋಡಿನಲ್ಲಿ ಸತ್ರವನ್ನು ನಿರ್ಮಿಸಿದ್ದನು. ಅದಕ್ಕೆ ಸಿಂದರ ಇಮ್ಮಡಿ ರಾಚಮಲ್ಲನು ಕೆಲವು ದತ್ತಿಯನ್ನು ಬಿಟ್ಟಿದ್ದಾನೆ[೨೧೫]. ಹೀಗೆ ನಮ್ಮ ಪ್ರಾಚೀನರಿಗೆ ಭೂದಾನ, ವಿದ್ಯಾದಾನಗಳಿಗಿಂತ ಅನ್ನದಾನವೇ ಶ್ರೇಷ್ಠವೆಂದು ನಂಬಿಕೆಯಿದ್ದುದರಿಂದ ಅನೇಕ ಸತ್ರಗಳನ್ನು ನಿರ್ಮಿಸಿ, ಅವುಗಳಿಗೆ ದಾನದತ್ತಿಯನ್ನು ನೀಡುತ್ತಿದ್ದರು.

ಹೀಗೆ ಅಂದಿನ ಕರ್ನಾಟಕದ ಜನಜೀವನ ಹಾಗೂ ಅವರ ಸಾಮಾಜಿಕ ವ್ಯವಸ್ಥೆಗಳು, ಧಾರ್ಮಿಕ ತಳಹದಿಯ ಮೇಲೆ, ಸುವ್ಯವಸ್ಥಿತವಾಗಿ ನಡೆದುಕೊಂಡು ಬಂದಿರುವದು ನಮಗೆ ತಿಳಿದುಬರುತ್ತದೆ.

**ಅಡಿಟಿಪ್ಪಣಿಗಳು:**

೧. ಅಲ್ತೇಕರ,ಎ.ಎಸ್., ವೇದಕಾಲದ ಸಮಾಜ, ಯುಗಯಾತ್ರಿ ಹಾಗೂ ಭಾರತೀಯ ಸಂಸ್ಕೃತಿ., ಸಂ-೧, ಪು-೧೬೯.

೨. ಋಗ್ವೇದ, ೪೩-೫, ಉಲ್ಲೇಖ: ಯುಗಯಾತ್ರಿ ಹಾಗೂ ಭಾರತೀಯ ಸಂಸ್ಕೃತಿ., ಸಂ-೧, ಪು-೧೭೦.

೩. Datta,N.K., Origin and Growth of Caste in India, p-37.

೪. MAR., 1930, p-113.

೫. Ep.Ind., Vol-XXVIII, p-62.

೬. Datta,N.K., Op.Cit., p-38.

೭. Ibid., p-46, 57, 58.

೮. ಕಲಬುರ್ಗಿ,ಎಂ.ಎಂ., ಮಾರ್ಗ, ಸಂ-೧, ಪುಟ-೬೩.

೯. Kadabidi,B.K., Waddaradhane: A Study, p-157-158.

೧೦. ಪುಟ್ಟಪ್ಪ,ಕೆ.ವಿ., (ಸಂ) ಪಂಪಭಾರತಂ ಎಂಬ ವಿಕ್ರಮಾರ್ಜುನ ವಿಜಯಂ, ೧೪.೪೮.

೧೧. E.C., Vol-VIII, Sg, No-109.

೧೨. SII., Vol-IX (i), No-297.

೧೩. Ep.Ind., Vol-II, No-11, p-171.

೧೪. A.R.S.I.E., 1929, B.K.No-246, p-42.

೧೫. E.C., Vol-VIII, Sr, No-571.

೧೬. SII., Vol-IX (i), No-165.

೧೭. Ep.Ind., Vol-XXXIV, No-33, p-215.

೧೮. KI., Vol-II, No-16.

೧೯. E.C., Vol-VII, Md, No-54.

೨೦. Ibid., Vol-V, My, No-103.

೨೧. KI., Vol-I, No-13.

೨೨. Ep.Ind., Vol-IV, p-101, 132, 133; Ibid., Vol-V, p-118, 212, 213; Ibid., Vol-VII, p-99; Ibid., Vol-VIII, p-154; Ibid., Vol-XIV, p-202, 209; Ibid., Vol-XVIII, p-12, 222.

೨೩. E.C., Vol-IX, Bl, No-537.

೨೪. Ibid., Vol-V, Kr, No-48.

೨೫. Ibid., Vol-VI, Sr, No-66.

೨೬. A.R.I.E., 1945-46, B.No-207, p-28.

೨೭. KI., Vol-I, No-14.

೨೮. SII., Vol-XV, No-46.

೨೯. E.C., Vol-XVI, Tp, No-140.

೩೦. Ibid., Vol-VIII, Sr, No-476.

೩೧. Ibid., Vol-VII, Md, No-54.

೩೨. Ibid., Vol-V, My, No-168.

೩೩. Ibid., Vol-VIII, Sr, No-108(Bis).

೩೪. Ibid., Sr, No-103.

೩೫. KI., Vol-I, No-19.

೩೬. SII., Vol-XV, No-40.

೩೭. E.C., Vol-IX, Bl, No-410 & 411.

೩೮. Ibid., Vol-VI, Kr, No-27.

೩೯. Ibid., Vol-VII, Nm, No-130 & 132.

೪೦. Ibid., Vol-XVI, Cn, No-54.

೪೧. Kadabidi,B.K., Op.Cit., p-157.

೪೨. E.C., Vol-I, Cg, No-1.)

೪೩. Ibid., Vol-XII, Gb, No-61.

೪೪. Ep.Ind., Vol-VI, No-4.

೪೫. B.No-88/77-78.

೪೬. E.C., Vo-VII, Mr, No-100.

೪೭. Ibid., Vol-II, Sb, No-150.

೪೮. Ibid., Vol-I, Sp, No-72.

೪೯. Ibid., Vol-IX, Bl, No-513.

೫೦. Ibid., Vol-VII, Nm, No-32.

೫೧. Ibid., Nm, No-169.

೫೨. Ibid., Vol-VIII, Sr, No-140.

೫೩. ಕಿಟೆಲ್, ಕನ್ನಡ-ಇಂಗ್ಲೀಷ್ ನಿಘಂಟು, ಸಂ-೩, ಪು-೧೦೨೪.

೫೪. ಚಿದಾನಂದಮೂರ್ತಿ,ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು-೪೩೬.

೫೫. MAR., 1927, No-118, p-105.

೫೬. E.C., Vol-VII, Md, No-35; & Ibid., Vol-V, Kr, No-49; Ibid., Vol-IV, Ch, No-354; Ibid., Vol-III, Nj, 402; Ibid., Vol-XVI, Gb, No-75.

೫೭. Ibid., Vol-V, Kr, No-49.

೫೮. Ibid., My, No-102

೫೯. SII., Vol-IX (i), No-164.

೬೦. E.C., Vol-IV, Kp, No-68.

೬೧. ಬಸವಣ್ಣನವರ ವಚನಗಳು, ೪೫೦, ಪು-೧೭೬.

೬೨. SII., Vol-XX, No-225.

೬೩. ಧರ್ಮಾಮೃತ, ೭-೪೭.

೬೪. E.C., Vol-V, My, No-102.

೬೫. SII., Vol-IX (i), No-70.

೬೬. E.C., Vol-VIII, Sg, No-108.

೬೭. SII., Vol-IX (i), No-44.

೬೮. Ibid., Vol-XV, No-53.

೬೯. Ibid., Vol-XX, No-178.

೭೦. Ibid., Vol-XV, No-162.

೭೧. E.C., Vol-XVI, Pg, No-11.
೭೨. Ibid., Vol-VIII, Sr, No-22.
೭೩. Ibid., Sr, No-9.
೭೪. SII., Vol-IX (i), No-60.
೭೫. E.C., Vol-IX, Bl, No-388.
೭೬. Ibid., Vol-VIII, Sr, No-457.
೭೭. Ibid., Vol-XV, Sk, No-237.
೭೮. Ibid., Vol-VII, Md, No-67.
೭೯. Ibid., Vol-VIII, Sr, No-184.
೮೦. Ibid., Sr, No-109(Bis).
೮೧. KI., Vol-I, No-17.
೮೨. E.C., Vol-VIII, Sr, No-80.
೮೩. Ibid., Vol-II, Sb, No-82.
೮೪. Ibid., Vol-I, Sp, No-87.
೮೫. Ibid., Vol-VII, Ng, No-32.
೮೬. SII., Vol-VII, No-224.
೮೭. E.C., Vol-I, Sp, No-80.
೮೮. SII., Vol-VII, No-247.
೮೯. Narasimhachar,D.L., Waddaradhane, p-191.
೯೦. E.C., Vol-VIII, Sr, No-10.
೯೧. Ibid., Vol-III, Nj, No-189.
೯೨. SII., Vol-XI (i), No-68.
೯೩. Ibid., Vol-XV, No-53.
೯೪. Ibid., No-545.
೯೫. Ibid., Vol-XX, No-178.
೯೬. E.C., Vol-XI, Hl, No-68.
೯೭. Ibid.
೯೮. MAR., 1910, Para-52, p-22.
೯೯. ಮಲ್ಲಾಪುರ,ಬಿ.ವ್ಹಿ., ನಯಸೇನ ಮತ್ತು ಅವನ ಕೃತಿಗಳು, ಪು-೨೮೭.
೧೦೦. Narasimhachar,D.L., Op.Cit., p-231.
೧೦೧. MAR., 1910, Para-52, p-22.
೧೦೨. Ind.Ant., Vol-XI, p-156.
೧೦೩. A.R.I.E., 1952-53, B.No-97, p-36.
೧೦೪. Narasimhachar,D.L., Op.Cit., p-232.
೧೦೫. SII., Vol-XX, No-44.
೧೦೬. Ep.Ind., Vol-V, p-247.
೧೦೭. E.C., Vol-V, Kr, No-27.

೧೦೮. SII., Vol-XX, No-178.
೧೦೯. E.C., Vol-I, Cg, No-72.
೧೧೦. Ibid., Vol-V, Kr, No-27.
೧೧೧. Ibid., Vol-VII, Nm, No-118.
೧೧೨. SII., Vol-XX, No-44.
೧೧೩. Ep.Ind., Vol-V, p-9.
೧೧೪. E.C., Vol-IX, Bl, No-410 & 11.
೧೧೫. SII., Vol-XV, No-111.
೧೧೬. Ibid., No-596.
೧೧೭. Ibid., No-112.
೧೧೮. E.C., Vol-IV, Cm, No-126.
೧೧೯. Ep.Ind., Vol-V, p-9.
೧೨೦. SII., Vol-XV, No-645.
೧೨೧. E.C., Vol-VII, Sk, No-11.
೧೨೨. Ibid., Sk, No-118.
೧೨೩. Ibid., Sk, No-11.
೧೨೪. BKI. I. ii., No-201.
೧೨೫. Ep.Ind., Vol-XXIX, p-203-9.
೧೨೬. SII., Vol-VII, No-271.
೧೨೭. ಪಾಂಡೆ, ಬಿ.ಆರ್., ಹಿಂದೂ ಸಂಸ್ಕಾರಗಳು, ಯುಗಯಾತ್ರಿ ಭಾರತೀಯ ಸಂಸ್ಕೃತಿ, ಸಂ-೨, ಪುಟ-೩೦೧.
೧೨೮. Ep.Ind., Vol-XVIII, No-26, p-235.
೧೨೯. ಮಳಿಯ ತಿಮ್ಮಪ್ಪಯ್ಯ, ಕವಿರಾಜಮಾರ್ಗ ವಿವೇಕ, ಪುಟ-೯.
೧೩೦. ವಿಕ್ರಮಾಂಕದೇವಚರಿತ, ೮, ೧೧-೬೯.
೧೩೧. SII., Vol-XVIII, No-36.
೧೩೨. Ep.Ind., Vol-XXIX, p-203-09.
೧೩೩. E.C., Vol-VII, Nr, No-47.
೧೩೪. SII., Vol-XVIII, No-88.
೧೩೫. Ep.Ind., Vol-IV, No-50.
೧೩೬. ಧಾ.ತಾ.ಶಾ.ಸೂ., ನಂ-೩೯.
೧೩೭. MAR., 1936, p-55.
೧೩೮. E.C., Vol-XVI, Tm, No-106.
೧೩೯. Alberunies India, Vol-II, p-154.
೧೪೦. JBBRAS., Vol-X, p-231.
೧೪೧. A.R.I.E., 1947-48, No-304.
೧೪೨. SII., Vol-XVIII, No-44.
೧೪೩. Ibid., No-52.
೧೪೪. E.C., Vol-II, Sb, No-73.

೧೪೫. Ibid., Vol-V, Bl, No-124.
೧೪೬. Ep.Ind., Vol-XVI, pp-27.
೧೪೭. SII., Vol-IX (i), No-179.
೧೪೮. B.No-100/77-78.
೧೪೯. Ep.Ind., Vol-XIV, No-19 (ii).
೧೫೦. Ind.Ant., Vol-XII, p-223.
೧೫೧. SII., Vol-IX (i), No-200.
೧೫೨. ನಾಗೇಗೌಡ, ಎಚ್.ಎಲ್., ಪ್ರವಾಸಿಕಂಡ ಇಂಡಿಯಾ, ಸಂ-೧, ಪುಟ-೩೮೫.
೧೫೩. E.C., Vol-VIII, Sb, No-523.
೧೫೪. Ep.Ind., Vol-XIV, p-237.
೧೫೫. M.A.R., 1927, No-25.
೧೫೬. E.C., Vol-X, Mu, No-38.
೧೫೭. SII., Vol-XI (i), No-7.
೧೫೮. E.C., Vol-IV, No-92.
೧೫೯. Ep.Ind., Vol-IV, No-40.
೧೬೦. E.C., Vol-XII, No-24.
೧೬೧. Ibid., Vol-VII, Sk, No-219.
೧೬೨. Ep.Ind., Vol-XVI, No-76.
೧೬೩. E.C., Vol-VII, Sk, No-219.
೧೬೪. SII., Vol-XX, No-248.
೧೬೫. Ibid., Vol-XI (i), No-145.
೧೬೬. A.R.I.E., 1960-61, No-483, p-97.
೧೬೭. E.C., Vol-VII, Sk, No-219.
೧೬೮. E.C., Vol-IX, Ci, No-33.
೧೬೯. SII., Vol-IX (i), No-74.
೧೭೦. Progress Report of K.R.I., 1953-57, No-6.
೧೭೧. SII., Vol-XV, No-8.
೧೭೨. Ibid., No-24.
೧೭೩. E.C., Vol-XV, Bl, No-251.
೧೭೪. ಎಲಿಗಾರ ಚಿನ್ನಕ್ಕ, ಶಾಸನಗಳಲ್ಲಿ ಕರ್ನಾಟಕ ಸ್ತ್ರೀ ಸಮಾಜ, ಪುಟ-೪೫.
೧೭೫. SII., Vol-XX, No-18.
೧೭೬. E.C., Vol-IV, Ch, No-385; M.A.R., 1930, No-14.
೧೭೭. M.A.R., 1944, No-10.
೧೭೮. E.C., Vol-V, Ak, No-125.
೧೭೯. ಎ.ಜೆ.ಶಾ.ಸೂ., ಪು-೪.
೧೮೦. Ind.Ant., Vol-XI, No-122.
೧೮೧. Ep.Ind., Vol-XIII, No-14.

೧೮೨. Ibid., Vol-XV, p-87.
೧೮೩. KI., Vol-V, No-52.
೧೮೪. SII., Vol-IX (i), No-297.
೧೮೫. Inscriptions from Northern Karnataka and Kollapur District, No-4.
೧೮೬. E.C., Vol-IX, Cg, No-59.
೧೮೭. Ibid., Vol-X, No-72.
೧೮೮. ಹಿರೇಮಠ,ಆರ್.ಸಿ., ಬಸವಣ್ಣನವರ ವಚನಗಳು, ಸಂ-೩೫೬, ಪು-೧೪೦.
೧೮೯. E.C., Vol-IV, Hs, No-137.
೧೯೦. ಚಿದಾನಂದಮೂರ್ತಿ,ಎಂ., ಸಂಶೋಧನ ತರಂಗ-೨, ಪುಟ-೨೮೪.
೧೯೧. ಮನುಸ್ಮೃತಿ-೧-೮೬.
೧೯೨. Sarkar,D.C., The Successers of the Satavanas, p-50.
೧೯೩. E.C., Vol-I, No-65.
೧೯೪. Ibid., Vol-VIII, No-57.
೧೯೫. Ibid., Vol-VII, Nm, No-149.
೧೯೬. SII., Vol-IX (i), No-297.
೧೯೭. Ep.Ind., Vol-XXXV, No-10, p-85.
೧೯೮. A.R.I.E., 1954-55, No-159, p-41.
೧೯೯. SII., Vol-XV, No-15.
೨೦೦. ಚಿದಾನಂದಮೂರ್ತಿ,ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು-೧೯೪.
೨೦೧. ಕೊಪ್ಪ, ಎಸ್.ಕೆ., ತರ್ದವಾಡಿನಾಡು ಒಂದು ಅಧ್ಯಯನ, ಪುಟ-೧೭೦-೧೭೧.
೨೦೨. Ep.Ind., Vol-XXXII, No-4, p-45-52.
೨೦೩. SII., Vol-IX (i), No-159.
೨೦೪. A.R.I.E., 1959-60, B.No-143, p-59.
೨೦೫. Ep.Ind., Vol-XIV, No-19(i).
೨೦೬. Ibid.
೨೦೭. Ibid., Vol-V, p-26.
೨೦೮. SII., Vol-IX (i), No-166.
೨೦೯. Ibid., Vol-XV, No-169.
೨೧೦. Ibid., Vol-IX (i), No-322.
೨೧೧. ಚೆನ್ನಕ್ಕ, ಎಲಿಗಾರ., ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ, ಪು-೨೧೪.
೨೧೨. Thomas, Walters, On Hu-en-Tangs Travels in India, Vol-I, p-175 & 362.
೨೧೩. E.C., Vol-VII, Sk, No-136.
೨೧೪. SII., Vol-IX (i), No-9.
೨೧೫. KI., Vol-V, No-96.
೨೧೬. Ibid., No-97.
೨೧೭. E.C., Vol-IV, Hg, No-100.
೨೧೮. ರತ್ನಕರಂಡಕ, ಪು-೫೧೬.

೨೧೯. E.C., Vol-VII, Sk, No-219.
೨೨೦. Ibid., Vol-V, My, No-117.
೨೨೧. Ibid., Vol-IX, Bl, No-388.
೨೨೨. Ibid., Vol-II, Sb, No-64.
೨೨೩. Ibid., Vol-V, My, No-129.
೨೨೪. Ibid., Vol-II, Sb, No-172.
೨೨೫. Ibid., Sb, No-158.
೨೨೬. Ibid., Vol-IX, Bl, No-388.
೨೨೭. Ibid., Vol-II, Sb, No-136.
೨೨೮. Ibid., Vol-V, My, No-129.
೨೨೯. Ibid., My, No-117.
೨೩೦. Ibid., Vol-VIII, Sr, No-478.
೨೩೧. Ibid., Vol-III, Tn, No-91.
೨೩೨. Ibid., My, No-41.
೨೩೩. M.A.R., 1936, No-40.
೨೩೪. B.K.I. I.i., No-11.
೨೩೫. E.C., Vol-XI, Dg, No-119.
೨೩೬. Ibid., Vol-V, Tn, No-257.
೨೩೭. Ibid., My, No-173.
೨೩೮. Ibid., Vol-VII, Ml, No-141.
೨೩೯. Ibid., Vol-VIII, Sr, No-479.op.
೨೪೦. Ibid., Vol-IX, Sl, No-30.
೨೪೧. Ibid., Vol-V, My, No-109.
೨೪೨. Ibid., Vol-I, Nj, No-43.
೨೪೩. SII., Vol-IX (i), No-398.
೨೪೪. E.C., Vol-II, Sb, No-171.
೨೪೫. Ibid., Vol-VI, Kp, No-82.
೨೪೬. Ibid., Kp, No-84.
೨೪೭. Ibid., Vol-XVI, Tm, No-91.
೨೪೮. SII., Vol-VII, No-294.
೨೪೯. Ep.Ind., Vol-IX, p-19-20.
೨೫೦. E.C., Vol-VIII, Sr, No-48.
೨೫೧. Ibid., Vol-V, Kr, No-67.
೨೫೨. Ibid., Vol-VII, Ng, No-172.
೨೫೩. Ibid., Vol-I, Sp, No-51.
೨೫೪. Ibid., Vol-XVI, Tm, No-124.
೨೫೫. Ibid., Sr, No-326.

೨೫೬. Ibid., Sr, No-454.
೨೫೭. Ibid., Sr, No-385-86.
೨೫೮. Ibid., Vol-IV, Pr, No-15.
೨೫೯. ಧಾ.ಜ.ಶಾ.ಸೂ. ನಂ-೯೨.
೨೬೦. E.C., Vol-VI, Kr, No-79.
೨೬೧. SII., Vol-XX, No-250.
೨೬೨. E.C., Vol-VI, Kr, No-78.
೨೬೩. M.A.R., 1927, No-51.
೨೬೪. E.C., Vol-VIII, Sr, No-22.
೨೬೫. Ibid., Vol-VI, Kr, No-19.
೨೬೬. Ibid., Pr, No-247.
೨೬೭. E.C., Vol-VIII, Sr, No-234.
೨೬೮. Ibid., Sr, No-421.
೨೬೯. Ibid., Vol-VI, Sr, No- .
೨೭೦. Ibid., Vol-VIII, Sr, No-268.
೨೭೧. Ibid., Vol-VII, Hl, No-85.
೨೭೨. Ibid., Sk, No-159.
೨೭೩. Ibid., Sh, No-128.
೨೭೪. Ibid., Vol-V, Ak, No-35.
೨೭೫. Ibid., Vol-III, Nj, No-204.
೨೭೬. Ibid., Vol-VII, Md, No-81.
೨೭೭. Ibid., Vol-III, Hk, No-110.
೨೭೮. Ibid., Vol-VI, Kr, No-20.
೨೭೯. ಶ್ರೀಧರಮೂರ್ತಿ,ಮ., ಅರವತ್ನಾಲ್ಕು ಕಲೆಗಳು, ಪು-೨೭-೨೯.
೨೮೦. Kadabidi,B.K., Waddaradhane: A Study, p-164-65.
೨೮೧. ಕೃಷ್ಣಶರ್ಮ, ಬೆಟಗೇರಿ., ಸಾಹಿತ್ಯ ವಿಹಾರ, ಪು-೩-೪.
೨೮೨. ನರಸಿಂಹಾಚಾರ್,ಆರ್., ಕನ್ನಡ ಕವಿಚರಿತೆ, ಸಂ-೧, ಪು-೩೨೭.
೨೮೩. ಕಾಮತ್, ಸೂರ್ಯನಾಥ, ಇತಿಹಾಸ ದರ್ಶನ, ಸಂಪುಟ-೫, ಪುಟ-೧೭೦.
೨೮೪. E.C., Vol-VII, Ml, No-122.
೨೮೫. Ibid., Vol-XVI, Pg, No-12 & 13.
೨೮೬. Ibid., Si, No-123.
೨೮೭. Ibid., Vol-VIII, Sr, No-474.
೨೮೮. The Discriptive List of Stone and Copper Plate Inscriptions, 1942-43.
೨೮೯. A.R.S.I.E., 1941-42, No-126, p-143.
೨೯೦. E.C., Vol-VII, Sk, No-284.
೨೯೧. Ibid., Vol-VIII, Sr, No-44.
೨೯೨. Ibid., Sr, No-109.(Bis).

୨୯୩. Ibid., Vol-VI, Kr, No-62.
୨୯୪. KI., Vol-II, No-8.
୨୯୫. E.C., Vol-IX, Bl, No-473.
୨୯୬. Ibid., Vol-I, Cg, No-62.
୨୯୭. Ibid., Vol-IX, Bl, No-410 & 411.
୨୯୮. Ibid., Vol-VI, Sp, No-85.
୨୯୯. Ibid., Vol-VII, Md, No-35.
୩୦୦. E.C., Vol-V, Tn, No-313.
୩୦୧. Ibid., Vol-VIII, Sr, No-70.
୩୦୨. Ibid., Sr, No-471.
୩୦୩. Ibid., Sr, No-345.
୩୦୪. Ibid., Nr, No-35.
୩୦୫. SII., Vol-IX (i), No-296.
୩୦୬. B.K.I. I. ii., No-196.
୩୦୭. SII., Vol-IX (i), No-67.
୩୦୮. Ibid., Vol-XX, No-48.
୩୦୯. E.C., Vol-VIII, Nr, No-35.
୩୧୦. SII., Vol-IX (i), No-159.
୩୧୧. Ibid., No-158.
୩୧୨. Ibid., No-235.
୩୧୩. KI., Vol-II, No-21.
୩୧୪. SII., Vol-IX (i), No-252.
୩୧୫. Ibid., No-296.

## ಅಧ್ಯಾಯ-೭

## ಧಾರ್ಮಿಕ ಹಾಗೂ ಶೈಕ್ಷಣಿಕ ಅಭಿವೃದ್ಧಿಯಲ್ಲಿ ಸಾಮಂತ ಅರಸುಮನೆತನಗಳ ಪಾತ್ರ

### ಧಾರ್ಮಿಕ ಅಭಿವೃದ್ಧಿ:

ಎಲ್ಲ ಧರ್ಮಗಳು ಮೂಲತಃ ಬುಡಕಟ್ಟು ಜನಾಂಗದ ಧರ್ಮದ ರೂಪವಾಗಿ ಮೈದಳೆದುಕೊಂಡು, ತದನಂತರ ಸಂಪ್ರದಾಯಬದ್ಧವಾದ ಕರ್ಮಾಚರಣೆಗಳ ರೂಪವನ್ನು ತಳೆದು, ಕೊನೆಗೆ ನೀತಿ ಹಾಗೂ ಜ್ಞಾನಪ್ರಧಾನವಾದ ಜಾಗತಿಕ ಧರ್ಮಗಳಾಗಿ ಮೂಡಿದವು ಎಂದು ಧರ್ಮದ ಉಗಮ ಮತ್ತು ವಿಕಾಸವನ್ನು ವೈಜ್ಞಾನಿಕವಾಗಿ ಚಿಂತಿಸುವ ದಾರ್ಶನಿಕರು, ಸಮಾಜಶಾಸ್ತ್ರಜ್ಞರು ಮತ್ತು ಮಾನವಶಾಸ್ತ್ರಜ್ಞರುಗಳು ಅಭಿಪ್ರಾಯಪಟ್ಟಿದ್ದಾರೆ[1]. ಭಾರತವು ಇಂತಹ ಹಲವು ರೂಪು ತಳೆದುಬಂದ ಜಾಗತಿಕ ಧರ್ಮಗಳ ಉಗಮಸ್ಥಾನವಾಗಿ, ಹತ್ತು ಹಲವು ಬುಡಕಟ್ಟು ಜನಾಂಗಗಳ ಧರ್ಮಗಳ ಹುಟ್ಟಿಗೆ ಕಾರಣವಾಗಿ, ಅವುಗಳನ್ನು ಉಳಿಸಿ ಬೆಳೆಸಿಕೊಂಡುಬಂದಿದೆ.

ಬಹಳ ಪ್ರಾಚೀನ ಕಾಲದಿಂದಲೇ ಚತುಸ್ಸಮಯಗಳಾದ ಬೌದ್ಧ, ಜೈನ, ವೈಷ್ಣವ ಹಾಗೂ ಶೈವ ಧರ್ಮಗಳು ಕರ್ನಾಟಕದಲ್ಲಿ ಕಾಣಿಸಿಕೊಳ್ಳುತ್ತಿದ್ದು, ಇವುಗಳಲ್ಲಿ ಯಾವುದು ಮೊದಲು ಯಾವುದು ಆನಂತರದ್ದೆಂದು ಖಚಿತವಾಗಿ ಹೇಳುವದು ಕಷ್ಟವಾದರೂ ತೀರ ಪ್ರಾಚೀನ ಕಾಲದಲ್ಲಿಯೇ ಕರ್ನಾಟಕವು ವೈದಿಕ ಸಂಸ್ಕೃತಿಯ ಗಾಢಪ್ರಭಾವಕ್ಕೆ ಒಳಗಾಗಿತ್ತೆನ್ನಬಹುದು. ನಂತರ ವೈದಿಕ ಸಂಸ್ಕೃತಿಯ ಚಾತುರ್ವರ್ಣ ಪದ್ಧತಿ ಕ್ರಮೇಣ ಜಾತಿಗಳಾಗಿ ಪರಿಣಮಿಸಿ ಶೋಷಣೆ ಹೆಚ್ಚಿದಾಗ ಹಲವು ಧರ್ಮಗಳು ಜನ್ಮತಾಳಿ ಹೆಚ್ಚು ಕ್ರಿಯಾಶೀಲತೆಯಿಂದ ಬಹುಬೇಗನೆ ತಮ್ಮ ಪ್ರಭಾವವನ್ನು ಬೀರಿ ಮಹತ್ವ ಪಡೆದವು. ಕಾಲಗತಿಸಿದಂತೆ ಪ್ರಾಕೃತಿಕ ಪರಿಸರದಲ್ಲಿ ಜೀವಿಸುವ ಬುಡಕಟ್ಟುಜನಾಂಗದ ಮತ ಪ್ರಭೇಧಗಳೊಂದಿಗೆ ಸಮಾವೇಶಗೊಂಡು ಶೋಷಣೆಗಿಳಿದವು. ಆಗ ಸಹಜವಾಗಿ ಮಾನವ ಮೂಲ ಬೇರುಗಳಾದ ವೈದಿಕ ಧರ್ಮದ ಹಿನ್ನೆಲೆಯಲ್ಲಿ ಶೈವ, ವೈಷ್ಣವ ಧರ್ಮಗಳು ಪ್ರಚುರಪಡಿಸಿದ ಸಿದ್ಧಾಂತಗಳತ್ತ ವಾಲಿದನು. ನಂತರ ಇವೆಲ್ಲವುಗಳಿಂದ ಬೇಸತ್ತ ಜನರು ಹೊಸ ಸಿದ್ಧಾಂತ, ಸಾಮಾಜಿಕ, ಧಾರ್ಮಿಕ ಸುಧಾರಣೆಗಾಗಿ ಕಾತುರರಾದರು. ಜನತೆಯ ನೋವುಗಳಿಗೆ ಸ್ಪಂದಿಸಿದ ಹನ್ನೆರಡನೆಯ ಶತಮಾನದ ಶಿವಶರಣರು ವೀರಶೈವ ಸಿದ್ಧಾಂತವನ್ನು ಮುಂದಿರಿಸಿದರು. ಈ ಎಲ್ಲ ಛಾಯೆಯನ್ನು ಕರ್ನಾಟಕದ ಧಾರ್ಮಿಕ ಇತಿಹಾಸದಲ್ಲಿ ಗುರುತಿಸುವಾಗ ಅದನ್ನು ಸಾಮಂತ ಅರಸುಮನೆತನಗಳಿಗೂ ಅನ್ವಯಿಸಬಹುದು.

ಕರ್ನಾಟಕದ ಚಕ್ರವರ್ತಿಗಳಂತೆ ಸಾಮಂತ ಅರಸರುಗಳು ಅನೇಕ ಬಿರುದುಗಳೊಂದಿಗೆ ತಮ್ಮನ್ನು 'ಚತುಸ್ಸಮಯ ಸಮುದ್ಧರಣರ್' ಎಂದು ಕರೆದುಕೊಂಡು ತಾವು ಬೌದ್ಧ, ಜೈನ, ಶೈವ ಮತ್ತು ವೈಷ್ಣವ ಧರ್ಮಗಳ ಪೋಷಕರೆಂದು

ಕರೆಯಿಸಿಕೊಂಡಿದ್ದಾರೆ. ಇದನ್ನು ನಾವು ಚತುಸ್ಸಮಯದ ದೇವತಾ ನಿಲಯಗಳಿದ್ದುದಕ್ಕೆ ಮತ್ತು ಅವುಗಳನ್ನು ಅಂದಿನ ಸಾಮಂತ ಅರಸರು ಆರಾಧಿಸಿದ್ದರೆನ್ನುವದಕ್ಕೆ ಅವರ ಶಾಸನಾಧಾರಗಳಿಂದ ತಿಳಿಯಬಹುದು. ಉದಾಹರಣೆಗೆ, ಚೆಲ್ಲಕೇತನ ಮನೆತನದ ಮಹಾಸಾಮಂತ ಬಂಕೇಯನ ಮಗನಾದ ಲೋಕಾದಿತ್ಯನು ಲೋಕಾಪೂರದಲ್ಲಿ ಲೋಕಮಹೇಶ್ವರಿ ದೇವಸ್ಥಾನ, ಲೋಕನಾಥ ಬಸದಿ, ಲೋಕಸಮುದ್ರ ಎಂಬ ಕೆರೆ ಕಟ್ಟಿಸಿ, ಅಲ್ಲಿ ಹರಿ, ಹರ, ಜಿನ, ಬೌದ್ಧ ಪ್ರತಿಮೆಗಳನ್ನು ನಿಲ್ಲಿಸಿದನೆಂದು ತಿಳಿಯುತ್ತದೆ. ಶಾಂತಾರರ ವೀರಶಾಂತಾರನಿಗೆ ಚತುಸ್ಸಮಯ ಸಮುದ್ಧರಣ ಎಂಬು ಬಿರುದಿದ್ದುದು ಶಾಸನವೊಂದರಲ್ಲಿ ಉಲ್ಲೇಖವಾಗಿದೆ.

## ಬೌದ್ಧ ಧರ್ಮ:

ಉತ್ತರದಲ್ಲಿ ಹುಟ್ಟಿದ ಬೌದ್ಧಧರ್ಮ ಕರ್ನಾಟಕಕ್ಕೆ ಕಾಲಿರಿಸಿದ್ದು ಬೌದ್ಧಧರ್ಮದ ಆಶ್ರಯದಾತನೂ ಮೌರ್ಯ ಸಾಮ್ರಾಟನೂ ಆದ ಅಶೋಕನ ಕಾಲದಲ್ಲಿ. ಕರ್ನಾಟಕದಲ್ಲಿ ಬೌದ್ಧಧರ್ಮವನ್ನು ಪ್ರಸಾರಗೊಳಿಸಲು ಮಹಿಷಮಂಡಲಕ್ಕೆ ಮಹದೇವನನ್ನು, ಬನವಾಸಿಗೆ ರಕ್ಷಿತನನ್ನು ಅಶೋಕ ಕಳಿಸಿಕೊಡುತ್ತಾನೆ. ಅಲ್ಲದೇ ಕರ್ನಾಟಕದಲ್ಲಿ ಅಶೋಕನು ಬೌದ್ಧಧರ್ಮವನ್ನು ಪ್ರಚುರಪಡಿಸಿದುದಕ್ಕೆ ಇಲ್ಲಿ ದೊರೆತಿರುವ ಅವನ ಶಿಲಾಲಿಪಿಗಳೇ ಸಾಕ್ಷಿಯಾಗಿವೆ. ಇವನ ನಂತರ ಶಾತವಾಹನರು ಬರುವವರೆಗೆ ಬೌದ್ಧಧರ್ಮದ ಬಗೆಗೆ ಕರ್ನಾಟಕದಲ್ಲಿ ಎಲ್ಲಿಯೂ ತಿಳಿದುಬರುವದಿಲ್ಲ. ಅವನ ನಂತರದಲ್ಲಿ ಮೌರ್ಯರ ಸಾಮಂತರಾದ ಶಾತವಾಹನ, ಇಕ್ಷ್ವಾಕು, ಚುಟುಗಳ ಕಾಲಾವಧಿಯಲ್ಲಿ ಬೌದ್ಧಧರ್ಮ ಹೆಚ್ಚು ಪ್ರಮುಖ್ಯತೆಯನ್ನು ಪಡೆಯಿತು. ಇದನ್ನು ನಾವು ಬನವಾಸಿ, ಚಂದ್ರವಳ್ಳಿ, ಬ್ರಹ್ಮಗಿರಿ, ಸನ್ನತಿ, ಕೊಪ್ಪಳ, ಜಗ್ಗಯ್ಯಪೇಟ, ಘಂಟಸಾಲಾ, ನಾಗಾರ್ಜುನಕೊಂಡ, ಅಮರಾವತಿ, ಕಾರ್ಲೆ, ಕನ್ಹೇರಿ, ಅಜಂತಾ, ನಾಸಿಕ, ಜನ್ನರ ಮತ್ತು ಬಾಜ್‌ಗಳಲ್ಲಿ ಅಲ್ಲದೇ ಐಹೊಳೆ, ಕದರಿ, ಬಳ್ಳಿಗಾವೆ, ತೋರ್ಕೆ, ಕೋಳಿವಾಡ, ಡಂಬಳ, ಇಂಡಿ, ಲೋಕಾಪೂರ, ಕಳಸ(ಕಾಡಿಯೂರ) ಇತ್ಯಾದಿ ಸ್ಥಳಗಳಲ್ಲಿ ದೊರೆಯುವ ಪ್ರಾಕ್ತನ ಬೌದ್ಧಾವಶೇಷಗಳಾದ ಚೈತ್ಯ, ವಿಹಾರ, ಸ್ತೂಪ, ಶಿಲ್ಪ ಮೊದಲಾದವುಗಳಿಂದ ಅರಿಯಬಹುದು. ಕ್ರಿ.ಶ. ೩ನೆಯ ಶತಮಾನದ ಬನವಾಸಿಯ ಪ್ರಾಕೃತ ಶಾಸನವೊಂದರಲ್ಲಿ ಚುಟುಕುಲದ ಸಾತಕಣ್ಣಿಯ ಮಗಳು ಮಹಾಭೋಜಿ ಶಿವಸ್ಕಂದನಾಗಸಿರಿ ಬನವಾಸಿಯಲ್ಲಿ ಒಂದು ನಾಗ, ಕೆರೆ, ವಿಹಾರವನ್ನು ಕಟ್ಟಿಸಿದ್ದು ತಿಳಿಯುತ್ತದೆ.

ಕ್ರಿ.ಶ. ನಾಲ್ಕನೆಯ ಶತಮಾನದ ಗಂಗರ ತಾಮ್ರಶಾಸನವೊಂದು ಮಾಧವನು ಬೌದ್ಧವಿಹಾರವೊಂದಕ್ಕೆ ಭೂಮಿಯನ್ನು ದಾನಮಾಡಿದ್ದನ್ನು ತಿಳಿಸುತ್ತದೆ. ಆ ಶಾಸನದ ಕೊನೆಯಲ್ಲಿ "ಇತಿ ಯಸ್ಮಿನ್ ಗಾಂಗೇಯರಾಜ್ಯೇ ತಸ್ಮಿನ್ ಶ್ರೀಮಾಧವಶರ್ಮಣಃ ಶಾಸನಬುದ್ಧಸತ್ವಾಯ ದತ್ತಮಾಚಂದ್ರಾರ್ಕತಾರಕಂ" ಎಂದಿದೆ. ಇದರಿಂದ ಜೈನರಾಗಿದ್ದ ಗಂಗರು ಬೌದ್ಧಧರ್ಮಕ್ಕೂ ಕೂಡ ಸಮಾನವಾದ ಸ್ಥಾನಮಾನವನ್ನು ನೀಡಿದ್ದರೆಂದು ತಿಳಿಯುತ್ತದೆ. ಕದಂಬರ ಸಾಮಂತನಾದ ಕೇಕೆಯ ಚಿತ್ರಸೇನ ಮಹಾಕೆಲ್ಲನ ಕ್ರಿ.ಶ.ಸು. ೪೮೫ರ ಹೊನ್ನಾವರ ತಾಮ್ರಶಾಸನವು "ಸಿದ್ಧಂ ಜಯತ್ಸಾಮೀತ ಗುಣಭೃದರ್ ಬುದ್ಧಸ್ಸತ್ತ್ವಸಮಾಶ್ರಯಃ" ಎಂದು ಪ್ರಾರಂಭವಾಗುತ್ತದೆ.

ಬಾದಾಮಿ ಚಾಲುಕ್ಯರ ಕಾಲದಲ್ಲಿ ಎರಡನೆಯ ಪುಲಕೇಶಿಯ ಆಸ್ಥಾನಕ್ಕೆ ಬೇಟಿಕೊಟ್ಟ ಚೀನಿಪ್ರವಾಸಿ ಹ್ಯೂಯೆನ್‌ತ್ಸಾಂಗ್ ಕೊಂಕಣಪುರ(ಬನವಾಸಿ)ದಲ್ಲಿ ನಾನೂರು ಬೌದ್ಧ ಸಂಘಾರಾಮಗಳೂ, ಹತ್ತುಸಾವಿರಕ್ಕೂ ಹೆಚ್ಚು ಬೌದ್ಧ ಅನುಯಾಯಿಗಳೂ ಇದ್ದಾರೆ. ಅವರು ಹೀನಾಯಾನ ಮತ್ತು ಮಹಾಯಾನ ಎಂಬ ಎರಡೂ ಮಾರ್ಗಗಳನ್ನು ಅನುಸರಿಸುತ್ತಾರೆ. ರಾಜನ ಅರಮನೆಯ ಬಳಿ ಮುನ್ನೂರು ಭಿಕ್ಷುಗಳಿರುವ ದೊಡ್ಡ ಸಂಘಾರಾಮವಿದೆ. ಇವರು ಸಾಹಿತ್ಯ ಪ್ರತಿಭೆಗೆ ಹೆಸರಾದವರಾಗಿದ್ದಾರೆ. ಈ ವಿಹಾರದಲ್ಲಿ ಎರಡಡಿ ಎತ್ತರದ ಸಿದ್ಧಾರ್ಥನ ತಲೆಬುರುಡೆಯಿದೆ. ನಗರದ ಬಳಿಯಲ್ಲಿ ಇನ್ನೊಂದು ವಿಹಾರವಿದೆ. ಅಲ್ಲಿ ಗಂಧದ ಮರದಲ್ಲಿ ಕೆತ್ತಿರುವ ಹತ್ತು ಅಡಿ ಮೈತ್ರೇಯನ ವಿಗ್ರಹವಿದೆ. ಇದು ಆಗಾಗ್ಗೆ ಪ್ರಜ್ವಲಿಸುತ್ತಿರುತ್ತದೆ. ಈ ವಿಹಾರವನ್ನು ಇಪ್ಪತ್ತು ದಶಲಕ್ಷ ಅರ್ಹಂತರು ಕಡೆದರೆಂದು ಹೇಳುತ್ತಾನೆ[೧೨]. ಅಲ್ಲದೇ ಡಾ.ಎಸ್.ರಾಜಶೇಖರರವರು ಬಾದಾಮಿ ಚಾಲುಕ್ಯರ ಕಾಲದಲ್ಲಿ ಐಹೊಳೆಯಲ್ಲಿ ನಿರ್ಮಾಣವಾದ ಮಂದಿರಗಳಲ್ಲಿ ಒಂದನ್ನು ಬೌದ್ಧವಿಹಾರವೆಂದು ಗುರುತಿಸಿದ್ದಾರೆ[೧೩]. ಅಲ್ಲದೇ ಕುಳಿತಿರುವ ಬುದ್ಧನ ಚಿತ್ರವೂ ಕೂಡ ಅಲ್ಲಿ ಕಂಡುಬಂದಿದೆ.

ಕ್ರಿ.ಶ. ೮೬೭ರ ಶಾಸನವೊಂದು 'ಓಂ ನಮೋಃ ಬುದ್ಧಾಯ' ಎಂದು ಪ್ರಾರಂಭವಾಗುತ್ತದೆಯಲ್ಲದೇ, ಕಂಪಿಲೆಯಲ್ಲಿ ಬೌದ್ಧ ಸಮುದಾಯದ ಜನರು ವಾಸವಾಗಿದ್ದರೆಂದು, ಅಲ್ಲಿನ ಬೌದ್ಧವಿಹಾರಕ್ಕೆ ದಾನ ಕೊಟ್ಟಿರುವದನ್ನು ಉಲ್ಲೇಖಿಸಿದೆ[೧೪]. ಮೇವುಂಡಿಯ ಕ್ರಿ.ಶ. ೮೯೭ರ ಶಾಸನವೊಂದು ಬೌದ್ಧ ಸಿದ್ಧಾಂತದಲ್ಲಿ ಪ್ರಕಾಂಡ ಪಂಡಿತನೋರ್ವನನ್ನು ಉಲ್ಲೇಖಿಸುತ್ತದೆ[೧೫]. ಲೋಕಾಪೂರ ಶಾಸನದಲ್ಲಿ ಸಾಮಂತನಾದ ಚಲ್ಲಕೇತನ ಮನೆತನದ ಲೋಕಟೆ ಲೋಕಾಪೂರವೆಂಬ ಗ್ರಾಮವನ್ನು ನಿರ್ಮಿಸಿ, ಅಲ್ಲಿ ಹರಿ, ಹರ, ಜಿನ ದೇಗುಲಗಳ ಜೊತೆಗೆ ಬುದ್ಧನ ದೇಗುಲವನ್ನೂ ಕಟ್ಟಿಸಿದನೆಂದು ಹೇಳುತ್ತದೆ[೧೬]. ಕ್ರಿ.ಶ. ೯೨೯ರ ಕಾಡಿಯೂರಿನ ಶಾಸನವೊಂದು ತಿಳಿಸುವಂತೆ ಅಲ್ಲಿ ಚತುಸ್ಸಮಯದ ದೇವತಾನಿಲಯಗಳಿದ್ದು ಅಲ್ಲಿನ ಪೂಜೆ, ಮುನಿನಾಥರುಗಳ ಉಲ್ಲೇಖ ದೊರೆಯುತ್ತದೆ[೧೭]. ಕ್ರಿ.ಶ. ೯೬೮ರ ಕಾಲದ ಶಾಸನವೊಂದು ಮಂಗಳೂರಿನ ಕದ್ರಿಯು ಸುಪ್ರಸಿದ್ಧ ಬೌದ್ಧಕೇಂದ್ರವಾಗಿದ್ದನ್ನು ಸ್ಪಷ್ಟಪಡಿಸಿದೆಯಲ್ಲದೇ, ಒಂದು ವಿಹಾರವಿದ್ದುದು ಕೂಡ ತಿಳಿದುಬರುತ್ತದೆ[೧೮]. ಸೋಮೇಶ್ವರನು ತನ್ನ ಯಶಸ್ತಿಲಕ ಚಂಪೂ ಕೃತಿಯಲ್ಲಿ ಮಾಂಸಾಹಾರಿಗಳಾದ ಬೌದ್ಧರ ಉಲ್ಲೇಖವನ್ನು ಮಾಡಿದ್ದಾನೆ[೧೯]. ಕಲ್ಯಾಣಿ ಚಾಲುಕ್ಯರ ಜಯಸಿಂಹನ ಸೋದರಿ ಅಕ್ಕಾದೇವಿ "ಜಿನಬುದ್ಧಾನಂತ ರುದ್ರಾಗಮ ನಿಗದಿತ ಧರ್ಮಂಗಳ" ಮಾಡಿಸಿದಂತೆ ಕ್ರಿ.ಶ. ೧೦೨೨ರ ಶಾಸನದಲ್ಲಿ ಉಲ್ಲೇಖವಿದೆ[೨೦]. ಹೀಗಾಗಿ ಈ ಕಾಲದಲ್ಲಿಯೂ ಬೌದ್ಧಧರ್ಮವು ಜಿನ, ಅನಂತ, ರುದ್ರರ ಧರ್ಮಗಳ ಸಾಲಿನಲ್ಲಿತ್ತೆಂದು ತಿಳಿಯುತ್ತದೆ. ಕಾಳಾಮುಖ ಶೈವಪಂಥದ ಗುರುಗಳೊಬ್ಬರನ್ನು 'ಸುಗತಶಾಸ್ತ್ರೇ ಸೌಗತನಾಂ ಗುರುಃ' ಎಂದು ಕ್ರಿ.ಶ.೧೦೪೨ರ ಶಾಸನವೊಂದು ಕರೆದಿದೆ[೨೧]. ಇದರಿಂದ ಅನ್ಯಮತೀಯರೂ ಕೂಡ ಬೌದ್ಧರ ಶಾಸ್ತ್ರಗ್ರಂಥಗಳನ್ನು ಅಭ್ಯಸಿಸುತ್ತಿದ್ದರಲ್ಲದೇ, ಬೌದ್ಧರ ಸುಗತಶಾಸ್ತ್ರವು ಪ್ರಾಚೀನ ವಿದ್ಯಾಭ್ಯಾಸದ ವಿಷಯಗಳಲ್ಲಿ ಒಂದಾಗಿತ್ತೆಂದು ವ್ಯಕ್ತವಾಗುತ್ತದೆ. ಕ್ರಿ.ಶ. ೧೦೪೮ರ ಬಳ್ಳಿಗಾವೆಯ ಶಾಸನ[೨೨]ವು ಪುಲ್ಲೆಯ ಬಯಲ್‌ನ್ನು ಉಲ್ಲೇಖಿಸುತ್ತದೆ. ಇದು ಬಹುಷಃ ಬೌದ್ಧರಿಗೆ ಪ್ರಿಯವಾದ

ವ್ಯಗದಾವವಿರಬೇಕೆಂದು ಹಯವದನರಾವ್‌ರವರು ಅಭಿಪ್ರಾಯಪಟ್ಟಿದ್ದಾರೆ[೨೩]. ಶಿರೂರಿನ ಕ್ರಿ.ಶ. ೧೦೬೩ರ ಶಾಸನ[೨೪]ವೊಂದರಲ್ಲಿ ಪಾಶುಪತಾಚಾರ್ಯರೊಬ್ಬರನ್ನು ಬೌದ್ಧಧ್ವಾಂತಭಾನವೇ ಎಂದು ಉಲ್ಲೇಖಿಸಿದ್ದರಿಂದ, ಈ ಕಾಲಕ್ಕೆ ಬೌದ್ಧ ಹಾಗೂ ಶೈವಧರ್ಮಗಳಲ್ಲಿನ ತಿಕ್ಕಾಟವನ್ನು ಇದು ಸೂಚಿಸುತ್ತದೆ. ಬಳ್ಳಿಗಾವೆಯ ಕ್ರಿ.ಶ. ೧೦೬೫ರ ಶಾಸನವೊಂದು ಪ್ರಧಾನಾಮಾತ್ಯನಾದ ರೂಪಭಟ್ಟಯ್ಯ ಬಳ್ಳಿಗಾವೆಯಲ್ಲಿ ಜಯನ್ತಿಪ್ರಬೌದ್ಧ ವಿಹಾರ ಮಾಡಿಸಿ ಅಲ್ಲಿಯ ತಾರಾಭಗವತಿ, ಕೇಶವದೇವ, ಲೋಕೇಶ್ವರದೇವ ಹಾಗೂ ಬೌದ್ಧದೇವರುಗಳ ಪೂಜೆಗೆ ಯೋಗಿಕುಸಳಿಯರ, ಸನ್ಯಾಸಿಗಳ ಆಹಾರ ದಾನಕ್ಕೆ ದತ್ತಿಬಿಟ್ಟದ್ದನ್ನು ಉಲ್ಲೇಖಿಸಿದೆ[೨೫]. ಅಲ್ಲದೇ ಬಾಪ್ಪುರವಂಶದ ನಾಗಿಯಕ್ಕಳೆಂಬುವಳು ಅಲ್ಲಿಯೇ ತಾರಾಭಗವತಿ ವಿಗ್ರಹವನ್ನು ನಿರ್ಮಿಸಿ ದೇವತಾರ್ಚನೆಗೆ ಪ್ರಬೌದ್ಧಬಳಾರರ ಕಾಲನ್ನು ತೊಳೆದು ಭೂಮಿದಾನವನ್ನು ಮಾಡಿದ ಉಲ್ಲೇಖ ಕ್ರಿ.ಶ.೧೦೬೭ರ ಅದೇ ಊರಿನ ಶಾಸನದಲ್ಲಿದೆ[೨೬]. ಈ ತಾರಾಭಗವತಿಯು ವಜ್ರಯಾನವೆಂಬ ಬೌದ್ಧಪಂಥದ ದೇವತೆಯಾಗಿದ್ದಾಳೆ. ಕ್ರಿ.ಶ. ೧೦೬೮ರ ಶಾಸನವೊಂದು ಶಾಂತರವಂಶದ ದೊರೆ ವೀರಶಾಂತಾರನಿಗೆ ಚತುಸ್ಸಮಯ ಸಮುದ್ಧರಣನೆಂಬ ಬಿರುದನ್ನು ಉಲ್ಲೇಖಿಸಿದೆ[೨೭]. ಕ್ರಿ.ಶ. ೧೦೯೮ರಲ್ಲಿ ಬಳ್ಳಿಗಾವೆಯಲ್ಲಿ ಲೋಕರಸ ಮತ್ತು ಜೋಗರಸರು ಲೋಕೇಶ್ವರ ಹಾಗೂ ಜೋಗೇಶ್ವರ ದೇವರ ಅರ್ಚನೆಗೆ ದತ್ತಿಯನ್ನು ನೀಡುವಾಗ, ಅಲ್ಲಿನ ಸಮಸ್ತ ನಖರಂಗಳು, ಹಾಗೂ ಆನೇಕ ಪಂಡಿತರುಗಳ ಜೊತೆಗೆ ಶಾಲೆಯಪರ್ಷೆಯ ಬೌದ್ಧಾಲಯದ ಸಾವಾಸಿ ನಾಗಿಯಕ್ಕಳೂ ಇದ್ದಳೆಂಬುದು ಗಮನಾರ್ಹವಾದುದಾಗಿದೆ[೨೮]. ಹೀಗಾಗಿ ಅಲ್ಲಿ ಎಲ್ಲ ಧರ್ಮಗಳವರ ಜೊತೆಗೆ ಬೌದ್ಧಧರ್ಮದವರಿಗೂ ಮಹತ್ವ ನೀಡಿದ್ದು ತಿಳಿದುಬರುತ್ತದೆ.

ನೊಳಂಬಮನೆತನದ ಮಹಾಮಂಡಳೇಶ್ವರ ವೀರನೊಳಂಬನ ಮಡದಿ ಮಾಳಲದೇವಿ ಬೌದ್ಧವಿಹಾರ ಮಹಾಭವನಗಳ ನಿರ್ಮಾಪಕಿಯಾಗಿದ್ದಳೆಂದು ಕ್ರಿ.ಶ.೧೦೭೬ರ ಕಲಕೇರಿ ಶಾಸನದಿಂದ ತಿಳಿಯುತ್ತದೆ[೨೯]. ಲೊಕ್ಕಿಗುಂಡಿಯ ವಡ್ಡವ್ಯವಹಾರಿಯಾದ ಸಂಗವಯ್ಯಸೆಟ್ಟಿ ಕಟ್ಟಿಸಿದ ಭಗವತಿ ತಾರಾದೇವಿ ವಿಹಾರಕ್ಕೆ, ಬುದ್ಧದೇವರಿಗೆ, ಆಲ್ಲಿಯ ಪೂಜಾರ್ಚನೆಗೆ ಮತ್ತು ಬೌದ್ಧಭಿಕ್ಷುಗಳಿಗೆ ಚತುಸ್ಸಮಯ ಸಮುದ್ಧರಣರೆನಿಸಿದ ೧೬ ಮಹಾನಖರಂಗಳು ದಾನ ನೀಡಿದ ವಿಷಯ ಕ್ರಿ.ಶ. ೧೦೯೫ರ ಡಂಬಳದ ಶಾಸನದಿಂದ ತಿಳಿಯುತ್ತದೆ[೩೦]. ಕ್ರಿ.ಶ. ೧೧೦೪ರ ಮುಳಗುಂದದ ಶಾಸನವೊಂದರಲ್ಲಿ ಅಲ್ಲಿನ ಸ್ಥಾನಾಚಾರ್ಯರೊಬ್ಬರನ್ನು ಬೌದ್ಧಮದೇಭಪಂಚಾನನ ಎಂದು ಉಲ್ಲೇಖಿಸಲಾಗಿದೆ[೩೧]. ಕ್ರಿ.ಶ. ೧೧೨೩ರ ತೇರದಾಳದ ಶಾಸನ ಅಲ್ಲಿ ಬೌದ್ಧದೇವಾಲಯವಿದ್ದುದಾಗಿಯೂ ಅಲ್ಲಿನ ಗಾವುಂಡರು ಚತುಸ್ಸಮಯ ಪರಿಪಾಲಕರಾಗಿದ್ದನ್ನು ಹೇಳಿದೆ[೩೨]. ಶಿಲಹಾರವಂಶದ ಕೊಲ್ಹಾಪುರ ಶಾಖೆಯ ಅರಸನೊಬ್ಬನು ಬುದ್ಧ ಹಾಗೂ ಅರ್ಹಂತರ ವಿಗ್ರಹಗಳನ್ನು ಸ್ಥಾಪಿಸಿ ಅವುಗಳಿಗಾಗಿ ಭೂಮಿಯನ್ನು ದತ್ತಿಯಾಗಿ ನೀಡಿದ್ದ ವಿವರ ತಿಳಿಯುತ್ತದೆ[೩೩]. ಸಾಮಂತ ಚಟ್ಟನ ಸತಿಯಾದ ಶಾಂತಲೆಯು ಜೈನ, ವೈಷ್ಣವ, ಮಾಹೇಶ್ವರ ಹಾಗೂ ಬೌದ್ಧಾಗಮವೆಂಬ ನಾಲ್ಕುಸಮಯಗಳನ್ನು ಕಾಪಾಡಿದ ಚತುರೆಯಾಗಿದ್ದಳೆಂದು ಕ್ರಿ.ಶ. ೧೧೬೧ರ ಶಾಸನ ಹೇಳಿದೆ[೩೪]. ಮಹಾಮಂಡಳೇಶ್ವರ ವಿರುಪರಸದೇವನು 'ಬೌದ್ಧಸಮಯವಿಧ್ವಂಸನಪ್ರವೀಣ'ನಾಗಿದ್ದ ವಿಷಯ ಕ್ರಿ.ಶ. ೧೧೮೪ರ ಶಾಸನದಲ್ಲಿದೆ[೩೫]. ಕ್ರಿ.ಶ. ೧೦೯೬ರ ಇಂಡಿಯ ಶಾಸನದಲ್ಲಿ ಚಿಕ್ಕಂಡಿಯಲ್ಲಿ ಅಂದು ಬೌದ್ಧಾಲಯ ಮತ್ತು ಬೌದ್ಧರು ನೆಲೆಸಿದ್ದಬಗ್ಗೆ ವಿವರಗಳಿವೆ[೩೬].

ಹೀಗೆ ಕರ್ನಾಟಕದಲ್ಲಿ ಬೌದ್ಧಧರ್ಮ ಒಂದು ಕಾಲಕ್ಕೆ ಮಹತ್ವದ ಸ್ಥಾನವನ್ನು ಪಡೆದು, ಕಾಲಕ್ರಮೇಣ ಆ ಸ್ಥಾನವನ್ನು ಉಳಿಸಿಕೊಂಡು ಹೋಗಲೂ ಅಸಮರ್ಥವಾಯಿತು. ಮೇಲಿನ ಈ ಉಲ್ಲೇಖಗಳಂತೆ ಅರಸರು, ಅಧಿಕಾರಿಗಳು ಅಲ್ಲದೇ ಸಾಮಾನ್ಯವರ್ಗದವರೂ ಸೇರಿ ಈ ಧರ್ಮಕ್ಕೆ ಸಲ್ಲಿಸಿದ ಸೇವೆಯನ್ನು ಕಂಡಾಗ, ಕೆಲವರಾದರೂ ಈ ಧರ್ಮವನ್ನು ಕ್ರಿ.ಶ. ೧೨-೧೩ನೆಯ ಶತಮಾನದವರೆಗೂ ಗಟ್ಟಿಗೊಳಿಸಲು ಪ್ರಯತ್ನಪಟ್ಟಿದ್ದಾರೆಂದು ಹೇಳಬಹುದು. ಅಷ್ಟೇ ಅಲ್ಲ, ಕಾಲಕ್ರಮೇಣ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳುವದರಲ್ಲಿಯೂ ಸಫಲವಾಗದೇ ಕರ್ನಾಟಕದಲ್ಲಿ ಈ ಧರ್ಮ ನಾಮಾವಶೇಷವಾಯಿತು.

## ಜೈನಧರ್ಮ :

ಜಿನ ಎಂದರೆ ಜಯಿಸಿದವನೆಂದು ಅರ್ಥ. ತನ್ನ ಆತ್ಮದ ವಿಕಾರಗಳನ್ನು ಸಂಪೂರ್ಣವಾಗಿ ಜೆಯಿಸಿದವನು[೩೭] ಯಾವನೋ ಅವನೇ ಜಿನನಾಗುತ್ತಾನೆ. ಈ ಆತ್ಮವಿಕಾರದ ಕರ್ಮವನ್ನು ಜೆಯಿಸಿ ಜಿನ ಪದವಿಯನ್ನು ಪಡೆದವರೆ ತೀರ್ಥಂಕರರು ಅಥವಾ ಜಿನರು. ಇವರಿಂದ ಭೋಧಿಸಲ್ಪಟ್ಟ ಧರ್ಮವೇ ಜೈನಧರ್ಮ. ಈ ಧರ್ಮದ ಹುಟ್ಟು ಯಾವಾಗ? ಯಾರಿಂದ ಆಯಿತು? ಅವರ ಚರಿತ್ರೆಯೇನು? ಅವರು ಏನಾಗಿದ್ದರು? ಎಂಬ ಪ್ರಶ್ನೆಗಳಿಗೆ ಉತ್ತರ ಕಂಡುಹಿಡಿಯುವಲ್ಲಿ ಅನೇಕ ಚರಿತ್ರೆಕಾರರು ಸಾಕಷ್ಟು ಶ್ರಮವಹಿಸಿ ಕೊನೆಗೊಂದು ನಿರ್ಣಯಕ್ಕೆ ಬಂದಿದ್ದಾರೆ. ಆದಾಗ್ಯೂ ಇದರ ಸ್ಥಾಪಕನಾದ ವೃಷಭನಾಥನ ಕುರಿತು, ಇವನ ಜನ್ಮಸ್ಥಳ, ಕುಲ, ಗೋತ್ರ, ಬದುಕಿದ ಸಮಯ ಮೊದಲಾದವುಗಳ ಕುರಿತು ವಿದ್ವಾಂಸರಲ್ಲಿ ಇನ್ನು ಒಮ್ಮತಗಳಿಲ್ಲ. ಕಾರಣ ಪ್ರತಿಯೊಂದು ಧರ್ಮದ ಅನುಯಾಯಿಗಳು ತಮ್ಮ ಧರ್ಮವು ಅನಾದಿಯಾದುದು, ಐತಿಹಾಸಿಕ ಕಾಲಕ್ಕಿಂತ ಪೂರ್ವದಿಂದಲೂ ನಡೆದುಬಂದಿದ್ದು, ತೀರಾ ಪ್ರಾಚಿನವಾದುದು ಎಂದು ಪ್ರತಿಪಾದಿಸಲು ಪ್ರಯತ್ನಿಸಿದ್ದಾರೆ[೩೮]. ಆದರೆ ಈ ಧರ್ಮದ ೨೪ನೆಯ ತಿರ್ಥಂಕರನಾದ ವರ್ಧಮಾನ ಮಹಾವೀರನ ಕಾಲದಿಂದ ಮಾತ್ರ ಜೈನಧರ್ಮದ ಪರಿಪೂರ್ಣವಾದ ಚರಿತ್ರೆ ನಮಗೆ ದೊರೆಯುತ್ತದೆ.

ಜೈನಧರ್ಮವು ಪ್ರಾಚೀನ ಜಾಗತಿಕ ಧರ್ಮಗಳಲ್ಲಿ ಒಂದಾಗಿ, ಉತ್ತರ ಭಾರತದಲ್ಲಿ ಹುಟ್ಟಿ ಭಾರತದ ತುಂಬೆಲ್ಲ ಹರಡಿಕೊಂಡು ಇಂದಿಗೂ ತನ್ನ ಪ್ರಾಮುಖ್ಯತೆಯನ್ನು ಉಳಿಸಿಕೊಂಡು ಬಂದಿದೆ. ಮಹಾವೀರನಿಂದ ಪ್ರವರ್ಧಮಾನಕ್ಕೆ ಬಂದು ಉತ್ತರ ಭಾರತದ ತುಂಬೆಲ್ಲ ಹರಡಿದ ಈ ಧರ್ಮ ದಕ್ಷಿಣ ಭಾರತಕ್ಕೆ ಕ್ರಿಪೂ. ೩ನೆಯ ಶತಮಾನದಲ್ಲಿ ಬಂದಿತು. ಉತ್ತರ ಭಾರತದಲ್ಲಿ ೧೨ ವರ್ಷ ಕ್ಷಾಮ ತಲೆದೋರಲು ಮೌರ್ಯ ಚಂದ್ರಗುಪ್ತನು ಅವನ ಗುರುವಾದ ಭದ್ರಬಾಹುಮುನಿ ಹಾಗೂ ಅವರ ಶಿಷ್ಯರೊಂದಿಗೆ ಶ್ರವಣಬೆಳಗೊಳಕ್ಕೆ ಬರುವದರೊಂದಿಗೆ ದಕ್ಷಿಣಭಾರತದಲ್ಲಿ ಜೈನಧರ್ಮವು ನೆಲೆಯೂರಿತು.

ಕರ್ನಾಟಕದ ಸಾಮಂತ ಅರಸುಮನೆತನಗಳ ಚರಿತ್ರೆಯೊಂದಿಗೆ ಜೈನಧರ್ಮದ ಚರಿತ್ರೆಯೂ ಕೂಡಾ ಬೆರೆತುಕೊಂಡಿದ್ದು, ಅವು ಒಂದೇ ನಾಣ್ಯದ ಎರಡು ಮುಖಗಳಂತಿವೆ. ಹೀಗಾಗಿ ದಕ್ಷಿಣಭಾರತದ ಜೈನಧರ್ಮದ

ಇತಿಹಾಸವೆಂದರೆ, ಆದು ಕರ್ನಾಟಕದ ಜೈನಧರ್ಮದ ಇತಿಹಾಸವೆಂಬಂತೆ ಬೆಳೆದುಬಂದಿದೆ. ಧರ್ಮಗಳು ರಾಜಕೀಯ ಪೋಷಣೆಯಿಂದ ಬೆಳೆದಿದ್ದು. ಜೈನಧರ್ಮವೂ ಕೂಡ ಅರಸರುಗಳ ಆಶ್ರಯದಿಂದಲೇ ಹೆಚ್ಚು ಬೆಳವಣಿಗೆಯನ್ನು ಕಂಡಿತು. ಗಂಗರ ಆಶ್ರಯದಲ್ಲಿ ಹೆಚ್ಚು ಸಮೃದ್ಧವಾಗಿ ಬೆಳೆದ ಜೈನಧರ್ಮ, ಮುಂದೆ ಚಾಲುಕ್ಯ ಹಾಗೂ ರಾಷ್ಟ್ರಕೂಟರ ಕಾಲಕ್ಕೆ ವೈಭವವನ್ನು ಮುಟ್ಟಿ, ಕ್ರಿ.ಶ. ೧೦ನೆಯ ಶತಮಾನ ದಾಟುತ್ತಲೇ ಆಂತರಿಕ ದೌರ್ಬಲ್ಯ ಮತ್ತು ಬಾಹ್ಯ ಆಘಾತಗಳಿಂದಾಗಿ ಕುಸಿಯುತ್ತ ನಡೆದರೂ ಸಾಮಂತರಾದ ಸವದತ್ತಿಯ ರಟ್ಟರು, ಶಾಂತಾರರು ಹಾಗೂ ಹೊಯ್ಸಳರ ನಿಷ್ಠಾವಂತ ಸಾಮಂತರುಗಳ ಕಾಲದಲ್ಲಿ ಉತ್ಥಾನ-ಪತನಗಳೆರಡನ್ನೂ ಅನುಭವಿಸಿತು.

ಸಾಮಂತ ಅರಸರುಗಳಲ್ಲಿ ಗಂಗವಂಶದವರು ಜೈನಧರ್ಮಿಯರಾಗಿದ್ದು, ಈ ಮನೆತನ ಸಿಂಹಣಂದ್ಯಾಚಾರ್ಯರ ಆಶೀರ್ವಾದದಲ್ಲಿಯೇ ತಲೆಯೆತ್ತಿದ ಮನೆತನವಾಗಿದೆ[೯]. ಅಲ್ಲದೇ ಅವರು ಅನೇಕ ಜೈನಬಸದಿಗಳನ್ನು ನಿರ್ಮಿಸುವದರ ಮೂಲಕ ಹಾಗೂ ಅವುಗಳಿಗೆ ದತ್ತಿ ನೀಡುವದರ ಮೂಲಕ ಆ ಧರ್ಮಕ್ಕೆ ತಮ್ಮ ಸೇವೆಯನ್ನು ಸಲ್ಲಿದ್ದು ಕಂಡುಬರುತ್ತದೆ. ಇವರ ಕಾಲವನ್ನು ಜೈನಧರ್ಮದ ಸುವರ್ಣಯುಗವೆಂದು ಹೇಳಬಹುದು. ಕ್ರಿ.ಶ. ೪೬೬ರಲ್ಲಿ ಗಂಗ ಅವನೀತನು ಬದನೆಗುಪ್ಪೆಗ್ರಾಮವನ್ನು ಶ್ರೀವಿಜಯ ಜಿನಾಲಯಕ್ಕೆ ದತ್ತಿಯಾಗಿ ನೀಡಿದ್ದಾನೆ[೧೦]. ಗಂಗ ಎರಡನೆಯ ಶಿವಮಾರನ ಕಾಲದಲ್ಲಿ, ಗಂಜೆನಾಡನ್ನು ಆಳುತ್ತಿದ್ದ ಪಲ್ಲವೇಳಾರಸನು ಕೊಡಗೂರುವಿಷಯದಲ್ಲಿನ ಕಲ್ಲಿಪುಸೂರಿನ ಚೈತ್ಯಾಲಯವೊಂದಕ್ಕೆ ಕೆಲಭೂಮಿ ಮತ್ತು ತೋಟವೊಂದನ್ನು ದಾನವಾಗಿ ನೀಡಿದ ವಿಷಯ ಕ್ರಿ.ಶ. ೭-೮ನೆಯ ಶತಮಾನದ ಕುಲುಗಾಣದ ಶಾಸನದಲ್ಲಿದೆ[೧೧]. ಶ್ರೀಪುರುಷನ ಸಾಮಂತನಾದ ಬಾಣಕುಲದ ಪರಮಗೂಳ ಹಾಗೂ ಅವನ ಮಡದಿ ಸಗರವಂಶದ ಕುಂದಾಚ್ಚಿ ಸೇರಿ ಶ್ರೀಪುರದಲ್ಲಿ ಲೋಕತಿಲಕ ಜಿನಭವನವನ್ನು ನಿರ್ಮಿಸಿದರು. ಅಲ್ಲಿ ಪೂಜೆಪುನಸ್ಕಾರಕ್ಕಾಗಿ ಶ್ರೀಪುರುಷನು ದಾನವನ್ನು ನಿಡಿದನೆಂದು ಕ್ರಿ.ಶ. ೮ನೆಯ ಶತಮಾನದ ದೇವರಹಳ್ಳಿಯ ತಾಮ್ರಶಾಸನ ಉಲ್ಲೇಖಿಸಿದೆ[೧೨]. ಎರಡನೆಯ ರಾಚಮಲ್ಲನ ಕಾಲದ ಕ್ರಿ.ಶ. ೮೮೮ನೆಯ ಶಾಸನವೊಂದು ಪೆಣ್ಣೆಗಡಂಗದ ಸತ್ಯವಾಕ್ಯ ಜಿನಾಲಯಕ್ಕೆ ಪನ್ನಿರ್ಪಳ್ಳಿ ಎಂಬ ಗ್ರಾಮವನ್ನು ದಾನವಾಗಿತ್ತ ವಿಷಯ ಹೇಳಿದೆ[೧೩]. ಕ್ರಿ.ಶ. ೯ನೆಯ ಶತಮಾನದ ಕ್ಯಾತನಹಳ್ಳಿಯ ಶಾಸನವೊಂದು ಗಂಗ ಎರಡನೆಯ ರಾಚಮಲ್ಲ ಹಾಗೂ ಎರೆಯಪ್ಪರಸರು ಸೇರಿ ಚಾಗಿಪೆರ್ಮಾಡಿಯಿಂದ ನಿರ್ಮಿತವಾದ ಕೆಲ್ಲಬಸದಿಗೆ ದಾನವನ್ನು ನೀಡಿದ ವಿಷಯ ತಿಳಿಸುತ್ತದೆ[೧೪]. ಗಂಗ ಎರೆಯಂಗನ ಸಾಮಂತನಾದ ಮಣಲೇರನು ಕನಕಗಿರಿತೀರ್ಥದ ಮೇಲೆ ಬಸದಿಯನ್ನು ಮಾಡಿಸಿ ಅದಕ್ಕೆ ಅಟ್ಟದೆರೆ, ಕುರುದೆರೆ ಹಾಗೂ ಸಾಮನ್ತದೆರೆಯನ್ನು ಬಿಟ್ಟುಕೊಟ್ಟ ವಿಷಯವು ಕ್ರಿ.ಶ. ೯೧೬-೧೭ರ ಕೂಲಿಗೆರೆ ಶಾಸನದಲ್ಲಿದೆ[೧೫]. ಕ್ರಿ.ಶ. ೯೫೧ರಲ್ಲಿ ಗಂಗಭೂತುಗ ಪರ್ಮಾಡಿಯ ಪತ್ನಿ ಪದ್ಮಬ್ಬರಸಿ ನರೇಗಲ್ಲಗ್ರಾಮದಲ್ಲಿ ಜೈನರಿಗಾಗಿ ಬಸದಿಯನ್ನು ಮತ್ತು ವಿದ್ಯೆಯ ಸಲುವಾಗಿ ದಾನಶಾಲೆಯನ್ನು ನಿರ್ಮಿಸಿದಳು. ಈ ಬಸದಿ ಹಾಗೂ ಶಾಲೆಗೆ ಮಾರಸಿಂಗಯ್ಯ ಮತ್ತು ಇತರ ಪೆರ್ಗಡೆಗಳು ದಾನ ನೀಡಿದ್ದನ್ನು ನರೇಗಲ್ಲಿನ ಶಾಸನ ಉಲ್ಲೇಖಿಸಿದೆ[೧೬]. ಕ್ರಿ.ಶ. ೯೭೮ರಲ್ಲಿ ಗಂಗ ನಾಲ್ಕನೆಯ ರಾಚಮಲ್ಲ ಪೆಗ್ಗದೂರಿನಲ್ಲಿನ ಬಸದಿಗೆ ಪೆಗ್ಗದೂರು ಹಾಗೂ ಪೊಸವಾಡಿಗೆಗಳನ್ನು ದತ್ತಿಯಾಗಿ ಬಿಟ್ಟನೆಂದು ತಿಳಿದುಬರುತ್ತದೆ[೧೭]. ರಾಚಮಲ್ಲನ ಮಂತ್ರಿಯಾದ ಚಾಮುಂಡರಾಯನು

ಗೊಮ್ಮಟೇಶ್ವರ ವಿಗ್ರಹವನ್ನು ಮಾಡಿಸಿದ್ದನ್ನು ಶ್ರವಣಬೆಳಗೊಳದ ದೊಡ್ಡಬೆಟ್ಟದ ಶಾಸನಗಳು ತಿಳಿಸಿವೆ[೪೮]. ಅಲ್ಲದೇ ಅವನ ಮಗ ಜಿನದೇವಣನು ಬೆಳ್ಗೊಳದಲ್ಲಿ ಜೈನಬಸದಿಯೊಂದನ್ನು ಮಾಡಿಸಿದ್ದ ವಿಷಯ ಕ್ರಿ.ಶ. ೧೦ನೆಯ ಶತಮಾನದ ಶ್ರವಣಬೆಳಗೊಳದ ಶಾಸನದಲ್ಲಿದೆ[೪೯].

ಕ್ರಿ.ಶ. ೭ನೆಯ ಶತಮಾನದ ಶಾಸನವೊಂದು ತಿಳಿಸುವಂತೆ ಬಾದಾಮಿ ಚಾಲುಕ್ಯರ ಸಾಮಂತನಾದ ಸೇಂದ್ರಕವಂಶದ ದುರ್ಗಶಕ್ತಿಯು ಶಂಖ ಜಿನೇಂದ್ರದೇವರ ಚೈತ್ಯ ನಿತ್ಯಪೂಜಾರ್ಥವಾಗಿ ಪುಲಿಗೆರೆ ನಗರದ ಬಳಿಯ ಭೂಮಿಯನ್ನು ಬಿಟ್ಟನು[೫೦]. ಬಾದಾಮಿ ಚಾಲುಕ್ಯರ ಇನ್ನೊಬ್ಬ ಸಾಮಂತನಾದ ಸಿಂದರಸನು ರಾಜಮಾನದ ಪ್ರಕಾರ ಎಂಟು ಮತ್ತರು ಭೂಮಿಯನ್ನು ಜಿನೇಂದ್ರಭವನಕ್ಕೆ ದತ್ತಿಯಾಗಿ ನೀಡಿದ್ದನ್ನು ಕ್ರಿ.ಶ. ೭೫೦ರ ಶಾಸನವೊಂದು ತಿಳಿಸಿದೆ[೫೧].

ರಾಷ್ಟ್ರಕೂಟ ಸಾಮಂತರಾದ ಸಲುಕಿ(ಚಾಲುಕ್ಯ)ಮನೆತನದ ರಾಜಾದಿತ್ಯನು ಬನವಾಸಿ-೧೨೦೦೦ವನ್ನು ಆಳುತ್ತಿರುವಾಗ ಮುಧರೆಯ ದೇಮಲ್ಲವ್ವೆ ಬಸದಿಗೆ ೨೦ ಮತ್ತರ ಭೂಮಿಯನ್ನು ನೀಡಿದ್ದಾನೆ[೫೨]. ರಾಷ್ಟ್ರಕೂಟರ ಇನ್ನೊಬ್ಬ ಸಾಮಂತರಸ ಚಲ್ಲಕೇತನ ಮನೆತನದ ಬಂಕೇಯರಸನು ಹಲವು ಬಸದಿಗಳಿಗೆ ದಾನ ನೀಡುವದರ ಜೊತೆಗೆ ಕದರಮಂಡಲಗಿಯ ಜಳಗರ ಬಸದಿಗೆ ದಾನ ನೀಡಿದನಲ್ಲದೇ[೫೩], ಕೊಣ್ಣೂರ ಗ್ರಾಮದಲ್ಲಿ ಬಸದಿಯನ್ನು ಕಟ್ಟಿಸಿ[೫೪], ದಾನವನ್ನು ಕೈಕೊಂಡಿದ್ದನ್ನು ಕ್ರಿ.ಶ. ೮೯೪ರ ಹಾಗೂ ಕ್ರಿ.ಶ. ೮೬೦ರ ಶಾಸನಗಳು ಉಲ್ಲೇಖಿಸುತ್ತವೆ. ರಟ್ಟಮನೆತನದ ಸಾಮಂತ ಪೃಥ್ವೀರಾಮನು ಜೈನಧರ್ಮದ ಅನುಯಾಯಿಯಾಗಿದ್ದು, ಅವನು ತನ್ನ ರಾಜಧಾನಿ ಸುಗಂಧವರ್ತಿ(ಪರಸಗಡ)ಯಲ್ಲಿ ಜಿನೇಂದ್ರಭವನ ಎಂಬ ಬಸದಿಯನ್ನು ಕಟ್ಟಿಸಿ ಅದಕ್ಕೆ ೮೦ ಮತ್ತರ ಭೂಮಿಯನ್ನು ನೀಡಿರುವನು[೫೫]. ಕದಂಬವಂಶದ ಸಾಮಂತಅರಸರುಗಳಾದ ಪೆರ್ಮದೇವ ಮತ್ತು ಧಡಿಯಮರಸರು ತಮಗೆ ಪುಣ್ಯವಾಗಲೆಂದು ಕೋಪಣದ(ಕೊಪ್ಪಳ) ಬಸದಿಯೊಂದಕ್ಕೆ ಕಳಸಾರೋಹಣ ನೆರವೇರಿಸಿದ ವಿಷಯ ಶಾಸನವೊಂದರಲ್ಲಿದೆ[೫೬]. ಚಲ್ಲಕೇತನ ಮನೆತನದ ಇನ್ನೊಬ್ಬ ಅರಸ ಲೋಕಟೆಯು ಬಂದಳಿಕೆಯಲ್ಲಿ[೫೭] ಪೆರ್ಗಡೆಯೊಬ್ಬ ಕಟ್ಟಿಸಿದ ಬಸದಿಗೆ ಭೂಮಿದಾನ ನೀಡಿದನಲ್ಲದೇ, ತನ್ನಿಂದ ನಿರ್ಮಿತವಾದ ಲೋಕಾಪೂರ ಗ್ರಾಮದಲ್ಲಿ ಉಳಿದ ದೇವಾಲಯಗಳ ಜೊತೆಗೆ ಜೈನಬಸದಿಯೊಂದನ್ನು ಕಟ್ಟಿಸಿ ಅದಕ್ಕೆ ದಾನನೀಡಿದ್ದನ್ನು ಶಾಸನ ಉಲ್ಲೇಖಿಸಿದೆ[೫೮]. ಸಾಮಂತರಸನಾದ ಕನ್ನರಯ್ಯನ ಮಡದಿಯಾದ ಚಂದಿಯಬ್ಬೆ ಎಂಬುವಳು ಹಲಹರವಿ ಗ್ರಾಮದಲ್ಲಿ ಬಸದಿಯೊಂದನ್ನು ಕಟ್ಟಿಸಿದಳು. ಈ ಬಸದಿಗೆ ಕನ್ನರಯ್ಯನು ದಾನ ನೀಡಿದ ವಿಷಯವನ್ನು ಕ್ರಿ.ಶ. ೯೩೨ರ ಶಾಸನವು ಉಲ್ಲೇಖಿಸಿದೆ[೫೯]. ಬನವಾಸಿ-೧೨೦೦೦ವನ್ನಾಳುತ್ತಿದ್ದ ಮಹಾಮಂಡಳೇಶ್ವರ ಶಂಕರಗಂಡನು ಕೊಪಣತೀರ್ಥದಲ್ಲಿ ಜಯಧೀರಜಿನಾಲಯವನ್ನು ಕಟ್ಟಿಸಿ ಅದರ ವ್ಯವಸ್ಥೆಗೆಂದು ಕುಕುನೂರು-೩೦ರಲ್ಲಿನ ಶಾಂತವೂಳ ಗ್ರಾಮದ ೩೦೦ ಮತ್ತರು ಭೂಮಿಯನ್ನು ದತ್ತಿಯಾಗಿ ನೀಡಿದನು[೬೦]. ಕ್ರಿ.ಶ. ೯೬೮ರ ಬೇವಿನಹಳ್ಳಿ ಶಾಸನ ಮಹಾಸಾಮಂತ ಚಾಲುಕ್ಯವಂಶದ ಪಂದಿಗನ ರಾಣಿ ಜಕ್ಕಿಸುಂದರಿ ಕಾಕಂಬಾಳದಲ್ಲಿ ಬಸದಿಯೊಂದನ್ನು ನಿರ್ಮಿಸಿದ ವಿಷಯ ಉಲ್ಲೇಖಿಸಿದೆ[೬೧]. ಕ್ರಿ.ಶ.

೧೦ನೆಯ ಶತಮಾನದ ಶ್ರವಣಬೆಳಗೊಳದ ಚಿಕ್ಕಬೆಟ್ಟದ ಚಾವುಂಡರಾಯ ಬಸದಿಯ ಶಾಸನ ಆ ಬಸದಿಯನ್ನು ಚಾವುಂಡರಾಯ ಮಾಡಿಸಿದನೆಂದು ತಿಳಿಸುತ್ತದೆ[೬೨].

ರಟ್ಟವಂಶದ ಮಹಾಸಾಮಂತ ಅಂಕಪಾಲನ ಮಡದಿ ಲಚ್ಚಿಯಬ್ಬರಸಿ ಬೆಳುವಲನಾಡಿನ ಹೂಲಿಯಲ್ಲಿ ಬಸದಿಯೊಂದನ್ನು ನಿರ್ಮಿಸಿ ಅದರ ಖಂಡಸ್ಫುಟಿತ ಜೀರ್ಣೋದ್ಧಾರಕ್ಕಾಗಿ ಭೂಮಿಯನ್ನು ಬಿಟ್ಟ ವಿಷಯವನ್ನು ಕ್ರಿ.ಶ. ೧೦೪೪ರ ಹೂಲಿಯ ಶಾಸನ ತಿಳಿಸಿದೆ[೬೩]. ಮಹಾಮಂಡಳೇಶ್ವರ ಕೊಂಗಾಳ್ವನ ತಾಯಿಯಾದ ಪೋಚಬ್ಬರಸಿ ಬಸದಿಯೊಂದನ್ನು ನಿರ್ಮಿಸಿ ಗುಣಸೇನಪಂಡಿತದೇವರಿಗೆ ಬಿಟ್ಟಿರುವದು ಕ್ರಿ.ಶ. ೧೦೫೮ರ ಶಾಸನವೊಂದರಲ್ಲಿದೆ[೬೪]. ಕ್ರಿ.ಶ. ೧೦೫೯ರ ಮುಳ್ಳೂರಿನ ಕೊಂಗಾಳ್ವವಂಶದ ಎರಡನೆಯ ರಾಜೇಂದ್ರನ ಶಾಸನವೊಂದು ಅವನು ತನ್ನ ತಂದೆ ಮುಳ್ಳೂರಿನಲ್ಲಿ ಕಟ್ಟಿಸಿದ ಬಸದಿಯೊಂದಕ್ಕೆ ಮೂರುಹಳ್ಳಿಗಳನ್ನು ದಾನಮಾಡಿದ ವಿಷಯ ತಿಳಿಸುತ್ತದೆ[೬೫]. ಮಹಾಮಂಡಳೇಶ್ವರ ವೀರಶಾಂತಾರನ ಪತ್ನಿಯಾದ ಚಾಗಲದೇವಿ ಕ್ರಿ.ಶ. ೧೦೬೨ರಲ್ಲಿ ಕುಲದೇವತೆ ನೊಕ್ಕಿಯಬ್ಬೆ ಹೆಸರಿನ ಪದ್ಮಾವತಿ ಬಸದಿಯ ಮುಂದೆ ಮಕರತೋರಣವನ್ನು ಮಾಡಿಸಿದ ಉಲ್ಲೇಖ ಹುಂಚದ ಶಾಸನವೊಂದರಲ್ಲಿದೆ[೬೬]. ಇದೇ ವೀರಶಾಂತಾರನ ಮಗನಾದ ತೈಲಪದೇವ ಭುಜಬಲಶಾಂತಾರನು ಪಟ್ಟಣಸ್ವಾಮಿಯೊಬ್ಬ ಮಾಡಿಸಿದ ತೀರ್ಥದ ಬಸದಿಗೆ ದಾನವನ್ನು ಬಿಟ್ಟ ವಿವರ ಕ್ರಿ.ಶ. ೧೦೭೭ರ ಶಾಸನದಲ್ಲಿದೆ[೬೭]. ಮಹಾಮಂಡಳೇಶ್ವರರಾದ ಶಾಂತಾರ ಮನೆತನದಲ್ಲಿ ಸಹಕಾರನೆಂಬುವವನು ನರಮಾಂಸಬ್ರತನಾಗಲು ಜಿನದತ್ತನೆಂಬುವ ಅವನ ಮಗ ಅದರಿಂದ ನೊಂದು ದಕ್ಷಿಣಾಭಿಮುಖವಾಗಿ ಬಂದು ಸಿಂಹರಥನೆಂಬ ಅರಸನನ್ನು ಕೊಂದು ಜಕ್ಕಿಯಬ್ಬೆಯನ್ನಾರಧಿಸಿ ಸಿಂಹಲಾಂಛನ ಪಡೆದು, ಕನಕಾಸುರನನ್ನು ಕೊಲ್ಲಲು ಪದ್ಮಾವತಿದೇವಿ ಮೆಚ್ಚಿ ಅವನಿಗೆ ಕನಕಪುರವೆನಿಸಿದ ಪೊಂಬುಚ್ಚವನ್ನು ರಾಜಧಾನಿಯನ್ನಾಗಿ ಮಾಡಿಕೊಟ್ಟಳು ಎಂದು ಹುಂಚದ ಕ್ರಿ.ಶ. ೧೦೭೭ರ ಶಾಸನ ಉಲ್ಲೇಖಿಸಿದೆ. ಅಲ್ಲದೇ ಇದೇ ವಂಶದ ರಕ್ಕಸಗಂಗ ಪೆರ್ಮಾಡಿಯ ಮಡದಿ ಚಟ್ಟಲದೇವಿ ಕೆರೆ, ಭಾವಿ, ಮುಂತಾದ ಸಾರ್ವಜನಿಕ ಕಾರ್ಯಗಳೊಂದಿಗೆ ಬಸದಿಯೊಂದನ್ನು ಕಟ್ಟಿಸಿದ ವಿಷಯವನ್ನು ಅದೇ ಶಾಸನ ತಿಳಿಸಿದೆ.[೬೮].

ಮಹಾಮಂಡಳೇಶ್ವರ ಕದಂಬ ಕೀರ್ತಿವರ್ಮನ ಮಡದಿ ಮಾಳಲದೇವಿ ಜಿನಬಸದಿ, ಮಿಳಿರ್ವಪತಾಕೆ, ಮಕರತೋರಣ, ಮಾನಗಂಬ, ಚೈತ್ಯಗ್ರಹಗಳನ್ನು ನಿರ್ಮಿಸಿ ಶತಕೋಟಿನೊಂಪಿಯ ಸಮಾನಕಾರ್ಯ ಮಾಡಿದಳಲ್ಲದೇ, ಕುಪ್ಪಟ್ಟೂರಿನ ಪಾರ್ಶ್ವನಾಥ ಚೈತ್ಯಾಲಯವನ್ನು ನಿರ್ಮಿಸಿ ಅದಕ್ಕೆ ಬ್ರಹ್ಮಜಿನಾಲಯವೆಂದು ಹೆಸರಿಟ್ಟು, ಸಿಡ್ಡಣಿವಳ್ಳಿಯನ್ನು ದತ್ತಿಯಾಗಿ ಕೊಟ್ಟ ವಿವರ ಕಳಸವಳ್ಳಿಯ ಕ್ರಿ.ಶ. ೧೦೭೭ರ ಶಾಸನದಲ್ಲಿ ಬರುತ್ತದೆ[೬೯]. ಕ್ರಿ.ಶ. ೧೦೭೮ರ ಶಾಸನವೊಂದರಿಂದ ಮಹಾಸಾಮಂತ ಗಂಡರಾದಿತ್ಯನ ಮಗ ಮಾಚಯ್ಯನ ಮಡದಿಯಾದ ಮಾಕಲದೇವಿ ದಾನವ್ರತಮೆಸೆಯ ಚೈತ್ಯಗ್ರಹಮನೆತ್ತಿರ್ಯೋಳೊಪ್ಪೆ ಮಾಡಿಸಿದಂತೆ ತಿಳಿಯುತ್ತದೆ[೭೦]. ಚಾಲುಕ್ಯ ಆರನೆಯ ವಿಕ್ರಮಾದಿತ್ಯನ ಮಹಾಮಂಡಳೇಶ್ವರನಾದ ಎರೆಗಂಗಪೊಯ್ಸಳನು ಗಂಗಮಂಡಳವನ್ನು ಆಳುತ್ತಿದ್ದಾಗ, ಕ್ರಿ.ಶ. ೧೦೯೪ರಲ್ಲಿ ಬೆಳ್ಗೊಳದ

ಕಳ್ಬಪ್ಪುತೀರ್ಥದ ಬಸದಿಗಳ ಜೀರ್ಣೋದ್ಧಾರಕ್ಕಾಗಿ ರಾಚನಹಳ್ಳಿ ಹಾಗೂ ಬೆಳ್ಗೊಳ-೧೨ನ್ನು ದತ್ತಿಯಾಗಿ ಬಿಟ್ಟುಕೊಟ್ಟನು[೭೧].

ಬನವಾಸಿ ಕದಂಬವಂಶದ ಮಹಾಮಂಡಳೇಶ್ವರ ಎರೆಯಂಗದೇವನ ಮಡದಿಯಾದ ಅಸವಬ್ಬರಸಿ ಬಸದಿಯೊಂದನ್ನು ಮಾಡಿಸಿ ಅದಕ್ಕೆ ಭೂಮಿಯನ್ನು ಬಿಟ್ಟ ವಿಷಯ ಕ್ರಿ.ಶ. ೧೧೯೬ರ ಶಾಸನದಲ್ಲಿದೆ[೭೨]. ಕ್ರಿ.ಶ. ೧೧೨೨ರ ಶಾಸನ ತಿಳಿಸುವಂತೆ ಮಹಾಮಂಡಳೇಶ್ವರ ನನ್ನಿಯಗಂಗದೇವ ಮತ್ತು ಕಂಚಲಮಹಾದೇವಿಯರು ಪದ್ಮಾವತಿಗೆ ಹರಸಿಕೊಂಡು, ಹೆಮ್ಮಾಡಿದೇವನನ್ನು ಪಡೆದು ಕಾಣಿಕೆ ಸಲ್ಲಿಸಿದರು[೭೩]. ಹೊಯ್ಸಳ ವಿಷ್ಣುವರ್ಧನನ ಸಾಮಂತ ಸೋಮನು ಕಲುಕುಣಿನಾಡಿನ ಹೆಬ್ಬಿದಿರೂರ್ವಾಡಿಯಲ್ಲಿ ಚೈತ್ಯಾಲಯವೊಂದನ್ನು ನಿರ್ಮಿಸಿ ಅಲ್ಲಿ ಪಾರ್ಶ್ವನಾಥನನ್ನು ಪ್ರತಿಷ್ಠಾಪಿಸಿ, ಅದಕ್ಕೆ ದತ್ತಿಯನು ಬಿಟ್ಟನೆಂದು ಕ್ರಿ.ಶ. ೧೧೪೨ರ ಶಾಸನ ಹೇಳಿದೆ[೭೪]. ಹೊಯ್ಸಳ ಎರಡನೆಯ ಬಲ್ಲಾಳನ ಸಾಮಂತ ನರಸಿಂಗನಾಯಕನ ಪಟ್ಟಣಸ್ವಾಮಿ ಸೋವಿಸೆಟ್ಟಿ ಜಿನಪಾರ್ಶ್ವದೇವ ಆಲಯವನ್ನು ಮಾಡಿಸಿ ಅದಕ್ಕೆ ದತ್ತಿಯನ್ನು ಬಿಟ್ಟಂತೆ ಕ್ರಿ.ಶ. ೧೧೭೮ರ ಶಾಸನ ಉಲ್ಲೇಖಿಸಿದೆ[೭೫].

ಈ ರೀತಿಯಾಗಿ ಜೈನಧರ್ಮಕ್ಕೆ ಸಾಮಂತರಸರು, ಅವರರ ರಾಣಿಯರು ಹಾಗೂ ಸಾಮಾನ್ಯಜನರು ತಾವು ನಂಬಿ, ಆರಾಧಿಸಿದ ಬಸದಿಗಳನ್ನು ಕಟ್ಟಿಸಿದುದಲ್ಲದೇ, ಅವುಗಳ ನಿರ್ವಹಣೆಗಾಗಿ ಅನೇಕ ರೀತಿಯ ದಾನ-ದತ್ತಿಗಳನ್ನು ನೀಡಿ ಅಮರರಾಗಿದ್ದಾರೆ.

ಜೈನಮುನಿಗಳ ಹೆಸರನ್ನು ಹೇಳುವಾಗ ಅವರ ಸಂಘ, ಗಣ, ಗಚ್ಛ ಮತ್ತು ಅನ್ವಯ ಇವುಗಳ ಜೊತೆಗೆ ಬಳ್ಳಿಗಳನ್ನು ಹೇಳುವ ಸಂಪ್ರದಾಯ ಬಹುಕಾಲದಿಂದಲೂ ಕಂಡುಬರುತ್ತದೆ[೭೬]. ಜೈನಧರ್ಮದ ದಿಗಂಬರ ಪಂಥದಲ್ಲಿ ಸಂಘ, ಗಣ, ಗಚ್ಛ, ಅನ್ವಯ, ಬಳ್ಳಿ ಎಂಬ ಭೇದಗಳಿದ್ದವು. ಇವುಗಳ ಹುಟ್ಟು ಮತ್ತು ಒಂದರಿಂದ ಇನ್ನೊಂದಕ್ಕಿರುವ ವ್ಯತ್ಯಾಸದ ಕುರಿತು ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ[೭೭].

ಭಗವಾನ್ ಮಹಾವೀರನು ತನ್ನ ತತ್ವಜ್ಞಾನವು ಜನಸಾಮಾನ್ಯರನ್ನು ತಲುಪುವದಕ್ಕಾಗಿ ಸಂಘದ ಯೋಜನೆಯನ್ನು ಹಾಕಿದನು. ಅದಕ್ಕೆ ಜೈನ ಸಂಘ ಎಂದು ಹೆಸರು. ಇದು ಮುನಿ-ಆರ್ಯಿಕಾ ಮತ್ತು ಶ್ರಾವಕ-ಶ್ರಾವಿಕಾ ಇವರಿಂದ ಕೂಡಿದುದಾಗಿರುತ್ತದೆ. ಇವರಿಲ್ಲಿ ಮುನಿ-ಆರ್ಯಿಕೆಯರು ಗೃಹತ್ಯಾಗಿಗಳು. ಶ್ರಾವಕ-ಶ್ರಾವಿಕೆಯರು ಗೃಹಜೀವನದವರು[೭೮]. ಮೂಲ, ನಂದಿ, ಯಾಪನೀಯ, ಯಾಪನೀಯ ನಂದಿ, ದ್ರಾವಿಡ, ಶ್ರೀಸಂಘ ಮೊದಲಾದವುಗಳು ಪ್ರಮುಖ ಸಂಘಗಳಾಗಿವೆ. ಅಲ್ಲದೇ ಸಾಮಾನ್ಯವಾಗಿ ಗಣ, ಗಚ್ಛ(ಬಲಿ), ಅನ್ವಯ ಎಂದೂ ಕರೆಯುವ ರೂಢಿಯುಂಟು. ದೇವ, ಸೇನ, ಬಲತ್ಕಾರ, ಬಳಗಾರಿ, ದೇಶೀಯ, ದ್ರಮಿಳ, ಪುನ್ನಾಗ ವೃಕ್ಷ, ಮೂಲ, ನಂದಿಗವಾಟ, ಸ್ತುರಸ್ತ, ಕಾಣೂರ, ಕಾರೆಯ, ಆಜ್[೭೯] ಮೊದಲಾದವು ವಿವಿಧ ಗಣಗಳಾಗಿವೆ. ಗಚ್ಛಗಳಲ್ಲಿ ಉಪಕೇಶಗಚ್ಛ, ಖರತರಗಚ್ಛ, ತಪಾಗಚ್ಛ, ಪಾರ್ಶಚಂದ್ರಗಚ್ಛ, ಸಾರ್ಧಪೌರ್ಣಮೀಯಕ-ಗಚ್ಛ, ಅಂತಲಗಚ್ಛ, ಆಗಮಿಕಗಚ್ಛ[೮೦] ಮುಂತಾದವುಗಳು

ಪ್ರಮುಖವಾಗಿವೆ. ಇನ್ನು ಪೊರಳ್, ಪಾಷಾಣ, ಕೊಂಡಕುಂದ, ಅರುಂಗಳ, ಕೀರ್ತಾಚಾರ್ಯ, ಹನಸೋಗೆ, ಮೈಲಾಪ ಇತ್ಯಾದಿಗಳು ಅನ್ವಯಗಳಾಗಿವೆ.

ಬಸದಿ, ಜಿನಾಲಯಗಳು ಮೊದಮೊದಲು ದೇಶ ಪರ್ಯಟನದಲ್ಲಿದ್ದ ಜಿನಮುನಿಗಳ ತಾತ್ಪೂರ್ತಿಕ ವಾಸಸ್ಥಾನಗಳಿದ್ದು, ನಂತರ ಅವು ಸದಾ ಜಿನಮುನಿಗಳು ವಾಸಿಸುವ ತಾಣಗಳಾದಂತೆ ತೋರುತ್ತದೆ. ಏಕೆಂದರೆ ಜಿನಾಲಯಗಳಲ್ಲಿ ಜಿನಮುನಿಗಳು ಇರುವ ಪ್ರಸ್ತಾಪ ಶಾಸನಗಳಲ್ಲಿ ಕಂಡುಬರುತ್ತದೆ. ಧರ್ಮಪ್ರಚಾರಕ್ಕಾಗಿ ವೈದಿಕ ದೇವಾಲಯಗಳಲ್ಲಿ ಅವುಗಳ ಪೂಜೆ-ಪುನಸ್ಕಾರಕ್ಕೆಂದು ಸ್ಥಾನಪತಿಗಳು, ಸ್ಥಾನಾಚಾರ್ಯರು, ಪಂಡಿತರು, ಮಹಾಜನರಿರುವಂತೆ ಜೈನಧರ್ಮದಲ್ಲಿಯೂ ಕೂಡ ಆಚಾರ್ಯ, ಪಂಡಿತ, ಮುನಿಗಳಿರುತ್ತಿದ್ದರು. ಈ ಮುನಿಗಳಲ್ಲಿ ಕೆಲವರು ವಿದ್ವತ್‌ನ್ನು ಪಡೆದು ಕೊಂಡವರಾಗಿದ್ದರೆ, ಇನ್ನು ಕೆಲವರು ಉಳಿದ ಧರ್ಮಗಳ ಸಾಹಿತ್ಯಗಳಲ್ಲಿ ಅದ್ಭುತವಾದ ಪಾಂಡಿತ್ಯವನ್ನು ಹೊಂದಿರುತ್ತಿದ್ದರು. ಜೈನಮುನಿಗಳು ಹಾಗೂ ಅವರ ಸಂಘ, ಗಣ, ಗಚ್ಛ, ಅನ್ವಯ, ಬಳ್ಳಿಗಳ ಕುರಿತು ಇದೇ ಪ್ರಬಂಧದ ಆರನೆಯ ಅಧ್ಯಾಯದಲ್ಲಿ ವಿವರಣೆ ನೀಡಲಾಗಿದೆ.

## ವೈಷ್ಣವಧರ್ಮ :

ವೇದಮೂಲದ ದ್ವೈತ, ಅದ್ವೈತ ಮತ್ತು ವಿಶಿಷ್ಟಾದ್ವೈತಗಳು ವೈದಿಕಧರ್ಮದ ಪಂಥಗಳಾಗಿವೆ. ಇವುಗಳನ್ನು ಒಟ್ಟುಗೂಡಿಸಿ ವೈಷ್ಣವ ಧರ್ಮವೆಂದು ಕರೆಯಲಾಗುತ್ತದೆ. ವೇದಮೂಲದ ಈ ಧರ್ಮ ಉತ್ತರ ಭಾರತದಿಂದ ಕ್ರಿಸ್ತಶಕ ಪೂರ್ವದಲ್ಲಿ ದಕ್ಷಿಣ ಭಾರತವನ್ನು ಪ್ರವೇಶಿಸಿತು. ಈ ಧರ್ಮದ ಬೆಳವಣಿಗೆಯನ್ನು ಭಾಗವತ, ವೈಷ್ಣವ ಹಾಗೂ ದ್ವೈತವೆಂಬ ಮೂರು ಶಾಖೆಗಳಲ್ಲಿ ಗುರುತಿಸಲಾಗುತ್ತದೆ[೧]. ಶಾತವಾಹನರ ಕಾಲದ ನಂತರ ದಕ್ಷಿಣ ಭಾರತದಲ್ಲಿ ರಾಜ್ಯಭಾರ ಮಾಡಿದ ಎಲ್ಲ ಅರಸುಮನೆತನಗಳು ಈ ಧರ್ಮಕ್ಕೆ ರಾಜಾಶ್ರಯವನ್ನು ನೀಡಿ ಪ್ರೋತ್ಸಾಹಿಸಿದಂತೆ ಅವರ ಸಾಮಂತ ಅರಸರೂ ಕೂಡ ರಾಜಾಶ್ರಯ ನೀಡಿ ವೈಷ್ಣವ ಧರ್ಮದ ಉನ್ನತಿಗೆ ಕಾರಣೀಭೂತರಾಗಿದ್ದಾರೆ.

ಕೃಷ್ಣನ ಅವತಾರಗಳಲ್ಲಿ ಒಂದಾದ ವರಾಹ ಅವತಾರವನ್ನು ಗಂಗ ರಣವಿಕ್ರಮ ರಾಚಮಲ್ಲನ ಕಾಲದ ಕ್ರಿ.ಶ. ೯೮೦ರ ಶಾಸನ ಉಲ್ಲೇಖಿಸಿದೆ[೨]. ಹಲವಾರು ಸಾಮಂತರಸರ ತಾಮ್ರ ಶಾಸನಗಳ ಪ್ರಾರ್ಥನಾ ಪದ್ಯಗಳು ಶಿವ-ವಿಷ್ಣುವಿನ ಪ್ರಾರ್ಥನೆಯಿಂದ ಪ್ರಾರಂಭವಾಗಿರುವದನ್ನು ನೋಡಬಹುದು. ಸಾಮಾನ್ಯವಾಗಿ ವೈಷ್ಣವ ಮತಸ್ಥರು ವೇದ ಪಾರಂಗತರಾಗಿ ದ್ವಿವೇದ, ಚತುರ್ವೆದಗಳನ್ನು ಕರಗತಮಾಡಿಕೊಂಡಿದ್ದರಲ್ಲದೇ ಇವರು ಅಗ್ರಹಾರದ ಮಹಾಜನರೆನಿಸಿ ಅವುಗಳ ಆಡಳಿತವನ್ನು ನೋಡಿಕೊಳ್ಳುತ್ತಿರುವದು ಇವರ ಕರ್ತವ್ಯವಾಗಿತ್ತು. ಅದರ ಜೊತೆಯಲ್ಲಿ ಯಜನ, ಯಾಜನ, ಅಧ್ಯಯನ, ಅಧ್ಯಾಪನ, ದಾನ, ಪ್ರತಿಗ್ರಹ ಮೊದಲಾದ ಷಟ್ಕರ್ಮಗಳನ್ನು ಮಾಡುವದರಲ್ಲಿ ನಿರತರಾಗಿರುತ್ತಿದ್ದರು. ಅಂದಿನ ಸಮಾಜವ್ಯವಸ್ಥೆಯಲ್ಲಿ ವರ್ಣಾಶ್ರಮ ಪದ್ಧತಿಯನ್ನು ತಪ್ಪದೇ ನಡೆಸಿಕೊಂಡು ಬಂದ ವೈಷ್ಣವರು ರಾಜಕೀಯ ರಂಗದಲ್ಲಿಯೂ ಕೂಡಾ ಪ್ರಮುಖ ಸ್ಥಾನ ಪಡೆದಿದ್ದರು. ಇವರಲ್ಲಿ ಅನೇಕರು ಮಂತ್ರಿ, ದಂಡನಾಯಕ, ಅಧಿಕಾರಿ,

ವಿಪ್ರಕುಳ ತಿಲಕರಾಗಿದ್ದರೆಂಬುದನ್ನು ಇದೇ ಪ್ರಬಂಧದ ಐದನೆಯ ಅಧ್ಯಾಯ ಆಡಳಿತ ವ್ಯವಸ್ಥೆಯಲ್ಲಿ ಬರುವ ಅಧಿಕಾರಿಗಳ ಹೆಸರು ಮತ್ತು ಅವರು ಹೊಂದಿದ ಹುದ್ದೆಯಿಂದ ಮನಗಾಣಬಹುದಾಗಿದೆ.

ವೈಷ್ಣವರಿಗಿರುವ ಜ್ಞಾನ ಮತ್ತು ಶಾಸ್ತ್ರಪರಿಜ್ಞಾನಗಳು ಅಂದಿನ ಸಮಾಜದಲ್ಲಿ ವಿಶೇಷ ಮನ್ನಣೆಯನ್ನು ತಂದುಕೊಟ್ಟಿದ್ದವು. ವೈಷ್ಣವರ ಪ್ರಾಮುಖ್ಯತೆ ಅಂದಿನ ಸಮಾಜದಲ್ಲಿ ಹೆಚ್ಚಾಗಿದ್ದಂತೆ ತೋರುತ್ತದೆ. ವೇದಪಾರಂಗತರಾದ ವಿಪ್ರರು ಕೇವಲ ಅಗ್ರಹಾರ, ಬ್ರಹ್ಮಪುರಿ, ಘಟಿಕಾಸ್ಥಾನಗಳ ಆಡಳಿತ ನೋಡಿಕೊಳ್ಳುವದರಲ್ಲಿ ಕಾಲಕಳೆಯದೇ, ತಾವಿದ್ದ ಅಗ್ರಹಾರ, ಬ್ರಹ್ಮಪುರಿ ರಾಜಧಾನಿ ಪಟ್ಟಣಗಳಲ್ಲಿ ಸಾಮಂತರಸರಿಗೆ, ರಾಜಕೀಯ ಸಲಹೆ-ಸೂಚನೆಗಳನ್ನು ನೀಡುತ್ತಿದ್ದರು. ಮತ್ತು ಸಾಮಾಜಿಕ ಜೀವನದಲ್ಲಿ ಧಾರ್ಮಿಕ ಚಟುವಟಿಕೆಗಳನ್ನು ಕೈಕೊಂಡು ಉಳಿದ ವರ್ಗದ ಜನರು ಮಾಡಿದ, ನೆರವೇರಿಸಿದ ಕಾರ್ಯಗಳಾದ ದೇವಾಲಯಗಳ ನಿರ್ಮಾಣ, ಜೀರ್ಣೋದ್ಧಾರ, ನೈವೇದ್ಯ ಇತ್ಯಾದಿ ಕಾರ್ಯಕ್ಕೆ ದತ್ತಿ-ದಾನಗಳನ್ನು ನೀಡಿರುವದನ್ನು ಶಾಸನಗಳಿಂದ ಕಾಣುತ್ತೇವೆ. ಮಹಾಜನರೆನಿಸಿಕೊಂಡ ಬ್ರಾಹ್ಮಣರ ಕುರಿತು ಸಾಮಾಜಿಕ ವ್ಯವಸ್ಥೆಯೆಂಬ ಆರನೆಯ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಗಂಗ ದುರ್ವಿನೀತನ ಮಗನಾದ ಪೋಲವೀರನು ಕೌಶಿಕಗೋತ್ರದ ಷಟ್ಕರ್ಮನಿರತನಾದ ನಾಗಶರ್ಮನೆಂಬುವನಿಗೆ ಸೇಂದ್ರಕವಿಷಯದ ವಳಾವಿದೇಶದಲ್ಲಿರುವ ಪಲಚ್ಚೋಗೆ ಗ್ರಾಮವನ್ನು ದಾನವಾಗಿ ನೀಡಿದನೆಂದು ಕ್ರಿ.ಶ. ೬ನೆಯ ಶತಮಾನದ ತಗರೆಯ ಶಾಸನ ತಿಳಿಸಿದೆ[೯೩]. ಬಾದಾಮಿ ಚಾಲುಕ್ಯ ವಿನಯಾದಿತ್ಯನ ಸಾಮಂತನಾದ ಅಳುಪರ ಚಿತ್ರವಾಹನನು ಋಗ್ವೇದದಲ್ಲಿ ಪಂಡಿತನಾದ ದಿವಾಕರಶರ್ಮನೆಂಬುವವನಿಗೆ ಎಡೆವೊಳಲ್‌ವಿಷಯದಲ್ಲಿನ ಸಾಲಿವೊಗೆ ಗ್ರಾಮವನ್ನು ದತ್ತಿಯಾಗಿ ನೀಡದನೆಂದು ಸೊರಬದ ಕ್ರಿ.ಶ. ೬೯೨ರ ಶಾಸನವೊಂದು ಉಲ್ಲೇಖಿಸಿದೆ[೯೪]. ನೊಳಂಬವಂಶದ ಪಲ್ಲವ ನೊಳಂಬ ಪೆರ್ಮಾಡಿಯ ಮಡದಿ ಗವಣಗಬ್ಬೆಯು ಮದಕರಿಕಲ್ಲ ರಾಜ್ಯಾಡಳಿತದಲ್ಲಿ ಇದ್ದಾಗ ಅವರ ನಾಗಮಾರಬೆ ಮಾಡಿಸಿದ ಶಿವಾಲಯಕ್ಕೆ ವಿಷ್ಣುಪಾದ ಮೆಲುದು ೧೪ ಮತ್ತರು ಭೂಮಿಯನ್ನು ನೀಡಿದ್ದನ್ನು ಕ್ರಿ.ಶ. ೮೧೫ರ ಶಾಸನ ತಿಳಿಸಿದೆ[೯೫]. ನೊಳಂಬಾದಿರಾಜ ಎರಡನೆಯ ಪೊಳಲ್‌ಚೋರನ ಮಡದಿ ಕದಂಬವಂಶೋದ್ಭವೆ ದೀವಳಬ್ಬರಸಿ ಪತಿಯ ಮರಣಾನಂತರ ಆತನ ಹೆಸರಿನಿಂದ ಪೊಳಲ್ಚೋರ ಮಂಗಲವೆಂಬ ಅಗ್ರಹಾರ, ಮಗ ಮಹೇಂದ್ರನ ಹೆಸರಿನಿಂದ ಒಂದು ಕೊಳವನ್ನು ಹಾಗೂ ವಿಷ್ಣುಗ್ರಹವೊಂದನ್ನು ಕ್ರಿ.ಶ.೮೪೦ರಲ್ಲಿ ನಿರ್ಮಿಸಿ ದಾನಗೈದಳಲ್ಲದೇ[೯೬], ಅವನಿ ಗ್ರಾಮದಲ್ಲಿ ನೊಳಂಬನಾರಾಯಣೇಶ್ವರ ದೇವಾಲಯ ಕಟ್ಟಿಸಿ ಯಶನಗರವನ್ನು ದಾನ ನೀಡಿದಳು[೯೭]. ಮೇವುಂಡಿ ಗ್ರಾಮದಲ್ಲಿ ಸಾಮಂತರಸನೊಬ್ಬ(ಹೆಸರು ತಿಳಿದಿಲ್ಲ) ಕೋಯಿಣೇಶ್ವರನೆಂಬ ವಿಷ್ಣು ದೇವಾಲಯವನ್ನು ಕಟ್ಟಿಸಿದನ್ನು ಕ್ರಿ.ಶ. ೮೯೬ರ ಶಾಸನ ಉಲ್ಲೇಖಿಸಿದೆ[೯೮]. ರಾಷ್ಟ್ರಕೂಟ ಕನ್ನರದೇವನ ಮಹಾಸಾಮಂತಾಧಿಪತಿಯಾದ ಮಾಚಿಯರಸನು ಬನವಾಸೆ-೧೨೦೦೦ವನ್ನು ಆಳುತ್ತಿದ್ದಾಗ, ಎಡೆನಾಡಿನ ಪೆರ್ಗಡೆಯಾದ ನಾಕಿಯಚಟ್ಟರಸನು ದೇವಾಲಯವೊಂದನ್ನು

ಕಟ್ಟಿಸಿದನು. ಅಲ್ಲಿ ಪೊಲೆಯಮ್ಮನ ಮಡದಿ ಗೊಮ್ಮಬ್ಬೆ ಎಂಬುವಳು ಕೇಶವದೇವರನ್ನು ಪ್ರತಿಷ್ಠಾಪಿಸಿ ಭೂಮಿಯನ್ನು ಬಿಟ್ಟಳೆಂದು ಕ್ರಿ.ಶ. ೯೩೮ರ ಶಾಸನದಿಂದ ತಿಳಿದುಬರುತ್ತದೆ[೮೯]. ಮೂರನೆಯ ಕೃಷ್ಣನ ಸಾಮಂತನಾದ ಚೆಲ್ಲಕೇತನ ಮನೆತನದ ಲೋಕಟೆಯು ಲೋಕಾಪೂರದಲ್ಲಿ ಹರಿ ಎಂಬ ವಿಷ್ಣುವಿನ ಗುಡಿಯನ್ನು ಕಟ್ಟಿಸಿದನೆಂದು ಲೋಕಾಪುರ ಶಾಸನ ಹೇಳುತ್ತದೆ[೯೦]. ಕ್ರಿ.ಶ. ೯೮೧ರ ಶಾಸನವೊಂದು ತಿಳಿಸುವಂತೆ ನೊಳಂಬವಂಶದ ವೀರನೊಳಂಬ ಪಲ್ಲವ ಪೆರ್ಮಾನಡಿಯ ಮಹಾದೇವಿ ರೇವಲದೇವಿಯು ಎರಡು ವಿಷ್ಣುದೇವಾಲಯಗಳಿಗೆ ೧೨ಮತ್ತರು ಭೂಮಿಯನ್ನು ದತ್ತಿಯಾಗಿ ನೀಡಿದ್ದಳು[೯೧].

ಕ್ರಿ.ಶ. ೧೦ನೆಯ ಶತಮಾನದ ಶಾಸನವೊಂದು ಮಹಾಸಾಮಂತ ನರಸಿಂಗಯ್ಯನೆಂಬುವನು ನರಸಿಂಹದೇವಾಲಯವನ್ನು ಮಾಡಿಸಿ ಅದಕ್ಕೆ ಮಣಲೆವಾಡಿ ಗ್ರಾಮವನ್ನು ದತ್ತಿಯಾಗಿ ಬಿಟ್ಟನೆಂದು ತಿಳಿಸುತ್ತದೆ[೯೨]. ಗಂಗರ ಎರೆಯಪ್ಪನ ಆಳ್ವಿಕೆಯಲ್ಲಿ ನೊಳಂಬರ ಕೊಲ್ಲಿಯರಸ ಹಾಗೂ ಅವನ ಮಗ ಸೇರಿ ತಿಪ್ಪೇರೂರು ಗ್ರಾಮವನ್ನು ಕೌಶಿಕಗೋತ್ರದ ಪೊನ್ನದಿ ಎಂಬುವನಿಗೆ ಬ್ರಹ್ಮದೇಯವಾಗಿ ನೀಡಿದ ವಿಷಯ ಶಾಸನವೊಂದರಲ್ಲಿದೆ[೯೩]. ಕದಂಬ ಮಹಾಮಂಡಳೇಶ್ವರ ದಯಾಸಿಂಹನ ತಾಯಿಯಾದ ದುದ್ದರಸನ ಮಡದಿ ಮೇಚಲದೇವಿಯು ವಾಸುದೇವ ದೇವಾಲಯವನ್ನು ನಿರ್ಮಿಸಿ ಅಲ್ಲಿ ಪೂಜೆ, ನೈವೇದ್ಯ ಮುಂತಾದ ಕಾರ್ಯಗಳಿಗಾಗಿ ಭೂಮಿಯನ್ನು ಬಿಟ್ಟದ್ದಲ್ಲದೇ, ಕುಂಬಾರಹಳ್ಳಿಯನ್ನು ದೇವರ ಬ್ರಹ್ಮಹಳ್ಳಿಯನ್ನಾಗಿ ಮಾಡಿ ಐವರು ಬ್ರಾಹ್ಮಣರಿಗೆ ದತ್ತಿಯಾಗಿ ಬಿಟ್ಟಳೆಂದು ಕ್ರಿ.ಶ. ೧೦೯೫ರ ಶಾಸನದಿಂದ ತಿಳಿದುಬರುತ್ತದೆ[೯೪]. ಎರೆಯಮರಸನೊಡನೆ ಸೇರಿ ಏಚಲದೇವಿಯು ವಡಗೂರಿನ ನಾರಾಯಣದೇವರಿಗೆ ಸೇವೆಯನ್ನು ಸಲ್ಲಿಸಿದ್ದನ್ನು ಬೇಲೂರು ತಾಲೂಕಿನ ಕ್ರಿ.ಶ. ೧೧ನೆಯ ಶತಮಾನದ ಶಾಸನವೊಂದು ಉಲ್ಲೇಖಿಸುತ್ತದೆ[೯೫]. ಅಕ್ಕಲಕೋಟ ಶಿಲಹಾರ ಶಾಖೆಯ ಮಹಾಮಂಡಳೇಶ್ವರ ಮನ್ನೆಯ ಇಂದರಸನು ದಂಡನಾಯಕ ಮಾಧವಭಟ್ಟ ದೈಲಾಣದಲ್ಲಿ ಮಾಡಿಸಿದ ಕೇಶವದೇಗುಲಕ್ಕೆ ಹಾಗೂ ಅಲ್ಲಿನ ಬ್ರಹ್ಮಪುರಿಯ ಬ್ರಾಹ್ಮಣರಿಗೆ ಸಣ್ಣಖೇಡದಲ್ಲಿನ ಭೂಮಿಯನ್ನು ದಾನವಾಗಿ ನೀಡಿದ್ದನ್ನು ಕ್ರಿ.ಶ. ೧೧೨೨ರ ಅಕ್ಕಲಕೋಟದ ಶಾಸನ ತಿಳಿಸಿದೆ[೯೬]. ಕ್ರಿ.ಶ. ೧೧೨೪ರ ಧಾರವಾಡ ತಾಲೂಕಿನ ಗೂಗಿಕಟ್ಟಿಯ ಶಾಸನ ತಿಳಿಸುವಂತೆ ಕದಂಬ ಮಹಾಮಂಡಳೇಶ್ವರ ಜಯಕೇಶಿಯ ಮಡದಿಯಾದ ಮೈಳಲದೇವಿಯು ಕೇಶವದೇವರ ಪ್ರತಿಷ್ಠೆಯನ್ನು ಮಾಡಿದಳು[೯೭]. ಮುತ್ತಿಗೆ ಶಿಲಹಾರ ಮನೆತನದ ಅರಸರುಗಳಾದ ಡಾಕರಸ, ಗೋಣರಸ, ಅಮ್ಮರಸ, ಅಹುಮಲ್ಲರಸರು ಸೇರಿಕೊಂಡು ತರ್ದವಾಡಿ-೧೦೦೦ದೊಳಗಣ ಮುತ್ತಗೆ-೩೦ರ ಮೊದಲಬಾಡವಾದ ಮುತ್ತಿಗೆಯಲ್ಲಿ ಕೈಹಿಸೆಟ್ಟಿಯು ಪ್ರತಿಷ್ಠೆಮಾಡಿದ ದಕ್ಷಿಣಾಮುಖ ಚೆನ್ನಕೇಶವದೇವರಿಗೆ ಹೆಬ್ಬಾಳು-೧೨ರಲ್ಲಿಯ ಮಣಿಯೂರ ಮನ್ನೆಯವಣವನ್ನು ಬಿಟ್ಟದ್ದನ್ನು ಕ್ರಿ.ಶ. ೧೧೪೭ರ ಮುತ್ತಿಗೆಯ ಶಾಸನ ಉಲ್ಲೇಖಿಸಿದೆ[೯೮].

ಕ್ರಿ.ಶ. ೧೧೬೭ರಲ್ಲಿ ಹೊಯ್ಸಳ ನರಸಿಂಹನ ಸಾಮಂತ ಮಾಚಿ ಮತ್ತು ಅನೇಕರು ಕೂಡಿ ಎಣ್ಣೆನಾಡಿನ ಹಟ್ಟಲೂರಿನಲ್ಲಿ ಮಂಡಲಸ್ವಾಮಿ ಮಲ್ಲಿದೇವ ಮಾರಾಯ ಹಾಗೂ ತಿಬ್ಬಾಡಿಯೂರಿನ ಹೊಯ್ಸಳ ಮಾರಾಯರು ಮಾಡಿಸಿದ ಕೇಶವದೇವರಿಗೆ ತಿಬ್ಬಹಳ್ಳಿ ಹಾಗೂ ಬೆಳ್ಳಿಯೂರುಗಳನ್ನು ದತ್ತಿಯಾಗಿ ನೀಡಿದರೆಂದು ಹರಳುಕೋಟೆ ಶಾಸನದಿಂದ ತಿಳಿದುಬರುತ್ತದೆ[೯೯]. ಹೊಯ್ಸಳ ಎರಡನೆಯ ನರಸಿಂಹನ ಮಹಾಸಾಮಂತ ಭುಜಬಳ ವೀರರಾಜೇಂದ್ರನು ಲಕ್ಷ್ಮೀನಾರಾಯಣ ದೇಗುಲವನ್ನು ನಿರ್ಮಿಸಿ ಆ ದೇವರ ಅಂಗ-ರಂಗಭೋಗ, ಜೀರ್ಣೋದ್ಧಾರ, ಅಷ್ಟವಿಧಾರ್ಚನೆ ಹಾಗೂ ವೈಷ್ಣವರ ಆಹಾರದಾನಕ್ಕಾಗಿ ಭೂಮಿಯನ್ನು ಬಿಟ್ಟ ವಿಷಯ ಕ್ರಿ.ಶ. ೧೨೨೩-೨೪ರ ಬೆಳ್ಳೂರಿನ ಶಾಸನದಲ್ಲಿದೆ[೧೦೦]. ಕ್ರಿ.ಶ. ೧೨೪೬ರ ಶಾಸನವೊಂದು ರಟ್ಟವಂಶದ ಮಹಾಸಾಮಂತನಾದ ಕಾರ್ತವೀರ್ಯನ ಆಳ್ವಿಕೆಯ ಕಾಲದಲ್ಲಿ ನಾಗದೇವ ಚಮೂಪನೆಂಬುವವನು ಕಾರ್ತವೀರ್ಯಪುರದಲ್ಲಿ ವರದಜನಾರ್ಧನ ದೇವರನ್ನು ಪ್ರತಿಷ್ಠಾಪಿಸಿದನು. ಆಗ ಅಲ್ಲಿನ ನೂರು ಮಹಾಜನಗಳು ಆ ದೇವರ ಪೂಜಾಕಾರ್ಯಕ್ಕಾಗಿ ೧೦೦೦ ಕಮ್ಮ ಭೂಮಿಯನ್ನು ದಾನವಾಗಿ ನೀಡಿದರೆಂದು ಉಲ್ಲೇಖಿಸಿದೆ[೧೦೧]. ಅಳುಪ ಅರಸು ಬಂಕಿಯಣ್ಣನ ಕಾಲದ ಶಾಸನವೊಂದು ಅವನಾಳ್ವಿಕೆಯಲ್ಲಿ ಸಿಂಗಬೋಯನೆಂಬುವನು ವಿಷ್ಣುದೇವರಿಗಾಗಿ ಅಗ್ರವೊಂದನ್ನು ಮಾಡಿಸಿ ಅದಕ್ಕೆ ಇಪ್ಪತ್ತು ಗದ್ಯಾಣವನ್ನು ನೀಡಿದ ವಿಷಯ ಹೇಳುತ್ತದೆ[೧೦೨]. ಕ್ರಿ.ಶ. ೧೩೦೨ರ ಮಂಗಳೂರಿನ ಶಾಸನದಿಂದ ತಿಳಿಯುವಂತೆ, ಅಳುಪ ಅರಸು ಬಂಕಿಯಾಳುಪೇಂದ್ರನು ತನ್ನ ಅಕ್ಕ ಮೋಚಲಮಹಾದೇವಿ ಹಿಂದೆ ಸ್ವರ್ಗಸ್ಥಳಾಗಿದ್ದ ನೀರದೇವಾಲಯದಲ್ಲಿ ವಿಷ್ಣುದೇವರಿಗೆ ವಾಮನನೆಂಬುವನ ಕೈಯಲ್ಲಿ ಕೆಲ ಭೂಮಿಯನ್ನು, ಸಿದ್ಧಾಯವನ್ನು ಬಿಟ್ಟುಕೊಡುತ್ತಾನೆ.

ಹೀಗೆ ವೈಷ್ಣವ ಧರ್ಮದ ಅಭಿವೃದ್ಧಿಗೆ ದೇವಾಲಯ ನಿರ್ಮಾಣ ಹಾಗೂ ದಾನದತ್ತಿಗಳನ್ನು ನೀಡುವದರ ಮೂಲಕ ಸಾಮಂತ ಅರಸರು, ಅವರ ರಾಣಿಯರು, ಅಧಿಕಾರಿಗಳು, ಸಾಮಾನ್ಯವರ್ಗದವರೂ ತಮ್ಮ ಕೈಲಾದಷ್ಟು ಸಹಾಯವನ್ನು ಸಲ್ಲಿಸಿದ್ದಾರೆನ್ನಬಹುದು.

## ಶೈವಧರ್ಮ :

ವೇದ ಮೂಲದ ದ್ವೈತ, ಅದ್ವೈತ, ವಿಶಿಷ್ಟಾದ್ವೈತಗಳು ವೈಷ್ಣವಧರ್ಮದ ಪಂಥಗಳಾದರೆ, ಆಗಮ ಮೂಲದ ನಕುಲೀಷ, ಪಾಷುಪತ, ಕಾಳಾಮುಖ, ಕಾಪಾಲಿಕ, ವೀರಶೈವಾದಿ ಮತಗಳು ಶೈವಧರ್ಮದ ಮೂಲ ಬೇರುಗಳಾಗಿವೆ[೧೦೩]. ಆಗಮ ಮೂಲವಾದ ಶೈವಧರ್ಮವು ಜಾಗತಿಕಧರ್ಮಗಳಲ್ಲಿ ಒಂದಾಗಿದೆಯಲ್ಲದೇ, ಪ್ರಾಚೀನ ಭಾರತದ ಎಲ್ಲ ಧರ್ಮಗಳಿಗಿಂತ ಪುರಾತನವಾದ ಧರ್ಮವೆನಿಸಿಕೊಂಡಿದೆ. ಇದು ಉತ್ತರ ಹಾಗೂ ದಕ್ಷಿಣ ಭಾರತದಲ್ಲಿ ಇತಿಹಾಸ ಪೂರ್ವಕಾಲದಿಂದ ಪ್ರಚಾರದಲ್ಲಿತ್ತೆಂದು ಸಂಪ್ರದಾಯ ಪರಂಪರೆಗಳು ಹೇಳುತ್ತವೆ[೧೦೪]. ಶೈವಧರ್ಮದ ಪ್ರತೀಕವಾದ ಶಿವೋಪಾಸನೆಯ ಚರಿತ್ರೆ ವೇದಗಳಿಗಿಂತಲೂ ಹಿಂದೆ ಇರುವ ಹರಪ್ಪ-ಮೊಹೇಂಜೋದಾರೋ ಸಂಸ್ಕೃತಿಗಳಲ್ಲಿ ದೊರೆಯುತ್ತಿದ್ದು, ಆ ಸಂಸ್ಕೃತಿಯಲ್ಲಿ ಕೊಂಬುಗಳಿರುವ ದೇವತೆಯ ಚಿತ್ರವಿರುವ ಮುದ್ರಿಕೆಗಳು ದೊರಕಿವೆ.

ಋಗ್ವೇದದಲ್ಲಿಯೂ ಸಹ ಶಿವನು ರುದ್ರನಾಗಿ ದುಷ್ಟಶಕ್ತಿಗಳಿಗೆ ಅಧಿಪತಿಯಂಬಂತೆ ಚಿತ್ರಿತನಾಗಿದ್ದಾನೆ. ರುದ್ರ ಎಂದರೆ ಗರ್ಜಿಸು ಎಂಬರ್ಥದಲ್ಲಿ ಮುಂದೆ ಶಿವನಿಗೆ ಅನ್ವಯಿಸಲಾದ ಅನೇಕ ಲಕ್ಷಣಗಳನ್ನು ರುದ್ರನಿಗೆ ಅನ್ವಯಿಸಿ ಹೇಳಲಾಗಿದೆ[೧೦೫]. ಈ ಹಿನ್ನೆಲೆಯಲ್ಲಿಯೇ ಆಗಮ ಮೂಲದ ಈ ನಕುಲೀಷ, ಪಾಶುಪತ, ಕಾಳಾಮುಖ, ಕಾಪಾಲಿಕಗಳನ್ನು ಒಂದುಗೂಡಿಸಿಕೊಂಡು ಶೈವಧರ್ಮ ಬೆಳೆದು ಬಂದಿದ್ದು, ಅದಕ್ಕೆ ಆಧಾರಗಳೆಂದರೆ ೨೮ ಶೈವ ಆಗಮಗಳಾಗಿವೆ. ಈ ಆಗಮ ಮೂಲದ ಶೈವಪಂಥಗಳ ಒಟ್ಟು ಸ್ವರೂಪ ಶೈವ ಧರ್ಮವಾಗಿದ್ದು, ಇವುಗಳ ಆಚಾರ್ಯರ ಹೆಸರುಗಳ ಕೊನೆಯಲ್ಲಿ ಕಂಡುಬರುವ ರಾಶಿ, ಶಕ್ತಿ, ಪಂಡಿತ, ಒಡೆಯ, ಭಟಾರ, ಗೊರವ ಇತ್ಯಾದಿ ಪದಗಳ ಬಲದಿಂದ ಬಂದಿದ್ದು, ಸಾಮಂತ ಅರಸುಮನೆತನಗಳ ಅನೇಕ ಶಾಸನಗಳಲ್ಲಿ ಈ ಹೆಸರುಗಳನ್ನು ಗುರುತಿಸಿ ಶೈವಧರ್ಮದ ಚಿತ್ರಣವನ್ನು ಚಿತ್ರಿಸಬಹುದಾಗಿದೆ.

ಈ ಪಂಥಗಳ ಆಚಾರ್ಯರು ನೈಷ್ಠಿಕ ಬ್ರಹ್ಮಚಾರಿಗಳಾಗಿದ್ದು, ಶ್ರೇಷ್ಠ ವಿದ್ವಾಂಸರೆನ್ನಿಸಿರುವರು. ಮಠ, ದೇವಸ್ಥಾನಗಳ ಸ್ಥಾನಪತಿಗಳಾಗಿ ನಿಂತು ತಮ್ಮ ಕಾರ್ಯಸಾಧನೆ, ಬಹುಮುಖ ಪ್ರತಿಭೆ, ಉನ್ನತ ವ್ಯಾಸಂಗಗಳಿಂದಾಗಿ ಅವುಗಳನ್ನು ದೊಡ್ಡ ಧಾರ್ಮಿಕ ಕೇಂದ್ರಗಳನ್ನಾಗಿ ಬೆಳೆಸಿದ್ದರು. ವೇದ, ಆಗಮ, ವ್ಯಾಕರಣ, ಪುರಾಣಗಳ ಅಧ್ಯಯನದಲ್ಲಿ ಪ್ರವೀಣ್ಯತೆ ಪಡೆದ ಇವರು, ಶೈವಧರ್ಮದ ಉನ್ನತಿಗೆ ಕಾರಣೀಭೂತರಾಗಿದ್ದರು.

ಕ್ರಿ.ಶ. ೮ನೆಯ ಶತಮಾನದ ಉದಿಯಾವರದ ಶಾಸನ ಆಳುಪವಂಶದ ರಣಸಾಗರನಾಳ್ವಿಕೆಯಲ್ಲಿ ಉದಯಪುರದ ಚೆಂಬುಕಲ್ಲ ಭೈರವೇಶ್ವರ ದೇವರಿಗೆ ಪದಿನೆಂಟು ಪಟ್ಟಣವೆಂಬ ಸಂಸ್ಥೆಯು ಅಲ್ಲಿನ ತೆರಿಗೆಯಲ್ಲಿನ ಕೆಲಭಾಗವನ್ನು ನೀಡಬೇಕೆಂದು ವ್ಯವಸ್ಥೆಮಾಡಿದ್ದನ್ನು ತಿಳಿಸಿದೆ[೧೦೬]. ಪಲ್ಲವಾಧಿರಾಜನ ತಾಯಿಯಾದ ಗವಣಗಬ್ಬೆಯು ಚಿಕ್ಕಮಧುರೆಯ ಶಿವದೇವಾಲಯಕ್ಕೆ ದಾನ ನೀಡಿದಳೆಂದು ಅಲ್ಲಿನ ಕ್ರಿ.ಶ. ೮೧೫ರ ಶಾಸನವು ಉಲ್ಲೇಖಿಸುತ್ತದೆ[೧೦೭]. ಇದೇ ಗವಣಗಬ್ಬೆಯ ಮಗನಾದ ಪಲ್ಲವಾಧಿರಾಜನು ತಾಯಿ ಗವಣಗಬ್ಬೆಯ ಹೆಸರಿನಲ್ಲಿ ಮೇಲಿನ ಚಿಕ್ಕಮಧುರೆ ಗ್ರಾಮದಲ್ಲಿ ಗವಣೇಶ್ವರ ಶಿವದೇವಾಲಯವನ್ನು ಕಟ್ಟಿಸಿ ಅದಕ್ಕೆ ೧೨ ಮತ್ತರ ಮತ್ತು ೮ ಮತ್ತರ ಭೂಮಿಯನ್ನು ನೀಡಿದನು[೧೦೮]. ರಾಷ್ಟ್ರಕೂಟರ ಮಹಾಸಾಮಂತನಾದ ಚೆಲ್ಲಕೇತನ ಮನೆತನದ ಬಂಕೇಯನಾಳ್ವಿಕೆಯಲ್ಲಿ ಅವನ ಮಗ ಕುಂದಟೆಯು ನಿಡಗುಂದಗೆಯನ್ನಾಳುತ್ತಿದ್ದು ಕುಪ್ಪಣದೇಗುಲದ ಮಹಾದೇವರಿಗೆ ಒಂದು ಮತ್ತರು ತೋಟವನ್ನು ಹಾಗೂ ೫ ಮತ್ತರು ಭೂಮಿಯನ್ನು ದಾನವಾಗಿ ಬಿಟ್ಟನೆಂದು ಕ್ರಿ.ಶ. ೮೭೪-೭೫ರ ಶಿಗ್ಗಾಂವ ಶಾಸನ ಉಲ್ಲೇಖಿಸಿದೆ[೧೦೯]. ಅಯ್ಯಪ್ಪರಸನೆಂಬುವವನು ಇದೇ ಅವಧಿಯಲ್ಲಿ ಅಣಜಿ ಗ್ರಾಮದಲ್ಲಿ ದೇಗುಲವನ್ನು ಕಟ್ಟಿಸಿ ಅದಕ್ಕೆ ದಾನಗೈದಿರುವ ವಿಷಯ ಅಲ್ಲಿಯ ಶಾಸನದಲ್ಲಿ ಉಲ್ಲೇಖಿತವಾಗಿದೆ[೧೧೦]. ಒಂದನೆಯ ಅಮೋಘವರ್ಷನ ಸಾಮಂತನಾದ ಪಲ್ಲವಾದಿರಾಜನು ಚಿಕ್ಕಮಧುರೆಯಲ್ಲಿ ಗವಣೇಶ್ವರ ಎಂಬ ದೇವಾಲಯವನ್ನು ಕಟ್ಟಿಸಿ ಅದಕ್ಕೆ ದಾನಗೈದಿರುವದನ್ನು ಶಾಸನವೊಂದು ಉಲ್ಲೇಖಿಸುತ್ತದೆ[೧೧೧]. ರಾಷ್ಟ್ರಕೂಟರ ಇನ್ನೊಬ್ಬ ಸಾಮಂತನಾದ ಸಾಮಂತಾಗ್ರಣಿ ಹೊರೆಯಮನು ಸಾಲವಾಡಿಗೆಯಲ್ಲಿ ಹೊರೆಯಮೇಶ್ವರ ದೇವಾಲಯವನ್ನು ನಿರ್ಮಿಸಿದನೆಂದು ಸಾಲವಾಡಿಗೆಯ ಶಾಸನದಲ್ಲಿ ಹೇಳಲಾಗಿದೆ[೧೧೨].

ಗಂಗರ ಶ್ರೀಪುರುಷನಾಳ್ವಿಕೆಯಲ್ಲಿ ಪೊಳ್ಮದ ವಿನೀತೇಶ್ವರ ದೇವಾಲಯಕ್ಕೆ ಭೂಮಿ, ತೋಟ ಹಾಗೂ ಮನೆಯೊಂದನ್ನು ದೇವೇಂದ್ರತಮ್ಮಡಿಯು ಬಿಟ್ಟದ್ದನ್ನು ಹೊಮ್ಮದ ಶಾಸನ ತಿಳಿಸುತ್ತದೆ[೧೧೩]. ನೊಳಂಬರ ನೊಳಂಬಾಧಿರಾಜನಾಳ್ವಿಕೆಯಲ್ಲಿ ತೈರೂರಿನ ಗಾಮುಣ್ಡಸ್ವಾಮಿಗಳ ಮಗ ನಾಗಮ್ಮಯ್ಯನು ಕಲ್ಲದೇಗುಲವನ್ನು ಮಾಡಿಸಿ ಒಂದು ಖಂಡುಗ ಭೂಮಿಯನ್ನು ದಾನವಾಗಿ ನೀಡಿದ್ದನ್ನು ಕ್ರಿ.ಶ. ೮೯೫-೯೬ರ ತಾಯಲೂರು ಶಾಸನ ತಿಳಿಸಿದೆ[೧೧೪]. ಕ್ರಿ.ಶ. ೯೦೦ರಲ್ಲಿ ಗಂಗರ ಎರಡನೆಯ ರಾಚಮಲ್ಲನು ಮಗರೆವಿಷಯದ ಆಲೂರು ಗ್ರಾಮದಲ್ಲಿನ ಈಶ್ವರದೇವಾಲಯಕ್ಕೆ ನಿರ್ಗುಂದವಿಷಯದಲ್ಲಿನ ಕೆಡೆಸೂರು ಗ್ರಾಮವನ್ನು ದತ್ತಿಯಾಗಿ ನೀಡಿದ ವಿಷಯ ಶಾಸನವೊಂದು ಉಲ್ಲೇಖಿಸುತ್ತದೆ[೧೧೫]. ರಾಷ್ಟ್ರಕೂಟರ ಸಾಮಂತನಾದ ಬನವಾಸೆಯ ಚಟ್ಟಯ್ಯದೇವನು ಕ್ರಿ.ಶ. ೯೩೯ರ ಶಾಸನವೊಂದು ತಿಳಿಸುವಂತೆ ಎಡೆನಾಡಿನ ಕೂಳುಗ ಗ್ರಾಮದಲ್ಲಿರುವ ಶ್ರೀಕಂಠೇಶ್ವರದೇವರ ಚೈತ್ರ, ಪವಿತ್ರ, ಜೀರ್ಣೋದ್ಧಾರ ಮತ್ತು ತಪೋಧನರ ಅಹಾರದಾನಕ್ಕಾಗಿ ದತ್ತಿಯನ್ನು ಬಿಟ್ಟನು[೧೧೬]. ಮೂರನೆಯ ಇಂದ್ರನ ಸಾಮಂತನೊಬ್ಬ(ಹೆಸರು ಅಳಿಸಿದೆ) ಕಮಲಾಪೂರದಲ್ಲಿ ಮುಕ್ಕಂಟೇಶ್ವರ ಹೆಸರಿನ ಶಿವನ ದೇವಾಲಯವನ್ನು ಕಟ್ಟಿಸಿದ. ಈತನು ಕಟ್ಟಿಸಿದ ದೇವಾಲಯಕ್ಕೆ ಮತ್ತೊಬ್ಬ ಸಾಮಂತನಾದ ಪಲ್ಲವಧೀರನು ದಾನಗೈದನು[೧೧೭]. ಮೂರನೆಯ ಕೃಷ್ಣನ ಮಹಾಸಾಮಂತನಾದ ಲೋಕಟೆಯು ತನ್ನ ಹೆಸರಿನಲ್ಲಿ ನಿರ್ಮಿಸಿದ ಲೋಕಾಪೂರ ಎಂಬಲ್ಲಿ ಇತರೆ ದೇವಾಲಯಗಳೊಂದಿಗೆ ಶಿವನ ದೇವಾಲಯವನ್ನು ಕಟ್ಟಿಸಿದನೆಂದು ಆತನ ಶಾಸನವು ಉಲ್ಲೇಖಿಸುತ್ತದೆ[೧೧೮]. ಕದಂಬ ಮಹಾಮಂಡಳೇಶ್ವರ ಶಾಂತಿವರ್ಮ ಬನವಾಸೆಯನ್ನಾಳುತ್ತಿದ್ದಾಗ, ಅವನ ಪಾದಪದ್ಮೋಪಜೀವಿಯಾದ ಕನ್ನಯ್ಯನೆಂಬುವನು ಎರಡು ಶಿವದೇಗುಲಗಳನ್ನು ಮಾಡಿಸಿದ. ಆಗ ಅವುಗಳನ್ನು ಬಂದು ನೋಡಿದ ಅರಸನು ಭೂಮಿಯನ್ನು ದಾನವಾಗಿ ನೀಡಿದ್ದನ್ನು ಕ್ರಿ.ಶ. ೯೭೧ರ ಶಾಸನ ಉಲ್ಲೇಖಿಸಿದೆ[೧೧೯]. ಸಿಡಿಲಂಕರಾಮನೆಂದು ಬಿರುದಾಂಕಿತನಾದ ಸಾಮಂತರಸನು ಗುಂಡೇರಿ ಗ್ರಾಮದಲ್ಲಿ ಸಿಡಿಲೇಶ್ವರನೆಂಬ ತನ್ನ ಹೆಸರಿನ ದೇವಾಲಯವನ್ನು ಕಟ್ಟಿಸಿದನು. ಈತನು ಕಟ್ಟಿಸಿದ ದೇವಾಲಯಕ್ಕೆ ಸೂದ್ರಕಯ್ಯನೆಂಬುವನು ದಾನಗೈದನು[೧೨೦]. ಕ್ರಿ.ಶ. ೧೦ನೆಯ ಶತಮಾನದ ವರುಣದ ಶಾಸನವೊಂದು ತಿಳಿಸುವಂತೆ ಚಾಲುಕ್ಯವಂಶದ ಮಹಾಸಾಮಂತ ದುರ್ಗನೆಂಬುವನು ಭೂತೇಶ್ವರ ದೇವರಿಗೆ ತೊರೆವಳ್ಳಿಯನ್ನು ಹಾಗೂ ಕೆಲಭೂಮಿಯನ್ನು ದಾನವಾಗಿ ನೀಡಿದ್ದಾನೆ[೧೨೧].

ಚಾಲುಕ್ಯ ಜಯಸಿಂಹದೇವನ ಸಾಮಂತನಾದ ಕುಂದಯ್ಯನು ಬನವಾಸಿಯನ್ನು ಆಳುತ್ತಿದ್ದಾಗ ಸಾನ್ತಯ್ಯನೆಂಬುವನು ಲಿಂಗವನ್ನು ಪ್ರತಿಷ್ಠೆಗೈದನೆಂದು ತಿಳಿಸುವ ಕ್ರಿ.ಶ. ೧೦೨೩ರ ಶಾಸನದ ದಾನದ ಭಾಗವು ತೃಟಿತವಾಗಿದ್ದರಿಂದ ಹೆಚ್ಚಿನ ವಿವರ ತಿಳಿದುಬರುವದಿಲ್ಲ[೧೨೨]. ಮಹಾಸಾಮಂತಾಧಿಪತಿ ಜಯಸಿಂಗದೇವ ಬನವಾಸಿ ಹಾಗೂ ಸಾಂತಳಿಗೆಗಳನ್ನಾಳುತ್ತಿದ್ದಾಗ, ತನ್ನ ತಂದೆ ಅಲ್ಲಯ್ಯನ ಪರೋಕ್ಷವಿನಯವಾಗಿ ಅಳೇಶ್ವರ ದೇಗುಲವನ್ನು ನಿರ್ಮಿಸಿ, ಪೂಜೆ ಮತ್ತು ಇತರ ಕಾರ್ಯಕ್ಕಾಗಿ ತೋಟ ಹಾಗೂ ಗದ್ದೆಗಳನ್ನು ದತ್ತಿಯಾಗಿ ಬಿಟ್ಟದ್ದನ್ನು ಕ್ರಿ.ಶ.೧೦೩೩ರ ಕುಪ್ಪಗಡ್ಡೆ ಶಾಸನ ತಿಳಿಸಿದೆ[೧೨೩]. ಕ್ರಿ.ಶ. ೧೦೪೨ರ ಶಾಸನ ಹೇಳುವಂತೆ ಮಹಾಸಾಮಂತ ಗೋಣರಸ ಸಾಂತಳಿಗೆಯನ್ನಾಳುತ್ತಿದ್ದಾಗ

ಗೋಣೇಶ್ವರ ದೇಗುಲವನ್ನು ನಿರ್ಮಿಸಿ ಅಂದಾಸುರ-೧೨ರಲ್ಲಿನ ಮಣಬಾಳ ಗ್ರಾಮವನ್ನು ದಾನವಾಗಿ ನೀಡಿದನು[೧೨೪]. ಕದಂಬ ಮಹಾಮಂಡಳೇಶ್ವರ ಹರಿಕೇಸರಿದೇವ ಬನವಾಸಿಯನ್ನಾಳುತ್ತಿದ್ದಾಗ ಕದಂಬೇಶ್ವರ ದೇವರಿಗೆ ನಿಡಗುನ್ದಗೆ-೧೨ರ ಬಳಿಯ ಪಳ್ಳವೂರನ್ನು ಹಾಗೂ ಅನೇಕ ದತ್ತಿದಾನಗಳನ್ನು ನೀಡಿದ್ದನ್ನು ಕ್ರಿ.ಶ. ೧೦೫೫ರ ಶಿಗ್ಗಾಂವ ಶಾಸನ ಉಲ್ಲೇಖಿಸಿದೆ[೧೨೫]. ಕ್ರಿ.ಶ. ೧೦೭೯ರ ಹೆಗ್ಗಡೆದೇವನಕೋಟೆ ತಾಲೂಕು ಕಿತ್ತೂರಿನ ಶಾಸನದಲ್ಲಿ ಬರುವಂತೆ, ಮಹಾಮಂಡಳೇಶ್ವರ ಬಯಲ್ನಾಡ ಕದಂಬ ಮನೆತನದ ಇಕರವರ್ಮನ ಕಾಲದಲ್ಲಿ ಕಿತ್ತೂರಿನ ರವಿಯಮೇಶ್ವರ ದೇವರಿಗೆ ಮಳ್ಚರೆಯ ಸಿದ್ಧಾಯವನ್ನು ದತ್ತಿಯಾಗಿ ಬಿಟ್ಟನು[೧೨೬]. ಶಾಂತಾರ ಮಹಾಮಂಡಳೇಶ್ವರ ರಾಯಶಾಂತಾರ ತ್ರೈಲಪದೇವನ ಪೆರ್ಗ್ಗಡೆ ಕನ್ನಯ್ಯನು ಬಡಗಿನಾಡ-೩೦ರ ವೊದಲಬಾಡ ಬೆಸವೂರದ ಕನ್ನೇಶ್ವರ ದೇವರ ಸಮಸ್ತ ಪರಿವಾರ ದೇವರುಗಳನ್ನು ಪ್ರತಿಷ್ಠೆಗೈದು, ದೇಗುಲದ ಕಳಸಾರೋಹಣ ಮಾಡಿ, ಭೂಮಿಯನ್ನು ದಾನವಾಗಿ ಬಿಡುತ್ತಾನೆ. ಆಗ ತ್ರೈಲಪನ ರಾಣಿ ಕಾದೇವಿಯು ಕೋಳೂರನ್ನು ದಾನವಾಗಿ ಕೊಟ್ಟಳು ಎಂದು ಕ್ರಿ.ಶ. ೧೦೮೯ರ ಬೇಸೂರು ಶಾಸನದಿಂದ ತಿಳಿಯುತ್ತದೆ[೧೨೭].

ಹೊಯ್ಸಳ ಸಾಮಂತರಾದ ಚೆಂಗಾಳ್ವರ ಚೆಂಗಾಳ್ವದೇವ ಮತ್ತು ಅವನ ಮರಿಯ ಪೆರ್ಗ್ಗಡೆ ಹಿಳ್ದುವಯ್ಯರು ಸೇರಿಕೊಂಡು ಈಶ್ವರದೇವರಿಗೆ ಹಾಗೂ ಬಡವರ ಅಹಾರದಾನಕ್ಕಾಗಿ ೫೦ ಖಂಡುಗ ಗದ್ದೆಯನ್ನು ಧಾರಾಪೂರ್ವಕವಾಗಿ ಕೊಟ್ಟವಿಷಯ ಕ್ರಿ.ಶ. ೧೦೯೧ರ ಶಾಸನವೊಂದರಲ್ಲಿದೆ[೧೨೮]. ಕ್ರಿ.ಶ. ೧೦೯೨ರ ಅಕ್ಕಲಕೋಟದ ಶಾಸನದಲ್ಲಿ ಚಾಲುಕ್ಯ ಮಹಾಮಂಡಳೇಶ್ವರರಾದ ಕಲಚೂರಿ ಜೋಗಮರಸ ಹಾಗೂ ಶಿಲಹಾರ ಕವಿಲಾಸರಸರು ಸೇರಿಕೊಂಡು ಹಂದೆಕ್ಕಾಡಿಯ ಚಂದ್ರೇಶ್ವರ ದೇವಾಲಯಕ್ಕೆ ೨೦೦ಮತ್ತರು ಗದ್ದೆ, ೪ ಮತ್ತರು ತೋಟ ಹಾಗೂ ಎರಡು ಗಾಣಗಳನ್ನು ಬಿಟ್ಟರೆಂದು ಉಲ್ಲೇಖಿಸಿದೆ[೧೨೯]. ಹಾನಗಲ್ಲ ಕದಂಬ ಮನೆತನದ ಮಹಾಮಂಡಳೇಶ್ವರನಾದ ತ್ರೈಲಪದೇವ ಹಾಗೂ ಅವನ ಪಾದಪದ್ಮೋಪಜೀವಿ ನಿಡಗುಂದಗೆಯ ನಾಗ್ಗಾವುಂಡನಾದ ಮಾರಗಾವುಂಡರು ಸೇರಿಕೊಂಡು ಮೂಲಸ್ಥಾನದೇವರಿಗೆ ಕೆಲವು ತೆರಿಗೆಗಳನ್ನು ದತ್ತಿಯಾಗಿ ಬಿಟ್ಟ ವಿಷಯ ಕ್ರಿ.ಶ. ೧೧೦೮ರ ಶಿಗ್ಗಾಂವ ಶಾಸನದಲ್ಲಿದೆ[೧೩೦]. ಶಿಲಹಾರ ಮಹಾಮಂಡಳೇಶ್ವರ ಇಂದರಸ ಹಾಗೂ ಭೋಗಿಯಬ್ಬರಸಿಯರು ಹಾಗೂ ಅವರ ದಂಡನಾಯಕ ಪ್ರಭುಕೇಸರಿನಾಯಕರುಗಳು ಸೇರಿಕೊಂಡು ಕರಂಜಿಗೆಯ ಸಿದ್ಧಗಜ್ಜೇಶ್ವರ ದೇವರ ಪೂಜೆ ಹಾಗೂ ಇತರ ಕಾರ್ಯಗಳಿಗಾಗಿ ಭೂಮಿ, ತೋಟ ಹಾಗೂ ಗಾಣಗಳನ್ನು ಅಲ್ಲಿಯ ಆಚಾರ್ಯರಾದ ಜ್ಞಾನಸಿದ್ಧದೇವರ ಕಾಲಂ ಕರ್ಚ್ಚಿ ದತ್ತಿಯಾಗಿ ನೀಡಿದ ವಿವರ ಕ್ರಿ.ಶ. ೧೧೧೪ರ ಶಾಸನದಲ್ಲಿ ಉಲ್ಲೇಖಿಸಲಾಗಿದೆ[೧೩೧]. ಕ್ರಿ.ಶ. ೧೧೨೫ರ ಧಾರವಾಡ ತಾಲೂಕಿನ ಭಾವಿಹಾಳ ಶಾಸನವೊಂದರಲ್ಲಿ ಕದಂಬ ಮಹಾಮಂಡಳೇಶ್ವರ ಜಯಕೇಶಿ ಹಾಗೂ ಮೈಳಲಾಮಹಾದೇವಿಯರಾಳ್ವಿಕೆಯಲ್ಲಿ, ಕುಂದೂರನಾಡಿನ ನಾಡಾಧಿಕಾರಿಗಳು ಹಲಗುಂಡಿಯ ಮಾಂಡವ್ಯತೀರ್ಥದ ಮಲ್ಲಿಕಾರ್ಜುನ ದೇವರ ಧೂಪನಿವೇದ್ಯ, ನಂದಾದೀವಿಗೆಗಾಗಿ ಭೂಮಿ ಮತ್ತು ಮನೆಯನ್ನು ಬಿಟ್ಟ ಉಲ್ಲೇಖವಿದೆ[೧೩೨]. ರೋಣ ತಾಲೂಕಿನ ನರೇಗಲ್ಲಿನ ಶಾಸನದಿಂದ ಸಿಂದಮನೆತನದ ಮಹಾಮಂಡಳೇಶ್ವರ ಪೆರ್ಮಾಡಿದೇವನಾಳ್ವಿಕೆಯಲ್ಲಿ

ತಿಪ್ಪಣ್ಣಯ್ಯನಾಯಕನೆಂಬುವನು ನರೆಯಂಗಲ್ಲಿನ ತಿಪ್ಪಣೇಶ್ವರ ದೇವಾಲಯಕ್ಕೆ ಭೂಮಿಯನ್ನು ದಾನವಾಗಿ ನೀಡಿದನೆಂದು ತಿಳಿದುಬರುತ್ತದೆ[೧೩೩].

ಕ್ರಿ.ಶ. ೧೨ನೆಯ ಶತಮಾನದ ಮುಳಗುಂದದ ಶಾಸನವೊಂದರಲ್ಲಿ ಮುಳಗುಂದ ಸಿಂದಮನೆತನದ ಮಹಾಸಾಮಂತನಾದ ಮನ್ನೆಯ ಬೊಪ್ಪರಸನು ಮುಳಗುಂದದ ಭೀಮೇಶ್ವರದೇವರ ಸ್ನಾನ, ಪೂಜೆ, ನೈವೇದ್ಯ ಯತಿಭೋಜನಾದಿಗಳಿಗಾಗಿ ಭೂಮಿಯನ್ನು ಬಿಟ್ಟರೆಂದು, ಅಲ್ಲದೇ ಸುಂಕವೆರ್ಗ್ಗಡೆ ದಂಡನಾಯಕನಾದ ಮೇದಿಮಯ್ಯನು ಸಹ ಗದ್ಯಾಣವೊಂದನ್ನು ಬಿಟ್ಟನೆಂದು ಉಲ್ಲೇಖಿಸಲಾಗಿದೆ[೧೩೪]. ಚಾಲುಕ್ಯ ಮೂರನೆಯ ಸೋಮೇಶ್ವರನ ಮಹಾಮಂಡಳೇಶ್ವರನಾದ ಕಲಚೂರಿ ಹೆಮ್ಮಾಡಿಯರಸ ತರ್ದವಾಡಿಯನ್ನಾಳುತ್ತಿದ್ದಾಗ, ಇಂಗಳೇಶ್ವರದಲ್ಲಿ ಮಹಾಪ್ರಧಾನ ಮನೆವೆರ್ಗ್ಗಡೆ ದಂಡನಾಯಕ ನೀಲಕಂಠನಾಯಕನಿಂದ ನಿರ್ಮಿತವಾದ ತ್ರಿಕೂಟದ ನೀಲಕಂಠೇಶ್ವರ ದೇವರ ಪೂಜೆಪುನಸ್ಕಾರಾದಿಗಳಿಗಾಗಿ ಭೂಮಿ ಹಾಗೂ ಎರಡು ಗಾಣಗಳನ್ನು ಬಿಟ್ಟ ಉಲ್ಲೇಖ ಕ್ರಿ.ಶ. ೧೧೨೮ರ ಇಂಗಳೇಶ್ವರದ ಶಾಸನದಲ್ಲಿ ಬರುತ್ತದೆ[೧೩೫]. ಕ್ರಿ.ಶ. ೧೧೫೪ರ ಶಾಸನವೊಂದು ತಿಳಿಸುವಂತೆ ಅಳುಪರ ವೀರ ಕವಿಯಾಳುಪೇಂದ್ರದೇವ ರಾಜ್ಯವಾಳುತ್ತಿದ್ದಾಗ, ಬಸುರೆಪುರದ ನಖರೇಶ್ವರ ದೇವರ ನೈವೇದ್ಯಕ್ಕೆಂದು ಮೌನಯೋಗಿ ಎಂಬ ದಾತಾರನು ಸಮಸ್ತ ನಖರ ಮತ್ತು ಆ ಊರಿನ ಒಕ್ಕಲುಗಳ ಸಮ್ಮುಖದಲ್ಲಿ ಪಾಂಡ್ಯಗದ್ಯಾಣವೆಂಬ ನಾಣ್ಯಗಳನ್ನು ದಾನವಾಗಿ ನೀಡಿದನು[೧೩೬].

ಹೊಯ್ಸಳ ವಿಷ್ಣುವರ್ಧನನ ಮಹಾಸಾಮಂತನಾದ ತುರುನಾಡನ್ನಾಳುವ ಮಾಚಯನಾಯಕನು ಮಾಕೇಶ್ವರ ದೇವಾಲಯವನ್ನು ಕಟ್ಟಿಸಿ, ಆ ದೇವರಿಗೆ ಕೆಲವು ಭೂಮಿಗಳನ್ನು ದಾನಮಾಡಿದ ಉಲ್ಲೇಖ ಕೃಷ್ಣರಾಜಪೇಟೆ ತಾಲೂಕಿನ ಶಾಸನವೊಂದರಲ್ಲಿದೆ[೧೩೭]. ಹೊಯ್ಸಳರ ಒಂದನೆಯ ನರಸಿಂಹನ ಸಾಮಂತನಾದ ಮಂಡಳಿಕ ಮಾಚಿ ತನ್ನ ತಂದೆಯ ಹೆಸರಿನಲ್ಲಿ ಚೋಳೇಶ್ವರ ದೇಗುಲವನ್ನು ನಿರ್ಮಿಸಿ, ಅಲ್ಲಿ ಅನ್ನದಾನ, ಸುವರ್ಣದಾನ, ಗೋದಾನ, ಕನ್ಯಾದಾನ, ಭೂಮಿದಾನ ಮುಂತಾದ ದಾನಗಳನ್ನು ಕೈಕೊಂಡನಲ್ಲದೇ, ಕ್ರಿ.ಶ. ೧೧೬೩ರಲ್ಲಿ ಆ ದೇವರ ಅಂಗರಂಗಭೋಗ, ಅಷ್ಟವಿಧಾರ್ಚನೆ, ತಪೋಧನರ ಆಹಾರದಾನಕ್ಕೆ, ದೇಗುಲಜೀರ್ಣೋದ್ಧಾರಗಳಿಗಾಗಿ ಗದ್ದೆಯೊಂದನ್ನು ಬಿಟ್ಟನೆಂದು ತಿಳಿದುಬರುತ್ತದೆ[೧೩೮]. ಅಲ್ಲದೇ ಅವನ ಇನ್ನೊಬ್ಬ ಮಹಾಸಾಮಂತನಾದ ಬಿಟ್ಟಿದೇವನ ಪಾದಪದ್ಮೋಪಜೀವಿಯಾದ ಹೆರ್ಗ್ಗಡೆ ಬೀಚನು ಶಿವದೇವಾಲಯವನ್ನು ಮಾಡಿಸಿ, ಕ್ರಿ.ಶ. ೧೧೬೯ರಲ್ಲಿ ಅದಕ್ಕೆ ಭೂಮಿಯನ್ನು ದತ್ತಿಯಾಗಿ ನೀಡಿದ್ದು ತಿಳಿಯುತ್ತದೆ[೧೩೯]. ಮಹಾಸಾಮಂತನಾದ ರಟ್ಟವಂಶದ ಕಾರ್ತವೀರ್ಯನ ಕ್ರಿ.ಶ. ೧೧೯೯ರ ಶಾಸನವೊಂದು ತಿಳಿಸುವಂತೆ, ಕಾರ್ತವೀರ್ಯನು ವೇಣುಗ್ರಾಮದಲ್ಲಿರುವ ಈಶ್ವರದೇವಸ್ಥಾನಕ್ಕೆ ಈ ಮೊದಲು ನೀಡಿದ್ದ ದತ್ತಿಯನ್ನು, ಅಲ್ಲಿನ ಮಹಾಜನರು, ಮೂಲಿಗರು ಮತ್ತು ಗಾವುಂಡರ ಬಿನ್ನಪದಿಂದ ಮುಂದುವರೆಸಿದ ವಿವರ ದೊರೆಯುತ್ತದೆ[೧೪೦]. ಹೊಯ್ಸಳ ಮೂರನೆಯ ಬಲ್ಲಾಳನ ಮಹಾಸಾಮಂತ ನಾಗಯ್ಯನು ಹಾಗೂ ಸಮಸ್ತಗಾವುಂಡಗಳು ಸೇರಿ ಎಮ್ಮೆಯ ಕೇತನಹಟ್ಟಿ

ಗ್ರಾಮವನ್ನು ಅಲ್ಲಿನ ಕಲಿದೇವರಿಗೆ ಶಿವಪುರವಾಗಿ ಮಾಡಿಕೊಟ್ಟರೆಂದು ಕ್ರಿ.ಶ. ೧೩೦೫ರ ಶಾಸನದಿಂದ ತಿಳಿದುಬರುತ್ತದೆ[೧೪೧].

ಹೀಗೆ ಸಾಮಂತ ಅರಸುಮನೆತನಗಳು, ಅವರ ರಾಣಿಯರು, ಅಧಿಕಾರಿಗಳು ಹಾಗೂ ಆ ಕಾಲದ ಸಾಮಾನ್ಯಜನವರ್ಗದವರು ಶೈವದೇವಾಲಯಗಳನ್ನು ನಿರ್ಮಿಸಿದರಲ್ಲದೇ, ಜೀರ್ಣೋದ್ಧಾರಕ್ಕಾಗಿ ಹಾಗೂ ಅಲ್ಲಿನ ಮುನಿಗಳಿಗಾಗಿ, ಅವುಗಳಿಗೆ ದಾನದತ್ತಿಗಳನ್ನು ನೀಡುವದರ ಮೂಲಕ ಶೈವಧರ್ಮವನ್ನು ಪ್ರೋತ್ಸಾಹಿಸಿದರು.

## ವೀರಶೈವಧರ್ಮ:

ಹಿಂದಿನ ತಲಮಾರಿನ ವಿದ್ವಾಂಸರು ಭಾವಿಸಿದಂತೆ ಇಂದು ವೀರಶೈವ(ಲಿಂಗಾಯತ) ಧರ್ಮದ ಉಗಮ ಹಾಗೂ ವಿಕಾಸ ಅಷ್ಟು ಸಮಸ್ಯೆಯಾಗಿ ಉಳಿದಿಲ್ಲ. ಪಾಶುಪತ ಕಾಳಾಮುಖದ ಒಂದು ಪಂಗಡವು ಅಭಿನವೀಕರಣದ ಕಡೆ ಹೊರಳಿ, ಹೊಸತನವನ್ನು ಮೈಗೂಡಿಸಿಕೊಂಡ ಅಭಿನವ ಪಾಶುಪತದ ಮುಂದುವರಿಕೆಯ ರೂಪವೇ ವೀರಶೈವವಾಗಿದೆ. ಅದು ಅಂದಿನ ರಾಜಕೀಯ, ಧಾರ್ಮಿಕ ಮತ್ತು ಸಾಮಾಜಿಕ ಪರಿಸರದ ಹಿನ್ನೆಲೆಯಲ್ಲಿ ಹೊಸ ತಾತ್ವಿಕ ಹಾಗೂ ಸಾಮಾಜಿಕ ದೃಷ್ಟಿಕೋನವನ್ನು ರೂಪಿಸಿಕೊಂಡಿತು. ಲಿಂಗಾಯತ ಧರ್ಮದ ವಿಕಸನದ ದಾರಿಯಲ್ಲಿನ ಈ ಅವಸ್ಥೆಯನ್ನು ಡಾ. ಹಿರೇಮಲ್ಲೂರ ಈಶ್ವರನ್‌ರವರು ಸಂಸ್ಥೀಕರಣದ ಅವಸ್ಥೆಯೆಂದು ಕರೆದಿದ್ದಾರೆ[೧೪೨]. ಈ ಅವಸ್ಥೆಯೊಂದಿಗೆ ಸಂಸ್ಥೀಕರಣ ಪೂರ್ವಾವಸ್ಥೆಯ ಕೆಲ ಸಂಗತಿಗಳು ಅಕಸ್ಮಿಕವಾಗಿಯೋ ಇಲ್ಲವೆ ಅನಿವಾರ್ಯವಾಗಿಯೋ ಸಾಮ್ಯಪಡೆದಿರುವದನ್ನು ವಿದ್ವಾಂಸರು ವಿವರಿಸಿದ್ದಾರೆ[೧೪೩]. ಏಕಾಂತ ರಾಮಯ್ಯ, ಜೇಡರ ದಾಸಿಮಯ್ಯ, ಹುಳಿಯಮೇಶ್ವರ, ಚಿಕ್ಕಯ್ಯ, ಪುಲಿಗೆರೆಯ ಆದಯ್ಯ, ಸೊನ್ನಲಿಗೆಯ ಸಿದ್ಧರಾಮ ಶಿವಯೋಗಿ ಮೊದಲಾದವರು ಕಲ್ಯಾಣಕ್ಕೆ ಬರುವ ಮೊದಲು ಪಾಶುಪತ-ಕಾಳಾಮುಖ ಗುಂಪಿಗೆ ಸೇರಿರುವದು, ಅಂದಿನ ಬಹುತೇಕ ದೇವಾಲಯಗಳು ಇಂದು ವೀರಶೈವ ಕೇಂದ್ರಗಳಾಗಿರುವದು, ಕ್ರಿ.ಶ. ೧೩ನೆಯ ಶತಮಾನದ ರೇವಣಾರ್ಯನ ಸಿದ್ಧಾಂತ ಶಿಖಾಮಣಿಯಲ್ಲಿ ಕಾಳಾಮುಖರ ವ್ರತನಿಯಮಗಳಿಗೆ ಹೊಂದಿಕೊಳ್ಳುವ ಹಲವು ವಿವರಗಳು ದೊರಕುವದು, ಲಿಂಗಾರಾಧನೆ, ವಚನರಚನೆ, ದೀಕ್ಷಾಪದ್ಧತಿ ಹಾಗೂ ಮಠಗಳಲ್ಲಿ ಇವರಿಬ್ಬರಿಗೂ ಸಮಾನ ಆಸಕ್ತಿಯಿರುವದು ಇದಕ್ಕೆ ಒಳ್ಳೆಯ ಉದಾಹರಣೆಗಳಾಗಿವೆ. ಹೀಗೆ ಹೊಸ ಧೋರಣೆಯನ್ನು ತಾಳಿದ ಅಭಿನವ ಪಾಶುಪತ ಅಥವಾ ವೀರಶೈವಧರ್ಮ ಹಳೆಯ ಕಾಳಾಮುಖ ಹಾಗೂ ಪಾಶುಪತ ಪಂಥದೊಂದಿಗೆ ಬೆರೆತು ಮುಂದುವರೆದಿದ್ದನ್ನು ಇಲ್ಲಿ ಗಮನಿಸಬಹುದು. ಉದಾಹರಣೆಗೆ ಕಲ್ಯಾಣದಿಂದ ಚದುರಿದ ಶರಣರು ಮತ್ತು ಅವರ ವಂಶಜರು ಕಲಚೂರ್ಯ ಸಾಮ್ರಾಜ್ಯದ ಎಲ್ಲೆಗಳನ್ನು ದಾಟಿ ದಕ್ಷಿಣದತ್ತ ಸರಿದರು. ಅಲ್ಲಿ ಮತ್ತೆ ಅವರು ದೇವಸ್ಥಾನ, ಮಠಮಾನ್ಯಗಳನ್ನು ಭದ್ರಪಡಿಸಿಕೊಂಡು ದತ್ತಿ ಸ್ವೀಕರಿಸಿದ್ದಾರೆ. ಅದಕ್ಕೆ ಒಳ್ಳೆಯ ನಿರ್ದಶನವಾಗಿ ನಲುವಿಗೆಯ ಸಾತಯ್ಯನ ಕುಟುಂಬದವರು ಬಸವಾಪಟ್ಟಣದಲ್ಲಿ ನೆಲೆನಿಂತುದನ್ನು ಶಾಸನವೊಂದು ಉಲ್ಲೇಖಿಸಿದೆ[೧೪೪]. ಅಲ್ಲದೇ ಬಸವಣ್ಣನವರ ವಂಶಜರು ಅರ್ಜುನವಾಡದಲ್ಲಿ ನೆಲೆಸಿದ್ದುದೂ ಕೂಡ ಇನ್ನೊಂದು

ಶಾಸನದಿಂದ ತಿಳಿದುಬರುತ್ತದೆ[೧೪೫]. ಇದಲ್ಲದೇ ಕ್ರಿ.ಶ. ೧೨ನೆಯ ಶತಮಾನದ ಉತ್ತರಾರ್ಧದಿಂದ ಕ್ರಿ.ಶ. ೧೩ನೆಯ ಶತಮಾನದ ಅಂತ್ಯದವರೆಗೆ ಪಾಶುಪತ ಹಾಗೂ ಕಾಳಾಮುಖರು ಪ್ರಭಾವಶಾಲಿಗಳಾಗಿ ದೇವಾಲಯ-ಮಠಗಳಲ್ಲಿ ತಮ್ಮ ಚಟುವಟಿಕೆಗಳನ್ನು ಮುಂದುವರೆಸಿಕೊಂಡು ಹೋದುದು ನಮ್ಮ ಮೇಲಿನ ಅಧ್ಯಯನದಿಂದ ವ್ಯಕ್ತವಾಗುತ್ತದೆ. ಒಟ್ಟಿನಲ್ಲಿ ಕ್ರಿ.ಶ. ೧೨ನೆಯ ಶತಮಾನದಲ್ಲಿ ವ್ಯಾಪಕ ಪ್ರಭಾವಬೀರಿದ ವೀರಶೈವಧರ್ಮದ ಕುರಿತು ಡಾ.ಎಚ್.ತಿಪ್ಪೇರುದ್ರಸ್ವಾಮಿಯವರು ಶೈವಧರ್ಮದ ಬೆಳವಣಿಗೆಯಲ್ಲಿ ಬಹುಷಃ ಪರಿಪೂರ್ಣತೆಯನ್ನು ಸಾಧಿಸಿದ ಶಾಖೆಯಾಗಿದೆ ಎಂದಿದ್ದಾರೆ[೧೪೬].

ಈ ಧರ್ಮದ ತಾತ್ವಿಕ ಮುಖಕ್ಕೆ ಶಕ್ತಿವಿಶಿಷ್ಟಾದ್ವೈತವೆನ್ನಲಾಗುತ್ತಿದ್ದು, ಅದನ್ನು ದ್ವೈತಾದ್ವೈತ, ಶಿವಾದ್ವೈತ ಎಂದು ಕೂಡ ಕರೆಯಲಾಗಿದೆ[೧೪೭]. ವೀರಶೈವ ಧರ್ಮವು ಸಾಮಾನ್ಯವಾಗಿ ಶಿವಾಗಮಗಳನ್ನು ಪ್ರಮಾಣವೆಂದು ಭಾವಿಸುತ್ತದೆ. ಅಲ್ಲದೇ ಅಲ್ಲಲ್ಲಿ ಶೈವಾಗಮದೊಡನೆ ಒಮ್ಮತ ಹೊಂದಿದ ವೇದಗಳ ಶ್ಲೋಕಗಳನ್ನು ಉದ್ಧರಿಸುವದರ ಮೂಲಕ ವಿವಕ್ಷಿತ ವೇದ ಸಮ್ಮತವೆಂದು ಸ್ಪಷ್ಟಪಡಿಸುತ್ತದೆ[೧೪೮]. ವೀರಶೈವ ಧರ್ಮಮಾರ್ಗದ ಷಟ್‌ಸ್ಥಲ, ಅಷ್ಟಾವರಣ, ಪಂಚಾಚಾರಗಳು ಕಲ್ಯಾಣದ ಶರಣರ ಹೊಸ ತಾತ್ವಿಕ ನಿಲುವಿನ ಕೊಡುಗೆಗಳೆಂದು ಹೇಳಬಹುದು. ಬಸವಣ್ಣನವರ ಕಾಲದಲ್ಲಿ ಇದು ನಿರ್ದಿಷ್ಟವಾದ ಸ್ವರೂಪವನ್ನು ಪಡೆದು, ಸರ್ವ ಸಮಾನತೆಯ ತನ್ನ ಆಶಯವನ್ನು ಬಹು ದೊಡ್ಡ ಪ್ರಮಾಣದಲ್ಲಿ ಈಡೇರಿಸುವ ಶಕ್ತಿಯುತವಾದ ಧರ್ಮವಾಗಿ ಪರಿಣಮಿಸಿತು[೧೪೯]. ಅಂದಿನ ರಾಜರು, ಸಾಮಂತ ಅರಸರು, ಅಧಿಕಾರಿಗಳು, ಅಗ್ರಹಾರ, ಮಠ ಮತ್ತು ವ್ಯಾಪಾರಿಗಳಿಂದ ಬಹುಮುಖಿ ಸುಲಿಗೆಗೊಳಗಾದ ಬಹುಪಾಲು ಸಾಮಾನ್ಯ ಜನವರ್ಗಕ್ಕೆ ಶರಣರ ಇಷ್ಟಲಿಂಗ, ಕಾಯಕ, ದಾಸೋಹದ ತತ್ವಗಳು ಉಪಯುಕ್ತವೆನಿಸಿದವು. ಅವರ ಕಾಲಕ್ಕೆ ಹೊಸ ಸಮಾಜದ ಸಂಘಟನೆಯಾಯಿತು. ವಯಕ್ತಿಕ ಸಾಧನೆ, ಸಾಮಾಜಿಕ ಬದಲಾವಣೆಗಳೆರಡೂ ಅವರ ಹೋರಾಟದ ಮುಖವಾಗಿದ್ದವು. ಹೀಗಾಗಿ ಅಂದು ವರ್ಗ, ವರ್ಣ, ಕುಲಮದಗಳಿಂದ ಮುಕ್ತವಾದ ಶರಣಸಮಾಜವೊಂದು ಅಂದಿನ ಕರ್ನಾಟಕದಲ್ಲಿ ನಿರ್ಮಾಣವಾಯಿತು. ವೀರಶೈವದಲ್ಲಿ ನಂಬಿಗೆಯಿಟ್ಟಂತಹ ಸಮಾಜದ ವಿವಿಧ ಘಟಕಗಳಿಗೆ ಮತ್ತು ವೃತ್ತಿಗಳಿಗೆ ಸೇರಿದ ಜನ ಉತ್ಸಾಹದಿಂದ ಬಸವಣ್ಣನೊಂದಿಗೆ ಸಮುದಾಯದ ಪ್ರಗತಿಯ ಕಾರ್ಯದಲ್ಲಿ ನಿರತರಾದರು.

ಹೀಗೆ ಪ್ರಗತಿಪರ ಧರ್ಮವಾಗಿ ಬೆಳೆದುಬಂದದ್ದು ವೀರಶೈವಧರ್ಮ. ಇಷ್ಟಲಿಂಗ ಪೂಜೆ, ದಾಸೋಹಗಳಿಗೆ ಒಲಿದ ಈ ಧರ್ಮದಲ್ಲಿ ಸ್ಥಾವರಲಿಂಗ ಪೂಜೆಗೆ, ದಾನಗಳಿಗೆ ಅವಕಾಶವಿಲ್ಲದ ಕಾರಣ ವೀರಶೈವಧರ್ಮಕ್ಕೆ ಸಂಬಂಧಿಸಿದ ಶಾಸನಗಳು ನಮಗೆ ಸಿಗುವದಿಲ್ಲ. ಒಟ್ಟಿನಲ್ಲಿ ಇಂದಿಗೂ ಉಳಿದುಕೊಂಡುಬಂದಿರುವ ಶರಣರ ಕುರುಹುಗಳು, ಅನೇಕ ಮಠಮಾನ್ಯಗಳು ಈ ನಾಡು ಅನಂತರದಲ್ಲಿಯೂ ಶರಣರ ಪ್ರಭಾವವಲಯದಲ್ಲಿ ಬೆಳದು ಬಂದಿರುವದಕ್ಕೆ ನಿದರ್ಶನಗಳಾಗಿವೆ.

## ಶೈಕ್ಷಣಿಕ ಅಭಿವೃದ್ಧಿ:

ಆದಿ ಕಾಲದಿಂದಲು ನಮ್ಮ ಪೂರ್ವಜರು ವಿದ್ಯೆ(ಶಿಕ್ಷಣ)ಯ ಕುರಿತು ಅಪಾರ ಗೌರವಾದರಗಳನ್ನು ಹೊಂದಿದ್ದಾರೆ. ಅದು ವೇದಕಾಲದಷ್ಟು ಪ್ರಾಚೀನವಾದುದಾಗಿದೆ. ಜನರ ಬದುಕನ್ನು ನಿಯಂತ್ರಿಸಿದ ವಿದ್ಯಾಭ್ಯಾಸದ ವ್ಯವಸ್ಥೆಯ ವಿಷಯದಲ್ಲಿ ನಮ್ಮ ದೇಶ ಹಿಂದೆ ಬೀಳದೆ ಅದನ್ನು ಮುನ್ನಡೆಸಿಕೊಂಡು ಬಂದಿರುವದನ್ನು ನಾವಿಲ್ಲಿ ಹೀಗೆ ಸಂಗ್ರಹಿಸಬಹುದು.

"ಸರ್ವದ್ರವ್ಯೇಷು ವಿದ್ಯೈವ ಧನಮಾಹುರನುತ್ತಮಂ  
ಆಹಾರ್ಯ ದೇನರ್ಘ್ಯತ್ವಾದಕ್ಷಯತ್ವಾಚ್ಛ ಸರ್ವದಾ||  
ವಿದ್ಯಾದದಾತಿ ವಿನಯಂ ವಿನಯಾದ್ಯಾತಿ ಪಾತ್ರತಾಂ  
ಪಾತ್ರತ್ವಾದ್ಧನಮಾಪ್ನೋತಿ ಧನಾದ್ಧರ್ಮಃ ತತಃ ಸುಖಃ"[೧೫೦]

ಅಂದರೆ ವಿದ್ಯೆಗಿಂತ ಶ್ರೇಷ್ಠವಾದದ್ದು ಇನ್ನೊಂದಿಲ್ಲ, ಸರ್ವದ್ರವ್ಯಗಳಲ್ಲಿ ವಿದ್ಯೆಯೇ ನಿಜವಾದ ಧನ. ಏಕೆಂದರೆ ಅದನ್ನು ಯಾರೂ ಅಪಹರಿಸಲಾರರು. ಅದು ಅನರ್ಘ್ಯ ಮತ್ತು ಅಕ್ಷಯವಾದುದು. ಅದು ಶಿಕ್ಷಣದ ಪರಮ ಪ್ರಯೋಜನ ಆತ್ಮಸಿದ್ಧಿ ಎನ್ನುವಲ್ಲಿ ಸಾಕಾರಗೊಂಡಿದೆ. ಪ್ರಾಚೀನ ಸಾಮಾಜಿಕ ರಚನೆಯನ್ನು ಗಮನಿಸಿದಾಗ, ಶಿಕ್ಷಣ ವ್ಯವಸ್ಥೆ ವ್ಯಕ್ತಿಯನ್ನು ಕೇಂದ್ರವಾಗಿಟ್ಟುಕೊಂಡು ರೂಪಿತವಾದಂತೆ ಕಂಡುಬರುತ್ತದೆ. ಅದರ ಗುರಿಯೂ ಸಹ ವ್ಯಕ್ತಿಯ ವಿಕಾಸವಾದುದರಿಂದ ಶಿಕ್ಷಣ ಅಭ್ಯಾಸದ ವ್ಯವಸ್ಥೆ ಅದಕ್ಕೆ ಹೊಂದಿಕೊಂಡೆ ವೈದಿಕಯುಗದಿಂದ ನಡೆದುಬಂದಿದೆ. ವೈದಿಕಯುಗದಲ್ಲಿ ಗುರುವಿನ ಮನೆಯೇ ಪಾಠಶಾಲೆಯಾಗಿತ್ತು. ವಿದ್ಯಾರ್ಥಿಯು ಗುರುವಿನ ಮನೆಯಲ್ಲಿ ಗುರುಸೇವೆ ಕೈಕೊಂಡು ವಿದ್ಯೆಯನ್ನು ಕಲಿಯುತ್ತಿದ್ದನು. ವೈದಿಕಯುಗದಿಂದ ನಮ್ಮ ಅಧ್ಯಯನ ಅವಧಿಯ ಕಾಲದಲ್ಲಿ ಕಲಿಕೆಯ ವ್ಯವಸ್ಥೆ ಬೆಳೆಯುತ್ತಾಬಂದು, ಶಿಕ್ಷಣವು ವ್ಯಕ್ತಿಯ ಅವಿಭಾಜ್ಯ ಅಂಗವೆಂಬಂತೆ ಬೆಳೆಯಿತಾದರೂ ಅದು ಉನ್ನತ ವರ್ಗದವರ ಸ್ವತ್ತಾಗಿಯೇ ಉಳಿದಿತ್ತು. ಹೀಗಿದ್ದಾಗ ಕ್ರಿ.ಶ.ಪೂ. ೨ನೆಯ ಶತಮಾನದ ವೇಳೆಗೆ ಬೌದ್ಧವಿಹಾರಗಳು ಬೆಳೆದಂತೆ, ಅವು ಮುಂದೆ ವಿದ್ಯಾಕೇಂದ್ರಗಳಾಗಿ ಹೊರಹೊಮ್ಮಿದವು. ಈ ಕೇಂದ್ರಗಳು ಭಿಕ್ಷು-ಭಿಕ್ಷುಣಿಯರ ಶಿಕ್ಷಣಕ್ಕಾಗಿ ಮೀಸಲಿದ್ದರೂ, ಅವು ಕ್ರಮೇಣ ಉಳಿದವರು ಅಲ್ಲಿ ಸೇರಿಕೊಳ್ಳಲು ಅವಕಾಶ ಕಲ್ಪಿಸಿದವು. ಹಿಂದೂಗಳ ಸುವ್ಯವಸ್ಥಿತ ವಿದ್ಯಾಸಂಸ್ಥೆಗಳು ಕ್ರಿ.ಶ. ೫ನೆಯ ಶತಮಾನದ ನಲಂದೆಗಿಂತ ಪ್ರಾಚೀನವು.

ಬೌದ್ಧ ವಿಹಾರಗಳು ಶಿಕ್ಷಣಕೇಂದ್ರಗಳಾಗಿ ಮಾರ್ಪಟ್ಟ ಪರಿಣಾಮಕ್ಕೆ ಸಿಲುಕಿ ಅವುಗಳ ಪ್ರೇರಣೆಯಿಂದ ಹಿಂದೂ ವಿದ್ಯಾಸಂಸ್ಥೆಗಳು ಹುಟ್ಟಿರಬಹುದೆಂದು ಡಾ.ಎ.ಎಸ್.ಅಲ್ತೇಕರರ ಅಭಿಪ್ರಾಯ[೧೫೧] ಸಾಧುವಾದುದಲ್ಲ. ಏಕೆಂದರೆ ಕ್ರಿ.ಶ.ಪೂರ್ವದಲ್ಲಿಯೇ ಮಹಾನ್ ಕೃತಿಗಳ ರಚನೆ ಮಾಡಿದ ಕೌಟಿಲ್ಯ ಹಾಗೂ ಇತರರು ಹಿಂದೂ ಪ್ರಮುಖ ವಿದ್ಯಾಸಂಸ್ಥೆಗಳಿಂದ ಶಿಕ್ಷಣ ಪಡೆದಿರಲೇಬೇಕು. ಇಲ್ಲವಾದರೆ ಇಂತಹ ಮಹಾನ್ ಕೃತಿಗಳ ರಚನೆಯು ಸಾಧ್ಯವಾಗುತ್ತಿರಲಿಲ್ಲ. ಅಲ್ತೇಕರರ ಅಭಿಪ್ರಾಯವನ್ನು ನಮ್ಮ ಕನ್ನಡ ಶಾಸನಗಳು ಪೋಷಿಸುತ್ತವೆಯಾದರೂ ಅಂದಿನ

ದೇವಾಲಯಗಳು ವ್ಯವಸ್ಥಿತ ಶಿಕ್ಷಣ ಕೇಂದ್ರಗಳಾಗಿರುವದನ್ನು ಅಲ್ಲಗಳೆಯಲಾಗುವದಿಲ್ಲ. ಅಂದಿನ ಕಾಲದ ಶಿಕ್ಷಣದ ಕುರಿತು ಅನೇಕ ದಾಖಲೆಗಳು ವಿವರಿಸುತ್ತಿದ್ದು, ಚೀನಿ ಪ್ರವಾಸಿ ಹ್ಯೂಯನ್‌ತ್ಸಾಂಗ್‌ನು ವಿದ್ಯಾರ್ಥಿಗಳು ತಮ್ಮ ವಿದ್ಯೆಯು ಮುಗಿದ ನಂತರ ಯಾವುದಾದರೂ ವೃತ್ತಿಯನ್ನು ಆರಂಬಿಸಿದಾಗ, ಅವರು ಮಾಡುವ ಮೊದಲ ಕೆಲಸವೆಂದರೆ ತಮ್ಮ ಗುರುಗಳಿಗೆ ಸಂಭಾವನೆ ಅಥವಾ ಗುರುದಕ್ಷಿಣೆಯನ್ನು ನೀಡುವದು ಎಂದು ಹೇಳುತ್ತಾನೆ[೧೫೨]. ಅಲ್ಲದೇ ವಡ್ಡಾರಾಧನೆಯಲ್ಲಿ ಕೂಡಾ ಸುಕುಮಾರಸ್ವಾಮಿಯ ಕಥೆಯಲ್ಲಿ, ಕಾಶ್ಯಪಿ ಎಂಬಾಕೆಯು ತನ್ನ ಮಕ್ಕಳಾದ ಅಗ್ನಿಭೂತಿ ಮತ್ತು ವಾಯುಭೂತಿಯರನ್ನು ತನ್ನ ಅಣ್ಣ ಸೂರ್ಯಮಿತ್ರನ ಹತ್ತಿರ ಕಳುಹಿಸಿದ ಪ್ರಸಂಗವನ್ನು ಹೇಳುತ್ತಾ, ಸೂರ್ಯಮಿತ್ರನು ಸಹೋದರಿಯ ಮಕ್ಕಳಿಂದ ಯಾವುದೇ ಪ್ರತಿಫಲವನ್ನು ಬಯಸದೆ ಮನೆಯಲ್ಲಿಯೇ ಇಟ್ಟುಕೊಂಡು ಪಾಠ ಹೇಳಿಕೊಟ್ಟನೆಂದು, ಅವರಿಬ್ಬರೂ ಭಿಕ್ಷೆಯಿಂದ ಆಹಾರವನ್ನು ಸಂಪಾದಿಸಿಕೊಂಡು ಜೀವಿಸುತ್ತಿದ್ದರು ಎಂದು ಹೇಳುತ್ತದೆ[೧೫೩]. ಹೀಗಾಗಿ ಶಿಕ್ಷಣವು ಗುರುವಿನ ಮನೆಯಲ್ಲಿ(ಗುರುಕುಲದಲ್ಲಿ)ಯೇ ನಡೆಯುತ್ತಿತ್ತೆಂದು ತಿಳಿದುಬರುತ್ತದೆ.

ಶಾಸನಗಳು ಶಿಕ್ಷಣವ್ಯವಸ್ಥೆಯು ದೇವಸ್ಥಾನ, ಅದಕ್ಕೆ ಹೊಂದಿಕೊಂಡಿರುವ ಮಠಗಳಲ್ಲಿ ನಡೆಯುತ್ತಿತ್ತೆಂಬುದನ್ನು ಸ್ಪಷ್ಟವಾಗಿ ಹೇಳುತ್ತವೆಯಲ್ಲದೆ, ಪ್ರಾಥಮಿಕ ಶಿಕ್ಷಣದಿಂದ ಪ್ರೌಢ ಶಿಕ್ಷಣದವರೆಗೆ ವಿದ್ಯಾರ್ಥಿಗಳು ಅಗ್ರಹಾರ, ಬ್ರಹ್ಮಪುರಿ, ದೇವಸ್ಥಾನ, ಮಠ ಮತ್ತು ಘಟಿಕಾಸ್ಥಾನಗಳಲ್ಲಿ ವಿದ್ಯೆಯನ್ನು ಕಲಿಯುತ್ತಿದ್ದ ಕುರಿತು ಮತ್ತು ಅವರ ಕಲಿಕೆಗಾಗಿ ಅನೇಕರು ಭೂಮಿ, ಹಣದಾನಗಳನ್ನು ಮಾಡಿರುವದನ್ನು ಉಲ್ಲೇಖಿಸುತ್ತವೆ. ಹೀಗಾಗಿ ಈ ಕಾಲದಲ್ಲಿ ಶಿಕ್ಷಣವು ಮಹಾಜನರಿರುವ ಅಗ್ರಹಾರ, ಬ್ರಹ್ಮಪುರಿ,ಹಾಗೂ ದೇವಸ್ಥಾನ ಮಠಗಳಲ್ಲಿ ನಡೆಯುತ್ತಿತ್ತೆಂದು ಸಹಜವಾಗಿ ಊಹಿಸಬಹುದಾಗಿದೆ.

ಪ್ರಾಚೀನ ಭಾರತದಲ್ಲಿ ಗುರುವನ್ನು ಅರಸಿಹೋಗಿ ಅವನ ಸನ್ನಿಧಿಯಲ್ಲಿ ಶಿಷ್ಯರು ವಿದ್ಯೆಯನ್ನು ಕಲಿಯಬೆಕಿತ್ತು. ಇಂಥವರನ್ನು ಅಂತೇವಾಸಿ ಎಂದು ಕರೆಯಲಾಗುತ್ತಿತ್ತು[೧೫೪]. ಇದು ಗುರುಕುಲ ಪದ್ಧತಿಯೆನಿಸಿದೆ. ಈ ಪದ್ಧತಿಯೇ ಮುಂದೆ ಸಾಮೂಹಿ ವಿದ್ಯಾಸಂಸ್ಥೆಗಳಿಗೆ ದಾರಿಮಾಡಿಕೊಟ್ಟಿತು. ಈ ದಿಸೆಯಲ್ಲಿ ಬೌದ್ಧ ವಿಹಾರಗಳ ಪಾತ್ರ ಬಹುಮುಖ್ಯವಾದುದು. ಸಾಂಸ್ಥಿಕ ವಿದ್ಯಾಕೇಂದ್ರಗಳಾದ ಬೌದ್ಧ ವಿಹಾರ, ವೈದಿಕರ ಅಗ್ರಹಾರ-ಬ್ರಹ್ಮಪುರಿ-ಘಟಿಕಾಸ್ಥಾನ ಮತ್ತು ಶೈವರ ಮಠಗಳು ಬೆಳೆದಂತೆ ಈ ಗುರುಕುಲ ಪದ್ಧತಿ ಶಿಥಿಲಗೊಂಡಿತು. ಆದರೂ ಗ್ರಾಮಗಳು ಅಲ್ಪಪ್ರಮಾಣದಲ್ಲಿ ಇದನ್ನು ಪ್ರೋತ್ಸಾಹಿಸಿಕೊಂಡು ಮುನ್ನಡೆದಿದ್ದವು. ವಿದ್ಯೆಯು ಪರಮಪ್ರಯೋಜನ ಆತ್ಮಸಿದ್ಧಿ, ಆತ್ಮಜ್ಞಾನ ಎನ್ನುವಲ್ಲಿ ಪ್ರಚುರಗೊಂಡಿದ್ದು ನಮ್ಮವರು ತಾರ್ಕಿಕತೆಗಿಂತ ಪಾರಮಾರ್ಥಿಕಕ್ಕೆ ಹೆಚ್ಚು ಒತ್ತು ಕೊಟ್ಟಿರುವದು ಸ್ಪಷ್ಟವಾಗುತ್ತದೆ. ಅದೇ ರೀತಿ ಸಮಾಜಕ್ಕೆ ಅಪೇಕ್ಷಿತವಾದ ನಾಲ್ಕುದಾನಗಳಲ್ಲಿ, ವಿದ್ಯಾದಾನವು ಎಲ್ಲ ದಾನಗಳಲ್ಲಿ ದೇಶೋನ್ನತಿಯ ದೃಷ್ಟಿಯಿಂದ ಅತೀ ಮುಖ್ಯವಾದುದೆಂದು, ಪ್ರಾಚೀನರು ಅರಿತಿದ್ದರೆಂಬುದು ಶಾಸನಗಳಿಂದ ಸ್ಪಷ್ಟವಾಗುತ್ತದೆ. ಆಯಾ ಕಾಲದಲ್ಲಿ ಸಾಮಂತರು, ಅಧಿಕಾರಿಗಳು, ಮಹಾಜನರು, ಸಾಮಾನ್ಯರಲ್ಲದೆ, ಸ್ತ್ರೀಯರೂ ಕೂಡ ಒಳ್ಳೆಯ ಆಸ್ಥೆಯಿಂದ,

ತತ್ಪರತೆಯಿಂದ ದಾನದತ್ತಿಗಳನ್ನು ನೀಡುವದರ ಮೂಲಕ, ದಾನ ಶಾಲೆಗಳನ್ನು ಕಟ್ಟಿಸುವದರ ಮುಖಾಂತರ ನೆಡೆಸಿಕೊಟ್ಟರುವದನ್ನು ಶಾಸನಗಳು ಉಲ್ಲೇಖಿಸಿವೆ. ಅವರು ದೇವಾಲಯಗಳಿಗೆ ದಾನ-ದತ್ತಿಗಳನ್ನು ಬಿಟ್ಟುಕೊಡುವಾಗ ವಿದ್ಯಾಭ್ಯಾಸಕ್ಕಾಗಿ ಇಂತಿಷ್ಟು ಎಂದು ನಿಗದಿಪಡಿಸುತ್ತಿದ್ದರು. ಉದಾಹರಣೆಗಾಗಿ ಮಹಾಮಂಡಳೇಶ್ವರ ಶಿಲಹಾರ ಇಂದರಸನು ದೈಠಾಣದ ದೇವಾಲಯವೊಂದಕ್ಕೆ ದಾನಕೊಡುವಾಗ, ಅಕ್ಷರ ಖಂಡಿಕೆಗೆ ೨೦ ಮತ್ತರು ಭೂಮಿಯನ್ನು ಬಿಟ್ಟನು[೧೫೫]. ಹೀಗಾಗಿ ದೇವಸ್ಥಾನಗಳು ವಿದ್ಯಾಭ್ಯಾಸದ ಕೇಂದ್ರಗಳೆನಿಸಿದ್ದವು. ಕನ್ನಡನಾಡಿನಲ್ಲಿ ಇಂದಿಗೂ ಜಂಗಮರ ಹೆಸರುಗಳಲ್ಲಿ ಸಾಲಿಮಠ,ಓದಿಸುವಮಠ ಎಂಬುದಿದ್ದು, ಇದು ಮೊನ್ನೆ ಮೊನ್ನೆಯವರೆಗೂ ಮಠ, ದೇವಸ್ಥಾನಗಳಲ್ಲಿ ಶಾಲೆ ಕಲಿಸುವದನ್ನು ಸೂಚಿಸುತ್ತಿರುವಂತಿದೆ ಎಂಬ ಡಾ.ಎಸ್.ಕೆ.ಕೊಪ್ಪಾರವರ ಹೇಳಿಕೆಯು ಒಪ್ಪುವಂತಾಗಿದೆ[೧೫೬]. ಏಕೆಂದರೆ ಎಂದೋ ಹುಟ್ಟಿ ಬೆಳೆದು ಇಂದು ಪ್ರಚಲಿತದಲ್ಲಿರುವ ಎಷ್ಟೋ ಹಿಂದೂ ರೂಢಿ ಪರಂಪರೆಗಳು ನಮ್ಮಲ್ಲಿ ಸಾಕಷ್ಟು ಉಳಿದುಕೊಂಡು ಬಂದಿರುವದು ಇದನ್ನು ಸಮರ್ಥಿಸುತ್ತವೆ.

ದೇವಸ್ಥಾನಗಳು ಶಿಕ್ಷಣ ಕೇಂದ್ರಗಳಾಗಿದ್ದು, ತಪೋಧನರು ಛಾತ್ರರು ವಿದ್ಯಾಭ್ಯಾಸದಲ್ಲಿ ನಿರತರಾಗುತ್ತಿದ್ದರು. ಉದಾಹರಣೆಗೆ ಅಗ್ರಹಾರ ಕೊಕಟನೂರಿನಲ್ಲಿ ವಿಶ್ವೇಶ್ವರ ದೇವರಿಗೆ ದಾನವನ್ನು ಬಿಡುವಾಗ ಅಲ್ಲಿರುವ ಮಠದ ತಪೋಧನರ ವಿದ್ಯಾರ್ಥಿಗಳ ಅಹಾರದಾನಕ್ಕಾಗಿ ದತ್ತಿಯನ್ನು ಬಿಡಲಾಗಿತ್ತು[೧೫೭]. ತಪೋಧನರು ನೈಷ್ಟಿಕ ಬ್ರಹ್ಮಚಾರಿಗಳಾಗಿದ್ದು, ವಿದ್ಯಾಭ್ಯಾಸದ ನಂತರ ಇವರು ಮಠ-ದೇವಾಲಯಗಳಲ್ಲಿ ಸ್ಥಾನಪತಿಗಳಾಗುತ್ತಿದ್ದರು. ಛಾತ್ರರು ವಿದ್ಯಾಭ್ಯಾಸ ಮುಗಿದ ಮೇಲೆ ಗ್ರಹಸ್ಥಾಶ್ರಮಕ್ಕೆ ಮರಳುತ್ತಿದ್ದರು. ತಪೋಧನರು ಯಮನಿಯಮಾಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಜಪ ತಪ ಸಂಪನ್ನರಾದ ಸ್ಥಾನಪತಿಗಳಿಂದ ಉಪದೇಶ ಪಡೆಯುತ್ತಿದ್ದರೆಂದು ತೋರುತ್ತದೆ. ದೇವರ ಮಠದಲ್ಲೋದುವ ಕೇಳುವ ತಪೋಧನರ್ಗ್ಗಂಛಾತ್ರರ್ಗ್ಗ ಎಂಬ ಶಾಸನಗಳ ಉಲ್ಲೇಖಗಳು ತಪೋಧನರು ಛಾತ್ರರಂತೆ ಓದುವ ವಿದ್ಯಾರ್ಥಿಗಳಲ್ಲ ಅವರು ಕೇಳುವ ವಿದ್ಯಾರ್ಥಿಗಳಾಗಿದ್ದರೆಂಬುದನ್ನು ಸ್ಪಷ್ಟಪಡಿಸುತ್ತವೆ. ದೇವಸ್ಥಾನ ಮಠಗಳ ಸಮಸ್ತ ಹೊಣೆಗಾರಿಕೆಯನ್ನು ಹೊತ್ತುಕೊಂಡ ಸ್ಥಾನಾಚಾರ್ಯರು ನೈಷ್ಠಿಕ ಬ್ರಹ್ಮಚಾರಿಗಳಾಗಿರುವದರೊಂದಿಗೆ ಇವರು ವಿದ್ಯಾಪಕ್ಷಪಾತಿಗಳಾಗಿದ್ದರು. "ಸ್ವಸ್ತಿಯಮನಿಯಮಾಸನ ಪ್ರಾಣಾಯಾಮ ಪ್ರತ್ಯಾಹಾರ ಧಾರಣಧ್ಯಾನ ಸಮಾಧಿಶೀಲಗುಣ ಸಂಪನ್ನರಪ್ಪ ಶ್ರೀಮದೀಸಾನಶಕ್ತಿ ಪಂಡಿತದೇವ"[೧೫೮], "ಯಮನಿಯಮಾಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನಧಾರಣ ಮೋನಾನುಷ್ಠಾನ ಗುಣಸಂಪನ್ನ ಅನ್ನದಾನ ವಿನೋದರುಮಪ್ಪ ಶ್ರೀಜ್ಞಾನಸಿದ್ಧದೇವರ ಕಾಲಂ ಕರ್ಚ್ಚಿ ವಿದ್ಯಾದಾನ ಸತ್ರವಾಗೆ ಮಠಕ್ಕೆ ಕೊಟ್ಟದಾನ"[೧೫೯]. "ಅಂತೆನಿಸಿ ತಪೋಮದಿಮತ್ಯಂತಸ್ಗ್ಗಲೆ ನೆಗಳ್ದಾಯತಿ ಶಿಷ್ಯಳಾಕುಳಿದೇವ"[೧೬೦]. ಹಾಗೂ "ಮಠದ ಅಧಿಪತಿ(ಇಂದಿನ ಮಠಾಧಿಪತಿ) ಸೋಮಡಿಭಟ್ಟ"[೧೬೧] ಅಲ್ಲದೇ ಇನ್ನೂ ಅನೇಕರು ಶಾಸನಗಳಲ್ಲಿ ವರ್ಣಿತರಾಗಿದ್ದಾರೆ. ಇವರಲ್ಲಿ ಹಲವರು ಅಧ್ಯಯನದೊಂದಿಗೆ ಅಧ್ಯಾಪನದಲ್ಲಿ ತೊಡಗಿರಬೇಕು. ಹೀಗೆ ಮಠ, ದೇವಸ್ಥಾನ, ಅಗ್ರಹಾರ, ಘಟಿಕಾಸ್ಥಾನಗಳಲ್ಲಿ ಓದುವ, ಕೇಳುವ, ಹೇಳುವ, ಛಾತ್ರ, ತಪೋಧನ, ಸ್ಥಾನಾಚಾರ್ಯರಿಗೆ ಅನೇಕರು ವಿದ್ಯಾದಾನವೆಂದು ಭೂಮಿ, ಹಣ, ಧಾನ್ಯಗಳನ್ನು ನೀಡಿರುವದನ್ನೂ, ದಾನಶಾಲೆಗಳೆಂಬ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿದ ಕುರಿತು ಶಾಸನಗಳಿಂದ ತಿಳಿದುಬರುತ್ತದೆ.

## ಶಿಕ್ಷಣ ಕೇಂದ್ರಗಳು :

ಪ್ರಾಚೀನ ಮತ್ತು ಮಧ್ಯಕಾಲದಲ್ಲಿ ಶಿಕ್ಷಣವು ನಡೆದಿರುವದು ಮುಖ್ಯವಾಗಿ ನಾಲ್ಕು ಕೇಂದ್ರಗಳಲ್ಲಿ. ಅಂದು ಅಗ್ರಹಾರ, ದೇವಸ್ಥಾನ, ಮಠ, ಬ್ರಹ್ಮಪುರಿ ಮತ್ತು ಘಟಿಕಾಸ್ಥಾನ ಎಂಬ ನಾಲ್ಕು ಕೇಂದ್ರಗಳು ಶಿಕ್ಷಣವನ್ನು ನೀಡುವ ಕೇಂದ್ರಗಳಾಗಿದ್ದವು[೧೬೨]. ಆದರೆ ಬ್ರಹ್ಮಪುರಿ ಎಂಬುದು ನಗರಪ್ರದೇಶದಲ್ಲಿ ನೆಲೆಸಿದ ಬ್ರಾಹ್ಮಣರ ಕೇರಿಯಾಗಿದ್ದು ಅದು ಶಿಕ್ಷಣ ಕೇಂದ್ರವಾಗಿತ್ತೆಂಬುವದರ ಬಗ್ಗೆ ಇನ್ನು ವಿವರವಾಗಿ ತಿಳಿಯಬೇಕಾಗಿದೆ.

## ಅಗ್ರಹಾರ :

ಅಗ್ರಹಾರ ಇದರ ಮೂಲ ರೂಪ ಅಗ್ರಾಹಾರ ಎಂದಿರಬೇಕೆಂದೂ, ಅದು ಅಗ್ರ+ಆಹಾರ ಎಂಬ ಎರಡು ಪದಗಳ ಸಮಾಸವೆಂದು ಡಿ.ಎಲ್.ನರಸಿಂಹಾಚಾರ್ಯರ ಅಭಿಪ್ರಾಯ. ಅಗ್ರ ಎಂದರೆ ಶ್ರೇಷ್ಠ, ಆಹಾರ ಎಂದರೆ ದೇಶ ಅಥವಾ ಸ್ಥಳ. ಅಗ್ರಹಾರವೆಂದರೆ ಶ್ರೇಷ್ಠರಿಗೆ ಕೊಟ್ಟಿರುವ ಸ್ಥಳ ಅಥವಾ ಊರು ಎಂದರ್ಥ[೧೬೩]. ಅಗ್ರಹಾರದಲ್ಲಿ ಬ್ರಾಹ್ಮಣರೇ ಇರಬೇಕಿಲ್ಲ, ಬೇರೆ ಜಾತಿಯ ಜನಾಂಗಗಳೂ ಇರಬಹುದು. ಆದರೆ ಗ್ರಾಮದ ಉತ್ಪನ್ನದ ಮೇಲಿನ ಕಂದಾಯ ಬ್ರಾಹ್ಮಣರಿಗೆ ಸಲ್ಲುತ್ತಿತ್ತು. ಶಾಸನಗಳು ಇದನ್ನು ಸರ್ವಬಾದಾಪರಿಹಾರವಾಗಿ ಕೊಟ್ಟ ಭೂಮಿ, ಸರ್ವಬಾದಾಪರಿಹಾರವಾಗಿ ಬಿಟ್ಟ ಗ್ರಾಮವೆಂದು ಕರೆಯುವದು ಇಲ್ಲಿ ಗಮನೀಯ. ವೈದಿಕ ಪ್ರಭಾವವಿರುವವರೆಗೆ ಕೇವಲ ಬ್ರಾಹ್ಮಣರೇ ಸಮಾಜದಲ್ಲಿ ಅಗ್ರರೆನಿಸಿಕೊಂಡಿದ್ದರು. ಆದರೆ ಕಾಲಾನಂತರದಲ್ಲಿ ಅಂದರೆ ನಮ್ಮ ಅಧ್ಯಯನದ ಅವಧಿಯ ಕಾಲಕ್ಕಾಗಲೇ ಶಿಕ್ಷಣವ್ಯವಸ್ಥೆಯಲ್ಲಿ ಶೈವ ಮಠಪತಿಗಳಿಗೂ, ಜೈನ ಆಚಾರ್ಯರಿಗೂ ಸಹ ಅಗ್ರಸ್ಥಾನ ದೊರಕಿರುವದನ್ನು ಶಾಸನಗಳಿಂದ ತಿಳಿದುಕೊಳ್ಳಬಹುದು. ಏಕೆಂದರೆ ಪ್ರಾಚೀನ ಭಾರತೀಯ ಇತಿಹಾಸವನ್ನು ಗಣನೆಗೆ ತೆಗೆದುಕೊಂಡರೆ ಕ್ರಿ.ಪೂ. ೬ನೆಯ ಶತಮಾನದಿಂದ ಬೌದ್ಧ-ಜೈನರ, ಚೈತ್ಯ-ವಿಹಾರಗಳು ಶಿಕ್ಷಣ ಕೇಂದ್ರಗಳಾಗಿ ಮಾರ್ಪಟ್ಟವು. ಅವುಗಳಲ್ಲಿ ಶಿಕ್ಷಣ ನೀಡುವ ಬೌದ್ಧ-ಜೈನ ತಪೋಧನರು ಸಮಾಜದಲ್ಲಿ ಅಗ್ರಸ್ಥಾನವನ್ನು ಪಡೆದು, ಬ್ರಾಹ್ಮಣರ ಶ್ರೇಷ್ಠತೆಯನ್ನು ಕಸಿದುಕೊಂಡರು. ಹೀಗಾಗಿ ಕೇವಲ ಅಗ್ರಹಾರಗಳು ಅಥವಾ ಗ್ರಾಮಗಳನ್ನು ಸರ್ವಬಾದಾಪರಿಹಾರವಾಗಿ ನೀಡಿರುವದು ವೈದಿಕ ಬ್ರಾಹ್ಮಣರಿಗಷ್ಟೇ ಅಲ್ಲ, ಈ ಕಾಲದಲ್ಲಿ ಶೈವ-ಜೈನ-ಬೌದ್ಧರಿಗೂ ಸಹ ನೀಡಲಾಗುತ್ತಿದ್ದುದನ್ನು ಶಾಸನಗಳು ಹೇಳುವ ದೇವಾಲಯಗಳಿಗೆ ಹತ್ತಿಕೊಂಡ ಮಠ, ಬಸದಿಗೆ ಹತ್ತಿಕೊಂಡ ಮಠ, ದಾನಶಾಲೆಗಳು, ಶೈವ-ಜೈನ ಆಚಾರ್ಯ ಹಾಗೂ ಪಂಡಿತರ ಉಲ್ಲೇಖಗಳಿಂದ ಸ್ಪಷ್ಟವಾಗುತ್ತದೆ.

ಕರ್ನಾಟಕದ ತುಂಬೆಲ್ಲ ಅನೇಕ ಅಗ್ರಹಾರಗಳಿರುವದನ್ನು ಹಿಂದೆಯೇ ಗುರುತಿಸಲಾಗಿದ್ದು, ಅವು ಮುಖ್ಯವಾಗಿ ಶೈವ, ಬ್ರಾಹ್ಮಣ, ಜೈನ ಆಚಾರ್ಯರು ನೆಲೆಸಿದ ಗ್ರಾಮಗಳಾಗಿರಲೇಬೇಕು. ದಾನದತ್ತಿ ಶಾಸನಗಳನ್ನು ಗಮನಿಸಿ ನೋಡುವದಾದರೆ, ಸಾಮಂತರಸರುಗಳ ಕಾಲದಲ್ಲಿ ಕದಿರ[೧೬೪], ಮಣಲೂರು[೧೬೫], ಹಾರೋಹಳ್ಳಿ[೧೬೬], ಕುಪ್ಪಗದ್ದೆ[೧೬೭], ಅಂಧಾಸುರ[೧೬೮], ಹಾರುವಬೆಲಹೊರ[೧೬೯], ಬೆಲುವಣಗೆ[೧೭೦], ಹೂಲಿ ಅಥವಾ ಪೂಲಿ[೧೭೧], ಕೊಕಟನೂರ[೧೭೨], ನೀರಿಲಿ[೧೭೩],

ತಿಳವಳ್ಳಿ[೧೭೪], ಹಾವೇರಿ[೧೭೫], ಕುಪ್ಪಟ್ಟೂರು[೧೭೬], ನಾಣಂದೂರು[೧೭೭], ಜೇವುರಿಗೆ[೧೭೮] ಹಾಗೂ ಬೊಪ್ಪಣಂದಿ[೧೭೯]ಗಳಲ್ಲದೇ ಇನ್ನೂ ಮುಂತಾದ ಗ್ರಾಮಗಳನ್ನು ಅಗ್ರಹಾರಗಳನ್ನಾಗಿ ಮಾಡಿ ದಾನವಾಗಿ ಬಿಡಲಾಗಿತ್ತು. ಇವು ಮುಖ್ಯವಾಗಿ ಬ್ರಾಹ್ಮಣರಿಗೆ ನೀಡಿದ ಗ್ರಾಮಗಳಾಗಿವೆ. ಇನ್ನೂ ಕೆಲವು ಶಾಸನಗಳು ಮಹಾಜನ, ಸ್ಥಾನಾಚಾರ್ಯ, ಜೈನ ಪಂಡಿತ ಆಚಾರ್ಯರಿಗೆ ದಾನ ಬಿಟ್ಟಿದ್ದನ್ನು ಹೇಳುತ್ತಿದ್ದು ಇವು ಬ್ರಾಹ್ಮಣೇತರ ಪಂಡಿತರಿಗೆ ಅವರ ವಿದ್ಯಾಭ್ಯಾಸಕ್ಕೆ ನೀಡಿದ ದಾನದತ್ತಿಗಳಾಗಿವೆ. ಇವರು ನೆಲಸಿದ ಗ್ರಾಮಗಳು ಬ್ರಾಹ್ಮಣೇತರ ಅಗ್ರಹಾರಗಳಾಗಿ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಮಾರ್ಪಟ್ಟಿದ್ದು, ಅಲ್ಲಿ ಬ್ರಾಹ್ಮಣ, ಶೈವ, ಜೈನರೆಲ್ಲರೂ ಸಹ ಅಗ್ರಹಾರದ ಆದಾಯವನ್ನು ಹಂಚಿಕೊಂಡ ಮತ್ತು ಸರ್ವಮಾನ್ಯ ಗ್ರಾಮಗಳನ್ನು ಪ್ರತ್ಯೇಕವಾಗಿ ಪಡೆದ ಉಲ್ಲೇಖಗಳು ಶಾಸನಗಳಲ್ಲಿ ದೊರಕುತ್ತವೆ. ಮಹಾಜನರು ಬ್ರಾಹ್ಮಣರೇ ಆಗಿರಬೇಕಿಲ್ಲವೆಂದೂ, ಮಹಾಜನಗಳಲ್ಲಿ ಬ್ರಾಹ್ಮಣೇತರರು ಕಡಿಮೆ ಸಂಖ್ಯೆಯಲ್ಲಾದರೂ ಇದ್ದಿರಬಹುದೆಂಬ ಡಾ.ಎ.ಎಸ್.ಅಲ್ತೇಕರರ ಅಭಿಪ್ರಾಯವು ನಮ್ಮ ವಾದವನ್ನು ಪುಷ್ಟಿಕರಿಸುತ್ತದೆ[೧೮೦]. ಅಲ್ತೇಕರರ ಈ ಅಭಿಪ್ರಾಯವನ್ನು ಅಲ್ಲಗಳೆದು ಡಾ.ಚಿದಾನಂದಮೂರ್ತಿಯವರು ಶಾಸನಗಳಲ್ಲಿ ಮಹಾಜನರನ್ನು ಹೊಗಳುವ ಪದ್ಯಗಳನ್ನು ಉದಾಹರಿಸುತ್ತಾರೆ[೧೮೧]. ಆದರೆ ಶಾಸನಗಳಲ್ಲಿ ದಾನ ನೀಡಿದ ಬ್ರಾಹ್ಮಣೇತರ ದಾನಿ ಹಾಗೂ ದಾನ ಸ್ವೀಕರಿಸಿದ ಮಠದ ಆಚಾರ್ಯ, ಸ್ಥಾನಪತಿ, ಜೈನಪಂಡಿತರ ಕುರಿತ ಶಾಸನಪದ್ಯಗಳನ್ನು ಚಿದಾನಂದಮೂರ್ತಿಯವರು ಗಮನಿಸಿದಂತೆ ಕಾಣುವದಿಲ್ಲ.

ದಕ್ಷಿಣ ಭಾರತದಲ್ಲಿ ಕ್ರಿ.ಶ. ೪೨೦ರಿಂದ ಕ್ರಿ.ಶ. ೪೪೫ ರ ಸುಮಾರಿನಲ್ಲಿ ಆಳ್ವಿಕೆಮಾಡಿದ ಪಲ್ಲವ ನಂದಿವರ್ಮನ ತಾಮ್ರಪಟ ಶಾಸನದಲ್ಲಿ ಕುರುವಕ ಶ್ರೀವರ ಎಂಬ ಹೆಸರಿನ ಅಗ್ರಹಾರವಿದ್ದ ಬಗ್ಗೆ ತಿಳಿದುಬರುತ್ತದೆ[೧೮೨]. ಹೀಗಾಗಿ ಗ್ರಾಮವನ್ನು ದತ್ತಿಯಾಗಿ ಬ್ರಾಹ್ಮಣರಿಗೆ ಬಿಟ್ಟುಕೊಡುವ ಸಂಪ್ರದಾಯವು ಸಾಕಷ್ಟು ಪ್ರಾಚೀನ ಕಾಲದಲ್ಲಿಯೇ ಪ್ರಚಲಿತಗೊಂಡಿರುವದು ಇದರಿಂದ ತಿಳಿದುಬರುತ್ತದೆ. ಕರ್ನಾಟಕದಲ್ಲಿ ಅಗ್ರಹಾರ ಪದ್ಧತಿಯು ಪ್ರಾರಂಭವಾದದ್ದು ಕದಂಬರ ಕಾಲದಲ್ಲಿ. ಬಹುಷಃ ಕರ್ನಾಟಕದ ಪ್ರಥಮ ಅಗ್ರಹಾರ ತಾಳಗುಂದವಾಗಿದ್ದು ಕದಂಬ ಮಯೂರಶರ್ಮನೇ ಇದರ ಸ್ಥಾಪಕನೆಂದು ಅಲ್ಲಿಯ ಶಾಸನವೊಂದು ಹೇಳುತ್ತದೆ[೧೮೩]. ಅಗ್ರಹಾರಗಳಲ್ಲಿ ವಾಸಿಸುವ ಬ್ರಾಹ್ಮಣ ಕುಟುಂಬಗಳ ಸದಸ್ಯರ ಸಂಖ್ಯೆಯ ಕುರಿತು ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಶಾಸನಗಳು ಅವರನ್ನು ಮಹಾಜನರೆಂದು ಕರೆಯುತ್ತಿದ್ದು ಅದು ಇನ್ನೂ ಚರ್ಚಾಸ್ಪದ ವಿಷಯವಾಗಿ ಉಳಿದುಕೊಂಡಿದೆ.

ಅಗ್ರಹಾರಗಳು ವೈದಿಕ ಸಂಪ್ರದಾಯದ ವಿದ್ಯಾಕೇಂದ್ರಗಳಾಗಿದ್ದು, ಅಲ್ಲಿನ ಮಹಾಜನರು ಮಹಾವಿದ್ವಾಂಸರಾಗಿದ್ದರೆಂದು ತಿಳಿಯುತ್ತದೆ. ಅವರು ಷಟ್ಕರ್ಮನಿರತರು ಎಂದು ಶಾಸನಗಳು ಬಣ್ಣಿಸಿವೆ. ಯಜನ, ಯಾಜನ, ಅಧ್ಯಾಪನ, ದಾನ, ಧ್ಯಾನ, ಪ್ರತಿಗ್ರಹ ಇವೇ ಆ ಷಟ್ಕರ್ಮಗಳು. ಇವು ಪ್ರತಿಯೊಬ್ಬ ಬ್ರಾಹ್ಮಣನು ಮಾಡಲೇಬೇಕಾದ ವಿಧಿಗಳು. ಇವುಗಳಲ್ಲಿ ಅಧ್ಯಯನ ಎನ್ನುವದು ಜ್ಞಾನಾರ್ಜನೆಯನ್ನೂ, ಅಧ್ಯಾಪನ ಎನ್ನುವದು

ಜ್ಞಾನದಾಹವನ್ನು ಸೂಚಿಸುತ್ತದೆ. ವೈದಿಕರು ತಮ್ಮ ವಿದ್ಯಾರ್ಥಿ ಜೀವನದಲ್ಲಿ ಕಲಿತಷ್ಟಕ್ಕೆ ತೃಪ್ತರಾಗದೆ ಗೃಹಸ್ತರಾದ ಮೇಲೂ ತಮ್ಮ ಅಭ್ಯಾಸವನ್ನು ಮುಂದುವರೆಸುವದೇ ಅಧ್ಯಯನ. ಅಧ್ಯಾಪನ ಎಂದರೆ ಪಾಠವನ್ನು ಬೋಧಿಸುವದು ಎಂದರ್ಥ[೮೪]. ವಡ್ಡಾರಾಧನೆಯಲ್ಲಿ ಶಿಕ್ಷಣದ ಕುರಿತು ಹೇಳುವಾಗ, ಅಗ್ರಹಾರ(ದೇವಸ್ಥಾನ, ಮಠ)ಗಳಲ್ಲಿ ನಾಲ್ಕುವೇದ, ಆರುಅಂಗಗಳು, ಹದಿನೆಂಟು ಧರ್ಮಶಾಸ್ತ್ರಗಳು, ಮೀಮಾಂಶಾ, ನ್ಯಾಯವಿಸ್ತಾರ, ವ್ಯಾಕರಣ, ಪ್ರಣಾಮ, ಚಂದ, ಅಲಂಕಾರ, ನಿಘಂಟು, ಕಾವ್ಯ, ನಾಟಕ, ಚಾಣಕ್ಯ, ಸಾಮುದ್ರಿಕಾ, ಶಾರಿಹೋತ್ರ, ಪಾಳಕಾಪ್ಯ, ಹಾಗಿತ, ಚರಕ, ಅಶ್ವಿನಿವಾತ, ಬಾಹಲ, ಸುಶ್ರುತ, ಕ್ಷರಪಾಣಿಯ ಇತ್ಯಾದಿಗಳನ್ನು ಕಲಿಸಲಾಗುವ ವಿಷಯಗಳಾಗಿದ್ದವೆಂದು ಹೇಳುವದರಿಂದ[೮೫] ಅಗ್ರಹಾರದ ಅಧ್ಯಾಪಕರು(ಬ್ರಾಹ್ಮಣ ಮಹಾಜನರು) ಇವುಗಳನ್ನು ಬಲ್ಲವರಾಗಿರುತ್ತಿದ್ದರೆಂದು ತಿಳಿಯಬಹುದು. ಸಿಸುವಿನಹಳ್ಳಿಯ ೫೦ ಮಹಾಜನಗಳು ಬ್ರಹ್ಮಸ್ಮೃತಿ, ಸ್ಮೃತಿ, ವ್ಯಾಕರಣ, ಕಾವ್ಯ, ನಾಟಕ, ತರ್ಕ ಮತ್ತು ಆಗಮಗಳಿಗೆ ಸಮಾನವಾಗಿದ್ದರೆಂದು ಹೇಳಿದರೆ[೮೬], ಸಾಲೂರು ಶಾಸನವು ಅಲ್ಲಿಯ ಸಾವಿರ ಮಹಾಜನರು ವೇದಗಳನ್ನು ಮತ್ತು ತರ್ಕಶಾಸ್ತ್ರ ಬಲ್ಲವರು, ಯೋಗಸಿದ್ಧಿಯನ್ನು ಪಡೆದವರೆಂದು ಹೇಳುತ್ತದೆ[೮೭]. ಅಲ್ಲದೇ ಶಾಸನವೊಂದು ಅಗ್ರಹಾರದಲ್ಲಿ ವ್ಯಾಖ್ಯಾನ, ಪುರಾಣ, ಋಗ್ವೇದ, ಯಜುರ್ವೇದಗಳನ್ನು ಬೋಧಿಸುವ ಬೇರೆ ಬೇರೆ ಉಪಾಧ್ಯಾಯರನ್ನು ಉಲ್ಲೇಖಿಸಿದೆ[೮೮]. ಅಗ್ರಹಾರ ತಾಳೆಗುಂದದಲ್ಲಿ ಋಗ್ವೇದ, ಯಜುರ್ವೇದ, ಸಾಮವೇದ, ವ್ಯಾಕರಣ, ಪ್ರಭಾಕರ, ವೇದಾಂತ, ಕನ್ನಡ, ಬಾಲಶಿಕ್ಷೆ ಮುಂತಾದವುಗಳ ಅಧ್ಯಾಪನ ನಡೆಯುತ್ತಿತ್ತೆಂದು ಕ್ರಿ.ಶ. ೧೧೫೮ರಲ್ಲಿನ ಶಾಸನವೊಂದು ತಿಳಿಸಿದೆ[೮೯].

ಅಂದಿನ ಅಗ್ರಹಾರಗಳಲ್ಲಿ ವಾಸಿಸುವ ಮಹಾಜನರ ಹೆಸರುಗಳನ್ನು ನೋಡಿದಾಗ, ಅಗ್ರಹಾರಗಳು ಎಂತಹ ದೊಡ್ಡ ವಿದ್ಯಾಕೇಂದ್ರಗಳಾಗಿದ್ದವೆಂದು ಮನವರಿಕೆಯಾಗುತ್ತದೆ. ಇವರಲ್ಲಿ ಹಲವರು ವಿದ್ವಾಂಸರಾಗಿದ್ದರು, ಕೆಲವರು ರಾಜ್ಯದ ಆಡಳಿತದಲ್ಲಿ ಅಧಿಕಾರಿಗಳಾಗಿದ್ದರು. ಪ್ರಾಚೀನಕಾಲದಲ್ಲಿ ರಾಜ್ಯವು ವಿದ್ಯಾಭ್ಯಾಸದ ಹೊಣೆಯನ್ನು ಪ್ರತ್ಯಕ್ಷವಾಗಿ ವಹಿಸದಿದ್ದರೂ, ಅಗ್ರಹಾರಗಳನ್ನು ಸ್ಥಾಪಿಸುವದರ ಮೂಲಕ ಪರೋಕ್ಷವಾಗಿ ಸಹಾಯ ಮಾಡಿದೆ ಎನ್ನಬಹುದು. ಹೊಟ್ಟೆ ಬಟ್ಟೆಗಳ ಚಿಂತೆಯನ್ನು ರಾಜ್ಯವು ಹೋಗಲಾಡಿಸಿದ್ದರಿಂದ ಅಗ್ರಹಾರಗಳ ಬ್ರಾಹ್ಮಣರು ತಮ್ಮ ಸಂಪೂರ್ಣ ಗಮನವನ್ನು ವಿದ್ಯಾಭ್ಯಾಸದ ಕಡೆಗೆ, ವಿದ್ಯಾದಾನದ ಕಡೆಗೆ ಕೊಡಲು ಸಾಧ್ಯವಾಯಿತು[೯೦].

## ಬ್ರಹ್ಮಪುರಿ:

ನಗರಗಳಲ್ಲಿ ಅಥವಾ ಪಟ್ಟಣಗಳಲ್ಲಿ ಬ್ರಾಹ್ಮಣ ವಿದ್ವಾಂಸರು ವಾಸಿಸುವ ಕೇರಿ ಅಥವಾ ಓಣಿಯೇ ಬ್ರಹ್ಮಪುರಿ[೯೧]. ಅಗ್ರಹಾರಗಳು ಊರುಗಳಾದರೆ, ಬ್ರಹ್ಮಪುರಿಗಳು ಪಟ್ಟಣಗಳ ಭಾಗಗಳು. ಬ್ರಹ್ಮಪುರಿಗಳ ಸಂಖ್ಯೆ ಅಗ್ರಹಾರಗಳಿಗಿಂತ ಕಡಿಮೆ. ಕಾರಣ ಪ್ರಾಚೀನ ಕರ್ನಾಟಕದಲ್ಲಿ ಹಳ್ಳಿಗಳ ಸಂಖ್ಯೆ ಹೆಚ್ಚಿದ್ದು, ನಗರಗಳ ಸಂಖ್ಯೆ ಕಡಿಮೆಯಾಗಿತ್ತು[೯೨]. ಬ್ರಹ್ಮಪುರಿಗಳು ಹೆಚ್ಚಾಗಿ ಅಗ್ರಹಾರಗಳಲ್ಲಿರುವದನ್ನು ಶಾಸನಗಳು ಹೆಸರಿಸುತ್ತವೆ. ಅಗ್ರಹಾರಗಳಲ್ಲಿದ್ದ ಬ್ರಾಹ್ಮಣರು

ಆ ಊರುಗಳ ಒಡೆಯರು. ಆದರೆ ಬ್ರಹ್ಮಪುರಿಗಳಲ್ಲಿದ್ದ ಬ್ರಾಹ್ಮಣರು ಆ ಊರಿನ ಇತರ ಪಂಗಡಗಳ ಜನರಿದ್ದಂತೆ ಅಷ್ಟೇ. ಅಗ್ರಹಾರದ ಬ್ರಾಹ್ಮಣರಿಗಿದ್ದ ಅಧಿಕಾರವು ಇವರಿಗಿರುವದಿಲ್ಲ. ಅನೇಕ ಸಾಮಂತರಸರು, ದಂಡನಾಯಕರೂ ಬ್ರಹ್ಮಪುರಿಗಳನ್ನು ಸ್ಥಾಪಿಸಿದ ವಿಷಯ ಶಾಸನಗಳಲ್ಲಿ ಬಂದಿದೆ.

ಪುಲಿಗೆರೆ(ಲಕ್ಷ್ಮೇಶ್ವರ)ಯಲ್ಲಿ ಬದ್ದೆಗ ಬ್ರಹ್ಮಪುರಿಯನ್ನು ಸ್ಥಾಪಿಸಿದ್ದನ್ನು ಶಾಸನ ಉಲ್ಲೇಖಿಸುತ್ತದೆ[೯೩]. ಮುಳಗುಂದದ ಬ್ರಹ್ಮಪುರಿಗೆ ಆ ಊರಿನ ಬ್ರಾಹ್ಮಣ ಸರ್ವಧರ್ಮಾಧಿಕಾರಿಯಾದ ನಾಗಸ್ವಾಮಿಯು ಮುಖ್ಯಸ್ಥನಾಗಿದ್ದನೆಂದು ತಿಳಿದುಬರುತ್ತದೆ[೯೪]. ವಿಕ್ರಮಪುರದಲ್ಲಿ ಬ್ರಹ್ಮಪುರಿಯೊಂದಿದ್ದು, ಅಲ್ಲಿ ನಂದಿಯಣ್ಣ ಷಡಂಗಿ ಭಟ್ಟೋಪಾಧ್ಯಾಯ ಮುಂತಾದ ೪೨ ವಿದ್ವಾಂಸ ಮಹಾಜನರುಗಳಿಗೆ ಅಕ್ಕಾದೇವಿಯು ತೋಟ ಮತ್ತು ಹೊಲಗಳನ್ನು ಬಿಟ್ಟುಕೊಟ್ಟ ವಿಷಯವನ್ನು ಕ್ರಿ.ಶ. ೧೦೫೩ರ ಶಾಸನವೊಂದು ತಿಳಿಸುತ್ತದೆ[೯೫]. ಹಾನಗಲ್ಲ ಕದಂಬ ಮನೆತನದ ಮಹಾಮಂಡಳೇಶ್ವರ ಮಲ್ಲಿಕಾರ್ಜುನನ ಮಡದಿ ಪದ್ಮಲದೇವಿ ಹುಲ್ಲುಗೂರಿನಲ್ಲಿ ಬ್ರಹ್ಮಪುರಿ ನಿರ್ಮಿಸಿದ್ದಳು. ಅಲ್ಲದೇ ೬೪ ಜನ ವೇದ-ಉಪನಿಷತ್ತು ಬಲ್ಲ ಮಹಾಜನರ ಪಾದತೊಳೆದು ಎಲ್ಲ ತೆರಿಗೆಯನ್ನು ಮುಕ್ತಗೊಳಿಸಿ ಬ್ರಾಹ್ಮಣರಿಗೆ ಕೊಂಡರಟೆ-೭೦ರಲ್ಲಿನ ಬಿನಚೂರು ಗ್ರಾಮವನ್ನು ದತ್ತಿ ಕೊಟ್ಟಿರುವದನ್ನು ಕ್ರಿ.ಶ. ೧೦೬೭ರ ಹೊಟ್ಟೂರಿನ ಶಾಸನ ತಿಳಿಸಿದೆ[೯೬]. ಕದಂಬ ಜಯಕೇಶಿಯು ತನ್ನ ವಿವಾಹೋತ್ಸವ ಕಾಲದಲ್ಲಿ ಕನಾಕಾಪುರ ಎಂಬ ಅಗ್ರಹಾರವನ್ನು ಸೌರಾಷ್ಟ್ರದ ಸೋಮೇಶ್ವರ ದೇವರ ಧೂಪಕ್ಕಾಗಿ ಬಿಟ್ಟುಕೊಟ್ಟು, ಅದು ದೇವರ ಬ್ರಹ್ಮಪುರಿಯಾಗಿ ನಡೆಯುವಂತೆ ಬಿಟ್ಟುಕೊಟ್ಟದ್ದನ್ನು ಕ್ರಿ.ಶ. ೧೧೦೪ರ ಶಾಸನವೊಂದು ಉಲ್ಲೇಖಿಸಿದೆ[೯೭]. ಕ್ರಿ.ಶ. ೧೧೨೨ರ ಶಾಸನವೊಂದು ತಿಳಿಸುವಂತೆ ಶಿಲಹಾರ ಮಹಾಮಂಡಳೇಶ್ವರ ಮನ್ನೆಯ ಇಂದರಸನು ದೈಠಾಣದಲ್ಲಿ ದೇವಾಲಯವನ್ನು ಮಾಡಿಸಿ ಅಲ್ಲಿನ ದೇವರ ಬ್ರಹ್ಮಪುರಿಯ ಬ್ರಾಹ್ಮಣರಿಗೆ ವಸತಿ-ಊಟಕ್ಕಾಗಿ ಭೂಮಿಯನ್ನು ಬಿಟ್ಟುಕೊಟ್ಟಿರುವನು[೯೮]. ಕ್ರಿ.ಶ. ೧೨೧೧ರ ಶಾಸನವೊಂದು ಯಾದವ ಸಿಂಘಣದೇವನ ಮಹಾಮಂಡಳೇಶ್ವರ ಮನ್ನೆಯ ಕುಪ್ಪರಸ ಹಾಗೂ ಕೆಲ ಅಧಿಕಾರಿಗಳು ಕೂಡಿ ಸಂಗಮೇಶ್ವರದೇವರ ಬ್ರಹ್ಮಪುರಿಯ ಎಂಟು ಬ್ರಾಹ್ಮಣರಿಗೆ ದಾನವನ್ನು ಬಿಟ್ಟ ವಿಷಯ ತಿಳಿಯುತ್ತದೆ[೯೯]. ಅಲ್ಲದೇ ಕ್ರಿ.ಶ. ೧೨೨೩ರಲ್ಲಿ ಅವನು ಅದೇ ಬ್ರಹ್ಮಪುರಿಯ ಬ್ರಾಹ್ಮಣರಿಗೆ ಮತ್ತೆ ಕೆಲ ದಾನದತ್ತಿಗಳನ್ನು ನೀಡಿದ ಉಲ್ಲೇಖವೂ ಕೂಡ ದೊರೆಯುತ್ತದೆ[೨೦೦]. ಕ್ರಿ.ಶ. ೧೨೬೦ರಲ್ಲಿ ಹೊಯ್ಸಳ ಮೂರನೆಯ ನರಸಿಂಹನ ಮಹಾಸಾಮಂತನಾದ ಲಕುಮೇಯನಾಯಕನು ಬ್ರಹ್ಮಪುರಿಯ ಜೋಯಿಸ ಏಚಣ್ಣನಿಗೆ ಭೂಮಿಯನ್ನು ದಾನವಾಗಿ ನೀಡಿದ ವಿವರ ದೊರೆಯುತ್ತದೆ[೨೦೧]. ವಿದ್ಯಾಭ್ಯಾಸದ ವಿಷಯದಲ್ಲಿ ಬ್ರಹ್ಮಪುರಿಗಳು ಯಾವುದೇ ವೈಶಿಷ್ಟ್ಯವನ್ನು ತೋರ್ಪಡಿಸಿಲ್ಲ. ಅವು ಬಹುಮಟ್ಟಿಗೆ ಅಗ್ರಹಾರಗಳನ್ನು ಹೋಲುತ್ತವೆ.

## ದೇವಸ್ಥಾನ ಹಾಗೂ ಮಠ :

ಪ್ರಾಚೀನ ದೇವಸ್ಥಾನಗಳು ಶೈವಯತಿಗಳ, ಜೈನ ಆಚಾರ್ಯರ, ಬ್ರಾಹ್ಮಣ ಪಂಡಿತರ, ಬೌದ್ಧ ಸನ್ಯಾಸಿಗಳ ಮಠ, ವಿಹಾರ ಹಾಗೂ ವಿದ್ಯಾಕೇಂದ್ರಗಳಾಗಿದ್ದವು. ಶೈವ, ಜೈನ, ಬ್ರಾಹ್ಮಣ, ಬೌದ್ಧರು ಒಂದು ಕಡೆ ನೆಲೆ ನಿಂತರು.

ಇವರು ಮಹಾವಿದ್ವಾಂಸರು ಆಗಿದ್ದರಿಂದ ವೈಯಕ್ತಿಕವಾದ ತಪಃ ಕರ್ಮದ ಜೊತೆಯಲ್ಲಿ ವಿದ್ಯಾದಾನವನ್ನು ಕೈಕೊಂಡರು. ಭಕ್ತರು ದೇವಸ್ಥಾನಗಳ ಪೂಜಾರಿಗಳಿಗೆ ದಾನದತ್ತಿಗಳನ್ನು ನೀಡುವಾಗ ವಿದ್ಯಾಭ್ಯಾಸಕ್ಕಾಗಿಯೇ ದತ್ತಿಗಳನ್ನು ಕೊಡಲು ಪ್ರಾರಂಭಿಸಿದರು. ಹೀಗಾಗಿ ದೇವಸ್ಥಾನವು ಎಂಟು ಮತ್ತು ಒಂಭತ್ತನೆಯ ಶತಮಾನಗಳಲ್ಲಿ ವಿದ್ಯಾಕೇಂದ್ರವಾಗಿ ಮಾರ್ಪಡಹತ್ತಿತು. ಜೈನ ಹಾಗೂ ಬೌದ್ಧ ಚೈತ್ಯ-ವಿಹಾರಗಳನ್ನು ಗಮನಕ್ಕೆ ತೆಗೆದುಕೊಂಡರೆ ಇದು ಇನ್ನೂ ಹಿಂದಕ್ಕೆ ಹೋಗುತ್ತದೆ. ದೇವಸ್ಥಾನಗಳಲ್ಲಿ ಅಧ್ಯಯನ ಮಾಡುತ್ತಿದ್ದ ವಿದ್ಯಾರ್ಥಿಗಳನ್ನು ವಿದ್ಯಾರ್ಥಿ ತಪೋಧನ ಮತ್ತು ವಿದ್ಯಾರ್ಥಿಮಾಣಿಯರು ಎಂದು ಶಾಸನಗಳು ಕರೆದಿವೆ[೨೦೩]. ಪಾಣಿನಿಯು ಸಹ ಮಾಣಿ ಎಂದರೆ ವಿದ್ಯಾಭ್ಯಾಸವನ್ನು ಆರಂಭಿಸುವ ಬಾಲಕ ಎಂದು ಹೇಳುತ್ತಾನೆ[೨೦೪]. ಇದರಲ್ಲಿ ವಿದ್ಯಾರ್ಥಿ ತಪೋಧನರನ್ನು ನೈಷ್ಠಿಕ ತಪೋಧನ ಅಥವಾ ನೈಷ್ಠಿಕ ಬ್ರಹ್ಮಚಾರಿಗಳೆಂದು ಕರೆಯಲಾಗುತ್ತದೆ. ಈ ವಿದ್ಯಾರ್ಥಿ ತಪೋಧನರು ಅಥವಾ ನೈಷ್ಠಿಕ ಬ್ರಹ್ಮಚಾರಿಗಳು ಆ ದೇವಸ್ಥಾನದ ಯತಿಗಳ ಸಂಪ್ರದಾಯಕ್ಕೆ ಸೇರಿರುವರು. ಇವರು ಅಜೀವನ ಪರ್ಯಂತರ ಬ್ರಹ್ಮಚಾರಿಗಳಾಗಿ ಉಳಿದು ತಮ್ಮ ಅಧ್ಯಯನ ಮುಗಿದಮೇಲೆ ಬೇರೆ ಬೇರೆ ಮಠಗಳಲ್ಲಿ ಸ್ಥಾನಪತಿ, ಆಚಾರ್ಯ, ಪಂಡಿತರಾಗುತ್ತಿದ್ದರು. ಈ ನೈಷ್ಠಿಕ ಬ್ರಹ್ಮಚಾರಿಗಳ ಏಕೈಕ ಗುರಿ ಜ್ಞಾನಾರ್ಜನೆ. ವಿದ್ಯಾರ್ಥಿ ಮಾಣಿಯರೆಂದರೆ ಆ ಮಠದಲ್ಲಿ ಓದಿ ಅಧ್ಯಯನ ಮುಗಿದ ನಂತರ ಗ್ರಹಸ್ಥರಾಗತಕ್ಕಂತಹವರು[೨೦೫].

ವಿದ್ಯಾಭ್ಯಾಸಕ್ಕಾಗಿ ಹಾಗೂ ಅಧ್ಯಯನಕ್ಕಾಗಿ ದೇವಸ್ಥಾನ ಮಠಗಳಿಗೆ ಬಿಟ್ಟುಕೊಟ್ಟಂತಹ ಹಲವಾರು ದಾನದತ್ತಿಗಳನ್ನು ನಾವು ನೋಡಬಹುದು. ದಾನ-ದತ್ತಿಗಳನ್ನು ದೇವಸ್ಥಾನ-ಮಠದಲ್ಲಿ ಓದುವ ವಿದಾರ್ಥಿಗಳ ಎಲ್ಲ ಅವಶ್ಯಕತೆಗಳನ್ನು ಗಮನದಲ್ಲಿರಿಸಿಕೊಂಡು ಬಿಟ್ಟುಕೊಟ್ಟಿರುವದನ್ನು ಶಾಸನಗಳು ಉಲ್ಲೇಖಿಸುತ್ತವೆ.

ಗೌಜೆಯಲ್ಲಿನ ಗೌತಮೇಶ್ವರ ದೇವರಿಗೆ ಅಲ್ಲಿಯ ಜನರು ದಾನಸಾಲೆಯನ್ನು ನೀಡಿದರಲ್ಲದೆ ಅಲ್ಲಿ ದೀಪ ಉರಿಸಲು ಅದಕ್ಕೆ ಮಹಾಜನರು ಜೊತೆಗೂಡಿಯೇ ಗೋಸಾಸದಾನಗಳನ್ನು ನೀಡಿದ ವಿಷಯ ಶಾಸನವೊಂದು ಹೇಳುತ್ತದೆ[೨೦೬]. ಕ್ರಿ.ಶ. ೯೩೮ರಲ್ಲಿ ರಾಷ್ಟ್ರಕೂಟ ಕನ್ನರ ದೇವನ ಮಹಾಸಾಮಂತಾಧಿಪತಿ ಮಾಚಿಯರಸನು ಬನವಾಸೆಯನ್ನಾಳುತ್ತಿದ್ದಾಗ, ಅವನ ಪೆರ್ಗಡೆ ವೇಳೆಯಮ್ಮನು ಮಠವೊಂದನ್ನು ನಿರ್ಮಿಸಿದ ವಿಷಯ ತಿಳಿದುಬರುತ್ತದೆ[೨೦೭]. ಕ್ರಿ.ಶ. ೧೦ನೆಯ ಶತಮಾನದ ಗಂಗ ಮಾರಸಿಂಹನ ಶಾಸನವೊಂದು ನಗರಲದ ದೇವಾಲಯದಲ್ಲಿನ ತಪೋಧನರು ಹಾಗೂ ವಿದ್ಯಾರ್ಥಿಗಳ ಆಹಾರದಾನಕ್ಕಾಗಿ ವಿದ್ಯಾಧರಯ್ಯನೆಂಬುವನು ಭೂಮಿಯನ್ನು ದಾನವಾಗಿ ಬಿಟ್ಟ ವಿಷಯ ಉಲ್ಲೇಖಿಸಿದೆ[೨೦೮]. ಕದರಮಂಡಲಗಿಯ ಬಸದಿ ಹಾಗೂ ಬಸದಿಯ ವೃಷಭಣಂದಿ ಗೊರವರ್ಗ್ಗೆ ವಿದ್ಯಾದಾನವಾಗಿ ಚಿಕ್ಕಂಬರ ಕುಳಗಾವುಂಡ, ಸತ್ತಳಿಗೆ-ಎಪ್ಪತ್ತರ ನಾಳ್ಗಾವುಂಡರು ಕೂಡಿಕೊಂಡು ಭೂಮಿ ಹಾಗೂ ತೋಟ ದಾನ ನೀಡಿದರು[೨೦೯]. ಸೊರಟೂರದ ದೇವಾಲಯ ಮಠದ ವಿದ್ಯಾದಾನವಾಗಿ ಅಲ್ಲಿಯ ಗಾವುಂಡ ಸಾಮಿಕಳ್ತಿಯಮ್ಮ ಮತ್ತು ಪೆರ್ಗಡೆ ಆಚಪ್ಪಯ್ಯರು ಕೂಡಿಕೊಂಡು ಭೂಮಿ ಹಾಗೂ ಹಣದಾನ ಮಾಡಿದ್ದಾರೆ[೨೧೦]. ನಾಗಾವಿಯ ರಾಮೇಶ್ವರ

ದೇವಸ್ಥಾನ ಸತ್ರಕ್ಕೆ ಸತ್ರದ ತಪೋಧನರ ವಿದ್ಯಾಧನವೆಂದು ರಾಜಮಾನ್ಯವಾಗಿ ಬೋಳುಗ ಮತ್ತು ರಾಮಯ್ಯರು ಸೇರಿ ೨೫ ಮತ್ತರು ಭೂಮಿ ಹಾಗೂ ಒಂದು ತೋಟವನ್ನು ದಾನವಾಗಿ ಬಿಟ್ಟಿದ್ದಾರೆ[೨೧೦]. ಕ್ರಿ.ಶ. ೧೦೫೫ರಲ್ಲಿ ಮಹಾಮಂಡಳೇಶ್ವರ ಕದಂಬ ಸತ್ಯಾಶ್ರಯದೇವನು ಪೊಳಲು ಬಂಕಾಪುರದ ಪಂಚಮಠಸ್ಥಾನದಲ್ಲಿನ ಚತ್ರಕ್ಕೆ ಹಾಗೂ ವಿದ್ಯಾದಾನಕ್ಕಾಗಿ ಕೆಲವು ತೆರಿಗೆಗಳನ್ನು ಬಿಟ್ಟಿದ್ದನ್ನು ಶಾಸನವೊಂದು ತಿಳಿಸಿದೆ[೨೧೧]. ಕ್ರಿ.ಶ. ೧೦೬೭ರಲ್ಲಿ ಹೊಟ್ಟೂರಿನ ಮಠದಲ್ಲಿನ ತಪೋನಿಯಮ ಜಪಸಮಾಧಿ ಶೀಲ ಸಂಪನ್ನೆಯರಪ್ಪ ಗಂಗಿಕಬ್ಬೆಗೆ ಅಲ್ಲಿಯ ವಿದ್ಯಾದಾನಕ್ಕಾಗಿ ಮಹಾಮಂಡಳೇಶ್ವರ ಕದಂಬ ತೋಯಿಮದೇವರ ತಾಯಿ ಅಕ್ಕಾದೇವಿಯು ಎರಡು ಗದ್ಯಾಣದ ತೆರೆಯನ್ನು ದತ್ತಿ ನೀಡಿದ್ದು ತಿಳಿದುಬರುತ್ತದೆ[೨೧೨]. ಅಲ್ಲದೇ ಮಹಾಮಂಡಳೇಶ್ವರ ಶಿಲಹಾರ ಇಂದರಸನು ಕ್ರಿ.ಶ. ೧೧೨೨ರಲ್ಲಿ ಅಕ್ಕರ ಖಂಡಿಕೆಗೆ ಇಪ್ಪತ್ತು ಮತ್ತರು ಭೂಮಿಯನ್ನು ದಾನವಾಗಿ ನೀಡಿದ್ದನ್ನು ಶಾಸನವೊಂದು ಉಲ್ಲೇಖಿಸಿದೆ[೨೧೩]. ಹೀಗೆ ನಮಗೆ ತಿಳಿದ ಮಟ್ಟಿಗೆ ಕೇವಲ ವಿದ್ಯಾಭ್ಯಾಸಕ್ಕಾಗಿಯೇ ಕೊಟ್ಟ ಇಂತಹ ದತ್ತಿದಾನಗಳು ಬಹಳ ಅಪರೂಪವಾಗಿ ದೊರೆಯುತ್ತವೆ. ಹೆಚ್ಚಾಗಿ ಶಾಸನಗಳು ದೇವಸ್ಥಾನದ ಅಂಗ-ರಂಗಭೋಗ, ಧೂಪ-ದೀಪ, ಜೀರ್ಣೋದ್ಧಾರ ಇತ್ಯಾದಿಗಳಿಗೆ ಕೊಟ್ಟ ದಾನಗಳ ಸಾಲಿನಲ್ಲಿ ವಿದ್ಯೆಗೋಸ್ಕರ ಕೊಟ್ಟದಾನವನ್ನು ಹೇಳುತ್ತವೆ.

ಮೇಲಿನ ಶಾಸನಗಳನ್ನು ಗಮನಿಸಿದರೆ, ತರಗತಿಗಳು ನಡೆಯುತ್ತಿದ್ದುದು ಬಹುಮಟ್ಟಿಗೆ ದೇವಸ್ಥಾನಗಳಲ್ಲಿಯೇ ಎಂದು ಕಾಣಿಸುತ್ತದೆ. ಹೀಗೆ ಮಹಾಜನರಿಂದ ಒಂದು ಕಡೆ ವೈದಿಕ ವಿದ್ಯಾಭ್ಯಾಸದ ಅಗ್ರಹಾರ, ಬ್ರಹ್ಮಪುರಿ, ಘಟಿಕಾಸ್ಥಾನಗಳು ಬೆಳೆದಂತೆ ಶೈವ, ಲಕುಲೀಶ, ಪಾಶುಪತರಿಂದ ದೇವಾಲಯಗಳು ವಿದ್ಯೆಯ ಕೇಂದ್ರಗಳಾಗಿ ಅಸ್ತಿತ್ವಕ್ಕೆ ಬಂದದ್ದು ತಿಳಿದುಬರುತ್ತದೆ.

**ಘಟಿಕಾಸ್ಥಾನ :**

ಅಗ್ರಹಾರ, ಬ್ರಹ್ಮಪುರಿ, ದೇವಸ್ಥಾನ ಮಠಗಳಂತೆ ಘಟಿಕಾಸ್ಥಾನಗಳೂ ವಿದ್ಯಾಕೇಂದ್ರಗಳಾಗಿದ್ದವು. ಬೌದ್ಧ ವಿಹಾರಗಳಂತೆ ಹಿಂದೂ ಘಟಿಕಾಸ್ಥಾನಗಳು ವಿದ್ಯಾಪ್ರಸಾರದಲ್ಲಿ ಮಹತ್ವದ ಪಾತ್ರವಹಿಸಿದ್ದು, ಕದಂಬ ಮಯೂರಶರ್ಮನು ಕಂಚಿಯ ಘಟಿಕಾಸ್ಥಾನದಲ್ಲಿ ವಿದ್ಯಾಭ್ಯಾಸ ಮಾಡಿದ್ದು ಇತಿಹಾಸ ಪ್ರಸಿದ್ಧವಾಗಿದೆ[೨೧೪]. ಇವು ಸಾಮಾನ್ಯವಾಗಿ ಊರ ದೇವಾಲಯದ ಒಂದು ಭಾಗಗಳಾಗಿದ್ದು, ಗ್ರಾಮಕ್ಕೆ ವೇಳೆ ತಿಳಿಸಲು ಅವಶ್ಯವಿರುವ ಸಾರ್ವಜನಿಕ ಘಟಿಕಾಯಂತ್ರವನ್ನು ಇಲ್ಲಿಡುತ್ತಿದ್ದರಿಂದ ಈ ಕೇಂದ್ರಗಳಿಗೆ 'ಘಟಿಕಾಸ್ಥಾನ' ಎಂದು ಹೆಸರುಬಂದಿತು[೨೧೫]. ಈ 'ಘಟಿಕಾಸ್ಥಾನ' ಎಂಬ ಹೆಸರು ಏಕೆ ಬಂದಿರಬಹುದೆಂಬುದನ್ನು ಕೇವಲ ಊಹೆಯಿಂದ ನಿರ್ಧರಿಸಬೇಕಾಗಿದೆಯೆಂದು ಚಿದಾನಂದಮೂರ್ತಿಯವರು ಅನೇಕ ವಿದ್ವಾಂಸರ ಅಭಿಪ್ರಾಯಗಳನ್ನು ಗಮನಿಸಿ ಹೇಳಿದ್ದಾರೆ. "ಘಟಿಕಾ" ಎಂಬ ಪದಕ್ಕೆ ಮಣ್ಣಿನ ಪಾತ್ರೆ, ಕಾಲವನ್ನು ಅಳೆಯಲು ಉಪಯೋಗಿಸುತ್ತಿದ್ದ ಮಣ್ಣಿನ ಪಾತ್ರೆ ಎಂಬ ಅರ್ಥಗಳಲ್ಲದೆ ಇನ್ನಾವ ಅರ್ಥವು ಸಂಸ್ಕೃತದಲ್ಲಿಲ್ಲ. ಇಲ್ಲಿ ಇಪ್ಪತ್ನಾಲ್ಕು ನಿಮಿಷಗಳ ಕಾಲದ ಅವಧಿಗೂ 'ಘಟಿಕಾ' ಎಂದು ಹೆಸರು. ಅಂದಿನ ಕಾಲದಲ್ಲಿ

ಕಾಲವನ್ನು ನಿರ್ಧರಿಸಲು ರಂಧ್ರವಿರುವ ಮಣ್ಣಿನ ಪಾತ್ರೆಯಲ್ಲಿ ನೀರನ್ನೋ, ಮರಳನ್ನೋ ತುಂಬುತ್ತಿದ್ದರು ಎಂಬುದು ಪ್ರಸಿದ್ಧ ವಿಷಯವಾಗಿದೆ[೨೧೬]. ಇಂತಹ ಕಾಲಮಾನ ಯಂತ್ರಗಳು ಪ್ರಾಚೀನ ಕರ್ನಾಟಕದ ದೇವಸ್ಥಾನಗಳಲ್ಲಿ ಮಠಗಳಲ್ಲಿ ಇದ್ದವೆಂಬುದಕ್ಕೆ ಶಾಸನಾಧಾರಗಳಿವೆ. ಈಗಿನ ಶಿಗ್ಗಾಂವ ತಾಲೂಕಿನ ಕಳಸ(ಕಾಡಿಯೂರು) ಘಟಿಕಾಸ್ಥಾನದಲ್ಲಿ ದೇವಸ್ಥಾನ, ಘಳಿಗೆಯು, ಸತ್ರವು ಇದ್ದವು ಎಂದು ಅಲ್ಲಿಯ ಕ್ರಿ.ಶ.೯೨೯ರ ಶಾಸನ ಹೇಳುತ್ತದೆ[೨೧೭]. ಬಹುಷಃ ಘಳಿಗೆ (ಘಟಿಕಾ)ಗಳನ್ನು ದೇವಸ್ಥಾನಗಳಂತಹ ಸಾರ್ವಜನಿಕ ಸ್ಥಳಗಳಲ್ಲಿ ಇಡುತ್ತಿರಬೇಕು. ಅವುಗಳನ್ನು ನೋಡಿಕೊಳ್ಳಲು ದೇವಸ್ಥಾನಗಳಲ್ಲಿ ಅಭ್ಯಾಸಮಾಡುತ್ತಿದ್ದ ವಿದ್ಯಾರ್ಥಿಗಳನ್ನು ನೇಮಿಸಿ ಅವರಿಗೂ ದತ್ತಿಗಳನ್ನು ಕೊಟ್ಟಿರುವದುಂಟು. ಉದಾಹರಣೆಗೆ ಕ್ರಿ.ಶ. ೧೦೪೫ರ ಶಾಸನವೊಂದು ವಿದ್ಯಾದಾನ ನಡೆಯುತ್ತಿದ್ದ ಮೋರಿಂಗೆರೆಯ ಮಠದಲ್ಲಿ ನಾಲ್ವರು 'ಘಳಿಗೆಯ ಮಾಣಿ'ಗಳಿಗೆ ಎಂಟು ಮತ್ತರು ಭೂಮಿಯನ್ನು ನೀಡಿರುವದನ್ನು ಹೇಳುತ್ತದೆ[೨೧೮]. ಅಲ್ಲದೇ ಮೇಲಿನ ಕಳಸ ಶಾಸನವು ಗೊಜ್ಜಿಗದೇವನು ರೇವದಾಸ ಎಂಬ ಎಸೋತ್ತರ ದೀಕ್ಷಿತ ಎಂಬ ವೈದಿಕನಿಗೆ ದಂಡನಾಥ ಪದವಿಯ ಜೊತೆಯಲ್ಲಿ ಗುಡಿ, ಶಂಖ, ಚಾಮರ, ಬೆಳ್ಗೊಡೆ ಮುಂತಾದವುಗಳಲ್ಲದೇ ಘಳಿಗೆಯನ್ನೂ ದಾನವಾಗಿ ಕೊಟ್ಟನೆಂದು ಉಲ್ಲೇಖಿಸಿದೆ[೨೧೯]. ಶಿಗ್ಗಾಂವ ತಾಲೂಕಿನ ಇಂದಿನ ಕಳಸ ಗ್ರಾಮ ಅಂದಿನ ಶಾಸನೋಕ್ತ ಪ್ರಸಿದ್ಧ ಘಟಿಕಾಸ್ಥಾನವೆಂದು ಹೆಸರಾಗಿರುವ ಕಾಡಿಯೂರು ಗ್ರಾಮವಾಗಿತ್ತು. ಇಲ್ಲಿ ಅನವದ್ಯತತ್ವವಿದರೂ, ಆಗಮಜ್ಞರೂ, ಶಬ್ದವಿದ್ಯಾಗಮ ಪಂಡಿತರೂ ಆದ ಇನ್ನೂರ್ವ್ವರು ವಿಭುದರಿದ್ದರು. ವ್ಯಾಕರಣ, ಅರ್ಥಶಾಸ್ತ್ರ, ಸಾಹಿತ್ಯ, ಇತಿಹಾಸ, ಏಕಾಕ್ಷರ ಎಂಬ ವಿಷಯಗಳನ್ನಿಲ್ಲಿ ಕಲಿಸಲಾಗುತ್ತಿತ್ತು. ಇಲ್ಲಿ ಕಲಿತವರು ಆ ವಿಷಯಗಳಿಗೆ ಟೀಕೆ ಬರೆಯುವಷ್ಟು ಪಾಂಡಿತ್ಯವನ್ನು ಗಳಿಸಿಕೊಂಡಿದ್ದರು. ಇದನ್ನು ಗಮನಿಸಿದಾಗ, ಕಾಡಿಯೂರ ಘಟಿಕಾಸ್ಥಾನದಲ್ಲಿ ಎಂತಹ ವಿದ್ವತ್‌ಪೂರ್ಣ ವಿದ್ಯಾಭ್ಯಾಸ ಕಲಿಕೆ ನಡೆಯುತ್ತಿತ್ತೆಂಬುದು ಸ್ಪಷ್ಟವಾಗುತ್ತದೆ[೨೨೦]. ಕ್ರಿ.ಶ. ೧೦೫೮ರ ಶಾಸನವೊಂದು ತಿಳಿಸುವಂತೆ ನಾಗಾವಿಯು ಅತ್ಯಂತ ಪ್ರಸಿದ್ಧವಾದ ಘಟಿಕಾಸ್ಥಾನವಾಗಿತ್ತು[೨೨೧]. ಇಲ್ಲಿನ ತ್ರೈಪುರುಷ ದೇವಾಲಯದಲ್ಲಿ ಘಟಸ್ಥಾನವಿದ್ದು, ಆರು ಜನ ಉಪಾಧ್ಯಾಯರು, ಒಬ್ಬ ಸರಸ್ವತೀ ಭಂಡಾರಿ(ಲೈಬ್ರರಿಯನ್) ಮತ್ತು ೨೫೦ ವಿದ್ಯಾರ್ಥಿಗಳಿದ್ದರು. ಉಪಾಧ್ಯಾಯರಲ್ಲಿ ಮೂವರು ವೇದಮನೋದಿಸುವವರು, ಇನ್ನೂ ಮೂವರಲ್ಲಿ ಒಬ್ಬ ಭಟ್ಟದರ್ಶನ, ಒಬ್ಬ ನ್ಯಾಸ ಮತ್ತು ಇನ್ನೊಬ್ಬ ಪ್ರಾಭಾಕರ ಈ ಮೂರು ವಿಷಯಗಳಿಗೆ ವ್ಯಾಖ್ಯಾತೃಗಳಾಗಿದ್ದರು. ವಿದ್ಯಾರ್ಥಿಗಳಲ್ಲಿ ೨೦೦ಜನರು ವೇದಗಳನ್ನು, ೫೦ಜನ ಉಳಿದ ಮೂರು ವಿಷಯಗಳನ್ನು ಅಧ್ಯಯನ ಮಾಡುತ್ತಿದ್ದರು. ಅಲ್ಲದೇ ಅಲ್ಲಿ ಒಬ್ಬ ಘಟಿಕಾಪ್ರಹಾರಿಯೂ ಇದ್ದನೆಂದು ತಿಳಿದುಬರುತ್ತದೆ. ಇದರಿಂದ ಇದೊಂದು ಸುವ್ಯವಸ್ಥಿತವಾದ ಉನ್ನತ ವಿದ್ಯಾಕೇಂದ್ರವಾಗಿತ್ತೆಂದು ವ್ಯಕ್ತವಾಗುತ್ತದೆ. ಕ್ರಿ.ಶ. ೧೦೬೭ರಲ್ಲಿನ ಮಹಾಮಂಡಳೇಶ್ವರ ಕದಂಬ ತೋಯಿಮದೇವನ ಅಧಿಕಾರದ ಅವಧಿಯಲ್ಲಿ ಹೊಟ್ಟೂರು "ಆ ನಾಡೊಳ್ ಅಖಿಲ ಘಟಿಕಾಸ್ಥಾನವಿದೆನಿಸಿಟ್ಟು" ಮೆರೆದಿತ್ತು[೨೨೨]. ಕ್ರಿ.ಶ. ೧೧೨೭ರಲ್ಲಿನ ಶಾಸನವೊಂದು ಅಗ್ರಹಾರ ಹೂವಿನಬಾಗೆಯನ್ನು ಮಹಾಘಟಿಕಾಸ್ಥಾನವೆಂದು ಕರೆದಿದೆ[೨೨೩]. ನೊಳಂಬರ ರಾಜಧಾನಿ ಪಟ್ಟಣವಾದ ಹೆಂಜೇರುವಿನ ನೊಳಂಬೇಶ್ವರ ದೇವಸ್ಥಾನವು ಆ ಪಟ್ಟಣದ ಘಟಿಕಾಸ್ಥಾನವಾಗಿದ್ದಿತೆಂದು ತಿಳಿದುಬರುತ್ತದೆ[೨೨೪]. ಕ್ರಿ.ಶ. ೧೧೮೨ರ ಶಾಸನವೊಂದು ಕರ್ನಾಟಕದ ಕುಂತಳ ದೇಶದಲ್ಲಿ

"ಧರ್ಮಕ್ಕೆ ನೆರ್ಮಮುಂ ಭೋಗಕ್ಕಾಗರಮುಮಮಾದ ಘಟಿಕಾ ಸ್ಥಾನ"ಗಳಿದ್ದಂತೆ ಉಲ್ಲೇಖಿಸಿದೆ[೨೨೫]. ಕ್ರಿ.ಶ. ೧೨ನೆಯ ಶತಮಾನದಲ್ಲಿ ಸಿಂದಗಿ ತಾಲೂಕಿನ ಕಡ್ಲೆವಾಡದಲ್ಲಿ ಲೋಕವಿಖ್ಯಾತವಾದ ಘಟಿಕಾಸ್ಥಾನವಿದ್ದ ಸ್ವಯಂಭೂ ದೇವಾಲಯವಿತ್ತೆಂದು ತಿಳಿಯುತ್ತದೆ[೨೨೬]. ಇಂತಹ ಘಟಿಕಾಸ್ಥಾನಗಳಲ್ಲಿ ವಿದ್ಯಾಪಾರಂಗತನಾದವನಿಗೆ "ಘಟಿಕಾ ಸಾಹಸಿ" ಎಂದು ಕರೆಯಲಾಗುತ್ತಿತ್ತು.

## ಬಾಲ(ಪ್ರಾಥಮಿಕ) ಶಿಕ್ಷಣ:

ಪ್ರಾಥಮಿಕ ವಿದ್ಯಾಭ್ಯಾಸ ಅಥವಾ ಬಾಲಶಿಕ್ಷಣದ ಕುರಿತು ಹೆಚ್ಚಿನ ಶಾಸನಾಧಾರಗಳು ಲಭ್ಯವಿಲ್ಲ. ಮಗುವಿನ ಚೂಡಾಕರ್ಮವಾದ ನಂತರ (ಉಪನಯನ) ಅಕ್ಷರಾಭ್ಯಾಸ ಆರಂಭವಾಗಿ ಎಂಟು ವರ್ಷಕ್ಕೆ ಓದು-ಬರಹ, ಸಾಮಾನ್ಯಗಣಿತ, ನಿಘಂಟು, ವ್ಯಾಕರಣ ಮುಂತಾದ ಬಾಲ ಶಿಕ್ಷೆಗಳು ದೇಶಿ ಭಾಷೆಗಳಲ್ಲಿ ಕಲಿಸಲ್ಪಡುತ್ತಿದ್ದವು. ಕೆಲವು ಶಾಸನಗಳಲ್ಲಿ ಬಾಲಶಿಕ್ಷೆ, ಕನ್ನಡಕ್ಷರ ಶಿಕ್ಷೆಯ ಉಲ್ಲೇಖಗಳು ಬರುವುದುಂಟು. ಕನ್ನಡ ಶಿಕ್ಷೆಯ ಉಪಾಧ್ಯಾಯನಿಗೆ ಐದು ಗದ್ಯಾಣಗಳ ಸಂಭಾವನೆ ನೀಡಿದ ಉಲ್ಲೇಖ ತಾಳಗುಂದದ ಕ್ರಿ.ಶ. ೧೧೮೫ರ ಶಾಸನದಲ್ಲಿ ಬಂದಿದೆ[೨೨೭]. ದೇವಸ್ಥಾನ ಮಠಗಳಲ್ಲಿಯೇ ಬಾಲಶಿಕ್ಷಣವು ನಡೆಯುತ್ತಿತ್ತೆಂದು ಹೇಳಲು ಶಾಸನ ಆಧಾರಗಳು ಇರದಿದ್ದರೂ ಪ್ರಾಥಮಿಕ ಹಂತದಿಂದ ಉನ್ನತ ಶಿಕ್ಷಣದವರೆಗಿನ ಅಧ್ಯಯನ-ಅಧಾಯಪನ ಇಲ್ಲಿ ನಡೆಯುತ್ತಿತ್ತೆಂದು ಹೇಳಬಹುದು. ಸಿಂದಗಿ ತಾಲೂಕಿನ ಮಲಘಾಣ ಶಾಸನವು "ದಿವಾಕರೇಶ್ವರ ದೇವಾಲಯದಲ್ಲಿಯ ಪುರಾಣಂ ಬಾಲಶಿಕ್ಷೆಗಂನ್ಯಾಸದ ವಕ್ಖಾಣಕ್ಕಂ ವೃತ್ತಿಯ ಭೂಮಿಯೊಳಗೆ ಬಿಟ್ಟ ಭಟ್ಟವೃತ್ತಿ"ಯನ್ನು[೨೨೮] ನೀಡಿದ ಉಲ್ಲೆಖ ಕ್ರಿ.ಶ. ೧೧ನೆಯ ಶತಮಾನದ ಶಾಸನದಲ್ಲಿದೆ. ಇದನ್ನು ನೋಡಿದರೆ, ಒಬ್ಬ ಉಪಾಧ್ಯಾಯ ಪುರಾಣ, ಬಾಲಶಿಕ್ಷೆನ್ಯಾಸದ ವ್ಯಾಖ್ಯಾನ ಮಾಡುತ್ತಿದ್ದುದು ತಿಳಿದುಬರುತ್ತದೆ. ಇಲ್ಲಿ ಬಾಲಶಿಕ್ಷೆ ವಿದ್ಯಾಭ್ಯಾಸದ ಪ್ರಾರಂಭಿಕ ಹಂತವನ್ನು ಸೂಚಿಸಿದರೆ, ನ್ಯಾಸದ ವ್ಯಾಖ್ಯಾನ ಪ್ರೌಢ ವಿದ್ಯಾಭ್ಯಾಸಕ್ಕೆ ಸಂಬಂಧಿಸಿದುದಾಗಿದೆ. ಪುರಾಣ ಸಾಮಾನ್ಯರ ಕುರಿತಾದುದಾದರೂ, ಬಾಲಶಿಕ್ಷೆಯಲ್ಲಿ ಏನನ್ನೂ ಕಲಿಸುತ್ತಿದ್ದರು, ಹೇಗೆ ಕಲಿಸುತ್ತಿದ್ದರು ಎಂಬುದರ ಕುರಿತು ಇನ್ನೂ ಅಧ್ಯಯನ ನಡೆಯಬೇಕಾಗಿದೆ. ಇಂತಹ ಪಾಠಶಾಲೆಗಳಲ್ಲಿ ಮಕ್ಕಳು ಕಪ್ಪುಹಲಗೆಗಳ ಮೇಲೆ ಬಿಳಿ ಬಳಪದಿಂದ ಎಡದಿಂದ ಬಲಕ್ಕೆ ಬರೆಯುವದನ್ನು ವಿದೇಶಿ ಪ್ರವಾಸಿ ಅಲ್ಬೇರೂನಿ ಉಲ್ಲೇಖಿಸಿದ್ದಾನೆ[೨೨೯]. ಬಾಲಕರಿಗೆ ಋಗ್ವೇದದ ಮಂತ್ರಗಳನ್ನು ಸಹ ಬಾಯಿಪಾಠ ಮಾಡಿಸುತ್ತಿದ್ದ ಉಪಾಧ್ಯಾಯನನ್ನು ಶಾಸನವೊಂದು ಬಾಲಶಿಕ್ಷೆ ಶಾಸ್ತ್ರದವನೆಂದು ಕರೆದರೆ, ಹಾಗೆಯೇ ಕನ್ನಡಕ್ಷರ ಶಿಕ್ಷೆಗಾಗಿ ಕನ್ನಡದ ಉಪಾಧ್ಯಾಯನಿಗೂ ದತ್ತಿ ಬಿಟ್ಟ ವಿಷಯವೂ ಸಹ ತಾಳಗುಂದದ ಶಾಸನದಲ್ಲಿ ಬಂದಿದೆ[೨೩೦]. ಪ್ರಾಥಮಿಕ ವಿದ್ಯಾಭ್ಯಾಸ ಆಯಾ ಊರುಗಳಲ್ಲಿಯೇ ವೈಯಕ್ತಿಕ ಇಲ್ಲವೇ ಸಾಮೂಹಿಕವಾಗಿ ನಡೆದು ಮುಂದೆ ಪ್ರೌಢವಿದ್ಯಾಭ್ಯಾಸಕ್ಕೆ ಅಗ್ರಹಾರ ಇಲ್ಲವೆ ಘಟಿಕಾಸ್ಥಾನ ಮಠಗಳಿಗೆ ಹೋಗುವ ವಾಡಿಕೆಯಿತ್ತು.

## ಪ್ರೌಢ(ಮಾಧ್ಯಮಿಕ) ಶಿಕ್ಷಣ:

ಪ್ರೌಢ ವಿದ್ಯಾಭ್ಯಾಸ ಮಾಡುವ ವಿದ್ಯಾರ್ಥಿಗಳಿಗೆ ಛಾತ್ರರಿಗೆ ಆಶನಾಚ್ಛಾದನ ಪಥ್ಯೌಷದಾರ್ತ್ಥವಾಗಿ ದಾನ ಬಿಟ್ಟಿದ್ದನ್ನು ಶಾಸನಗಳು ಅರಹುತ್ತವೆ. ಛಾತ್ರರಿಗೆ ವಿದ್ಯಾಭ್ಯಾಸ ಮಾಡಿಸುವ ಉಪಾಧ್ಯಾಯರಿಗೆ ಭಟ್ಟವೃತ್ತಿ ಬಿಟ್ಟುಕೊಡುವದನ್ನು ಡಾ. ಚಿದಾನಂದಮೂರ್ತಿಯವರು ಅನೇಕ ಶಾಸನಗಳಿಂದ ಗುರುತಿಸಿದ್ದಾರೆ[೨೩೧]. ಭಟ್ಟವೃತ್ತಿಯನ್ನು ಪುರಾಣ, ಬಾಲಶಿಕ್ಷೆ, ನ್ಯಾಸದ, ವಾಖ್ಯಾನ ಮಾಡುವವರಿಗೆ ನೀಡಿರುವದನ್ನು ಮೇಲೆ ಉಲ್ಲೇಖಿಸಿದ ಮಲಘಾಣ ಶಾಸನದಲ್ಲಿ ಹೇಳಿರುವದನ್ನು ಇಲ್ಲಿ ಗಮನಿಸಬೇಕು. ಕಾಡಿಯೂರಿನ ಮಹಾಜನರು ಭಟ್ಟವೃತ್ತಿಗೋಸ್ಕರ ದತ್ತಿ ಕೊಟ್ಟಿದ್ದನ್ನು ಕ್ರಿ.ಶ. ೯೩೦ರ ಶಾಸನ ಹೇಳುತ್ತದೆ[೨೩೨]. ಇದನ್ನು ಸಾಮಾನ್ಯವಾಗಿ ಉತ್ತಮ ವಿದ್ವಾಂಸರು ಅತ್ಯುತ್ತಮ ರೀತಿಯಲ್ಲಿ ಭೋದಿಸಲು ಅನುಕೂಲವಾಗುವದಕ್ಕಾಗಿ ಅವರಿಗೆ ನೀಡಲಾಗುತ್ತಿತ್ತು. ಉದಾಹರಣೆಗೆ ರೋಣ ಅಗ್ರಹಾರದಲ್ಲಿ ನಾಗವಿಷ್ಣುಮಯ್ಯ ಎಂಬಾತನು ಅಲ್ಲಿನ ಉತ್ತಮ ವಿದ್ವಾಂಸರಿಗೆ ಭಟ್ಟವೃತ್ತಿಯನ್ನು ನೀಡಿದ್ದನ್ನು ಕ್ರಿ.ಶ. ೧೧೧೧ರ ಶಾಸನ[೨೩೩] ಉಲ್ಲೇಖಿಸಿದರೆ, ಮಹಾದೇವ ಚಮೂಪತಿಯು ಇಟ್ಟಗಿಯಲ್ಲಿ ಮಹಾದೇವನ ದೇವಾಲಯವನ್ನು ಮಾಡಿಸಿ, ಋಗ್ವೇದ ಹಾಗೂ ಯಜುರ್ವೇದಗಳನ್ನು ಬೋಧಿಸುವ ಉಪಾಧ್ಯಾಯರ ಭಟ್ಟವೃತ್ತಿಗೂ ದತ್ತಿಯನ್ನು ನೀಡುವ ವಿಷಯ ಕ್ರಿ.ಶ. ೧೧೧೨ರ ಶಾಸನದಲ್ಲಿ ಬರುತ್ತದೆ[೨೩೪]. ಪ್ರೌಢ ಉಪಾಧ್ಯಾಯರ ಜೀವನೋಪಾಯಕ್ಕಾಗಿ ಕೊಟ್ಟ ದಾನವನ್ನು ಭಟ್ಟವೃತ್ತಿ ಎಂದು ಕರೆದರೆ, ಪ್ರೌಢ ವಿದ್ಯಾರ್ಥಿಗಳ ಜೀವನೋಪಾಯಕ್ಕಾಗಿ ಕೊಟ್ಟ ದಾನವನ್ನು ಚಟ್ಟವೃತ್ತಿ[೨೩೫] ಅಥವಾ ಚಟ್ಟಗೆಯಿ[೨೩೬] ಎಂದು ಶಾಸನಗಳು ಕರೆದಿವೆ. ಈ ಭಟ್ಟವೃತ್ತಿಯನ್ನು ಸ್ವೀಕರಿಸುವವನು ವೇದ, ವ್ಯಾಕರಣ, ಮೀಮಾಂಸೆ ಹಾಗೂ ಎರಡು ದರ್ಶನಗಳಲ್ಲಿ ಪರಿಣಿತನಾಗಿರಬೇಕಿತ್ತಲ್ಲದೇ, ಅವನು ಆ ಊರಿನ ಮಠದಲ್ಲಿ ಕೊನೆಪಕ್ಷ ಮೂರು ವರ್ಷವಾದರೂ ಇದ್ದು ಅಧ್ಯಯನವನ್ನು ನೀಡಬೇಕಾಗಿದ್ದಿತೆಂಬ ಮಹತ್ವಪೂರ್ಣ ವಿಷಯವನ್ನು ಕ್ರಿ.ಶ. ೧೦೫೦ರ ಶಾಸನವೊಂದು ಉಲ್ಲೇಖಿಸುತ್ತದೆ[೨೩೭].

## ವಿದ್ಯಾಭ್ಯಾಸ ಕ್ರಮ :

ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕದ ಅಧ್ಯಯನದ ವಿಷಯಗಳಲ್ಲಿ ವೇದಗಳಿಗೆ ಮೊದಲ ಸ್ಥಾನ ದೊರೆತಿದ್ದು, ವೇದಗಳು, ವೇದಾಂಗಗಳು, ವೇದದಉಪಾಂಗಗಳು, ವೇದಾಧ್ಯಯನದ ವಿಷಯಗಳಾಗಿದ್ದವು. ವೇದಗಳನ್ನು ಭಾಗಭಾಗವಾಗಿ ಅಧ್ಯಯನ ಮಾಡುವದನ್ನು ವೇದ ಖಂಡಿಕವೆಂದೂ, ಪಾಠಹೇಳುವ ಉಪಾಧ್ಯಾಯನನ್ನು ಖಂಡಿಕೋಪಾಧ್ಯಾಯನೆಂದು, ವಿದ್ಯಾರ್ಥಿಯನ್ನು ಖಂಡಿಕ ವಿದ್ಯಾರ್ಥಿಯೆಂದು ಶಾಸನಗಳು ಕರೆದಿವೆ[೨೩೮]. ವೇದಗಳ ವಿದ್ಯಾಭ್ಯಾಸದಲ್ಲಿ ವೇದಗಳ ಶುದ್ಧವಾದ ಉಚ್ಚಾರಣೆಗೆ ಅತೀ ಪ್ರಮುಖ ಸ್ಥಾನವಿದೆ. ವೇದಾಂಗಗಳಲ್ಲಿ ಒಂದಾದ "ಶಿಕ್ಷಾ" ಎಂಬುದು ಈ ಉಚ್ಚಾರಣೆಯನ್ನು ಭೋದಿಸುತ್ತದೆ. ಶಾಸನಗಳು ಸಹ ದತ್ತಿಗಳಲ್ಲಿ 'ಋಗ್ವೇದ ಬಾಲಶಿಕ್ಷೆ',

'ಯಜುರ್ವೇದ ಬಾಲಶಿಕ್ಷೆ' ಮುಂತಾದವುಗಳಿಗೆ ಸ್ಥಾನಕಲ್ಪಿಸಿಕೊಟ್ಟಿವೆ. ವೇದಗಳಲ್ಲಿ ಪರಿಣಿತರಾಗಿದ್ದ ಬ್ರಾಹ್ಮಣ ಹಾಗೂ ಮಹಾಜನರು ಅಥವಾ ಉಪಾದ್ಯಾಯರು ಗ್ರಸ್ತ, ನಿರಸ್ತ ಮುಂತಾದ ಉಚ್ಚಾರಣಾ ದೋಷಗಳನ್ನು ವರ್ಜಿಸಿದ ಪದ, ಕ್ರಮ ಮುಂತಾದ ರೀತಿಯಲ್ಲಿ ಅಂದರೆ ಪದಪಾಠ, ಕ್ರಮಪಾಠ, ಜಟಪಾಠ, ಘನಪಾಠಗಳ ಮುಖಾಂತರ ವೇದಗಳನ್ನು ವಾಚಿಸುತಿದ್ದರೆಂದು ತಿಳಿದುಬರುತ್ತದೆ[೩೯].

ವೇದವನ್ನು ಓದುವ ವಿಧಾನದ ಕುರಿತು "ಪ್ರಣಮವನುಚ್ಚರಿಸಿ ಸ್ವರವರ್ಣ ಬೇಧದಿಂದಂ ಪ್ರಥಮ ಚುತುಃಷಷ್ಠಿ ಸಂಹತಿಗಳಂ ಪದಕ್ರಮ ಭೇದದಿಂ ಬ್ರಾಹ್ಮಣ ಆರಣಸೂತ್ರಂ ಮೊದಲಗೊಡೆಯವ ನೋದಿ ಬೂಗ್ಯಜುಸ್ಸಾಮಾರ್ಥರ್ವಣ ವೇದಂಗಳಂ ಸ್ವರವರ್ಣ ಭೇದದಿಂದಂ ಮಂತ್ರಸಹಿತ ಪಾಳಿ ಪದಕ್ರಮ ಜಟೆಭೇದದಿಂ ಶತಸೂತ್ರಂ ಮೊದಲಾಗೆಲ್ಲಂ ಯತಾಕ್ರಮದಿಂದುಚ್ಚರಿಸಿ" ಎಂದು ವಡ್ಡಾರಾಧನೆಯಲ್ಲಿ ಉಲ್ಲೇಖಿಸಲಾಗಿದೆ[೪೦]. ವೇದವನ್ನು ಹೊರತುಪಡಿಸಿದರೆ ಅಗ್ರಹಾರ, ದೇವಸ್ಥಾನ-ಮಠ ಹಾಗೂ ಘಟಿಕಾಸ್ಥಾನಗಳಲ್ಲಿ ಭೋದಿಸಲ್ಪಡುತಿದ್ದ ಇತರ ಕೆಲವು ವಿಷಯಗಳನ್ನು ಇಲ್ಲಿ ಹೆಸರಿಸಬಹುದು. ವ್ಯಾಕರಣ, ತರ್ಕ, ಜೋತಿಷ್ಯ, ಪುರಾಣ, ಕಾವ್ಯ, ನಾಟಕ, ಅರ್ಥಶಾಸ್ತ್ರ, ಭರತಶಾಸ್ತ್ರ, ವಾತ್ಸಾಯನನ ಕಾಮಸೂತ್ರ, ಚರಿತ್ರೆ, ಹದಿನೆಂಟು ಸ್ಮೃತಿಗಳು, ಹದಿನೆಂಟು ಪುರಾಣಗಳು, ಷಡ್ದರ್ಶನಗಳು ಭೋಧನೆಯ ಪ್ರಮುಖ ವಿಷಯಗಳಾಗಿದ್ದವು. ಶೈವರು ಶಿವಾಗಮಗಳನ್ನು ಓದುತ್ತಿದ್ದರು. ವಡ್ಡಾರಾಧನೆಯು ಸಹ ವೈದಿಕ ಪದ್ದತಿಯ ವಿದ್ಯಾಭ್ಯಾಸದ ಚಿತ್ರಣ ನೀಡುತ್ತದೆ. ಅದು ಬ್ರಾಹ್ಮಣ ಗುರುವಾದ ಸೂರ್ಯಮಿತ್ರನು ಅಗ್ನಿಭೂತಿ, ವಾಯುಭೂತಿಯರಿಗೆ ಕಲಿಸಿದ ವಿದ್ಯೆಗಳನ್ನು ಕುರಿತು "ನಾಲ್ಕು ವೇದಮುಂ ಅಂಗಮುಂ ಪದಿನೆಂಟು ಧರ್ಮ ಶಾಸ್ತ್ರಂಗಳುಂ ಮೀಮಾಂಸಾ ನ್ಯಾಯ ವಿಸ್ತರಂ ವ್ಯಾಕರಣಂ ಪ್ರಮಾಣಂ ಛಂದಂ ಅಲಂಕಾರಂ ನಿಘಂಟು ಕಾವ್ಯ ನಾಟಕಗಳುಂ ಚಾಣಕ್ಯಂ ಸಾಮುದ್ರಿಕಂ ಶಾಲಿಹೋತ್ರಂ (ಅಶ್ವವಿದ್ಯೆ) ಪಾಳಕಾಪ್ಯಂ (ಗಜವಿದ್ಯೆ) ಹಾನಿತಂ ಚರಕಂ ಅಶ್ವಿನೀಮತಂ ಬಾಲಹಂ ಸುಸ್ರುತಂ (ವೇದಗ್ರಂಥ) ಕ್ಷಾರಪಾನಿಯಂ ಮೊದಲಾಗೋಡೆಯ ನರ ವೈದ್ಯಗಳುಂ ಜೋತಿಷಂ ಮಂತ್ರವಾದಂ ಮೊದಲಾಗೋಡೆಯ ಶಾಸ್ತ್ರಗಳೆಲ್ಲಮಂ" ಎಂದು ಉಲ್ಲೇಖಿಸಿದೆ. ಹೀಗೆ ಆ ಕಾಲದಲ್ಲಿ ನಡೆಯುತ್ತಿದ್ದ ವೈದಿಕ ವಿದ್ಯಾಭ್ಯಾಸಕ್ರಮವನ್ನು ಅದು ವಿವರವಾಗಿ ತಿಳಿಸುತ್ತದೆ[೪೧]. ಈ ಎಲ್ಲ ಮೇಲಿನ ವಿಷಯಗಳನ್ನೊಳಗೊಂಡ ವಿದ್ಯಾಭ್ಯಾಸ ಕ್ರಮ ಪ್ರಾಚೀನ ಹಾಗೂ ಮಧ್ಯಕಾಲದ ಕರ್ನಾಟಕದಲ್ಲಿತ್ತೆಂದು ಇದರಿಂದ ತಿಳಿಯುತ್ತದೆ.

## ಸ್ತ್ರೀ ವಿದ್ಯಾಭ್ಯಾಸ :

ಹಿಂದೂಗಳು 'ವಿದ್ಯಾ ವಿಹೀನ ಪಶುಭಿಃ ಸಮಾನ' ಎಂಬ ಭಾವನೆಯನ್ನು ತಳೆದಿದ್ದುದುಂಟು. ಇದರ ಫಲವಾಗಿ ವಿದ್ಯೆಯ ಸಾಕಾರ ರೂಪಗಳಾಗಿ ಹುಟ್ಟಿ ಬಂದವು ವೇದ-ಉಪನಿಷತ್ತುಗಳು. ಸ್ತ್ರೀ ಪುರುಷ ಜ್ಞಾನಾರ್ಜನೆಗೆ ಸಮಾನ ತಳಹದಿಯನ್ನು ರೂಪಿಸಿಕೊಟ್ಟ ಕಾಲವದು. ಸ್ತ್ರೀಯರನ್ನು ಬ್ರಹ್ಮವಾಹಿನಿಯರು ಮತ್ತು ಸಧ್ಯೂವಧುಗಳೆಂದು ಎರಡು ಭಾಗವಾಗಿ ವಿಂಗಡಿಸಲಾಗಿತ್ತು. ಬ್ರಹ್ಮವಾಹಿನಿಯರು ಆಜನ್ಮಪರ್ಯಂತ ಬ್ರಹ್ಮಚಾರಿಣಿಯರಾಗಿ ತಾತ್ವಿಕ ಸಾಹಿತ್ಯವನ್ನು

ಕರಗತ ಮಾಡಿಕೊಂಡಿದ್ದರು. ಸದ್ಯೋವಧುಗಳು ವಿವಾಹ ಘಟ್ಟದವರೆಗೆ ವಿದ್ಯಾಭ್ಯಾಸವನ್ನು ಮುಂದುವರೆಸಿ ಮುಂದೆ ಗೃಹಜೀವನದಲ್ಲಿ ಕಾಲಿರಿಸುತ್ತಿದ್ದರು. ಈ ವೇದ ಉಪನಿಷತ್ತುಗಳ ಕಾಲದಲ್ಲಿನ ಸ್ತ್ರೀ ವಿದ್ಯಾಭ್ಯಾಸ, ರಾಮಾಯಣ-ಮಹಾಭಾರತಗಳ ಕಾಲಕ್ಕೆ ಉಳಿಯಲಿಲ್ಲ. ಕೌಸಲ್ಯೆ ತಾರೆಯಂತಹವರು 'ಮಂತ್ರವಿದ' ಎಂಬ ವಿಶೇಷಣವನ್ನು ಪಡೆದಿದ್ದರು. ಆದರೆ ಇಲ್ಲಿ ಶಿಕ್ಷಣದ ಅವಕಾಶ ದೊರೆತುದು ಕೇವಲ ಮೇಲ್ವರ್ಗದ ಮಹಿಳೆಯರಿಗೆ ಮಾತ್ರ. ಮುಂದೆ ಬೌದ್ಧ, ಜೈನ ಸಂಸ್ಕೃತಿಗಳು ಈ ಕೊರತೆಯನ್ನು ಹೋಗಲಾಡಿಸಲು ಪ್ರಯತ್ನಿಸಿದವು. ಆಗ ಪುರುಷರಿಗೆ ಸುಲಭವಾಗಿ ಸಿಗುತ್ತಿದ್ದ ದೀಕ್ಷೆ-ಮೋಕ್ಷಗಳು ಗೌತಮಬುದ್ಧನಿಂದ ಸ್ತ್ರೀಯರಿಗೂ ಸಿಗುವಂತಾಯಿತು[೨೪೨]. ಇದರಿಂದ ಬೌದ್ಧ ಧರ್ಮದ ಪ್ರಚಾರಕ್ಕೆ ಪ್ರೋತ್ಸಾಹ ದೊರೆಯಿತು. ಸಮಾಜದಲ್ಲಿ ಮಹಿಳೆಯರಿಗೆ ಮುಕ್ತ ಪರಿಸರ ನಿರ್ಮಾಣವಾಗಿ ಅನೇಕ ಸುಸಂಸ್ಕೃತ ಮಹಿಳೆಯರೂ ಸಹ ಬೌದ್ಧ ಭಿಕ್ಷುಣಿಯರಾಗಿ ಮತ ಪ್ರಚಾರಕರಾಗಿ ಅನೇಕ ಗ್ರಂಥಗಳ ನಿರ್ಮಾಣಕ್ಕೆ ಕಾರಣೀಭೂತರಾದರು.

ಆದಾಗ್ಯೂ ರಾಜಮನೆತನಗಳ ಸ್ತ್ರೀಯರಿಗೆ ದೊರೆಯುವ ವಿದ್ಯೆಯು ಸಾಮಾನ್ಯ ಸ್ತ್ರೀಯರಿಗೆ ದೊರೆಯುತ್ತಿದ್ದುದು ಅತ್ಯಂತ ಕಡಿಮೆಯನ್ನಬಹುದು. ಅವರು ಇಚ್ಛಿಸಿದರೆ ಇಲ್ಲವೆ ಕುಟುಂಬದವರ ಒತ್ತಾಯಕ್ಕೆ ಗಾಯನ, ವಾದನ, ನರ್ತನಗಳಂತಹ ಕಲಾ ತರಬೇತಿಗಳು ಮಾತ್ರ ಮಹಿಳೆಯರಿಗೆ ದೊರೆಯುತ್ತಿದ್ದವು. ರಾಜಮನೆತನದ ಸ್ತ್ರೀಯರಾದರೂ ಒಂದೆಡೆ ಕಲೆಯ ಆಕರ್ಷಣೆಗೆ ಅದನ್ನು ಕಲಿತರೆ, ಇನ್ನೊಂದೆಡೆ ರಾಜರ ಮನದಾಕರ್ಷಣೆಗಾಗಿ ಇಂತಹ ಕಲೆಗಳನ್ನು ಕಲಿಯುವ ಮಟ್ಟಕ್ಕೆ ಬಂದು, ವಿದ್ಯೆಯಿಂದ ಅವರೂ ವಂಚಿತರಾಗಿದ್ದರು. ಆದರೆ ಅರಸೊತ್ತಿಗೆ ಹಾಗೂ ಶ್ರೀಮಂತರ ಕುಟುಂಬಗಳ ಸ್ತ್ರೀಯರಿಗೆ ಅಂದಿನ ಕಾಲದಲ್ಲಿ ವಿದ್ಯಾಭ್ಯಾಸ ಅಲ್ಪ-ಸ್ವಲ್ಪ ದೊರೆತಿದ್ದು ಶಾಸನಗಳ ವರ್ಣನೆಗಳಿಂದ ವ್ಯಕ್ತವಾಗುತ್ತದೆ. ಈ ವಿಷಯವಾಗಿ ನೇರ ಉಲ್ಲೇಖಗಳಿಲ್ಲದಿದ್ದರೂ, ಕರ್ನಾಟಕದ ಸಾಮಂತ ಅರಸುಮನೆತನಗಳ ರಾಣಿಯರ ಬಿರುದು ಹಾಗೂ ವಿಶೇಷಣಗಳಿಂದ ಮಾತ್ರ ಅವರು ವಿದ್ಯಾವಂತರಾಗಿದ್ದರೆನ್ನುವದು ತಿಳಿದುಬರುತ್ತದೆ.

ಕ್ರಿ.ಶ. ೮೯೦ರ ಆವನಿಯ ಶಾಸನದಲ್ಲಿ ಉಲ್ಲೇಖವಾದಂತೆ ಪಲ್ಲವ ದೀವಬ್ಬರಸಿಯು, ವಾಗ್ದೇವಿಯರ ದೊರೆಯೆನಿಸಿಕೊಂಡಿದ್ದಳು[೨೪೩]. ಮಹಾಸಾಮಂತ ಶೂದ್ರಕಾಂಕನ ಹೆಂಡತಿ ಜೆಕ್ಕಿಸುಂದರಿ 'ಸಹಜ ಸರಸ್ವತಿ ವಿಳಾಸ ವಿದ್ಯಾಧರಿ' ಎಂದು ಹೆಸರಾಗಿದ್ದಳು[೨೪೪]. ನೊಳಂಬರ ವೀರನೊಳಂಬನ ರಾಣಿಯಾದ ವಾಳಲದೇವಿ ವಿದ್ಯಾಧರಿಯೆನಿಸಿಕೊಂಡಿದ್ದಳೆಂದು ಕ್ರಿ.ಶ. ೧೦೭೬ರ ಶಾಸನವೊಂದರಿಂದ ತಿಳಿಯುತ್ತದೆ[೨೪೫]. ಮಹಾಸಾಮಂತ ಕದಂಬ ದಯಾಸಿಂಹನ ತಾಯಿ ಮೇಚಲದೇವಿ ಅತಿಚತುರೋಕ್ತಿಯೊಳೆ ಸರಸ್ವತಿಗಂ ಮಿಗಿಲು ಎನಿಸಿಕೊಂಡಿದ್ದ ವಿಷಯ ಕ್ರಿ.ಶ. ೧೦೯೫ರ ಶಾಸನದಲ್ಲಿದೆ[೨೪೬]. ಕ್ರಿ.ಶ. ೧೧೨೧ರ ಶಾಸನ ತಿಳಿಸುವಂತೆ ಹೊಯ್ಸಳ ಮಹಾಮಂಡಳೇಶ್ವರ ಗಂಗರಾಜನ ಹೆಂಡತಿ ಲಕ್ಷ್ಮಲೆ ಪಂಡಿತೆ ಎನಿಸಿಕೊಂಡಿದ್ದಳು[೨೪೭]. ಮಹಾಮಂಡಳೇಶ್ವರ ಸೋಮರಸನ ಮಗ ಎಡವರಿದೇವನ ಮಡದಿ

ಗಂಗರಸಿಯನ್ನು ೧೧೪೯ರ ಶಾಸನವೊಂದು ಬಹುಕಳಾಪರಿಣತೆಯಲ್ಲಿ ಸರಸ್ವತಿಗೆಣೆಯೆಂದಿದೆ[೨೪೮]. ಮಹಾಮಂಡಳೇಶ್ವರ ವಮ್ಮಿದೇವ ಚೋಳವಹಾರನ ರಾಣಿ ಸೀತಾದೇವಿ "ಶ್ರಾವ್ಯಕಾವ್ಯದಿವ್ಯಗೀತವಾದ್ಯನ್ರಿತ್ಯಾದಿವಿದ್ಯಾಪ್ರವೀಣೆ, ಕವಿಗಮಕಿವಾದಿವಾಗ್ಮಿ ವೈತಾಳಿಕ ಪಾಠಕಾದಿ ಜನ ಪರಿತುಷ್ಟೆ" ಎಂಬ ಬಿರುದುಗಳನ್ನು ಹೊಂದಿದ್ದಳು[೨೪೯]. ಮಂಡಳಿಕ ಬಲ್ಲಿದೇವನರ್ಧಾಂಗಿ ಸಕಳಕಳಾಸರಸ್ವತಿ, ಗೀತವಾದ್ಯನ್ರಿತ್ಯ ಪ್ರವೀಣೆ ಎನಿಸಿಕೊಂಡಿದ್ದಳೆಂದು ಕ್ರಿ.ಶ. ೧೧೮೭ರ ಶಾಸನ ಉಲ್ಲೇಖಿಸಿದೆ[೨೫೦]. ಮಹಾಮಂಡಳೇಶ್ವರ ಗಂಗಪೆರ್ಮಾಡಿಯ ಪತ್ನಿ ಬಾಚಲದೇವಿ ನೃತ್ಯವಿದ್ಯಾಪ್ರಭಾವ ಪ್ರಭೂತನಿರ್ಮ್ಮಳಯಶೋವಿಭಅಸಿನಿ, ಚತುರವಿದ್ಯಾವಿನೋದೆ, ಅರಿಬಿರುದಪಾತ್ರಜಗದಳೆ ಎಂಬ ಹಲವು ಬಿರುದುಗಳನ್ನು ಪಡೆದಿದ್ದಳಲ್ಲದೇ ನೃತ್ಯದಲ್ಲಿ ಪ್ರಕಾಂಡ ಪಾಂಡಿತ್ಯವನ್ನು ಹೊಂದಿದ್ದಳೆಂದು ತಿಳಿದುಬರುತ್ತದೆ[೨೫೧].

ಆದರೆ ಈ ಕಾಲದಲ್ಲಿ ಉನ್ನತವರ್ಗದ ಸ್ತ್ರಿಯರಿಗೆ ದೊರೆತ ಪ್ರೋತ್ಸಾಹ ಸಾಮಾನ್ಯವರ್ಗದ ಸ್ತ್ರೀಯರಿಗೆ ದೊರೆಯದೇ ಹೋಯಿತು. ಸಮಾಜವು ಈ ದೃಷ್ಟಿಯಲ್ಲಿ ಯಾವದೇ ಪ್ರಯತ್ನವನ್ನು ಮಾಡಿದಂತಿಲ್ಲ. ಆದರೂ ಕೆಲವು ಮಹಿಳೆಯರು ಸಮಾಜದ ಕಟ್ಟನ್ನು ಮೀರಿ ವಿದ್ಯಾವಂತರಾದುದು ಮಹತ್ವದ ಸಂಗತಿಯಾಗಿದೆ.

ಸಾಮಾನ್ಯ ವರ್ಗದ ಮಹಿಳೆಯರಲ್ಲಿ ತನ್ನ ಜ್ಞಾನ ಬಲದ ಮೂಲಕ ಬೆಳಕಿಗೆ ಬಂದ ಶಾಸನೋಕ್ತ ಪ್ರಥಮ ಸ್ತ್ರೀಯೆಂದರೆ ಸಾವಿನಿರ್ಮಡಿ. ಬೌರಿಂಗ ಪೇಟೆ ತಾಲೂಕಿನ ಕುರುಬೆಲೆ ಗ್ರಾಮದ ಕ್ರಿ.ಶ.೯೦೦ ರ ಶಾಸನವೊಂದು ನಾಗಾರ್ಜುನಯ್ಯ ನಂದಿಂಗೆಯಬ್ಬೆಯರ ಮಗಳು ಸಾವಿನಿರ್ಮಡಿ "ಸರ್ವಶಾಸ್ತ್ರ ಪ್ರಸಿದ್ಧ" ಎಂಬ ವಿಶೇಷಣದಿಂದ ವರ್ಣಿತಳಾಗಿದ್ದಾಳೆ[೨೫೨]. ಅಲ್ಲದೇ ಈಕೆ ಸಕಲಶಾಸ್ತ್ರ ಪಾರಂಗತಳಾಗಿದ್ದಳೆಂಬುದಕ್ಕೆ 'ಶ್ರೀಹರಿ' ಅಥವಾ 'ಹರಿಸಿದ್ಧ' ಎಂಬ ಬರವಣಿಗೆಯನ್ನೊಳಗೊಂಡ ತಾಳೆಗರಿ ಹಿಡಿದ ಇವಳ ಶಿಲ್ಪ ನಿದರ್ಶನವಾಗಿದೆ[೨೫೩]. ಕೊಲ್ಲಾಪೂರದ ಮಹಾಲಕ್ಷ್ಮೀ ಪಾದಾರಾಧಕಿ ಗೌರಿಕಬ್ಬೆ ಸರಸ್ವತಿ ಕರ್ಣಾವತಂಸೆ ಎಂದು ಹೆಸರಾಗಿದ್ದಳೆಂದು ಕ್ರಿ.ಶ. ೧೦೬೮ರ ಶಾಸನದಿಂದ ತಿಳಿದುಬರುತ್ತದೆ[೨೫೪]. ಕ್ರಿ.ಶ. ೧೧೯೯ರ ನೂಲಗೆರೆಯ ಶಾಸನ[೨೫೫]ದಲ್ಲಿ ಹರಿಸೆಟ್ಟಿಕವ್ವೆಯ ಬರಪ ಎಂಬ ಉಲ್ಲೇಖವಿದೆ. ಇದು ಅವಳು ಶಾಸನವೊಂದರ ಲಿಪಿಕಾರಳಾಗಿದ್ದಳೆಂಬುದಕ್ಕೆ ಸಾಕ್ಷಿಯಾಗಿದೆ.

ಕ್ರಿ.ಶ. ೧೨ನೆಯ ಶತಮಾನ ಮಹಿಳಾ ವಿದ್ಯಾಭ್ಯಾಸದ ದಿಶೆಯಲ್ಲಿ ಒಂದು ಪ್ರಮುಖ ಯುಗವಾಗಿದೆ. ಶಿವಶರಣರ ಅಂದೋಲನದಲ್ಲಿ ಹೆಣ್ಣುಮಕ್ಕಳಿಗೆ ಸರ್ವತೋಮುಖ ಸ್ವಾತಂತ್ರ್ಯ ದೊರೆತು ನೂರಾರು ಜನ ಮಹಿಳೆಯರು ತಮ್ಮ ಜ್ಞಾನದ ಅರೆಕೊರೆಗಳನ್ನು ತುಂಬಿಕೊಂಡಿದ್ದು ವ್ಯಕ್ತವಾಗುತ್ತದೆ. ಅಲ್ಲದೇ ಅಂದು ಅನೇಕ ಸ್ತ್ರೀಯರು ತಮ್ಮ ವಿದ್ವತ್ತಿನಿಂದ ಅನೇಕ ವಚನಗಳನ್ನು ರಚಿಸಿ ಅಲ್ಲದೇ ಅನುಭವ ಮಂಟಪದಲ್ಲಿ ವಿದ್ವತ್ಪೂರ್ಣ ಚರ್ಚೆಗಳಲ್ಲಿ ಭಾಗವಹಿಸಿ ವಿಖ್ಯಾತರಾಗಿರುವದು ನಮಗೆ ತಿಳಿಯುತ್ತದೆ. ಆದರೆ ಅಂದಿನ ಕಾಲದ ಶಾಸನಗಳು ಈ ವಿಷಯದ ಬಗ್ಗೆ ಮೌನವನ್ನು ತಾಳಿದ್ದು ಆಶ್ಚರ್ಯವೇ ಸರಿ.

ಒಟ್ಟಿನಲ್ಲಿ ಅಕ್ಷರವಿದ್ಯೆಯಲ್ಲಿ ಸಿಗಲಾರದ ಸ್ಥಾನವನ್ನು ಕೆಲವರು ಕಲೆಯಲ್ಲಿ ತುಂಬಿಕೊಂಡಿದ್ದರೂ, ಅದು ಅರಮನೆಯಲ್ಲಿ ಮಡುಗಟ್ಟಿ ನಿಂತಿತ್ತು. ರಾಜಮನೆತನದ ಈ ಕಲೆ ಬರಬರುತ್ತಾ ದೇವಾಲಯದ ವೇಶ್ಯೆಯರ,

ಅನ್ಯವೇಶೆಯರ ಪಾಲಿಗೆ ಸೀಮಿತವಾದಾಗ ಅದು ತನ್ನ ಗೌರವವನ್ನು ಕಡಿಮೆ ಮಾಡಿಕೊಂಡಿತು. ಆದರೆ ನಂತರದ ಕಲ್ಯಾಣ ಚಾಲುಕ್ಯ ಹಾಗೂ ಕಲಚೂರಿಗಳ ಕಾಲ ಒಂದು ಪ್ರಮುಖಯುಗವೆನಿಸಿದ್ದು ಶಿವಶರಣರ ಆಂದೋಲನದಲ್ಲಿ ಹೆಣ್ಣುಮಕ್ಕಳಿಗೆ ಹಿಂದಿನ ಬೌದ್ಧಸಂಘದಲ್ಲಿ ದೊರೆತ ಸ್ಥಾನಮಾನದಂತೆ ಸರ್ವತೋಮುಖ ಸ್ವಾತಂತ್ರ ದೊರೆತು ನೂರಾರು ಜನ ಸ್ತ್ರೀಯರು ತಮ್ಮ ಜ್ಞಾನದ ಹಸಿವನ್ನು ಇಂಗಿಸಿಕೊಂಡರು.

**ಅಡಿಟಿಪ್ಪಣೆಗಳು:**

೧. ಶಿವರುದ್ರಪ್ಪ,ಎಚ್.ಎಲ್., ಶೈವ ಮತ್ತು ವೀರಶೈವ ಒಂದು ತಾತ್ವಿಕ ವಿಶ್ಲೇಷಣೆ, ಪುಟ-೫೫೦.
೨. The Discriptive List of the Stone and Copper Plate Inscriptions, 1942-43.
೩. E.C., Vol-VII, Sk, No-46.
೪. Ind.Ant., Vol-II, p-283, 296.
೫. 2500 years of Buddhisam, p-338.
೬. Chidanandamurty,M., Buddhisam in Karnataka, Q.J.M.S., Vol-4, p-63.
೭. The Discriptive List of the Stone and Copper Plate Inscriptions, 1942-43.
೮. Ep.Ind., Vol-13, No-29, p-326.
೯. Ind.Ant., Vol-XIV, p-334; Moraes, Kadamba Kula, p-5.
೧೦. E.C., Vol-XVI, Tm, No-78.
೧೧. Gopal,B.R., Corpas Kadamba Inscriptions, Vol-I, No-20.
೧೨. ನಾಗೇಗೌಡ,ಎಚ್.ಎಲ್., ಪ್ರವಾಸಿ ಕಂಡ ಇಂಡಿಯಾ, ಸಂ-೧.
೧೩. Rajashekhar,S., Identification of the early Chalukya Temples, Srikanthika, p-17.
೧೪. Ep.Ind., Vol-6, No-28, p-285.
೧೫. SII., Vol-XI (i), No-22.
೧೬. The Discriptive List of the Stone and Copper Plate Inscriptions, 1942-43.
೧೭. Ep.Ind., Vol-XIII, p-329.
೧೮. Nagaraju,S., A rare Saivo-Buddhist work with Vaisnavite Interpolations, Kannada Studies, Vol-III, i, p-67.
೧೯. Handaki,K.K., Yashastilaka and Indian Culture, p-249.
೨೦. Ind.Ant., Vol-XVIII, p-270.
೨೧. E.C., Vol-VIII, Sa, No-108 (Bis).
೨೨. Ibid., Vol-VII, Sk, No-120.
೨೩. Mysore Gazeetter, Vol-I, i, p-144.
೨೪. SII., Vol-IX (i), No-99.
೨೫. E.C., Vol-VII, Sk, No-170.
೨೬. Ibid., Sk, No-169.

೨೭. E.C., Sk, No-46.
೨೮. Ibid., Sk, No-106.
೨೯. SII., Vol-XX, No-49.
೩೦. Ind.Ant., Vol-X, p-185.
೩೧. B.K.I. I. i., No-157.
೩೨. Ind.Ant., Vol-XIV, p-15.
೩೩. History of the Deccan, p-73.
೩೪. E.C., Vol-XII, Cn, No-218.
೩೫. SII., Vol-XV, No-56.
೩೬. Ibid., Vol-XVIII, No-199.
೩೭. ಕಲಘಟಗಿ, ಟಿ.ಜಿ., ಕರ್ನಾಟಕ ಮತ್ತು ಜೈನ ಸಂಸ್ಕೃತಿ, (೬ ಉಪನ್ಯಾಸಗಳು), ಪುಟ-೨೨.
೩೮. ಮಿರ್ಜಿ, ಅಣ್ಣಾರಾಯ., ಜೈನಧರ್ಮ, ಪುಟ-೧೨.
೩೯. E.C., Vol-VII, Sh, No-4.
೪೦. Ibid., Vol-I, Cg, No-1.
೪೧. Ibid., Vol-IV, Ch, No-347.
೪೨. Ibid., Vol-VII, Ng, No-149.
೪೩. Ibid., Vol-I, Cg, No-96.
೪೪. Ibid., Vol-VI, Pp, No-16.
೪೫. Ibid., Vol-VII, Md, No-100.
೪೬. B.K.I. I. i., No-38.
೪೭. E.C., Vol-I, Cg, No-98.
೪೮. Ibid., Vol-II, Sb, No-272, 273 & 276.
೪೯. Ibid., Sb, No-150.
೫೦. SII., Vol-XX, No-3.
೫೧. KI., Vol-I, No-3.
೫೨. A.R.I.E., 1958-59, B.No-582, p-83.
೫೩. Ibid., 1945-46, B.No-207, p-28.
೫೪. Ep.Ind., Vol-6, No-4, p-25-26.
೫೫. SII., Vol-XX, No-13.
೫೬. ಕೊಪ್ಪಳ ಜಿಲ್ಲೆಯ ಶಾಸನಗಳು, ನಂ-೨೦.
೫೭. E.C., Vol-VII, Sk, No-219.
೫೮. The Discriptive List of the Stone and Copper Plate Inscriptions, 1942-43.
೫೯. SII., Vol-IX (i), No-62.
೬೦. A.R.I.E., 1964-65, B.No-423, p-97.
೬೧. E.C., Vol-XI, Cd, No-74.
೬೨. Ibid., Vol-II, Sb, No-151.

೬೩. SII., Vol-V, No-849.
೬೪. E.C., Vol-IX, Cg, No-35.
೬೫. Ibid., Vol-I, Cg, No-72.
೬೬. Ibid., Vol-VIII, Nr, No-47.
೬೭. Ibid., Nr, No-57.
೬೮. Ibid., Nr, No-35.
೬೯. Ibid., Sr, No-262.
೭೦. Ibid., Vol-XII, Tp, No-101.
೭೧. Ibid., Vol-II, Sb, No-568.
೭೨. Ibid., Vol-IX, Bl, No-513.
೭೩. Ibid., Vol-VII, Sh, No-4.
೭೪. Ibid., Nm, No-169.
೭೫. Ibid., Nm, No-118.
೭೬. ಚಿದಾನಂದಮೂರ್ತಿ,ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ-೮೬.
೭೭. ಅದೇ, ಪುಟ-೮೭-೮೯.
೭೮. ಮಿರ್ಜಿ, ಅಣ್ಣಾರಾಯ., ಜೈನಧರ್ಮ, ಪುಟ-೫೧.
೭೯. ಚಿದಾನಂದಮೂರ್ತಿ,ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ-೮೬.
೮೦. ಮಿರ್ಜಿ, ಅಣ್ಣಾರಾಯ., ಜೈನಧರ್ಮ, ಪುಟ-೭೯-೮೧.
೮೧. ಜಹಾಗಿರದಾರ, ಸೀತಾರಾಮ., ಕರ್ನಾಟಕದ ಧಾರ್ಮಿಕ ಜೀವನ, ಕ.ಸಾ.ಚ, ಸಂಪುಟ-೧, ಪುಟ-೫೨೬.
೮೨. E.C., Vol-IV, Ed, No-60.
೮೩. Ibid., Vol-IX, Bl, No-537.
೮೪. Ibid., Vol-VIII, Sr, No-571.
೮೫. Ibid., Vol-XI, Ci, No-33.
೮೬. Ibid., Vol-X, Mu, No-38.
೮೭. Ibid., No-50.
೮೮. SII., Vol-XI (1), No-22.
೮೯. E.C., Vol-VIII, Sr, No-70.
೯೦. The Discriptive List of the Stone and Copper Plate Inscriptions, 1942-43.
೯೧. SII., Vol-IX (1), No-74.
೯೨. E.C., Vol-V, My, No-223.
೯೩. Ibid., Vol-VI, Sp, No-66.
೯೪. Ibid., Vol-IX, Sl, No-45.
೯೫. Ibid., Bl, No-35.
೯೬. KI., Vol-II, No-16.
೯೭. SII., Vol-XV, No-8.
೯೮. Ibid., No-35.

೯೯. E.C., Vol-IV, Ch, No-222.
೧೦೦. Ibid., Vol-VII, Nm, No-81.
೧೦೧. KI., Vol-I, No-33.
೧೦೨. Ibid., Vol-III, No-1.
೧೦೩. ಎಲಿಗಾರ, ಚೆನ್ನಕ್ಕ., ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ, ಪುಟ-೧೪೭.
೧೦೪. ನಂದಿಮಠ,ಎಸ್.ಸಿ., ಮಠ-ಸಮಾಜ-ಸಂಸ್ಕೃತಿ, ಕರ್ನಾಟಕ ಪರಂಪರೆ, ಸಂಪುಟ-೧, ಪುಟ-೧೮೦.
೧೦೫. ಚಿದಾನಂದಮೂರ್ತಿ,ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ-೧೨೫.
೧೦೬. SII., Vol-VII, No-284.
೧೦೭. E.C., Vol-XI, Ci, No-33.
೧೦೮. SII., Vol-XVIII, No-17.
೧೦೯. KI., Vol-I, No-15.
೧೧೦. A.R.I.E., 1958-59, B.No-530, p-78.
೧೧೧. E.C., Vol-XI, Ci, No-33.
೧೧೨. SII., Vol-XV, No-46.
೧೧೩. E.C., Vol-IV, Ch, No-147.
೧೧೪. Ibid., Vol-VII, Md, No-57.
೧೧೫. Ibid., Vol-XVI, Tp, No-140.
೧೧೬. Ibid., Vol-VIII, Sr, No-476.
೧೧೭. A.R.I.E., 1938, B.No-235.
೧೧೮. The Discriptive List of the Stone and Copper Plate Inscriptions, 1942-43.
೧೧೯. E.C., Vol-VIII, Sr, No-44.
೧೨೦. Ibid., Vol-XI, Ci, No-23.
೧೨೧. Ibid., Vol-V, My, No-168.
೧೨೨. Ibid., Vol-VIII, Sr, No-283.
೧೨೩. Ibid., Sr, No-184.
೧೨೪. Ibid., Sr, No-108.
೧೨೫. KI., Vol-I, No-17.
೧೨೬. E.C., Vol-III, Hg, No-123.
೧೨೭. Ibid., Vol-VIII, Sr, No-103.
೧೨೮. Ibid., Vol-IV, Hs, No-35.
೧೨೯. KI., Vol-II, No-11.
೧೩೦. Ibid., Vol-I, No-19.
೧೩೧. Ibid., Vol-II, No-12.
೧೩೨. SII., Vol-XV, No-9.
೧೩೩. Ibid., No-42.
೧೩೪. Ibid., No-40.

೧೩೫. SII., Vol-XV, No-12.

೧೩೬. Ibid., Vol-IX (i), No-393.

೧೩೭. E.C., Vol-VI, Kr, No-62.

೧೩೮. Ibid., Vol-XVI, Tm, No-110.

೧೩೯. Ibid., Cn, No-98.

೧೪೦. KI., Vol-II, No-30.

೧೪೧. E.C., Vol-VII, Md, No-13.

೧೪೨. ಲಿಂಗಾಯತ ಧರ್ಮ, ಸಂಸ್ಕೃತಿ ಮತ್ತು ಸಮಾಜ, ಪು-೮೫.

೧೪೩. ಭಾರತೀಯ ಹಿನ್ನೆಲೆಯಲ್ಲಿ ಕರ್ನಾಟಕದ ಧಾರ್ಮಿಕ ಸಾಮಾಜಿಕ ಜೀವನ, ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಸಂ-೩, ಪು-೩೨.

೧೪೪. E.C., Vol-V, Ak, No-40.

೧೪೫. Ep.Ind., Vol-XXI, p-9.

೧೪೬. ತಿಪ್ಪೇರುದ್ರಸ್ವಾಮಿ,ಎಚ್., ವಚನಗಳಲ್ಲಿ ವೀರಶೈವಧರ್ಮ, ಪು-೬೫.

೧೪೭. ಅದೇ, ಪು-೭೨.

೧೪೮. ರುದ್ರಪ್ಪ,ಜಿ., ವೀರಶೈವ ಧರ್ಮ, ಕರ್ನಾಟಕದ ಪರಂಪರೆ, ಸಂ-೧, ಪು-೫೩೦.

೧೪೯. ತಿಪ್ಪೇರುದ್ರಸ್ವಾಮಿ,ಎಚ್., ವಚನಗಳಲ್ಲಿ ವೀರಶೈವಧರ್ಮ, ಪು-೬೫.

೧೫೦. ಚಿದಾನಂದಮೂರ್ತಿ,ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ.೨೦೫-೨೦೬.

೧೫೧. Altekar,A.S., Education in Ancient India, p-164.

೧೫೨. Thomas, Walters, On Hu-en-Tangs Travels in India, Vol-I, p-160-61.

೧೫೩. Kadabadi,B.K., Waddaradhane-A Study, p-121.

೧೫೪. ಚಿದಾನಂದಮೂರ್ತಿ,ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ-೨೦೬.

೧೫೫. KI., Vol-II, No-16.

೧೫೬. ಕೊಪ್ಪಾ,ಎಸ್.ಕೆ., ತರ್ದವಾಡಿ ನಾಡು : ಒಂದು ಅಧ್ಯಯನ, ಪು-೧೯೬, ಅಡಿಟಿಪ್ಪಣಿ-೨೫೬.

೧೫೭. KI., Vol-II, No-25.

೧೫೮. SII., Vol-XV, No-40.

೧೫೯. KI., Vol-II, No-12.

೧೬೦. SII., Vol-XI (i), No-41.

೧೬೧. A.R.I.E., 1959-60, No-143, p-58.

೧೬೨. ಚಿದಾನಂದಮೂರ್ತಿ,ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ.೨೦೯.

೧೬೩. ಶಬ್ದವಿಹಾರ, ಪು-೫೫-೬೧.

೧೬೪. SII., Vol-VII, No-191.

೧೬೫. E.C., Vol-IV, Pp, No-133.

೧೬೬. Ibid., Vol-I, Sp, No-90.

೧೬೭. Ibid., Vol-VIII, Sr, No-184.

೧೬೮. Ibid., Sr, No-108(Bis).

೧೬೯. Ibid., Vol-IX, Sp, No-45.

೧೭೦. SII., Vol-XV, No-53.

೧೭೧. KI., Vol-I, No-27.
೧೭೨. Ibid., Vol-II, No-25.
೧೭೩. Ind.Ant., Vol-XVI, No-10.
೧೭೪. KI., Vol-V, No-25.
೧೭೫. SII., Vol-XVIII, No-142.
೧೭೬. E.C., Vol-VIII, No-317.
೧೭೭. KI., Vol-IV, No-54.
೧೭೮. Ibid., Vol-I, No-28.
೧೭೯. E.C., Vol-VII, Md, No-132.
೧೮೦. Altekar,A.S., Rashtrakutas and thair times, p-200-201.
೧೮೧. ಚಿದಾನಂದಮೂರ್ತಿ,ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ.೨೧೧.
೧೮೨. Sarkar,D.C., Successers of Shatavanas, p-93.
೧೮೩. E.C., Vol-VII, No-178.
೧೮೪. ಚಿದಾನಂದಮೂರ್ತಿ,ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ.೨೧೪.
೧೮೫. Kadabadi,B.K., Waddaradhane-A Study, p-165.
೧೮೬. SII., Vol-XI (i), No-14.
೧೮೭. M.A.R., 1927, No-151.
೧೮೮. SII., Vol-IX (i), No-175.
೧೮೯. E.C., Vol-VII, Sk, No-185.
೧೯೦. Altekar,A.S., Rashtrakutas and thair times, p-404.
೧೯೧. Moraes, The Kadamba Kula, p-299.
೧೯೨. ಚಿದಾನಂದಮೂರ್ತಿ,ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ.೨೧೬.
೧೯೩. Ep.Ind., Vol-VI, No-16 c, p-163.
೧೯೪. B.K.I. I. i., No-64.
೧೯೫. Ibid., No-88.
೧೯೬. Ind.Ant., Vol-XVI, No-11.
೧೯೭. B.K.I. I. ii., No-154.
೧೯೮. KI., Vol-II. No-16.
೧೯೯. Ibid., No-33.
೨೦೦. Ibid., No-34.
೨೦೧. E.C., Vol-XVI. Cn, No-58.
೨೦೨. E.C., Vol-XI. No-77.
೨೦೩. Agarwal, India is Known to Panini, p-82.
೨೦೪. ಚಿದಾನಂದಮೂರ್ತಿ,ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ.೨೧೮.
೨೦೫. E.C., Vol-VII. Sk, No-45.
೨೦೬. Ibid., Vol-VIII, Sr, No-70.

೨೦೭. E.C., Vol-III, Nj, No-239.
೨೦೮. SII., Vol-XVIII, No-38.
೨೦೯. Ibid., Vol-XI (i), No-39.
೨೧೦. Ibid., No-41.
೨೧೧. KI., Vol-I, No-17.
೨೧೨. Ep.Ind., Vol-XVI, No-11.
೨೧೩. KI., Vol-II, No-16.
೨೧೪. E.C., Vol-VII. No-176.
೨೧೫. ಚೆನ್ನಕ್ಕ ಎಲಿಗಾರ, ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ,ಪುಟ-೮೧.
೨೧೬. ಚಿದಾನಂದಮೂರ್ತಿ,ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ.೨೨೫.
೨೧೭. Ep.Ind., Vol-XIII, No-29, p-329.
೨೧೮. SII., Vol-IX (i), No-101.
೨೧೯. Ep.Ind., Vol-XIII, No-29, p-329.
೨೨೦. Ibid.
೨೨೧. H.A.S., No-8, Inscription B.
೨೨೨. Ep.Ind., Vol-XVI, No-11.
೨೨೩. Kundanagar,K.G., Inscriptions in Northern Karnataka and Kolhapur State, p-16.
೨೨೪. Mysore and Coorg form Inscriptions, p-77.
೨೨೫. E.C., Vol-VII, Sk, No-197.
೨೨೬. SII., Vol-XX, No-154.
೨೨೭. E.C., Vol-III, No-185.
೨೨೮. SII., Vol-XX, No-93.
೨೨೯. ನಾಗೇಗೌಡ,ಎಚ್,ಎಲ್.,(ಸಂ) ಪ್ರವಾಸಿ ಕಂಡ ಇಂಡಿಯಾ, ಸಂಪುಟ-೧, ಪುಟ-೩೫೯.
೨೩೦. E.C., Vol-III, No-185.
೨೩೧. ಚಿದಾನಂದಮೂರ್ತಿ,ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ.೨೨೯-೩೦,
೨೩೨. Ep.Ind., Vol-XIII, No-29, p-329.
೨೩೩. B.K.I. I. ii., No-159.
೨೩೪. Ep.Ind., XIII, p-41.
೨೩೫. B.K.I. I. ii., No-171.
೨೩೬. SII., Vol-IX (i), No-74.
೨೩೭. ಚಿದಾನಂದಮೂರ್ತಿ,ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ.೨೨೯.
೨೩೮. ಅದೇ, ಪುಟ-೨೩೧.
೨೩೯. Mukarji,R.K., Ancient Indian Education, p-213.
೨೪೦. Narasimhachar,D.L., Waddaradhane, p-23.
೨೪೧. Ibid.
೨೪೨. ಚೆನ್ನಕ್ಕ ಎಲಿಗಾರ, ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ,ಪುಟ-೮೭.
೨೪೩. E.C., Vol-X, Mb, No-38.

೨೪೪. E.C., Vol-XI, Cd, No-74.
೨೪೫. SII., Vol-XX, No-49.
೨೪೬. ಶಾಸನ ಪದ್ಯಮಂಜರಿ, ನಂ-೪೨, ಮಂಜರಾಬಾದ.
೨೪೭. E.C., Vol-II, Sb, No-128.
೨೪೮. Ibid., Vol-VII, Cn, No-39.
೨೪೯. Ibid., Vol-XII, Si, No-23.
೨೫೦. Ibid., Ci, No-14.
೨೫೧. Ibid., Vol-VII, Sh, No-97.
೨೫೨. Ibid., Vol-X, Bp, No-65.
೨೫೩. ಚೆನ್ನಕ್ಕ ಎಲಿಗಾರ, ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ,ಪುಟ-೮೭.
೨೫೪. SII., Vol-XV, No-531.
೨೫೫. KI., Vol-IV, No-34.

## ಅಧ್ಯಾಯ-೮

# ಆರ್ಥಿಕ ಅಭಿವೃದ್ಧಿಗೆ ಸಾಮಂತ ಅರಸುಮನೆತನಗಳ ಕೊಡುಗೆ

ಸಮಾಜದ ಮಹತ್ವದ ಭಾಗವಾದ ಅರ್ಥವ್ಯವಸ್ಥೆ ತನ್ನ ವಿಶಾಲವ್ಯಾಪ್ತಿ ಮತ್ತು ವೈವಿಧ್ಯತೆಯಿಂದಾಗಿ ಪ್ರಮುಖವಾದ ಸ್ಥಾನವನ್ನು ಪಡೆಯುತ್ತದೆ. ಒಂದು ನಾಡಿನ ಇಲ್ಲವೇ ಒಂದು ಕಾಲದ ಅರ್ಥವ್ಯವಸ್ಥೆಯಲ್ಲಿ ಅಲ್ಲಿನ ನೈಸರ್ಗಿಕ ಸಂಪನ್ಮೂಲಗಳೊಂದಿಗೆ ಅವನ್ನೆಲ್ಲ ಸದುಪಯೋಗಪಡಿಸಿಕೊಳ್ಳುವ ಅಲ್ಲಿನ ಜನರ ದುಡಿಮೆಯ ಪರಿಶ್ರಮವೂ ಗಣನೀಯವೆನಿಸುತ್ತದೆ. ಇದರಿಂದಾಗಿ ಆರ್ಥಿಕಾಭಿವೃದ್ಧಿ ಆ ನಾಡಿನ ನೈಸರ್ಗಿಕ ಸಂಪನ್ಮೂಲಗಳ ಪ್ರಮಾಣ, ಅವುಗಳ ಗುಣಮಟ್ಟ ಹಾಗೂ ಅವುಗಳನ್ನು ಬಳಸಿಕೊಳ್ಳುವ ಸಾಮರ್ಥ್ಯಗಳಿಗನುಗುಣವಾಗಿ ನಿರ್ಧರಿತವಾಗುತ್ತದೆ. ಸಾಮಂತ ಅರಸರುಗಳ ಕಾಲದ ಶಾಸನಗಳಲ್ಲಿ ಪುರವರ್ಣನೆಯ ಬಗೆಗಿನ ಉಲ್ಲೇಖಗಳು ಉತ್ಪ್ರೇಕ್ಷೆಯೆನಿಸಿದರೂ ಅವು ಅಂದಿನ ನೈಸರ್ಗಿಕ ಸಂಪತ್ತನ್ನು ಪರಿಚಯಿಸುತ್ತವೆ. ಅರ್ಥವ್ಯವಸ್ಥೆಯಲ್ಲಿ ಭೂಮಿಗೆ ಪ್ರಥಮ ಆದ್ಯತೆಯನ್ನು ನೀಡಲಾಗಿತ್ತು. ಅದು ಜನರಿಗೆ ಅಮೂಲ್ಯವಾದ ವಸ್ತುವಾದುದರಿಂದ ಅದನ್ನು ಹೊರಗಿನವರಿಗೆ ಕೊಡುವದು ಇಷ್ಟವಾಗುತ್ತಿರಲಿಲ್ಲ. ಕ್ರಿ.ಶ.೯೬೭ರ ಕಾವನೂರಿನ ಶಾಸನದಲ್ಲಿ ಅಂದಿನ ಧರ್ಮಾರ್ಥವಾದ ಭೂಮಿಗಳನ್ನು ಹಿಡುವಳಿಗೆ ಹಿಡಿದವರು ತಮ್ಮ ಸಮುದಾಯದ ವರ್ಗದ ಜನರಲ್ಲೇ ಭೂಮಿಯನ್ನು ಮಾರಬಹುದು ಇಲ್ಲವೆ ಭೋಗ್ಯಕ್ಕೆ ಹಾಕಬಹುದೆಂಬ ವಿವರ ಕಂಡುಬರುತ್ತದೆ[1].

## ಭೂ ಮಾಲಿಕತ್ವ:

ಭೂಮಿಯು ಮಾನವನ ಸಂಪತ್ತಿನ ಮೂಲವಾದುದರಿಂದ ಅವನ ಬಹುಪಾಲು ಆರ್ಥಿಕ ಜೀವನವು ಭೂಮಿಯನ್ನು ಅವಲಂಬಿಸಿತ್ತು. ಅವನ ದುಡಿಮೆ, ಉತ್ಪಾದನೆ, ಅಭಿವೃದ್ಧಿಗಳು ಅವನು ಹೊಂದಿರುವ ಭೂ ಮಾಲಿಕತ್ವವನ್ನು ಅವಲಂಬಿಸಿತ್ತು. ಅಂದು ಕುಟುಂಬದ ಪ್ರತಿಯೊಂದು ಬೇಕು-ಬೇಡಗಳನ್ನು ಪೂರೈಸುವ ಸಾಧನ ಭೂಮಿಯಾಗಿದ್ದರಿಂದ, ಅದರ ಮೇಲೆ ತಮ್ಮ ಮಾಲಿಕತ್ವ ಹೊಂದುವದು ಸಮಾಜದಲ್ಲಿ ಪ್ರತಿಯೊಬ್ಬನಿಗೂ ಗೌರವವನ್ನು ತಂದುಕೊಡುವ ಮಾಧ್ಯಮವಾಗಿತ್ತು. ಪ್ರಾಚೀನ ಕಾಲದಿಂದಲೂ ಭೂಮಾಲಿಕತ್ವದ ಬಗ್ಗೆ ವಿದ್ವಾಂಸರಲ್ಲಿ ಅನೇಕ ಭಿನ್ನಾಭಿಪ್ರಾಯಗಳಿರುವದನ್ನು ಕಾಣುತ್ತೇವೆ. ಈ ಸಮಸ್ಯೆ ಇಂದಿಗೂ ಮುಂದುವರೆದಿದೆ. ಎನ್ನಬಹುದು. ಸ್ಮಿತ್, ಹಾಪ್‌ಕಿನ್ಸ್ ಮುಂತಾದವರು ರಾಜನೇ ಭೂಮಿಗೆ ನಿಜವಾದ ಒಡೆಯನೆಂದೂ, ಕಂದಾಯವೆಂಬುದು ರೈತನು ಅದಕ್ಕೆ ಪ್ರತಿಯಾಗಿ ಕೊಡುವ ಬಾಡಿಗೆಯೆಂದು ಅಭಿಪ್ರಾಯಪಟ್ಟರು. ಈ ಅಭಿಪ್ರಾಯ ಒಪ್ಪದ ಜಯಸ್ವಾಲ ಹಾಗೂ ಇನ್ನುಳಿದ ವಿದ್ವಾಂಸರು ಭೂಮಿಗೆ ನಿಜವಾದ ಒಡೆಯ ರೈತನೇ ಹೊರತು ರಾಜನಲ್ಲವೆಂದೂ, ರೈತನು ಕೊಡುವ ಕಂದಾಯವು ರಾಜನು ದೇಶವನ್ನು ರಕ್ಷಿಸುವದಕ್ಕಾಗಿ ಕೊಡುವ ಹಣವೇ ಹೊರತು ಮತ್ತೇನೂ ಅಲ್ಲವೆಂದು ವಾದಿಸಿದರು[2].

ಶಾಸನಗಳಲ್ಲಿ ಹೆಚ್ಚಿನವು ದಾನ ಶಾಸನಗಳೇ ಆಗಿದ್ದು. ಸಾಮಂತರಸರು ಹಾಗೂ ಅವರ ರಾಣಿಯರು, ಅವರ ಕೈಕೆಳಗಿನ ಅಧಿಕಾರಿವರ್ಗ, ವರ್ತಕರು, ಸಾಮಾನ್ಯರು, ಧರ್ಮಗುರುಗಳು ಹೀಗೆ ಸಮಾಜದ ಎಲ್ಲ ವರ್ಗದ ಜನರು ದಾನಿಗಳಾಗಿ ನಿಂತಿದ್ದಾರೆ. ಇವರು ದಾನವಾಗಿತ್ತ ಭೂಮಿಯ ವಿವರಗಳನ್ನು ಪರಿಶೀಲಿಸಿದರೆ, ಇವರಲ್ಲಿ ಹೆಚ್ಚಿನವರು ಸ್ವಂತ ಭೂಮಾಲಿಕತ್ವ ಹೊಂದಿರುವಂತೆ ಕಂಡುಬರುತ್ತದೆ. ಅಲ್ಲದೇ ಅವರು ಅದನ್ನು ದಾನವಾಗಿಯೂ ನೀಡುತ್ತಿದ್ದುದೂ ಉಂಟು. ಕೆಲವರು ತಮ್ಮಲ್ಲಿ ಭೂಮಿ ಇಲ್ಲದಿದ್ದಾಗ ಕೊಂಡು ದಾನ ಮಾಡಿರುವದುಂಟು. ಪಸುಂಡಿ ಗ್ರಾಮದಲ್ಲಿ ರಪುರ ನಾಗಯ್ಯ ದೇಗುಲವನ್ನು  ಮಾಡಿಸುವದರ ಜೊತೆಗೆ ಅದರ ನಿತ್ಯಕಾರ್ಯಕ್ಕೆ ೨೦ ಮತ್ತರ ನಾಲ್ಕು ಕೆಯ್ಯ ದೇವಮಾನವಾಗಿ ಬಿಟ್ಟಿದ್ದನ್ನು ಆಲ್ಲಿನ ಕ್ರಿ.ಶ. ೯೨೫ರ ಶಾಸನ ಹೇಳಿದೆ[೩]. ಅಲ್ಲದೇ ಕ್ರಿ.ಶ. ೧೨೦೫ರ ಅಳುಪ ಕುಲಶೇಖರನ ಕಾಲದ ಶಾಸನವೊಂದರಲ್ಲಿ ಮೂವರು ಬ್ರಾಹ್ಮಣರು ಸೇರಿ ತಮ್ಮ ಬ್ರಹ್ಮದಾಯದ ಭೂಮಿಯಲ್ಲಿ ೧೧ ಮೂಡೆ ಬಿತ್ತುವ ಭೂಮಿಯನ್ನು ಬಿದಿರೆಯ ದೇವಿಗೆ ದಾನ ನೀಡಿದ ವಿವರವಿದೆ[೪]. ಹೀಗೆ ದಾನವಾಗಿ ನೀಡುತ್ತಿದ್ದ ಭೂಮಿಯ ಮಾಲಿಕತ್ವವು ಯಾರಿಗೆ ಸೇರಬೇಕೆಂಬುದು ಕುತೂಹಲದ ವಿಷಯವೇ ಆಗಿದೆ. ಇದು ದಾನವನ್ನು ಸ್ವೀಕರಿಸಿದ ವ್ಯಕ್ತಿ ಮತ್ತು ಸಂಸ್ಥೆಗಳಿಗನುಸಾರವಾಗಿ ವ್ಯಕ್ತಿಗತ, ಸಂಯುಕ್ತ ಮತ್ತು ಸಾಮೂಹಿಕ ಎಂದು ಮೂರು ವಿಧವಾಗಿರುವದು ಕಂಡುಬರುತ್ತದೆ[೫].

**ವ್ಯಕ್ತಿಗತ:**

ವಿವಿಧ ವೃತ್ತಿ ಕೆಲಸ ಕಾರ್ಯಗಳಿಗಾಗಿ ಒಬ್ಬ ವ್ಯಕ್ತಿಗೆ ಬಿಡುವ ಭೂದಾನ, ದತ್ತಿ ಅವನ ಸ್ವಂತ ಮಾಲೀಕತ್ವಕ್ಕೆ ಸೇರುತ್ತಿತ್ತು. ಗಂಗ ಶ್ರೀಪುರಷನ ಕ್ರಿ.ಶ. ೭೫೪ರ ಶಾಸನವೊಂದು ತಿಳಿಸುವಂತೆ ದಾಳಿಸಿಂದರನೆಂಬುವನು ದೇವದತ್ತನಿಗೆ ೪ ಖಂಡುಗ ಬೆದೆಮಣ್ಣನ್ನು(ಭೂಮಿ) ದತ್ತಿಯಾಗಿ ಕೊಟ್ಟನು[೬]. ಗಂಗರ ಒಂದನೆಯ ರಾಚಮಲ್ಲನು ಸಾಲಿಗ್ರಾಮದ ತಾಮ್ರಶಾಸನವನ್ನು ರಚಿಸಿದ ವಿಶ್ವಕರ್ಮಾಚಾರ್ಯನಿಗೆ ೪ ಖಂಡುಗ ಗದ್ದೆಯನ್ನು ಹಾಗೂ ೨ ಖಂಡುಗ ಕೊಂಗು ಭೂಮಿಯನ್ನು ದತ್ತಿಯಾಗಿತ್ತನು[೭]. ಕ್ರಿ.ಶ. ೯೩೧ರ ಶಾಸನವೊಂದರಲ್ಲಿ ಕರುಳ ಕಾಮಶೆಟ್ಟಿಯು ಕಾಮೇಶ್ವರದೇವರ ಸೇವೆಯಲ್ಲಿ ಕಾಸಿಗಂಗೆ ಎರೆಮತ್ತರು-೬, ಕಿಸುಕಾಡು ಮತ್ತರ-೬, ಕುಂಡೋಜನಿಗೆ ಪನ್ನಿಮ್ಮನತ್ತಪರೆಕಾಯ ಪನ್ನುಮ್ಮತ್ತ, ಹಾಡುವವನಿಗೆ ಕಿಸುಕಾಡು ಆರುಮತ್ತರ ಈಶಾನ್ಯಶಿವಂಗೆ ಎರೆಪನ್ನಿಮತ್ತ, ಜೋತಿಷ್ಯ ಚಾವುಂಡಯ್ಯನಿಗೆ ನಾಲ್ಕುಮತ್ತರ, ತೊಂಟಿಗಂಗೆ (ಕೆಲಸಗಾರನಿಗೆ) ನಾಲ್ಕು ಮತ್ತರ ಹೀಗೆ ಅಲ್ಲಿನ ಸೇವಕರಿಗೆ ದಾನ ಬಿಟ್ಟಿರುವನು[೮]. ಮಹಾಮಂಡಳೇಶ್ವರ ಕದಂಬ ಶಾಂತಿವರ್ಮನ ಕ್ರಿ.ಶ. ೯೭೧ರ ಶಾಸನ ಅವನು ಕನ್ನಯ್ಯನೆಂಬುವನಿಗೆ ೨ ಮತ್ತರ ಕೆಯ್ಯಿಯನ್ನು ಬಿಟ್ಟದ್ದನ್ನು ಉಲ್ಲೇಖಿಸಿದೆ[೯]. ಬಯಲ್ನಾಡ ಕದಂಬ ಕುಲದ ಚಾಗಿಯ ಆಳ್ವಿಕೆಯಲ್ಲಿ, ಮಣಲಿಯ ಸತ್ತಿಯರಮಣನು ಅವನಿಂದ ೨೦೦ ಭತ್ತದ ಮಣ್ಣನ್ನು(ಭೂಮಿ) ಪಡೆದನೆಂದು ಕ್ರಿ.ಶ. ೧೦ನೆಯ ಶತಮಾನದ ಶಾಸನ ತಿಳಿಸುತ್ತದೆ[೧೦]. ಮಹಾಸಾಮಂತ ಚಾಲುಕ್ಯವಂಶದ ಗೊಗ್ಗಿಯ ಕ್ರಿ.ಶ. ೧೦ನೆಯ ಶತಮಾನದ ಶಾಸನವೊಂದರಿಂದ ಅವನ ಮನೆವಗತಿ ಎರೆಬೀರಯ್ಯನು

ಅವನಿಂದ ೨ ಖಂಡುಗ ನೀರ್ಮಣ್ಣನ್ನು ಪಡೆದನು[೧೧]. ಕ್ರಿ.ಶ. ೧೧ನೆಯ ಶತಮಾನದ ಶಾಸನವೊಂದು ಕೊಂಗಾಳ್ವ ಮಂಗಲದುದ್ದನ ಆಳ್ವಿಕೆಯಲ್ಲಿ ಮಾಳಗಾವುಂಡನು ವಳಜಕವ್ವನಿಗೆ೧೫ ಕೊಳಗ ಬೆದಲೆಯನ್ನು ಬಿಟ್ಟನೆಂದು ತಿಳಿಸುತ್ತದೆ[೧೨]. ಹೀಗೆ ಒಬ್ಬ ವ್ಯಕ್ತಿಗೆ ದಾನವನ್ನು ನೀಡಿದ್ದನ್ನು ನೋಡಿದರೆ, ಈ ಭೂಮಿಯು ಅವನಿಗೆ ವ್ಯಯಕ್ತಿಕವಾಗಿ ಸೇರಿದ್ದಾಗಿರುತ್ತಿತ್ತು. ಅಲ್ಲದೇ ಅವರು ವಂಶಪಾರಂಪರ್ಯವಾಗಿ ಅದನ್ನು ಅನುಭವಿಸುತ್ತಿದ್ದರೆಂದು ತಿಳಿದುಬರುತ್ತದೆ.

**ಸಂಯುಕ್ತ:**

ಅಗ್ರಹಾರದ ಮಹಾಜನರಿಗೆ ಬಿಡುವ ದಾನದತ್ತಿಗಳ ಮಾಲಿಕತ್ವವು ಸಂಯುಕ್ತವಾಗಿ ಅಲ್ಲಿಯ ಮಹಾಜನರಿಗೆಲ್ಲಾ ಅನ್ವಯಿಸುತ್ತಿತ್ತು. ಕ್ರಿ.ಶ. ೯೦೩ರ ಶಾಸನದಿಂದ ಗಂಗ ದುರ್ವಿನೀತನ ದಂಡನಾಯಕ ದಾಮಪ್ಪೈಯನು ಮಿ . . . ತಂಡಿಯ ಮಹಾಜನಗಳಿಗೆ ಭೂಮಿಯನ್ನು ದಾನವಾಗಿ ನೀಡಿದ ವಿಷಯ ತಿಳಿಯುತ್ತದೆ[೧೩]. ಸಾಮಂತ ಚೆಲ್ಲಕೇತನ ಧೋರನು ಕ್ರಿ.ಶ. ೯೧೮ರ ದಂಡಾಪೂರ ಶಾಸನ ತಿಳಿಸುವಂತೆ ೨೦೦ ಮಹಾಜನಗಳಿಗೆ ೧೨ ಮತ್ತರು ಕೆಯ್ಯಿಯನ್ನು ದಾನವಾಗಿ ನೀಡಿದನು[೧೪]. ಕದಂಬ ಮಹಾಮಂಡಳೇಶ್ವರ ದಯಾಸಿಂಹನ ಮಡದಿ ಮೇಚಲದೇವಿ ಕುಂಬಾರಹಳ್ಳಿಯನ್ನು ಐವರು ಸುಬ್ರಾಹ್ಮಣರಿಗೆ ದತ್ತಿಯಾಗಿ ನೀಡಿದಳೆಂದು ಕ್ರಿ.ಶ.೧೦೯೫ರ ಶಾಸನ ಉಲ್ಲೇಖಿಸಿದೆ[೧೫]. ಕ್ರಿ.ಶ. ೧೧೪೪ರ ಮಹಾಮಂಡಳೇಶ್ವರ ಸಿಂದ ಪೆರ್ಮಾಡಿದೇವನ ಶಾಸನವೊಂದು ತಿಳಿಸುವಂತೆ ಮೊಲ್ಲೆಯ ಬಮ್ಮಣ್ಣನೆಂಬುವನು ಉಮ್ಮಚ್ಚಿಗೆಯ ೧೦೪ ಮಹಾಜನರಿಗೆ ೧೨ ಮತ್ತರು ಭೂಮಿಯನ್ನು ದತ್ತಿಯಾಗಿತ್ತನು[೧೬]. ಮಹಾಸಾಮಂತ ಮಾಚೀಯನಾಯಕನು ಕೆರೆದೇಗುಲ ನಿರ್ಮಿಸಿ, ಬ್ರಾಹ್ಮಣರಿಗೆ ಒಂದು ಗದ್ದೆಯನ್ನು ಹಾಗೂ ೧೦ ಕೊಳಗ ಬೆದ್ದಲನ್ನು ದತ್ತಿಯಾಗಿ ಬಿಟ್ಟ ವಿಷಯ ಕೃಷ್ಣರಾಜಪೇಟೆ ತಾಲೂಕಿನ ಹುಬ್ಬನಹಳ್ಳಿಯ ಶಾಸನವೊಂದರಲ್ಲಿದೆ[೧೭]. ಮಹಾಮಂಡಳೇಶ್ವರ ಶಿಲಹಾರ ಮನ್ನೆಯ ಕುಪ್ಪರಸ ಕವುಟಗೆಯ ೮ ಬ್ರಾಹ್ಮಣರಿಗೆ ೫೦ ಮತ್ತರು ಭೂಮಿಯನ್ನು ದತ್ತಿಯಾಗಿ ಕೊಟ್ಟಿರುವ ವಿಷಯ ಕ್ರಿ.ಶ. ೧೨೧೧ರ ಅಕ್ಕಲಕೋಟ ಶಾಸನದಲ್ಲಿದೆ[೧೮].

**ಸಾಮೂಹಿಕ:**

ಸಾರ್ವಜನಿಕಕಾರ್ಯ ಚಟುವಟಿಕೆಯ ಕೇಂದ್ರಗಳಾದ ದೇವಾಲಯ, ಕೆರೆ, ಭಾವಿ, ಸತ್ರ, ಅರವಟ್ಟಿಗೆ, ಶಾಲೆಗಳಿಗೆ ಬಿಟ್ಟ ದಾನ-ದತ್ತಿಗಳ ಮಾಲಿಕತ್ವ ಹಾಗೂ ಮೇಲ್ವಿಚಾರಣೆ ಆ ಊರ ಪ್ರಭುಗಳು, ಮಹಾಜನರು, ನಾಡ ಅಧಿಕಾರಿಗಳು, ಸಂಘ, ಶ್ರೇಣಿ ಇಲ್ಲವೇ ಸಾಮೂಹಿಕವಾಗಿ ಎಲ್ಲರಿಗೂ ಸಂಬಂಧಿಸಿತ್ತು. ಇಂತಹ ಹಲವಾರು ಉದಾಹರಣೆಗಳು ಶಾಸನಗಳಲ್ಲಿ ದೊರೆಯುತ್ತವೆ. ಸಾಮಂತ ಕುಪ್ಪೆಯರಸ ಪುರಿಗೆರೆ ನಾಡನ್ನಾಳುತ್ತಿದ್ದಾಗ, ಆದಿತ್ಯ ಭಟಾರ ದೇವರಿಗೆ ೮೫ ಮತ್ತರು ಭೂಮಿಯನ್ನು ಮತ್ತು ತೋಟವೊಂದನ್ನು ದಾನವಾಗಿ ಅಲ್ಲಿನ ಅಧಿಕಾರಿಗಳ ಕೈಯಲ್ಲಿ ದಾನವಾಗಿ ನೀಡಿದ್ದನ್ನು ಕ್ರಿ.ಶ. ೮೭೫ರ ಶಾಸನ ತಿಳಿಸಿದೆ[೧೯]. ಕ್ರಿ.ಶ. ೮೭೪-೭೫ರ ಶಾಸನವೊಂದು ತಿಳಿಸುವಂತೆ ಮಹಾಸಾಮಂತ ಚೆಲ್ಲಕೇತನ ಬಂಕೇಯನ ಆಳ್ವಿಕೆಯಲ್ಲಿ ಅವನ ಮಗ ಕುಂದಟೆ ಹಾಗೂ ರಾಪ ಎಂಬುವರು ಸೇರಿ ಕುಪ್ಪಣ್ಣನ ದೇಗುಲದ

ಮಹಾದೇವನಿಗೆ ೧ ಮತ್ತರು ತೋಟ ಹಾಗು ೫ ಮತ್ತರು ಕೆಯ್ಯನ್ನು ದಾನವಾಗಿ ನೀಡಿದರು. ಇದನ್ನು ಅಲ್ಲಿಯ ಸ್ಥಾನಾಚಾರ್ಯರು ರಕ್ಷಿಸುವರೆಂದು ತಿಳಿದುಬರುತ್ತದೆ[೨೦]. ಮಹಾಸಾಮಂತ ರಟ್ಟ ಕಾರ್ತವೀರ್ಯ ನೇಸರಿಗೆ ದೇವಾಲಯಕ್ಕೆ ೮೦೦ ಕಮ್ಮ ಭೂಮಿಯನ್ನು ದಾನ ನೀಡಿದಾಗ ಅದನ್ನು ಆ ಊರಿನ ಆರು ಜನ ಮುಖ್ಯಸ್ಥರು ಸ್ವೀಕರಿಸಿರುವದನ್ನು ಕಾಣುತ್ತೇವೆ[೨೧]. ಕ್ರಿ.ಶ. ೧೦೭೦ರ ಕೊಂಗಾಳ್ವ ರಾಜೇಂದ್ರ ಪೃಥ್ವಿಕೊಂಗಾಳ್ವನ ಕಾಲದ ಶಾಸನವೊಂದು ೫೦ ಖಂಡುಗ ಭೂಮಿಯನ್ನು ಸಿದ್ದೇಶ್ವರ ದೇವರಿಗೆ ದಾನವಾಗಿ ನೀಡಲಾಯಿತೆಂದು ತಿಳಿಸುತ್ತದೆಯಲ್ಲದೇ, ಅಲ್ಲಿನ ಕೆರೆಯ ನಿರ್ವಹಣೆಗಾಗಿ ೪೦ ಗದ್ಯಾಣವನ್ನು ಬಿಡಲಾಗಿದೆ[೨೨]. ಮಹಾಮಂಡಳೇಶ್ವರ ಕದಂಬ ಜಯಕೇಶಿ ಸ್ವಯಂಭೂ ಕಲಿದೇವರಿಗೆ ಹಿರಿಯಕೋಲ ೬ ಮತ್ತರು ಭೂಮಿಯನ್ನು ದಾನವಾಗಿ ನೀಡಿದಾಗ ಅದನ್ನು ಅಲ್ಲಿಯ ಆ ಊರ ಶೇಷಜನಂಗಳು ಪಡೆದುಕೊಂಡರು[೨೩]. ಇಲ್ಲಿ ಈ ಭೂಮಿಯ ನಿರ್ವಹಣೆಯು ಆ ಗ್ರಾಮದ ಜನತೆಗೆ ಸೇರಿದ್ದಾಗಿತ್ತು.

**ಭೂ ಪ್ರಕಾರ:**

ಪ್ರಾಚೀನ ಹಾಗೂ ಮಧ್ಯಕಾಲೀನ ಸಮಾಜದ ಜನರು ತಮ್ಮ ಜೀವನ ನಿರ್ವಹಣೆಗಾಗಿ ಮತ್ತು ಆರ್ಥಿಕ ಭದ್ರತೆಗಾಗಿ ನಿಸರ್ಗದತ್ತವಾದ ಭೂಮಿಯನ್ನು ಆಶ್ರಯಿಸಿರುವದು ಸ್ಪಷ್ಟವಾಗುತ್ತದೆ. ಪ್ರಕೃತಿದತ್ತವಾದ ಮಣ್ಣು, ನೀರು, ಖನಿಜ, ಅರಣ್ಯಗಳು ಭೂಮಿಯಲ್ಲಿ ಸಿಗುವದರಿಂದ ಪ್ರಾಚೀನ ಕಾಲದಿಂದಲೂ ಮಾನವ ಭೂಮಿಯನ್ನು ತನ್ನ ಬೇಕು-ಬೇಡಗಳನ್ನು ಈಡೇರಿಸುವ ಸಾಧನವೆಂದು ತಿಳಿದು ಅದನ್ನೇ ನೆಚ್ಚಿಕೊಂಡು ಬಂದಿದ್ದಾನೆ. ಅಂತಹ ಸಂಪತ್ತಾದ ಭೂಮಿ ಹಲವು ಬಗೆಯದಾಗಿ ಕಂಡುಬರುತ್ತಿದ್ದು, ಈ ಕಾಲದ ಶಾಸನಗಳು ಸಹ ಅದನ್ನು ವಿವಿಧ ಹೆಸರಿನಿಂದ ಕರೆಯುತ್ತವೆ. ಶಾಸನಗಳು ಕರೆಯುವ ಭೂಮಿಯ ಪ್ರಕಾರಗಳನ್ನು ಸ್ಥೂಲವಾಗಿ ಅ)ವ್ಯವಸಾಯ ಯೋಗ್ಯ ಭೂಮಿ ಹಾಗೂ ಬ)ವ್ಯವಸಾಯ ಯೋಗ್ಯವಲ್ಲದ ಭೂಮಿ ಎಂದರೆ, ಮಳೆಯನ್ನವಲಂಬಿಸಿ ಸಾಗುವಳಿಗೊಳಪಟ್ಟ ಭೂಮಿಯನ್ನು ೧)ದೇವಮಾತೃಕವೆಂದು, ನದಿ, ಕೆರೆ, ಭಾವಿ, ಮುಂತಾದವುಗಳನ್ನು ಅವಲಂಬಿಸಿದ ಭೂಮಿಯನ್ನು ೨)ನದಿಮಾತೃಕ ಭೂಮಿಯೆಂದು ವಿಂಗಡಿಸಲಾಗಿದೆ[೨೪].

ಶಾಸನಗಳು ಭೂಮಿಯನ್ನು ಕಮ್ಮ, ಕೆಯ್ಯಿ, ಪೊಲ, ಹೊಲ[೨೫], ಬೆದೆಮಣ್ಣು[೨೬], ಬೆದ್ದಲ್[೨೭]ಗಳೆಂದು ಕರೆದಿವೆ. ಇದು ದೇವಮಾತೃಕ ಭೂಮಿಗೆ ಸಂಬಂಧಿಸಿದ್ದು, ಮಳೆಯ ನೀರನ್ನು ತಡೆಹಿಡಿದು ನೀರಾವರಿಗೊಳಪಡಿಸಿದ ಭೂಮಿಯನ್ನು ಶಾಸನಗಳು ಗದ್ದೆ[೨೮], ತೋಟ, ಅನ್ನಗದ್ದೆ[೨೯], ಕದಿಮಣ್ಣು[೩೦], ನೀರ್ಮಣ್ಣು, ಮಡುವಿನಮಣ್ಣು[೩೧], ಹಸಿಭೂಮಿ[೩೨]ಯೆಂದು ಮುಂತಾಗಿ ಕರೆದಿದ್ದು, ಇದು ನದಿ ಮಾತೃಕ ಭೂಮಿಗೆ ಸಂಬಂಧಿಸಿದೆ.

ಭೂಮಿಯ ಮಣ್ಣಿನ ಬಣ್ಣಕ್ಕೆ ಅನುಗುಣವಾಗಿ ಅದನ್ನು ಕರಿಯಮಣ್ಣಿನ ಭೂಮಿ, ಕೆಂಪು ಮಣ್ಣಿನ ಭೂಮಿಯೆಂದು ಕರೆದಿರುವದನ್ನು ಶಾಸನಗಳಲ್ಲಿ ಕಾಣಬಹುದಾಗಿದೆ. ಕ್ರಿ.ಶ.೯೩೧ ರ ಶಾಸನವೊಂದರಲ್ಲಿ ಕುರುಳ ಕಾಮಶೆಟ್ಟಿಯು ಕಾಮೇಶ್ವರ ದೇವಾಲಯದಲ್ಲಿ ಸೇವೆಗೈಯುತ್ತಿದ್ದ ಸೇವಕರಿಗೆ ಭೂಮಿಯನ್ನು ನೀಡುವಾಗ ಎರೆಮತ್ತರ,

ಕಿಸುಕಾಡು ಆರುಮತ್ತರ ನೀಡಿರುವನೆಂದು ಹೆಳಿರುವದನ್ನು ಗಮನಿಸಬಹುದಾಗಿದೆ[೩೩]. ಅಲ್ಲದೇ ಕರಿಯನೆಲ್[೩೪], ಎರೆಕೆಯ್ಯಿ[೩೫], ಎರೆಗದ್ದೆ[೩೬], ಕೆಂನೆಲ್[೩೭] ಎಂಬ ಉಲ್ಲೇಖಗಳು ಬರುತ್ತವೆ. ಇಲ್ಲಿ ಎರೆ ಎಂದರೆ ಕಪ್ಪು ಮಣ್ಣಿನ ಭೂಮಿಯಾದರೆ, ಕಿಸುಕಾಡು ಎಂದರೆ ಕೆಂಪು ಮಣ್ಣಿನ ಭೂಮಿಯಾಗಿದೆ. ಇದಲ್ಲದೇ ಕೆಲ ಶಾಸನಗಳಲ್ಲಿ ಭತ್ತದಮಣ್ಣು[೩೮], ಆಡನಮಣ್ಣು[೩೯], ಕದಿಮಣ್ಣು[೪೦], ನೀರ್ಮಣ್ಣು, ಮಡುವಿನಮಣ್ಣು[೪೧]ಗಳೆಂದು ಮುಂತಾಗಿ ಹೇಳಲಾಗಿದೆ. ಈ ಮೇಲಿನ ವಿವಿಧ ಪ್ರಕಾರದ ಭೂಮಿಯನ್ನು ಕಂಡಾಗ, ನೀರಿನ ವ್ಯವಸ್ಥೆಯನ್ನು ಮಾಡಿಕೊಂಡು ತೋಟವನ್ನು ಮಾಡಿಕೊಂಡಿರುವ ವಿಷಯ ತಿಳಿಯುತ್ತದೆ.

## ಒಕ್ಕಲುತನ:

ಒಕ್ಕಲುತನವು ಇತಿಹಾಸ ಪೂರ್ವಕಾಲದಿಂದಲೂ ಬೆಳೆದು ಬಂದು ಅಂದಿನ ಅರ್ಥವ್ಯವಸ್ಥೆಯ ಜೀವನಾಡಿಯಾಗಿತ್ತು. ಬಹು ಜನರ ಜೀವನೋಪಾಯದ ಮುಖ್ಯ ಕಸುಬಾದ ಕೃಷಿಯು ವ್ಯಾಪಾರ, ಉದ್ಯೋಗ, ಕೈಗಾರಿಕೆಗಳನ್ನು ಬಳಸಿಕೊಂಡು ಅವುಗಳಿಗೆ ಹಾಗೂ ಅವುಗಳ ಆದಾಯಕ್ಕೆ ಕೇಂದ್ರಬಿಂದುವಾಗಿತ್ತು. ಕೃಷಿಕರು ಬಡವರಾದರೆ, ಅವರಿಗೆ ಕೃಷಿ ಉಪಕರಣ, ಎತ್ತು, ಬಿತ್ತನೆ, ಬೇಸಾಯದ ಖರ್ಚಿಗೆ ರಾಜರುಗಳು ಹಣವನ್ನು ಕೊಡುವದರೊಂದಿಗೆ ಒಕ್ಕಲುತನವನ್ನು ದಂಡ, ವಿಷ್ಟಿ, ತೆರಿಗೆಗಳಿಂದ ನಶಿಸದಂತೆ ರಕ್ಷಿಸಬೇಕೆಂದು ಕೌಟಿಲ್ಯನು ಹೇಳುತ್ತಾನೆ[೪೨]. ವಡ್ಡಾರಾಧನೆಯಲ್ಲಿ ಒಕ್ಕಲಿಗರ ಕುರಿತ ಸುಂದರವಾದ ಚಿತ್ರಣ ಕಂಡುಬರುತ್ತದೆ. ಊಟವನ್ನು ತರುವ ತನ್ನ ಹೆಂಡತಿಗೆ ತಾನು ಬೇರೆ ಹೊಲಕ್ಕೆ ಹೋದ ವಿಷಯವನ್ನು ತಿಳಿಸಲಿಕ್ಕೆ "ಅಜ್ಜ ನನ್ನ ಹೆಂಡತಿ ನನಗೆ ಊಟವನ್ನು ತರುತ್ತಾಳೆ, ಅವಳು ಇಲ್ಲಿಗೆ ಬಂದರೆ ನಾನು ಪಶ್ಚಿಮದ ಹೊಲಕ್ಕೆ ಹೋಗಿದ್ದೇನೆ ಎಂದು ಹೇಳಿ ಅಲ್ಲಿಗೆ ಕಳುಹಿಸು"[೪೩] ಎಂದು ಹೇಳಿದ್ದನ್ನು ಕಾಣಬಹುದು. ಊಳುವ ಎತ್ತುಗಳ ಬಾಯನ್ನು ಭದ್ರವಾಗಿ ಕಟ್ಟಿ, ಹೊಲ ಗದ್ದೆಗಳಲ್ಲಿ ರೆಂಟೆ-ಕುಂಟೆಗಳನ್ನು ಹೊಡೆಯುತ್ತಿದ್ದರು[೪೪]. ಇಂದಿಗೂ ಪೈರುಗಳ ಮಧ್ಯದಲ್ಲಿ ಎತ್ತುಗಳ ಬಾಯಿಯನ್ನು ಬಾಯಿಜಾಳಿಗೆ(ಬಾಯ್ಕಟ್ಟು)ಯಿಂದ ಕಟ್ಟಿ ಹೊಲವನ್ನು ಊಳುವ ಪದ್ಧತಿಯಿದೆ.

ವ್ಯವಸಾಯದ ಕುರಿತಂತೆ ಶಾಸನಗಳಲ್ಲಿ ಹೆಚ್ಚಿನ ಉಲ್ಲೇಖ ದೊರೆಯುವದಿಲ್ಲವಾದರೂ, ಕೆಲ ಶಾಸನಗಳು ಒಕ್ಕಲುತನದ ಕುರಿತು ಅಲ್ಪ ಮಾಹಿತಿ ನೀಡುತ್ತವೆ. ಕ್ರಿ.ಶ. ೪೦೦ರ ಗಂಗ ಮೂರನೆಯ ಮಾಧವನ ಮೇಲುಕೋಟೆಯ ತಾಮ್ರ ಶಾಸನವೊಂದು ಅಲ್ಲಿನ ರಕ್ತತಟಾಕದ ಬಳಿಯಲ್ಲಿನ ಗದ್ದೆಗಳಲ್ಲಿ ಮಳೆಗಾಲದಲ್ಲಿ ಒಂದು ಹಾಗೂ ಬೇಸಿಗೆಯಲ್ಲಿ ಮತ್ತೊಂದು, ಹೀಗೆ ವರ್ಷಕ್ಕೆ ಎರಡು ಪೈರುಗಳನ್ನು ಬೆಳೆಯುತ್ತಿದ್ದರೆಂದೂ ಅಲ್ಲದೇ ಉಳಿದ ಭೂಮಿಯಲ್ಲಿ ವರ್ಷಕ್ಕೆ ಒಂದೇ ಒಂದು ಪೈರನ್ನು ಬೆಳೆಯಲಾಗುತ್ತಿದ್ದ ವಿಷಯ ತಿಳಿಸಿದೆ[೪೫]. ಕ್ರಿ.ಶ. ೯ನೆಯ ಶತಮಾನದ ಗಂಗರ ಶಾಸನವೊಂದರಲ್ಲಿ ಪರೆಕಾರ ಬಸವಯ್ಯನು ಭೂಮಿಯೊಂದನ್ನು ದಾನವಾಗಿ ನೀಡುವಾಗ, ಜೊಳದ ಕೆಯ್ಯನ್ನು ಭತ್ತದ ಕೆಯ್ಯಾಗಿಸಿ ದಾನವಾಗಿ ಕೊಟ್ಟ ವಿಷಯವಿದೆ[೪೬]. ಅದೇ ಕಾಲದ ಇನ್ನೊಂದು ಶಾಸನದಲ್ಲಿ ಎಮ್ಮೆಳದಿಕ್ಕೆ ಗ್ರಾಮದ ಭೂಮಿಯನ್ನು

ಹಸಿಭೂಮಿಯಾಗಿಸಿ ಭತ್ತ ಬೆಳೆಯುವ ಭೂಮಿಯನ್ನಾಗಿ ಮಾಡಲಾಯ್ತೆಂದು ತಿಳಿದುಬರುತ್ತದೆ[೪೭]. ಇದಲ್ಲದೇ ಕ್ರಿ.ಶ. ೧೦ನೆಯ ಶತಮಾನದ ಕೊನೆಯ ಅವಧಿಯ ಶಾಸನವೊಂದರಲ್ಲಿ ಮಹಾಮಂಡಳೇಶ್ವರ ಜಯಸಿಂಹನು ಮೋಚಬ್ಬರಸಿ ಎಂಬಾಕೆಗೆ ಪುತ್ತೂರಿನ ಬಳಿಯ ಪಾಳು ನೆಲವನ್ನು ಕನ್ಯಾದಾನವಾಗಿ ನೀಡಿದನು. ಅವಳು ಅದನ್ನು ಫಲವತ್ತಾಗಿಸಿ ಅಲ್ಲಿ ತೋಟವನ್ನು ನಿರ್ಮಿಸಿಕೊಂಡಳೆಂದು ಉಲ್ಲೇಖವಿದೆ[೪೮]. ವೆಂಕಟಾಪುರ ಶಾಸನವು ಒಕ್ಕಲಿಗರಾದ ಮೂಗಿನಕದಮ್ಮ, ಎರೆಗ ಮತ್ತು ಕುಪ್ಪಮಾದರು, ಇಲ್ಲಿ ಒಕ್ಕಲುತನ (ಕಮತ) ಮಾಡುತ್ತಿದ್ದರೆಂದು ಹೇಳುತ್ತದೆ[೪೯]. ಹೀಗೆ ರೈತರು ತಮ್ಮ ಅನುಕೂಲಕ್ಕೆ ತಕ್ಕಂತೆ ಭೂಮಿಯನ್ನು ಪರಿವರ್ತಿಸಿಕೊಂಡು ಸಾಗುವಳಿಯನ್ನು ನಡೆಸಿದ್ದು ಇದರಿಂದ ಸ್ಪಷ್ಟವಾಗುತ್ತದೆ. ಅಲ್ಲದೇ ದಾನದ ವಸ್ತುಗಳಲ್ಲಿ ವ್ಯವಸಾಯ ಯೋಗ್ಯ ಭೂಮಿಗೆ ಮೊದಲ ಸ್ಥಾನವಿದ್ದು, ಈ ಕಾಲದ ಶಾಸನಗಳು ಹೇಳುವ ಭೂದಾನ ಕೂಡ ಇದನ್ನೇ ಸಮರ್ಥಿಸುತ್ತದೆ.

## ಬೆಳೆಗಳು:

ಶಾಸನಗಳಲ್ಲಿ ಪ್ರಾಸಂಗಿಕವಾಗಿ ಹೊಲಗದ್ದೆ ತೋಟಗಳಲ್ಲಿ ಬೆಳೆಯುತ್ತಿದ್ದ ಬೆಳೆಗಳ ಪ್ರಸ್ತಾಪ ಬರುತ್ತದೆ. ಅಂದಿನ ಕಾಲದಲ್ಲಿ ಭತ್ತದ ಗದ್ದೆಗಳ ಉಲ್ಲೇಖ ಶಾಸನಗಳಲ್ಲಿ ಹೆಚ್ಚಾಗಿರುವದನ್ನು ಕಾಣುತ್ತೇವೆ. ಶಾಸನಗಳಲ್ಲಿ ಭತ್ತ[೫೦], ಕಮ್ಬಳದ ಕೆಯ್ಯಿ[೫೧], ಅನ್ನಗದ್ದೆ[೫೨], ಬತ್ತದಮಣ್ಣು[೫೩]ಗಳ ಉಲ್ಲೇಖವಿದೆ. ಬೆದ್ದಲು ಭೂಮಿಯಲ್ಲಿ ಜನಪ್ರಿಯ ಆಹಾರ ಧಾನ್ಯ ಮತ್ತು ಪ್ರಮುಖ ಬೆಳೆಯಾದ ಜೋಳವನ್ನು ಬೆಳೆಯಲಾಗುತ್ತಿತ್ತು. ಕೋಳೂರು ಶಾಸನ ಜೋಳದ ಹೊಲವನ್ನು ಹೆಸರಿಸುತ್ತದೆ[೫೪]. ಜೋಳದ ಕೆಯ್ಯಿಯ ಕುರಿತು ಇನ್ನೊಂದು ಶಾಸನ ಕೂಡ ಉಲ್ಲೇಖಿಸಿದೆ[೫೫]. ಅಲ್ಲದೇ ಅನ್ನದ ಋಣದ ಅರ್ಥದಲ್ಲಿ ಜೋಳದ ಪಾಳಿ, ಜೋಳವಾಳಿ ಎಂಬುದು ಕನ್ನಡ ಶಾಸನದಲ್ಲಿ ಒಂದು ಮೌಲ್ಯವಾಗಿ ಬಳಕೆಗೊಂಡಿರುವದು ಅದರ ಪ್ರಾಮುಖ್ಯತೆಯನ್ನು ಸೂಚಿಸುತ್ತದೆ. ರಾಗಿಯ ಉಲ್ಲೇಖ ಕೂಡ ಶಾಸನವೊಂದರಲ್ಲಿ ಬರುತ್ತದೆ[೫೬].

ಕೆರೆ, ಕಟ್ಟೆ, ಭಾವಿ ಮೊದಲಾದ ಸತತ ನೀರಿನ ಆಶ್ರಯವಿರುವ ತೋಟಗಳಲ್ಲಿ ತೆಂಗು, ಕಂಗು[೫೭], ವೀಳ್ಯೆಯದೆಲೆ[೫೮], ಅಡಿಕೆ[೫೯]ಗಳನ್ನು ಬೆಳೆಯಲಾಗುತ್ತಿತ್ತು. ಹಣ್ಣುಗಳಲ್ಲಿ ಮಾವು, ಹಲಸು, ಮಾದುಫಲ, ಈಳೆ(ಕಿತ್ತಳೆ), ನಿಂಬೆ[೬೦], ಆಮ್ರ(ಮಾವು)[೬೧], ಮೊದಲಾದವುಗಳನ್ನು ಬೆಳೆಯಲಾಗುತ್ತಿತ್ತು. ಹೂವುಗಳಲ್ಲಿ ಮಲ್ಲಿಗೆ[೬೨], ಕೇದಗೆ, ಸುರಹೊನ್ನೆ[೬೩], ನೈದಿಲೆ(ಪದ್ಮ)[೬೪] ಮುಂತಾದವುಗಳಿದ್ದುದು ತಿಳಿದುಬರುತ್ತದೆ. ಅಲ್ಲದೇ ದೇವಾಲಯಕ್ಕೆ ಹೊಂದಿಕೊಂಡು ಕುಪ್ಪಗಡ್ಡೆ[೬೫], ಯಲಿಸಿರೂರು[೬೬], ಬಡಲಿ[೬೭], ಕೋಳೂರು[೬೮], ಒರುವಾಯಿ[೬೯], ಕುರುಗೋಡು[೭೦] ಅಲ್ಲದೇ ಕರ್ನಾಟಕದ ತುಂಬೆಲ್ಲಾ ಅನೇಕ ಗ್ರಾಮಗಳಲ್ಲಿ ಹೂದೋಟಗಳಿದ್ದ ವಿಷಯ ಗೊತ್ತಾಗುತ್ತದೆ. ಈ ಹೂದೋಟಗಳನ್ನು ಮಾಡುವರು ದೇವಸ್ಥಾನಕ್ಕೆ ಇಂತಿಷ್ಟು ಹೂಗಳನ್ನು ಕೊಡಬೇಕೆಂಬ ನಿಯಮವಿರುತ್ತಿತ್ತು. ಊರಿನ ಎಲ್ಲ ತೋಟಗಳ ರಕ್ಷಣೆಯನ್ನು ನೋಡಿಕೊಳ್ಳಲು ತೋಟಿಗ ಎಂಬ ಕಾವಲಿನವನನ್ನು ನೇಮಿಸಿಕೊಳ್ಳುತ್ತಿದ್ದರು. ತೋಟಿನ ಸಮಯ ಎನ್ನುವದು ಆ ತೋಟಿಗನ ಜೀವನಕ್ಕಾಗಿ ಅವರು ಕೊಡುತ್ತಿದ್ದ ಹಣ ಅಥವಾ ಧಾನ್ಯವನ್ನು ಸೂಚಿಸುತ್ತದೆ[೭೧].

ಗದ್ದೆಯಲ್ಲಿ ಬೆಳೆಯಬಲ್ಲ ಇನ್ನೊಂದು ಪ್ರಧಾನ ಬೆಳೆ ಕಬ್ಬಾಗಿತ್ತು. ಆರ್ಥಿಕ ಬೆಳೆಯಾದ ಅದು ಹೆಚ್ಚು ನೀರಿನ ಆಶ್ರಯವಿರುವ ಇತರ ಭೂಮಿ(ತೋಟ)ಗಳಲ್ಲಿಯೂ ಬೆಳೆಯುತ್ತಿದ್ದಂತೆ ತೋರುತ್ತದೆ. ಸಬ್ಬಿ-೩೦ರ ಮಹಾಸಾಮಂತ ಪಾಂಚಾಲದೇವ ಅಲ್ಲಿಯ ಮಹಾಜನರ ಕಾಲುತೊಳೆದು ಸಿದ್ಧಾಯವಾಗಿ ಉಪ್ಪು-ತುಪ್ಪಗಳ ಜೊತೆಯಲ್ಲಿ ಕಬ್ಬಿನ ಹಾಲನ್ನು ನೀಡಿರುವದೂ ತಿಳಿಯುತ್ತದೆ[೮೨]. ಕೋಳೂರಿನ ಶಾಸನ ಅಲ್ಲಿ ಕಬ್ಬಿನ ಗದ್ದೆಯಿದ್ದುದನ್ನು ಉಲ್ಲೇಖಿಸಿದೆ[೮೩]. ಇವುಗಳಲ್ಲದೇ ಅಡಿಕೆ, ಅರಿಷಿಣ, ಎಳ್ಳು[೮೪] ಇತ್ಯಾದಿ ಬೆಳೆಗಳನ್ನು ಅಂದು ಬೆಳೆಯಲಾಗುತ್ತಿತ್ತು.

## ನೀರಾವರಿ:

ನೀರಾವರಿಯು ಮುಖ್ಯವಾಗಿ ನದಿ, ಭಾವಿ, ಕೆರೆಗಳನ್ನವಲಂಬಿಸಿದ್ದಿತು. ಸಾಮಂತರಸರು, ರಾಣಿಯರು, ಅಧಿಕಾರಿವರ್ಗ, ಶ್ರೀಮಂತರು ಮತ್ತು ಗ್ರಾಮಸಂಸ್ಥೆಗಳು ಕೆರೆಭಾವಿಗಳನ್ನು ನಿರ್ಮಿಸುವದು ಶ್ರೇಯಸ್ಕರವೆಂದು ನಂಬಿದ್ದರು. ಅಲ್ಲದೇ ಹಾಳಾಗಿರುವ ಜೀರ್ಣಾವಸ್ಥೆಯಲ್ಲಿರುವ ಕೆರೆಗಳನ್ನು ದುರಸ್ಥಿಗೊಳಿಸುವದರಿಂದ ಪುಣ್ಯಲಭಿಸುವದೆಂಬ ನಂಬಿಕೆಯಿಂದ ಪ್ರಾಚೀನರು ಕೆರೆಗಳ ನಿರ್ಮಾಣಕ್ಕೆ ಮಹತ್ವವನ್ನು ನೀಡಿದ್ದಾರೆ.

ಗಂಗರ ಶ್ರೀಪುರುಷನ ಕಾಲದಲ್ಲಿ ಕೊಂಗಣಿಕೆರೆ[೮೫]ಯನ್ನು ಹನ್ನೆರಡು ಜನಸೇರಿ ಕಟ್ಟಿಸಿದರೆ, ಅಕಳೆಸಮುದ್ರವೆಂಬ ಕೆರೆಯನ್ನು ಅಕಳೇತಿ ಎಂಬುವಳು[೮೬]. ಮತ್ತು ಆದೆಪ್ಪರ ಎಂಬುವನು ಕೆರೆಯೊಂದನ್ನು ನಿರ್ಮಿಸಿದ ವಿವರಗಳು ದೊರೆಯುತ್ತವೆ[೮೭]. ರಾಷ್ಟ್ರಕೂಟರ ಮಹಾಸಾಮಂತಾಧಿಪತಿಯಾದ ಮಾಚಿಯರಸನು ಬನವಾಸಿ-೧೨೦೦೦ವನ್ನಾಳುತ್ತಿದ್ದಾಗ ಮಾಕಳನ ತನ್ನ ಹೆಸರಿನ ಕೆರೆ ಮತ್ತು ದೇವಾಲಯವನ್ನು ನಿರ್ಮಿಸಿದ್ದನು[೮೮]. ಮೂರನೆಯ ಕೃಷ್ಣನ ಸಾಮಂತನಾದ ಚೆಲ್ಲಕೇತನ ಲೋಕಟೆಯು ಲೋಕಾಪುರದಲ್ಲಿ ಲೋಕಸಮುದ್ರವೆಂಬ ಕೆರೆಯನ್ನು ಕಟ್ಟಿಸಿದನು[೮೯]. ಮೋರಿಯರ ಕಲಿವಿಟ್ಟನು ನೀರ್ಗೊಂಡಿ ಗ್ರಾಮವನ್ನಾತ್ತಿರುವಾಗ ಹುಬ್ಬಳ್ಳಿಯಲ್ಲಿ ಕೆರೆಯೊಂದನ್ನು ನಿರ್ಮಿಸಿದ್ದಾನೆ[೯೦]. ಸಾಲೂರಿನಲ್ಲಿ ಸಾಂತರ ಚಂದಿಗನು ಕೆರೆಯೊಂದನ್ನು ಕಟ್ಟಿಸಿ, ಅದರ ನಿರ್ವಹಣೆಗೆ ಭೂಮಿದಾನ ಮಾಡಿದನೆಂದು ಶಾಸನವು ತಿಳಿಸುತ್ತದೆ[೯೧]. ಕದಂಬಕುಲದ ಮಹಾಮಂಡಳೇಶ್ವರ ಶಾಂತಿವರ್ಮನು ಬನವಾಸಿಯನ್ನಾಳುತ್ತಿದ್ದಾಗ ಕನ್ನಯ್ಯನೆಂಬುವನು ದೇಗುಲ ಮತ್ತು ಕೆರೆಯೊಂದನ್ನು ಕಟ್ಟಿಸಿದನು. ಅದನ್ನು ಅರಸ ಬಂದು ನೋಡಿ ದಾನವನ್ನು ಬಿಟ್ಟನೆಂದು ತಿಳಿದುಬರುತ್ತದೆ[೯೨]. ಮಹಾಮಂಡಳೇಶ್ವರ ಗೋಣರಸ ಸಾಂತಳಿಗೆ ನಾಡಿನಲ್ಲಿನ ಮೋರಟ್ಟಿಗೆರೆಯಲ್ಲಿ ಕುಲಸಮುದ್ರವೆಂಬ ಕೆರೆಯನ್ನು ಕಟ್ಟಿಸಿದನೆಂದು ಆಚಾಪುರದ ಶಾಸನ ತಿಳಿಸಿದೆ[೯೩]. ಹೊಯ್ಸಳ ವಿಷ್ಣುವರ್ಧನನ ಮಹಾಸಾಮಂತ ಮಾಚಯನಾಯಕನು ಹಿರಿಯಕೆರೆಯನ್ನು ಕಟ್ಟಿಸಿದನೆಂದು ಶಾಸನವೊಂದರಿಂದ ತಿಳಿದುಬರುತ್ತದೆ[೯೪]. ಕದಂಬ ಮಹಾಮಂಡಳೇಶ್ವರ ಹರಿಕಾಂತದೇವನ ದಂಡನಾಯಕನಾದ ಗುತ್ತಯ್ಯನು ತಿಳವಳ್ಳಿಯಲ್ಲಿನ ಪಿರಿಯಕೆರೆಯನ್ನು ನಿರ್ಮಿಸಿದನು[೯೫]. ಹೊಯ್ಸಳ ಎರೆಯಂಗನ ಸಾಮಂತನಾದ ಕುಂದಮಾರಾಯನು ಕೆನ್ನೆಗೆರೆಯನ್ನು ಕಟ್ಟಿಸಿದನೆಂದು ದೇವಿಹಳ್ಳಿ ಶಾಸನದಿಂದ ತಿಳಿದುಬರುತ್ತದೆ[೯೬]. ಕದಂಬರ ಮಹಾಮಂಡಳೇಶ್ವರ ದುದ್ದರಸನು ಕರೆಯನ್ನು

ಕಟ್ಟಿಸಿದ ಉಲ್ಲೇಖ ಯೆಡೂರು ಶಾಸನವೊಂದರಲ್ಲಿದೆ[೮೭]. ಹೊಯ್ಸಳ ಒಂದನೆಯ ನರಸಿಂಹನ ಸಾಮಂತ ಚಟ್ಟಯ್ಯನು ಚಟ್ಟಸಮುದ್ರವನ್ನು ಕಟ್ಟಿಸಿದನೆಂದು ಹುಲಿಕೆರೆಯ ಎರಡು ಶಾಸನಗಳು ಉಲ್ಲೇಖಿಸಿವೆ[೮೮].

ಗಂಗ ಎರಡನೆಯ ರಾಚಮಲ್ಲನ ಕಾಲದಲ್ಲಿ ತಲೆನೆರೆಯಲ್ಲಿ ಒಡ್ಡನ್ನು ನಿರ್ಮಿಸಲಾಯಿತೆಂದು ತಿಳಿದುಬರುತ್ತದೆ[೮೯]. ಅಲ್ಲದೇ ಗಂಗ ಶಿವಮಾರನ ಕಾಲದಲ್ಲಿ ಕೆರೆಗೋಡು ವಿಷಯದಲ್ಲಿ ಕಿಳಿನಿ ನದಿಗೆ ಒಡ್ಡು ನಿರ್ಮಿಸಲಾದ ವಿಷಯ ಮಂಡ್ಯ ತಾಲೂಕಿನ ಹಳ್ಳಿಗೆರೆ ಶಾಸನದಲ್ಲಿದೆ[೯೦]. ಕ್ರಿ.ಶ. ೮-೯ನೆಯ ಶತಮಾನದ ಶಾಸನವೊಂದರಲ್ಲಿ ಪೆರ್ಗಡೆ ಚಾಮುಣ್ಡಯ್ಯನೆಂಬುವನು ತೂಬು(ಕಾಲುವೆ) ಒಂದನ್ನು ಮಾಡಿಸಿದ ವಿಷಯವಿದೆ[೯೧]. ರಾಷ್ಟ್ರಕೂಟ ಕನ್ನರದೇವನ ಮಹಾಸಾಮಂತಾಧಿಪತಿಯಾದ ಮಾಚಿಯರಸ ಬನವಾಸಿಯನ್ನು ಆಳುತ್ತಿದ್ದಾಗ, ಎಡೆನಾಡ ಪೆರ್ಗಡೆಯಾದ ನಾಕಿಯಚಟ್ಟಯ್ಯನ ಸಹೋದರನಾದ ಪೆರ್ಗ್ಗಡೆ ವೇಳೆಯಮ್ಮನು ಭಾವಿಯೊಂದನ್ನು ತೋಡಿಸಿದನೆಂದು ತಿಳಿಯುತ್ತದೆ[೯೨]. ಚಾಲುಕ್ಯ ವಿಕ್ರಮಾದಿತ್ಯನ ಮಹಾಮಂಡಳೇಶ್ವರನಾದ ಚಟ್ಟಯ್ಯನ ಕಾಲದಲ್ಲಿ ನೆಲ್ಲೂರ ಅಮ್ಮಣಗಾವುಂಡ ಮತ್ತು ಮುದ್ದಯ್ಯರೆಂಬುವರು ಸೇರಿ ಭಾವಿಯೊಂದನ್ನು ತೋಡಿಸಿದರು ಎಂದು ಕ್ರಿ.ಶ. ೧೦೧೨ರ ಶಾಸನವೊಂದು ಉಲ್ಲೇಖಿಸಿದೆ[೯೩].

**ತೋಟಗಳು:**

ಸಾಮಂತರಸರ ಶಾಸನಗಳಲ್ಲಿ ತೋಟಗಳ ಉಲ್ಲೇಖಗಳಿವೆ. ಕ್ರಿ.ಶ. ೮೫೫ರ ಶಾಸನದಲ್ಲಿ ಹೂದೋಟದ ಜೊತೆಯಲ್ಲಿ ಎಲೆಯ ತೋಟದ ಉಲ್ಲೇಖವಿದೆ[೯೪]. ತೋಟದ ನೆಲವೊಂದನ್ನು ಆದಿತ್ಯಭಟಾರನಿಗೆ ನೀಡಿದ ಉಲ್ಲೇಖ ಕ್ರಿ.ಶ.೮೬೫ರ ಶಾಸನವೊಂದರಲ್ಲಿದೆ[೯೫]. ಮುಳಗುಂದದ ಶಾಸನದಲ್ಲಿ ಎಲೆಬಳ್ಳಿಯ ತೋಟವನ್ನು ಹೇಳಿ ಅಲ್ಲಿ ಸಾವಿರಕ್ಕೂ ಹೆಚ್ಚು ಜನರು ಕಾರ್ಯನಿರ್ವಹಿಸುತ್ತಿರುವದನ್ನು ಹೇಳಿದೆ[೯೬]. ಕ್ರಿ.ಶ.೧೧೪೪ರ ಶಾಸನವೊಂದು ದೇವರ ತೋಟವೊಂದರಲ್ಲಿ ಬಿಳಿ ಎಲೆಯನ್ನು ಬೇಳೆಯುತ್ತಿದ್ದ ವಿಷಯ ತಿಳಿಸಿದೆ[೯೭]. ಬೆಲೂರಿನ ಶಾಸನವೊಂದು ಅಲ್ಲಿನ ಮೂಲಸ್ಥಾನ ದೇವರಿಗೆ ದಾನಬಿಟ್ಟ ಭೂಮಿಯ ಸೀಮೆಯನ್ನು ಹೇಳುವಾಗ ಊರೊಡೆಯರ ತೋಟವನ್ನು ಹೇಳಿದೆ[೯೮]. ಕ್ರಿ.ಶ. ೧೧೫೫ರ ಶಾಸನದಲ್ಲಿ ಮೂಲಸ್ಥಾನ ದೇವರ ತೋಟದಿಂದ ಬರುವ ತೋಂಟದಾಯದ ಉಲ್ಲೇಖವಿದೆ[೯೯]. ಹೀಗೆ ಬಾವಿಯಿಂದ ನೀರನ್ನು ಉಪಯೋಗಿಸಿಕೊಂಡು ತೋಟಗಳನ್ನು ಮಾಡುತ್ತಿದ್ದರು.

## ವರ್ತಕರು ಹಾಗೂ ವರ್ತಕ ಶ್ರೇಣಿಗಳು:

ಮನುಷ್ಯನ ಆರ್ಥಿಕ ಬದುಕನ್ನು ರೂಪಿಸಿದ ಹಲವಾರು ಅಂಶಗಳಲ್ಲಿ ವರ್ತಕರು ಹಾಗೂ ವರ್ತಕ ಸಂಘಗಳು ತಮ್ಮದೇ ಆದ ಪಾತ್ರವನ್ನು ವಹಿಸಿವೆ. ವ್ಯಾಪಾರವನ್ನೇ ವೃತ್ತಿಯನ್ನಾಗಿಸಿಕೊಂಡವರನ್ನು ವರ್ತಕರೆಂದು ಕರೆಯಲಾಗುತ್ತಿತ್ತು. ಇಂತಹ ವರ್ತಕರ ಪ್ರಥಮ ಉಲ್ಲೇಖ ವೈದಿಕ ಸಾಹಿತ್ಯದಷ್ಟು ಪೂರ್ವದಲ್ಲಿಯೇ ಲಭಿಸುವದು. ಮಹಾಭಾರತದಲ್ಲಿ ಸರಕು ಮೊದಲಾದ ವ್ಯಾಪಾರದ ವಿಷಯಗಳಿವೆ. ಆದರೆ ಬೌದ್ಧ ಸಾಹಿತ್ಯದಲ್ಲಿ ವರ್ತಕರು ಹಾಗೂ ವರ್ತಕರ ಸಂಘಗಳನ್ನು ಕುರಿತು

ಸವಿವರವಾದ ಸಾಮಗ್ರಿಯಿದೆ[೧೦೦]. ಆದರೆ ದಕ್ಷಿಣ ಭಾರತದಲ್ಲಿ ೭-೮ ನೆಯ ಶತಮಾನಗಳ ಶಾಸನಗಳಲ್ಲಿ ಕಾಣಿಸಿಕೊಂಡಿದ್ದಾರೆ. ಹೀಗೆ ವೇದ ಕಾಲದಿಂದ ಮುಂದುವರೆದುಕೊಂಡು ಬಂದ ವ್ಯಾಪಾರಿ ಸಮೂಹದ ಚಟುವಟಿಕೆಗಳು ಉತ್ಪಾದನೆ ಮತ್ತು ವಿತರಣೆಯ ಕಾರ್ಯಗಳನ್ನು ಕೈಕೊಂಡು, ಬರಬರುತ್ತಾ ಅವರು ತಮ್ಮದೇ ಆದ ಸಂಘಟನೆಗಳನ್ನು ರೂಪಿಸಿಕೊಂಡು, ಪ್ರಾಚೀನ ನಗರ ಜೀವನದಲ್ಲಿ ಮಹತ್ವದ ಪಾತ್ರವನ್ನು ವಹಿಸಿದ್ದಾರೆ. ಈ ಸಂಘಗಳು ಒಮ್ಮೆಲೇ ರೂಪುಗೊಳ್ಳದೇ ಆಯಾಕಾಲದ ಆರ್ಥಿಕ ಪ್ರಗತಿಗನುಗುಣವಾಗಿ ಬೆಳೆದು ಬಂದವು. ಇವುಗಳ ರಚನಾ ಸ್ವರೂಪ, ಕಾರ್ಯ ನಿರ್ವಹಣೆ, ವಾಣಿಜ್ಯ, ಲಾಭ ಸಾಮಾಜಿಕ ಗೌರವ, ಇತ್ಯಾದಿಗಳ ಕುರಿತು ಶಾಸನ, ಸಾಹಿತ್ಯಿಕ ಕೃತಿಗಳಲ್ಲಿ ಯಾವುದೇ ನೇರ ಉಲ್ಲೇಖ ಕಂಡುಬರುವದಿಲ್ಲ. ಆದರೆ ಜಾತಿ-ಧರ್ಮ, ಸಮಾನವೃತ್ತಿ, ಸಮುದಾಯ ಪ್ರಜ್ಞೆ, ಸಮಾನಾವಕಾಶ ಮುಂತಾದವುಗಳು ಈ ಸಂಘಗಳ ರಚನೆಗೆ ಕಾರಣವಾಗಿರಬೇಕು. ಈ ಸಂಘದ ಮುಖ್ಯಸ್ಥನನ್ನು ಪಟ್ಟಣಸ್ವಾಮಿ ಎಂದು ಕರೆಯುತ್ತಿದ್ದರು. ಇವನು ವರ್ತಕರಲ್ಲಿ ಅತೀ ಶ್ರೀಮಂತನೂ ವೃದ್ಧನೂ ಆಗಿದ್ದಿರಬಹುದು. ಅರಸನು ತನಗೆ ವಿವೇಕಿಯೆಂದು ಕಂಡುಬಂದ ವ್ಯಕ್ತಿಗೆ ಪಟ್ಟಣಸ್ವಾಮಿ ಪಟ್ಟವನ್ನು ಕೊಡುತ್ತಿದ್ದನು[೧೦೧]. ಮಹಾಮಂಡಳೇಶ್ವರ ಪಲ್ಲವಾದಿತ್ಯನು ಕರವಯ್ಯ ಎಂಬಾತನಿಗೆ ಮುಮ್ಮಡಿಗವಳೆ ಪಲ್ಲವಾದಿತ್ಯ ನೊಳಂಬಸೆಟ್ಟಿ ಎಂಬ ಹೆಸರನ್ನು ಕೊಟ್ಟು ಪಟ್ಟಕಟ್ಟಿ ಕುದುರೆ, ಕೊಡೆ, ಕುಂಚ, ತಳಿಗೆ, ಗದ್ದಿಗೆ ಮುಂತಾದವುಗಳನ್ನು ರಾಜ ಮರ್ಯಾದೆಯಿಂದ ನೀಡಿದ ವಿಷಯ ಕ್ರಿ.ಶ. ೯೮೩ರ ಶಾಸನವೊಂದರಲ್ಲಿದೆ[೧೦೨]. ಇದರಿಂದಾಗಿ ರಾಜನು ವರ್ತಕ ಶ್ರೇಣಿಗಳ ವಿಷಯದಲ್ಲಿ ಆಸಕ್ತನಾಗಿರುತ್ತಿದ್ದ ವಿವರ ಸ್ಪಷ್ಟವಾಗುತ್ತದೆ.

### ವಿನಿಮಯ ವರ್ತಕರು:

ಕೇವಲ ವ್ಯಾಪಾರ ವೃತ್ತಿಯನ್ನು ಮಾಡುವ ಶುದ್ಧ ವರ್ತಕರಿವರಾಗಿದ್ದರು. ಇವರಿಗೆ ಸಂಬಂಧಿಸಿದಂತೆ ಶಾಸನಗಳಲ್ಲಿ ಬರುವ "ಶ್ರೀ ಮದಯ್ಯಳೆ ವೊಳೆಯಯ್ನುರ್ಬ್ಬ ಸ್ವಾಮಿಗಳು ಮಾಮುಖ್ಯ ಶ್ರೀಮಂತು ಸಮಯ ಚಕ್ರವರ್ತಿ ಜಯ.......ಯ್ಯ ಶೆಟ್ಟಿಯರುಂ ಸೋವಿ ಶೆಟ್ಟಿಯರುಂ ಮುಖ್ಯ ಯರಡರುನೂರರೆರಡು ಪಟ್ಟಣದ ಶೆಟ್ಟಿಗುತ್ತರುಂ ಸ್ಥಳ ಸಮಸ್ತರುಂ ಮುಮ್ಮರಿದಂಡಗಳಂ ಕುಂಡಿಮೂರುಸಾಸಿರದ ನಾಲ್ಕು ಪಟ್ಟಣದ ಶೆಟ್ಟಿಗುತ್ತರುಂ ನಾನಾದೇಶಿಗರುಂ ಗವರೆಗಳುಂ ಗಾತ್ರಿಗರುವಯ್ವತ್ತೊಕ್ಕಲುಂ ಸಮಸ್ತನಖರಂಗಳುಂ"[೧೦೩] ಎಂಬ ಉಲ್ಲೇಖಗಳಲ್ಲಿಯ ಉಂ ಸಮುಚ್ಚಯದಿಂದ ಸೆಟ್ಟಿ, ಸೆಟ್ಟಿಗುತ್ತ, ನಖರ, ಮುಮ್ಮರಿದಂಡ, ವಡ್ಡವ್ಯವಹಾರಿ, ಗವರೆ, ಗಾತ್ರಿಗ, ಸೆಟ್ಟಿಕಾರರುಗಳು ಬೇರೆಬೇರೆ ಪ್ರಕಾರದ ವಿನಿಮಯ ವರ್ತಕರೆಂದು ತಿಳಿಯುತ್ತದೆ. ವೃತ್ತಿನಾಮದ ಮುಂದೆ ಸಂಘಸೂಚಿ ಪದಗಳಿಲ್ಲದಿರುವದರಿಂದ ಇವುಗಳು ಸಂಘವನ್ನು ಹೊಂದಿರದ ವರ್ತಕರ ಪ್ರಕಾರಗಳು[೧೦೪]. ಶಾಸನವೊಂದು "ವಿನಯ ವಿಭೂಷಣರ್ಷತಿಜಿತಾ ಚಣರ್ಬ್ಬುಹುಕಾರ್ಯ ಕಾರಣರ್ಕ್ಕನಕ ಗಿರೀಂದ್ರ ಧೈರ್ಯರಮೆಳೇಂಗಿತವರ್ಯ್ಯರು ದಾರಚರ್ಯರಾಮನಸಿಜ ಮೂರ್ತ್ತಿಗಳ್ವಿನುತ ಕೀರ್ತಿಗಳುತ್ತ ಮದೇಶವರ್ತ್ತಿಗಳ್ದನದ ಸಮಾನರೆಯ್ದ ಸವಿಶೇಷಯರು

ನೀ ನಿಡುಗಲ್ಲ ವೈಶ್ಯರುಂ''[೧೦೫] ಎಂದು ಉಲ್ಲೇಖಿಸುವದರಿಂದ, ವ್ಯಾಪಾರಸ್ಥರಲ್ಲಿರಬಹುದಾದ ವಿಧಾನಗಳನ್ನು ಅಂದರೆ ಒಂದೇ ಕಡೆಯಿದ್ದು ವ್ಯಾಪಾರ ಮಾಡುವವರು, ದೇಶವನ್ನು ಸುತ್ತಿ ವ್ಯಾಪಾರ ಮಾಡುವವರು, ವಿದೇಶಗಳಿಗೆ ಹೋಗಿ ವ್ಯಾಪಾರ ಮಾಡಿಕೊಂಡು ಬರುವಂತಹ ವರ್ತಕರಿದ್ದರೆಂದು ತಿಳಿಯುತ್ತದೆ.

**ಬಣಂಜಿಗ ಶೆಟ್ಟಿ:**

ಶ್ರೇಷ್ಠಿನ್, ವಣಜ ಎಂಬ ಸಂಸ್ಕೃತ ಪದಗಳ ಕನ್ನಡದ ರೂಪ ಬಣಂಜಿಗ ಶೆಟ್ಟಿಯಾಗಿದೆ. ಶೆಟ್ಟಿ, ಬಣಂಜಿಗ ಶಬ್ದಗಳು ಮೂಲತಃ ವೃತ್ತಿ ಸೂಚಕ ಪದಗಳಾಗಿದ್ದು, ಕ್ರಮೇಣ ಜಾತಿಸೂಚಕವಾಗಿ ಬೆಳೆದವು. ಶೆಟ್ಟಿ ಬಣಂಜಿಗಳು ವರ್ತಕದ ಸಮಾನಾರ್ಥ ಪದಗಳಾಗಿವೆ[೧೦೬]. ಇವರು ವ್ಯಾಪಾರ-ವೃತ್ತಿಯನ್ನು ತಮ್ಮ ಜೀವನೋಪಾಯದ ಸಾಧನವನ್ನಾಗಿ ಮಾಡಿಕೊಂಡು, ಸರಕುಗಳನ್ನು ಎತ್ತು, ಕತ್ತೆ, ಕೋಣಗಳ ಮೇಲೆ ಹೇರಿಕೊಂಡು ಇಲ್ಲವೇ ತಲೆಯ ಮೇಲೆ ಹೊತ್ತುಕೊಂಡು ಹೋಗಿ ಸಂತೆ, ಪೇಟೆ, ಪಟ್ಟಣಗಳಲ್ಲಿ ವ್ಯಾಪಾರ ವ್ಯವಹಾರಗಳನ್ನು ಮಾಡುತ್ತಿದ್ದರು. ಸರಕುಗಳನ್ನು ಹೇರಿಕೊಂಡು ಹೋಗಿ ಮಾರುತ್ತಿದ್ದರಿಂದ ಹೇರುವಬಣಂಜಿಗ, ಹೇರುವಶೆಟ್ಟಿಯರೆನಿಸಿಕೊಂಡರು. ವಡ್ಡಾರಾಧನೆಯೂ ಸಹ ರಾಜಶ್ರೇಷ್ಠಿ (ಅರಸನ ವಾಣಿಜ್ಯ ವ್ಯವಹಾರದ ಅಧಿಕಾರಿ). ಶ್ರೇಷ್ಠಿ, ಶೆಟ್ಟಿ, ಪರದರು (ವಿವಿಧ ಸರಕು ಮಾರುವವರು), ಸಾರ್ಥಾಧಿಪತಿ (ಧಾನ್ಯಗಳ ಅಧಿಕಾರಿ), ದೂಸಿಗರರ (ಬಟ್ಟೆಯ ವ್ಯಾಪಾರಿ) ಎಂಬುವರನ್ನು ಕುರಿತು ಉಲ್ಲೇಖಿಸುತ್ತದೆ[೧೦೭]. ಕೆಲವು ಶಾಸನಗಳಲ್ಲಿ ಬೀರವಣಿಗ ಎಂಬ ಹೆಸರಿನ ಮುಂದೆ ನಾಯಕ ಎಂಬ ಉಲ್ಲೇಖ ಬರುವದರಿಂದ ಇವರು ವ್ಯಾಪಾರಿಗಳಾಗಿರದೆ ಅಧಿಕಾರಿಗಳಾಗಿದ್ದರೆಂದೂ, ಅದರಲ್ಲಿಯೂ 'ಇರಿದವನೇ ಬೀರವಣಿಗ'[೧೦೮] ಎಂಬ ಶಾಸನದ ಉಕ್ತಿಯಿಂದ, ಇವರು ವೀರವೃತ್ತಿಯುಳ್ಳವರಾಗಿದ್ದರೆಂದು ಊಹಿಸಬಹುದಾಗಿದೆ[೧೦೯]. ಕ್ರಿ.ಶ.೯೬೭ರ ಶಾಸನವೊಂದರಲ್ಲಿ ಐನೂರ್ವ್ವರ್ ವೀರಬಳಂಜು ಸಂಘವನ್ನು ಕಟ್ಟಿಕೊಂಡು ವ್ಯಾಪಾರ-ವ್ಯವಹಾರ ನಡೆಸುತ್ತಿದ್ದು, ತಮ್ಮ ಕುಲದೇವರಾದ ಗವರೇಶ್ವರನಿಗೆ ದೇವಮಾನ್ಯವಾಗಿ ತಾವು ತರುವ, ಮಾರುವ ವಸ್ತುಗಳಾದ ಅಡಿಕೆ, ಅರಿಷಿಣ ಇತ್ಯಾದಿ ಸರಕುಗಳ ಮೇಲಿನ ಸುಂಕಗಳನ್ನು ದಾನವಾಗಿ ನೀಡಿದ ವಿಷಯವಿದೆ[೧೧೦]. ಕ್ರಿ.ಶ. ೧೧೪೭ರ ಶಾಸನವೊಂದು ಛತ್ರವೊಂದಕ್ಕೆ ಮೂವತ್ತಾರೂಂಬೀಡಿನ ಸೆಟ್ಟಿಯರು, ತಳದಬಣಂಜಿಗ ಸೆಟ್ಟಿಯರು ಇನ್ನು ಮುಂತಾದವರು ಸೇರಿ ದಾನವನ್ನು ನೀಡಿದ್ದನ್ನು ತಿಳಿಸಿದೆ[೧೧೧]. ಕ್ರಿ.ಶ.೧೧೯೫ರ ಶಾಸನವೊಂದರಲ್ಲಿ ಅಂಬಲಿಯ್ಯೆಚನೆಂಬ ಬಣಂಜಿಗ ಸೆಟ್ಟಿಯ ಉಲ್ಲೇಖ ಬಂದರೆ[೧೧೨], ಇನ್ನೊಂದು ಶಾಸನದಲ್ಲಿ ಪೇಳಾವಿಗ ಸೆಟ್ಟಿಯರು ದೇವಾಲಯಕ್ಕೆ ದಾನವನ್ನು ನೀಡಿದ ವಿಷಯವಿದೆ[೧೧೩].

**ಆಶೇಷನಖರರು:**

ವರ್ತಕ ಸಂಘದಲ್ಲಿ ಪಟ್ಟಣಸ್ವಾಮಿಯ ಜೊತೆಗೆ ಆರಿಸಿದ ಕೆಲವು ಸದಸ್ಯರಿರುತ್ತಿದ್ದರೆಂಬುದಕ್ಕೆ ಯಾವುದೇ ಆಧಾರಗಳಿಲ್ಲ. ಆದರೆ ಯಾವುದಾದರೂ ತೀರ್ಮಾನವನ್ನು ಕೈಕೊಳ್ಳುವಾಗ ಎಲ್ಲಾ ವರ್ತಕರು ಪಟ್ಟಣಸ್ವಾಮಿಯ ನೇತೃತ್ವದಲ್ಲಿ ಸಭೆ ಸೇರಿ ಚರ್ಚಿಸುತ್ತಿದ್ದರೆಂದು ತೋರುತ್ತದೆ. ಇದನ್ನೇ ಶಾಸನಗಳು ಆಶೇಷನಖರ ಎಂದು ಹೇಳಿರುವದು.

ಹೀಗೆ ಸಭೆಸೇರಿ ದೇವಾಲಯಕ್ಕೆ ತಮ್ಮ ಸಂಘದ ಸದಸ್ಯರೆಲ್ಲಾ ಸೇರಿ ವೈಯಕ್ತಿಕವಾಗಿಯೋ, ಸಾಮೂಹಿಕವಾಗಿಯೋ ದಾನಧರ್ಮಗಳನ್ನು ಚರ್ಚಿಸಿ ನೀಡುತ್ತಿದ್ದರು. ಆಶೇಷನಖರಂಗಳು ಕೂಡಿ ನಿಡುಗಲ್ಲ ಕೋಟೆಯ ಶ್ರೀ ನಖರೇಶ್ವರ ದೇವರಿಗೆ ದತ್ತಿಯನ್ನು ಬಿಟ್ಟಿದ್ದನ್ನಿಲ್ಲಿ ಗಮನಿಸಬಹುದು[೧೧೪].

## ಐಯ್ಯಾವೊಳೆ ಐನೂರ್ವ್ವರ ಸಂಘ:

ಬಾಗಲಕೋಟೆ ಜಿಲ್ಲೆಯ ಹುನಗುಂದ ತಾಲೂಕಿಗೆ ಸೇರಿದ ಐಹೊಳೆ ಗ್ರಾಮವನ್ನು ಕೇಂದ್ರವಾಗಿಟ್ಟುಕೊಂಡು ಇದ್ದಂತಹ ಸಂಘವಿದಾಗಿತ್ತು. ೫೦೦ ಸದಸ್ಯರ ಈ ವರ್ತಕರ ಸಂಘ, ಪ್ರಾಚೀನ ದಕ್ಷಿಣ ಭಾರತದಲ್ಲಿ ಯಾವುದೇ ಸಂಘ-ಸಂಸ್ಥೆಗಳು ಪಡೆಯದ ಪ್ರಚಾರ ಪ್ರಸಿದ್ಧಿಯನ್ನು ಪಡೆದಿತ್ತು. ಆದರೆ ನಂತರದ ಅವಧಿಯಲ್ಲಿ ದಕ್ಷಿಣ ಭಾರತದ ವರ್ತಕರಾದ ಸೆಟ್ಟಿ, ಬಣಂಜಿಗ, ನಖರ, ಮುಮ್ಮರಿದಂಡ, ಗವರೆ, ನಾನಾದೇಶಿಗಳು ಈ ವರ್ತಕ ಸಂಘದ ಹೆಸರಿನಿಂದ ತಮ್ಮನ್ನು ಗುರುತಿಸಿಕೊಂಡಿದ್ದಾರೆ[೧೧೫]. ಶಾಸನದಲ್ಲಿ ಕಂಡುಬರುವ ಬಲದೇವ ವಾಸುದೇವ ಕಂಡಳೀಮೂಲಭದ್ರ ವಂಶೋದ್ಭವರೆಂಬುದು ಅವರ ವಂಶದ ಪ್ರಾಚೀನತೆಯನ್ನು ತೋರುತ್ತಿದ್ದು, ಅಲ್ಲಿ ಬಲದೇವ, ವಾಸುದೇವ, ಕಂಡಳೀಮೂಲಭದ್ರರೆಂದು ಪೌರಾಣಿಕ ಪುರುಷ ಪರಾಕ್ರಮ ದೇವತೆಗಳು ಎಡೆ ಪಡೆದಿದ್ದುದನ್ನು ಬಿ.ಆರ್.ಹಿರೇಮಠರು ಗುರುತಿಸಿದ್ದಾರೆ[೧೧೬]. ಕ್ರಿ.ಶ.೯೩೦ರ ಶಾಸನವೊಂದರಲ್ಲಿ ಗಂಗ ದುರ್ವಿನೀತನ ದಂಡನಾಯಕನೊಬ್ಬನು ಮಹಾಜನಗಳಿಗೆ ದಾನವನ್ನು ನೀಡುವಾಗ ಅಲ್ಲಿ ಒಲೆಯಐನೂರ್ವರು ಹಾಜರಿದ್ದರೆಂದು ತಿಳಿದುಬರುತ್ತದೆ[೧೧೭]. ವೀರಬಣಂಜು ಧರ್ಮ ಪ್ರತಿಪಾಳನರಾದ ಇವರು ಗುಡ್ಡಧ್ವಜ ಭಲ್ಲುಕಿದಂಡಹಸ್ತರಾಗಿದ್ದು[೧೧೮], ಸಾಮಂತ ಅರಸುಮನೆತನಗಳ ಶಾಸನವೊಂದರಲ್ಲಿ ಮುಮ್ಮರಿದಂಡಗಳು ತಮ್ಮನ್ನು ಅಯ್ಯಾವೊಳೆ-೫೦೦ರ ಅನ್ವಯದವರೆಂದು ಹೇಳಿಕೊಂಡಿದ್ದಾರೆ[೧೧೯].

## ನಖರರು:

ಅಂದಿನ ಕನ್ನಡ ನಾಡಿನಲ್ಲಿ ಇನ್ನೊಂದು ವರ್ತಕರ ಪ್ರಕಾರವಾದ ನಖರರನ್ನು ಶಾಸನಗಳು ಅಂಗಡಿ ಸೆಟ್ಟಿಯವರೆಂದು ಕರೆದಿರುವದರಿಂದ ಸಂತೆ, ಪಟ್ಟಣಗಳ ಸ್ಥಿರವರಿದ ಅಂಗಡಿಗಳ ವ್ಯಾಪಾರಿಗಳಿವರೆಂದು ಇವರು ಹೆಚ್ಚಾಗಿ ಪಟ್ಟಣಗಳಲ್ಲಿ ವಾಸಿಸುತ್ತಿದ್ದರೆಂದು, ಇವರು ಸಂತೆ-ಪೇಟೆಗಳಿಂದ ಬಂದ ವಿವಿಧ ಸರಕುಗಳನ್ನು ಖರೀದಿಸಿ, ಬಯಲು ಅಂಗಡಿ ಹಾಗೂ ಮಳಿಗೆಗಳಲ್ಲಿಟ್ಟು ಮಾರಾಟ ಮಾಡುತ್ತಿದ್ದರೆಂದು ಅರ್ಥೈಸಲಾಗಿದೆ[೧೨೦].ಶಾಸನವೊಂದು ನಖರರನ್ನು ಶೈವರೆಂದು ಗುರುತಿಸಿದೆಯಲ್ಲದೆ, ಇವರು ನಾಡಿನ ಪ್ರಮುಖ ಪಟ್ಟಣಗಳ ತುಂಬೆಲ್ಲಾ ಪಸರಿಸಿದ್ದರೆಂದೂ, ಹಾಗೂ ನಿಡುಗಲ್ಲಿನ ನಗರೇಶ್ವರ ದೇವಸ್ಥಾನಕ್ಕೆ ದಾನವನ್ನು ಕೂಡ ನೀಡಿದ್ದನ್ನು ಉಲ್ಲೇಖಿಸಿದೆ[೧೨೧]. ಇವರನ್ನು ಶಾಸನ ಪಟ್ಟಣದ ನಖರರೆಂದು ಕರೆದಿದೆಯಲ್ಲದೇ, ಇವರು ಹೆಚ್ಚಾಗಿ ಪಟ್ಟಣಗಳಲ್ಲಿ ವಾಸಿಸುತ್ತಿದ್ದ ವಿವರ ದೊರೆಯುತ್ತದೆ[೧೨೨]. ಕ್ರಿ.ಶ. ೯ನೆಯ ಶತಮಾನದ ಶಾಸನವೊಂದರಿಂದ ತಿಳಿಯುವಂತೆ ಉದಯಾಪುರದ ನಖರದವರೊಡಗೂಡಿ ಅರಸನು ಪಟ್ಟಿಪೊಂಬುಚ್ಚದ ನಖರಕ್ಕೆ ಸುಂಕದಾದಾಯದಲ್ಲಿ ಅರ್ಧವನ್ನು ಬಿಟ್ಟುಕೊಟ್ಟನು[೧೨೩]. ಆಳುಪರ ಶಾಸನವೊಂದು

ಹೊಸಪಟ್ಟಣ ಬಸುರೆಪುರದ ನಖರರು ನಖರೇಶ್ವರ ದೇವಸ್ಥಾನಕ್ಕೆ ದತ್ತಿಯನ್ನು ನೀಡಿದ್ದನ್ನು ಉಲ್ಲೇಖಿಸಿದೆ[೧೨೪]. ಕ್ರಿ.ಶ. ೧೩ನೆಯ ಶತಮಾನದ ಮೂಡಕೇರಿಯ ಶಾಸನವೊಂದು ತಿಳಿಸುವಂತೆ ಗಗನ ಶಿವಾಚಾರ್ಯನೆಂಬುವನಿಗೆ ಭೂಮಿದಾನವನ್ನು ಅರಸನೊಂದಿಗೆ ನಖರರು ಸೇರಿ ಬಿಟ್ಟದ್ದು ತಿಳಿಯುತ್ತದೆ[೧೨೫].

**ಮುಮ್ಮರಿದಂಡು:**

ಇದು ಮಧ್ಯಕಾಲೀನ ಕರ್ನಾಟಕದ ಪ್ರಮುಖ ವರ್ತಕರ ಇನ್ನೊಂದು ಪ್ರಕಾರವಾಗಿತ್ತು. ಕೇಶಿರಾಜನ ಪ್ರಕಾರ ಮುಮ್ಮರಿ ಎಂಬ ಪದಕ್ಕೆ ಕಾಸಿದ ಮಳಲು ಎಂದರ್ಥ. ಈ ಅರ್ಥದ ಜಾಡನ್ನು ಹಿಡಿದು ಮುಮ್ಮರಿದಂಡು ವ್ಯಾಪಾರಿಗಳ ಸೈನ್ಯವೆಂಬವನ್ನು ವಿದ್ವಾಂಸರು ವ್ಯಕ್ತಪಡಿಸಿರುವದನ್ನು ಬಿ.ಆರ್.ಹಿರೇಮಠರು ತಳ್ಳಿಹಾಕಿ[೧೨೬], ಅದು ದಂಡ(ಕೋಲು)ವೆಂದು ಅದು ಪೂರ್ವಜರ ಸಂಕೇತವೆಂದು ಹೇಳುತ್ತಾರೆ. ಕ್ರಿ.ಶ.೧೧೬೨ರ ಶಾಸನ ಇವರು ಅಡಕೆ, ಎಲೆ, ಅರಿಷಿಣ, ಮೆಣಸು, ಜೀರಿಗೆ, ಅಜವಾನ ಮುಂತಾದ ಧಾನ್ಯಗಳ ಮಾರಾಟಗಾರಾಗಿದ್ದನ್ನು ತಿಳಿಸಿದೆ[೧೨೭]. ಸರಕುಗಳನ್ನು ದೂರದ ಪ್ರದೇಶಗಳಿಂದ ತರುವದು ಹಾಗೂ ಅವುಗಳನ್ನು ಕೊಂಡುಹೋಗಿ ಮಾರಾಟ ಮಾಡುವದು ಇವರ ಕೆಲಸವಾಗಿತ್ತು. ಇವರು ಸರಕು ಹೇರಿಕೊಂಡು ಸಂತೆ-ಪೇಟೆಗಳಿಗೆ ಹೋಗಿ ಮಾರಾಟ ಮಾಡುವ ವರ್ತಕರು ಎಂದೂ ಹಾಗೂ ಕೆಲವು ಸಲ ಅಲ್ಲಿಯೇ ಸರಕು ಖರೀದಿಸಿ ಬೇರೆ ಸ್ಥಳಗಳಿಗೆ ಒಯ್ದು ಮಾರಾಟಮಾಡುತ್ತಿದ್ದರು. ಇದರಿಂದ ಇವರನ್ನು ಸಂಚರಿಸುವ ವರ್ತಕರೆಂದು ಕರೆಯುವದುಂಟು. ಹೀಗೆ ನಾಡಿನ ಉದ್ದಗಲಕ್ಕೂ ಸಂಚರಿಸಿ ವ್ಯಾಪಾರ ನಡೆಸಿದವರು ಮುಮ್ಮರಿದಂಡಗಳು.

**ಮಹಾವಡ್ಡವ್ಯವಹಾರಿ:**

ವಡ್ಡವ್ಯವಹಾರಿ ಹಿರಿಯ ವ್ಯಾಪಾರಿ ಎಂಬರ್ಥವುಳ್ಳ ಪದ (ವೃದ್ಧ>ವಡ್ಡ>ವಡ್ಡ) ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕದ ವರ್ತಕ ಪ್ರಕಾರಗಳಲ್ಲಿ ಇದು ಅತ್ಯಂತ ಪ್ರಮುಖವಾದದ್ದು. ವಡ್ಡವ್ಯವಹಾರಿ ಶಬ್ದದ ಹಿಂದಿರುವ ಮಹಾ ಅವರಲ್ಲಿಯ ಉನ್ನತ ಶ್ರೇಣಿಯವರನ್ನು ಸೂಚಿಸುವಂತಿದೆ. ಮತ್ತು ಅವರಲ್ಲಿರುವ ಅಂತಸ್ತು ಸೂಚಿಸುತ್ತದೆ. ಬಹುಷಃ ವಡ್ಡವ್ಯವಹಾರಿಗಳಲ್ಲಿಯೇ ಹಿರಿಯ ವರ್ತಕನಾದವನಿಗೆ ಮಹಾವಡ್ಡವ್ಯವಹಾರಿ ಎಂದು ಗೌರವ ಸೂಚಕವಾಗಿ ಕರೆದಿರಬಹುದು. ಇವರೇ ಪಟ್ಟಣಸ್ವಾಮಿಗಳ ಹುದ್ದೆಯನ್ನು ಕೆಲವು ಸಲ ವಹಿಸಿಕೊಳ್ಳುತ್ತಿದ್ದರೆಂದು ತಿಳಿಯುತ್ತದೆ. ಶಾಸನವೊಂದರಲ್ಲಿ ಇವರನ್ನು ಕುಬೇರವಂಶದವರು, ಶ್ವೇತಕುಲ ವೈಶ್ಯರೆಂದು ವರ್ಣಿಸಲಾಗಿದೆ[೧೨೮]. ಸಂತೆಪೇಟೆಗಳಿಗೆ ಹೋಗಿ ವ್ಯಾಪಾರಮಾಡುತ್ತಿದ್ದ ಇವರು ಬಹುಶಃ ಬೆಲೆ ಬಾಳುವ ವಸ್ತುಗಳ ಸಗಟು ವ್ಯಾಪಾರ ಕೈಕೊಳ್ಳುತ್ತಿದ್ದರು ಎಂದು ತಿಳಿಯುತ್ತದೆ. ಇವರಲ್ಲಿ ವೈದಿಕ, ಜೈನ, ಶೈವರೂ ಇದ್ದರು. ಅಲ್ಲದೇ ಇವರಿಂದ ರಾಜಭಂಡಾರಕ್ಕೆ ಹೆಚ್ಚು ಆದಾಯ ಬರುತ್ತಿತ್ತು. ಬಾಗಳಿಯ ಸುಮಾರು ಕ್ರಿ.ಶ.೧೨ನೆಯ ಶತಮಾನದ ಶಾಸನವೊಂದರಲ್ಲಿ ಮಲೆಯಾಳ ವಡ್ಡವ್ಯವಹಾರಿ ಕೋಮರ ಮೂರ್ಖಸೆಟ್ಟಿ ಪೊನ್ಮೊಖಸೆಟ್ಟಿಯರು ಕೊಳಮೂಕ ಪಟ್ಟಣ(ಕೇರಳ)ದಿಂದ ಕನ್ನಡನಾಡಿಗೆ ಬಂದು ನೆಲೆಸಿದರೆಂದು ತಿಳಿಯುತ್ತದೆ[೧೨೯].

**ನಾನಾದೇಶಿ, ಉಭಯನಾನಾದೇಶಿ:**

ಶಾಸನಗಳಲ್ಲಿ ಕಾಣಸಿಗುವ ನಾನಾದೇಶಿ-ಉಭಯ ನಾನಾದೇಶಿ ಎಂಬ ಪದಗಳು ಕರ್ನಾಟಕ ವರ್ತಕರ ಸಂಘ ಅಥವಾ ವಿಶಿಷ್ಟ ವರ್ತಕರ ಪ್ರಕಾರವಲ್ಲ. ಆದರೆ ದೇಶ ಅಥವಾ ಪ್ರದೇಶದ ಸೆಟ್ಟಿ, ನಖರ, ಮುಮ್ಮುರಿದಂಡು, ವಡ್ಡವ್ಯವಹಾರಿ, ಪಟ್ಟಣಸ್ವಾಮಿ, ಮುಂತಾದ ವರ್ತಕರನ್ನು ಸೂಚಿಸುತ್ತವೆ. ದೇಶವೆಂದರೆ ಸ್ಥಳ-ಪ್ರದೇಶವೆಂದೂ, ಉಭಯವೆಂದರೆ ಸ್ವದೇಶ-ಪರದೇಶವೆಂದು ಬಿ.ಆರ್.ಹಿರೇಮಠರು ಅರ್ಥೈಸುತ್ತಾರೆ[೧೩೦]. ಇವರು ಕೂಡ ಹಲವು ಬಗೆಯ ಸರಕುಗಳನ್ನು ತೆಗೆದುಕೊಂಡು ಕರ್ನಾಟಕದ ವಿವಿಧ ಗ್ರಾಮ, ಪಟ್ಟಣಗಳಿಗೆ ಹೋಗಿ ಮಾರಾಟಮಾಡುತ್ತಿದ್ದರು. ಜೊತೆಗೆ ಆಯಾ ಪ್ರದೇಶದಲ್ಲಿ ಬೆಳೆಯುವ ವಸ್ತುಗಳನ್ನು ಖರೀದಿಸುತ್ತಿದ್ದರು. ಹೀಗೆ ಕ್ರಮಕ್ರಮವಾಗಿ ವ್ಯಾಪಾರ ನಡೆಸುವ ಮೂಲಕ ನಾಡಿನ ತುಂಬಾ ಸಂಚರಿಸುತ್ತಿದ್ದರೆಂದು ತಿಳಿಯುತ್ತದೆ. ಶಾಂತಾರರ ಶಾಸನವೊಂದು ಶಾಂತಿನಾಥದೇವರ ಬಸದಿಗೆ ದಾನವನ್ನು ನೀಡುವಾಗ, ಅಲ್ಲಿನ ಅನೇಕ ಜನರುಗಳ ಜೊತೆಗೆ ಉಭಯನಾನಾದೇಶಿಗಳು ಹಾಜರಿದ್ದರು[೧೩೧].

ಈ ಮೇಲೆ ಉಲ್ಲೇಖಿಸಿದ ವ್ಯಾಪಾರಿಗಳಲ್ಲದೇ ಇನ್ನು ಮುಂತಾದ ವ್ಯಾಪಾರಿಗಳು ಹಾಗೂ ಉತ್ಪಾದಕರೂ ತಮ್ಮದೇ ಆದ ಸಂಘ ಸಂಸ್ಥೆಗಳನ್ನು ಹೊಂದಿ ಅದರ ಮೂಲಕ ಸಾಮಾಜಿಕ ಕಾರ್ಯಗಳನ್ನು ಕೈಕೊಂಡಿದ್ದು ತಿಳಿದುಬರುತ್ತದೆ.

**ಸಾರಿಗೆ-ಸಂಪರ್ಕ:**

ಊರು-ಪಟ್ಟಣ, ನಗರ, ರಾಜಧಾನಿಗಳ ಮಧ್ಯದ ವ್ಯಾಪಾರ ವಹಿವಾಟಿಗಾಗಿ ಜನಸಂಪರ್ಕಕ್ಕಾಗಿ ರಸ್ತೆಗಳಿರುತ್ತಿದ್ದವೆಂದು ಹೇಳಬೇಕಿಲ್ಲ. ಇವುಗಳು ಗ್ರಾಮ-ಗ್ರಾಮಗಳ ಮಧ್ಯದ ಸಂಪರ್ಕಕ್ಕಾಗಿ ಸಹಜವಾಗಿಯೇ ಜನರಿಂದ ರೂಪುಗೊಳ್ಳುತ್ತಿದ್ದವು. ದಾನ ಬಿಡುವ ಸಂದರ್ಭದಲ್ಲಿ ಭೂಮಿಯ ಸೀಮಾ ನಿರ್ದೇಶನಗಳನ್ನು ನೀಡುವಾಗ ರಸ್ತೆಗಳ ಕುರಿತು ಶಾಸನಗಳು ಹೇಳಿವೆ. ಪ್ರಾಚೀನ ಕಾಲದಲ್ಲಿ ಭೂಮಾರ್ಗ, ಜಲಮಾರ್ಗಗಳು ವ್ಯಾಪಾರ ಮತ್ತು ವಾಣಿಜ್ಯದ ಪ್ರಮುಖ ಸಂಪರ್ಕಸೇತುವೆಗಳಾಗಿದ್ದವು. ಅದಕ್ಕಾಗಿ ಅಂದು ಎತ್ತು, ಕತ್ತೆ, ಕೋಣಗಳನ್ನು ರಸ್ತೆಗಳಮೇಲೆ ಬಳಸಿದರ[೧೩೨], ತೆಪ್ಪ-ದೋಣಿಗಳ ಮೂಲಕ ನದಿ-ಹಳ್ಳಗಳನ್ನು ದಾಟುತ್ತಿದ್ದರು. ಇವನ್ನು ಕಡುಹುಗಳೆಂದು ಕರೆಯುತಿದ್ದರು[೧೩೩].

**ನಾಣ್ಯ ವ್ಯವಸ್ಥೆ:**

ನಾಣ್ಯ ವ್ಯವಸ್ಥೆಯು ಅರ್ಥವ್ಯವಸ್ಥೆಗೆ ಹೊಸ ಮನ್ವಂತರವನ್ನು ತೆರೆದಿದ್ದು, ಅದು ವಿಕಸಿತವಾಗದ ಸಮಯದಲ್ಲಿ ಕೊಡು-ಕೊಳ್ಳುವ ವ್ಯವಹಾರಕ್ಕೆ ವಸ್ತುವಿನಿಮಯವೇ ಸಾಧನವಾಗಿತ್ತು. ನಾಣ್ಯಗಳನ್ನು ಟಂಕಿಸುವದರೊಂದಿಗೆ ಅರ್ಥವ್ಯವಸ್ಥೆಯ ರೂಪವೇ ಬದಲಾದಂತಾಯಿತು. ನಾಣ್ಯಗಳನ್ನು ಟಂಕಿಸುವ (ಮುದ್ರಿಸುವ) ಸ್ಥಳಗಳನ್ನು ಟಂಕಸಾಲೆ, ಕಮ್ಮಟಗಳೆಂದು ಕರೆಯಲಾಗಿದೆ[೧೩೪]. ಪ್ರಾಚೀನ ಹಾಗೂ ಮಧ್ಯಕಾಲೀನ ಶಾಸನಗಳಲ್ಲಿ ಗದ್ಯಾಣ, ಧರಣ[೧೩೫], ಹೊನ್ನ[೧೩೬], ಪಣ, ಪೊನ್ನು[೧೩೭], ಧ್ರಮ್ಮ[೧೩೮], ಹಣ[೧೩೯], ಹಾಗ, ವೀಸ[೧೪೦], ಹೊಂಗವೀಸ[೧೪೧], ಹೊಳೆಯಹೊನ್ನು[೧೪೨],

ಹಾಳಿಯಹೊನ್ನು[೧೪೩], ಪೆರ್ಗಡೆಗದ್ಯಾಣ[೧೪೪], ಪಾಂಡ್ಯಗದ್ಯಾಣ[೧೪೫], ಸಮುದಾಯಗದ್ಯಾಣ[೧೪೬], ಸಿಂಧಗದ್ಯಾಣ[೧೪೭], ಬಾರಕನೂರು ಗದ್ಯಾಣ, ಮಂಗಲೂರು ಗದ್ಯಾಣ[೧೪೮], ಇತ್ಯಾದಿ ನಾಣ್ಯಗಳ ಉಲ್ಲೇಖಬರುತ್ತಿದ್ದು ಆದರೆ ಅವುಗಳ ವಿವರಣೆಯ ಕುರಿತು ತಿಳಿದುಬರುವದಿಲ್ಲ. ಇವು ಬಂಗಾರ, ಬೆಳ್ಳಿ ಹಾಗೂ ಇತರ ಲೋಹಗಳಿಂದ ತಯಾರಿಸಿದ ನಾಣ್ಯಗಳಾಗಿದ್ದವು. ಇವುಗಳನ್ನು ಕಮ್ಮಟಗಳಲ್ಲಿ ಟಂಕಿಸಿದ್ದು, ಇವುಗಳ ತೂಕವು ಪ್ರದೇಶಗಳಿಂದ ಪ್ರದೇಶಕ್ಕೆ ಬೇರೆ ಬೇರೆಯಾಗಿತ್ತು.

ಅಂದು ಬಳಕೆಯಲ್ಲಿದ್ದ ನಾಣ್ಯಗಳನ್ನ ಕುರಿತು ರಾಜಾದಿತ್ಯನು ತನ್ನ ವ್ಯವಹಾರಗಣಿತದಲ್ಲಿ ವಿವರಿಸಿದ್ದಾನೆ. ಜೊತೆಗೆ ನಾಣ್ಯಗಳ ಪರಸ್ಪರ ಸಂಬಂಧವನ್ನು ಸಹ ಅವನು ಗುರ್ತಿಸಿದ್ದಾನೆ. ಅದು ಹೀಗಿದೆ

೧ ಗದ್ಯಾಣ = ೧೦ ಪಣ
೧ ಪಣ = ೪ ಹಾಗ
೧ ಹಾಗ = ೫ ವೀಸ
೧ ವೀಸ = ೪ ಕಾಣಿ[೧೪೯]

ಅಲ್ಲದೇ ತನ್ನ ಲೀಲಾವತಿ ಗಣಿತದಲ್ಲಿ ಇನ್ನೊಂದು ಪಟ್ಟಿಕೆಯನ್ನು ಹೀಗೆ ನೀಡಿದ್ದಾನೆ.

೧ ವರಹ = ೨ ಹೊನ್ನ
೨ ಹೊನ್ನ = ೫ ಹಣ
೧ ಹಣ = ೨ ಅಡ್ಡ
೧ ಅಡ್ಡ = ೨ ಹಾಗ
೧ ಹಾಗ = ೨ ಬೆಳೆ
೧ ಬೆಳೆ = ೨ ವೀಸ
೧ ವೀಸ = ೨ ಕಾಣಿ
೧ ಕಾಣಿ = ೪ ಗಿದ್ದಾಣಿ[೧೫೦]

ಇಲ್ಲಿಯ ವರಹ, ಗದ್ಯಾಣವಾಗಿದ್ದು ಅದು ಎರಡು ಹೊನ್ನುಗಳಿಗೆ ಸಮಾನವೆನ್ನುವದನ್ನು ನೋಡಿದರೆ ಶಾಸನಗಳಲ್ಲಿ ಬರುವ ಪೊನ್ನವನ್ನು ಅರ್ಧಗದ್ಯಾಣವೆನ್ನಬೇಕಾಗುತ್ತದೆ. ನಿಷ್ಕ ಮತ್ತು ಧರಣಿ ನಾಣ್ಯಗಳು ತೂಕಕ್ಕೆ ಒಂದು ನಿಷ್ಕಕ್ಕೆ ಸಮನಾಗಿದೆ, ಅಂದರೆ ನಿಷ್ಕವು ಗದ್ಯಾಣಕ್ಕಿರುವ ಇನ್ನೊಂದು ಹೆಸರೇ ಹೊರತು ಬೇರೆಯದಲ್ಲ[೧೫೧]. ದ್ರಮ್ಮಗಳಲ್ಲಿ ಬೆಳ್ಳಿ, ಬಂಗಾರದವುಗಳು ಎಂಬ ಎರಡು ರೀತಿಯಿದ್ದು, ದ್ರಮ್ಮವು ಗ್ರೀಕ್ ಪದದಿಂದ ಬಂದಿದೆ[೧೫೨]. ದ್ರಮ್ಮವು ಈ ಅವಧಿಯಲ್ಲಿ ಹೆಚ್ಚು ಪ್ರಚಾರದಲ್ಲಿದ್ದಂತೆ ಗದ್ಯಾಣವು ಅಷ್ಟೇ ಪ್ರಚಾರವನ್ನು ಪಡೆದಿತ್ತು.

**ತೂಕ ಮತ್ತು ಅಳತೆಗಳು:**

ಶಾಸನಗಳಲ್ಲಿ ಭೂ ಅಳತೆಗಳಲ್ಲಿ ನಿವರ್ತನ[೧೫೩], ಕಮ್ಮ[೧೫೪], ಹಿರಿಯಕೋಲು, ಮತ್ತರು[೧೫೫], ರಾಜಮಾನ, ಖಂಡುಗ[೧೫೬], ಪಿರಿಯಕೋಲು[೧೫೭], ಸಲಗೆ[೧೫೮], ಕಂಬ[೧೫೯], ಗೇಣ, ಬೆಂಕೊಳ್ವನ ಕೋಲು[೧೬೦], ಗೇಣಗಳ[೧೬೧], ಪದಗಳು ಬಳಕೆಯಾಗಿದ್ದರೆ, ಧಾನ್ಯಗಳ ಅಳತೆಯಲ್ಲಿ ಸೊಲ್ಲಿಗೆ[೧೬೨], ಮಾನ, ಕೊಳುಗ[೧೬೩], ಖಂಡುಗ[೧೬೪], ಸೊಂಟಿಗೆ[೧೬೫], ಪಡಿ[೧೬೬], ಪಲ[೧೬೭], ಸಟ್ಟುಗ[೧೬೮] ಮತ್ತು ಬಳ್ಳ[೧೬೯]ಗಳನ್ನು ಉಪಯೋಗಿಸಿದ್ದರೆ, ದ್ರವಪದಾರ್ಥಗಳ ಅಳತೆಯಲ್ಲಿ ಸೌಟು ಎಂಬ ಅಳತೆಯನ್ನು ಉಪಯೋಗಿಸಲಾಗಿದೆ.

ಧಾನ್ಯಗಳ ಅಳತೆಯಲ್ಲಿ ಸೊಲಿಗೆ, ಮಾನ, ಕೊಳಗ, ಖಂಡುಗ ಮತ್ತು ಬಳ್ಳಗಳು ಉಪಯೋಗವಾಗಿದ್ದು, ಇವುಗಳ ಸಂಬಂಧವನ್ನು ರಾಜಾದಿತ್ಯನು ವ್ಯವಹಾರಗಣಿತದಲ್ಲಿ ಹೀಗೆ ಹೇಳಿದ್ದಾನೆ.

ನಾಲ್ಕು ಗಿದ್ದ = ಒಂದು ಸೊಲ್ಲಿಗೆ
ನಾಲ್ಕು ಸೊಲ್ಲಿಗೆ = ಒಂದು ಮಾನ
ನಾಲ್ಕು ಮಾನ = ಒಂದು ಬಳ್ಳ
ನಾಲ್ಕು ಬಳ್ಳ = ಒಂದು ಕೊಳಗ
ಐದು ಕೊಳಗ = ಒಂದು ಪಂಚಕ
ನಾಲ್ಕು ಪಂಚಕ = ಒಂದು ಖಂಡುಗ

ಅಲ್ಲದೇ ಇನ್ನೊಂದು ಅಳತೆಯ ಕೋಷ್ಟಕವು ಹೀಗಿದೆ.

ನಾಲ್ಕು ಸುವರ್ಣ = ಒಂದು ಕರ್ಷ
ಒಂದು ಕರ್ಷ = ಒಂದು ಫಲ
ಇಪ್ಪತ್ತು ಫಲ = ಒಂದು ಬಿಸಗೆ
ಐದು ಬಿಸಗೆ = ಒಂದು ತೊಲೆ
ಇಪ್ಪತ್ತು ತೊಲೆ = ಒಂದು ಬಾರ[೧೭೦]

ಹಣ್ಣು-ಹಂಪಲ, ತೆಂಗಿನಕಾಯಿ, ಕಬ್ಬು, ಅಡಿಕೆ ಮತ್ತು ಬೆಲ್ಲದ ಅಚ್ಚುಗಳು, ಎಣಿಕೆ ಮಾಡಿಕೊಡುವ ವಿಳ್ಯೆದೆಲೆ, ಕಾಯಿಪಲ್ಯೆ ಇತ್ಯಾದಿಗಳನ್ನು ಸೂಡುಗಳನ್ನಾಗಿ ಮಾರುತ್ತಿದ್ದರು. ವಡ್ಡಾರಾಧನೆಯೂ ಸಹ ಬಳ್ಳ ಚಿಕ್ಕ ಅಳತೆಯೆಂದೂ, ಖಂಡುಗವು ದೊಡ್ಡ ಅಳತೆಯೆಂದೂ ಹೇಳುತ್ತದೆ[೧೭೧].

## ರಾಜ್ಯದ ಆದಾಯ ತೆರಿಗೆ-ಸುಂಕ ಇತ್ಯಾದಿಗಳು:

ಒಂದು ರಾಜ್ಯದ ಹಣಕಾಸು ವ್ಯವಸ್ಥೆ ಆಯಾ ರಾಜ್ಯದ ಅಭಿವೃದ್ಧಿ ಹಾಗೂ ಸುಭದ್ರತೆಯ ಸಂಕೇತವಾಗಿರುತ್ತದೆ. ಆದ್ದರಿಂದ ರಾಜ್ಯದ ಸಪ್ತಾಂಗಗಳಲ್ಲಿ ಕೋಶವು ಪ್ರಮುಖವಾದುದಾಗಿದೆ. ಈ ಕೋಶವನ್ನು ತುಂಬುವದರ ಸಲುವಾಗಿ

ರಾಜನು ವಿವಿಧ ಮೂಲಗಳಿಂದ ಹಣವನ್ನು ಸಂಗ್ರಹಿಸುತ್ತಿದ್ದನು. ಕೌಟಿಲ್ಯನು ಹೀಗೆ ಹಣ ಸಂಗ್ರಹಿಸುವದನ್ನು ಎರಡು ಗುಂಪುಗಳಲ್ಲಿ ಕ್ರೋಢೀಕರಿಸಿದ್ದಾನೆ. ಈ ಕೋಶವನ್ನು ಸಂಗ್ರಹಿಸುವ ಮಾರ್ಗವೇ ತೆರಿಗೆ. ಕೆಲವೊಮ್ಮೆ ಇತರ ಮೂಲಗಳಿಂದಲೂ ರಾಜ್ಯದ ಬೊಕ್ಕಸಕ್ಕೆ ಆದಾಯ ಬರುತ್ತಿತ್ತು.

ಭಾರತ ಕೃಷಿ ಪ್ರಧಾನ ರಾಷ್ಟ್ರವಾಗಿರುವದರಿಂದ ಇಲ್ಲಿ ಭೂಮಿಯೇ ಸಂಪತ್ತಿನ ಮೂಲ. ಭೂಮಿಯ ಮೇಲೆ ವಿಧಿಸುವ ತೆರಿಗೆ ದೊಡ್ಡ ಆದಾಯವನ್ನು ನೀಡುತ್ತದೆ. ಆದ್ದರಿಂದ ಭೂಕಂದಾಯ ಸರಕಾರದ ಬಹುದೊಡ್ಡ ಉತ್ಪನ್ನದ ಮಾರ್ಗವೆನಿಸಿದೆ. ಪ್ರಾಚೀನ ಕಾಲದಿಂದಲೂ ಭೂಮಿಯ ಮೇಲೆ ವಿಧಿಸುತ್ತಿದ್ದ ತೆರಿಗೆಯಿಂದ ಬರುವ ಆದಾಯವು ಬಹು ದೊಡ್ಡದಾಗಿದೆ. ಅಂದಿನ ಕಾಲದಲ್ಲಿ ಭೂಕಂದಾಯಕ್ಕೆ ಸೇರುವ ತೆರಿಗೆಗಳಲ್ಲಿ ಸಿದ್ಧಾಯ ಹಾಗೂ ಅರುವಣಗಳು ಪ್ರಮುಖವಾದವುಗಳು.

ಸಿದ್ಧಾಯ ಭೂಮಿಯ ಮೇಲೆ ವಿಧಿಸುತ್ತಿದ್ದ ತೆರಿಗೆಯನ್ನು ಸೂಚಿಸುವಂತೆ ತೋರುತ್ತದೆ. ಇದನ್ನು ಮೊದಲೇ ನಿರ್ಧರಿಸಿ ಆನಂತರ ಅದನ್ನು ವಸೂಲಿ ಮಾಡುತ್ತಿದ್ದರು. ಸಾಮಂತರಸು ಮನೆತನಗಳ ಶಾಸನಗಳಲ್ಲಿಯೂ ಇದರ ಉಲ್ಲೇಖವು ಬರುತ್ತದೆ. ಗಂಗ ರಾಚಮಲ್ಲನು ಅವನ ಯೋಧನೊಬ್ಬನ ವೀರಮರಣದ ಸಂದರ್ಭದಲ್ಲಿ ಸಿದ್ಧಾಯದೊಳಗಣ ಐವತ್ತು ಗದ್ಯಾಣಗಳನ್ನು ಕಲ್ನಾಡಾಗಿ ಬಿಟ್ಟದನ್ನು ಕ್ರಿ.ಶ. ೯ನೆಯ ಶತಮಾನದ ಶಾಸನವೊಂದು ಉಲ್ಲೇಖಿಸಿದೆ[೧೭೨]. ದೇವಯ್ಯನೆಂಬುವವನು ದೇವಾಲಯಕ್ಕೆ ೪೦ ಮತ್ತರು ಭೂಮಿಯನ್ನು ನೀಡಿ ಅದರ ಮೇಲಿನ ಸಿದ್ಧಾಯವನ್ನು[೧೭೩] ಬಿಟ್ಟರೆ, ರುದ್ರಪ್ಪಯ್ಯನ ಪೆರ್ಗಡೆಯಾದ ಆಚಪ್ಪಯ್ಯ ಗಾವುಂಡ ಸಾಮಿಕಳ್ತೆಯಮ್ಮರ ಭೀಮರಾಶಿ ಭಟಾರನ ಕಾಲಕರ್ಚಿ ಸಾವಿರ ಬಳ್ಳಿಯ ಎಲೆಯ ತೋಟವನ್ನು ಕೊಟ್ಟು ಸಿದ್ಧಾಯವಾಗಿ ಎಳನ್ನು(ಗದ್ಯಾಣ) ದೇವರಿಗೆ, ಬಾರಿಸುವವರಿಗೆ ನೀಡಿದನು[೧೭೪]. ಕದಂಬ ಹರಿಕೇಸರಿಯ ಕಾಲದಲ್ಲಿ ಪೊಳಲು ಬಂಕಾಪುರ ಪಂಚಮಠಸ್ಥಾನಕ್ಕೆ ಸಿದ್ಧಾಯವನ್ನು ದಾನವಾಗಿ ನೀಡುವ ವಿಷಯ ಶಾಸನವೊಂದರಲ್ಲಿದೆ[೧೭೫]. ಕಿತ್ತೂರಿನ ರಾಮೇಶ್ವರ ದೇವರಿಗೆ ಮಹಾಮಂಡಳೇಶ್ವರ ಈಕರವರ್ಮನು ಮಳ್ಚರೆ ಗ್ರಾಮದ ಸಿದ್ಧಾಯವನ್ನು ದಾನವಾಗಿ ನೀಡಿದ ವಿಷಯ ಕ್ರಿ.ಶ. ೧೦೭೯ರ ಶಾಸನದಲ್ಲಿದೆ[೧೭೬]. ವೀರಚೋಳ ಕೊಂಗಾಳ್ವನ ಶಾಸನವೊಂದು ಅವನು ಮುಳ್ಳೂರಿನ ಸಿದ್ಧಾಯವನ್ನು ಅಲ್ಲಿನ ಸಾಮಾಜಿಕ ಕಾರ್ಯಕ್ಕಾಗಿ ಬಿಟ್ಟುಕೊಟ್ಟದ್ದನ್ನು ಉಲ್ಲೇಖಿಸಿದೆ[೧೭೭]. ಅಲ್ಲದೇ ಶಾಸನವೊಂದರಲ್ಲಿ "ಪೂರ್ವ ಸಿದ್ಧಾಯ ಕಮಿದು ಕೊಣ್ಡರಪ್ಪದೆ ಕವಿಲೆಯವ....."[೧೭೮] ಎಂದು ಹೇಳಿರುವದರಿಂದ ಸಿದ್ಧಾಯವನ್ನು ಕಾಲಕಾಲಕ್ಕೆ ಬದಲಾಯಿಸಿರುವಂತೆ ಕಾಣುತ್ತದೆ. ಅದಕ್ಕಾಗಿ ಪೂರ್ವ ಸಿದ್ಧಾಯವನ್ನು ಉಲ್ಲೇಖಿಸುತ್ತದೆ.

ಅರುವಣ ತೆರಿಗೆ ಅನೇಕ ಶಾಸನಗಳಲ್ಲಿ ಕಾಣಸಿಕೊಂಡಿದ್ದು ದತ್ತಿಯಾಗಿ ಬಿಟ್ಟುಕೊಟ್ಟ ಹೊಲಕ್ಕೊ, ತೋಟಕ್ಕೋ ಇಂತಿಷ್ಟು ಅರುವಣವೆಂದು ಆಕರಿಸಿಕೊಳ್ಳುವ ಸುಂಕ ಇದಾಗಿರಬೇಕು. ಶಾಸನಗಳಲ್ಲಿ ಅರುವಣ ನೀಡಿದ ಕುರಿತು "ಸರ್ವಾಭ್ಯಂತರಸಿದ್ಧ ಅಂತಪ್ಪುರಂ ಪದಿನೆಣ್ಡರುಂ ಪರಿನಮಿವರುತಾವರ್ ಗದ್ಯಾಣವರುವಣವಲ್ಲಿಂದತ

ಕಾರವಾತ್ರವಾಪ್ಪೊದೆಂ ಮಿತಿವರಮಿದೇವಿಳಗೆ ಒಂದು ಅರುವಣ''[೧೭೯] ಎನ್ನಲಾಗಿದೆ. ಡಾ.ಬಾರ್ನೆಟ್‌ರು ಅರುವಣವೆಂದರೆ, ಮಾನ್ಯ ಭೂಮಿಗಳ ಮೇಲಿನ ತೆರಿಗೆ ಎಂದಿದ್ದಾರೆ. ಕನ್ನಡ ನಿಘಂಟು ಅರುವಣಕ್ಕೆ ಒಂದು ತೆರಿಗೆ, ನೇಗಿಲು ತೆರಿಗೆ ಎಂಬರ್ಥವನ್ನು ಕೊಟ್ಟಿದೆ. ಇದು ಬಹುಷಃ ಸರಿಯಾದ ಅರ್ಥವಾಗಿದೆ ಎಂದು ಡಾ.ಚಿದಾನಂದಮೂರ್ತಿಯವರು ಸಮರ್ಥಿಸಿದ್ದಾರೆ[೧೮೦]. ಆದರೆ ಡಾ.ಎಂ.ಎಂ. ಕಲಬುರ್ಗಿಯವರು ಇದು ಕೇವಲ ಹೊಲ ತೋಟಗಳಿಗೆ ಹಾಕುವ ತೆರಿಗೆಯೂ ಅಲ್ಲ, ಸರಕಾರ ಆಕರಿಸುವದೂ ಅಲ್ಲವೆನ್ನುತ್ತ ದೇವರಿಗೆ ದತ್ತಿಬಿಟ್ಟ ಹೊಲ-ಮನೆಗಳನ್ನು ತಾವು ಭೋಗಿಸುವದಕ್ಕೆ ಪ್ರತಿಯಾಗಿ ಕೊಡುವ ಧನವೇ ಅರುವಣವೆಂದೂ, ಬಹುಷಃ ಇದು ಅರ್ಪಣ ಎಂಬುದರ ತದ್ಭವವೆಂದೂ(ಅರ್ಪಣ >ಅರುಪಣ >ಅರುವಣ ಎಂಬ ರೂಪಾಂತರ ಕನ್ನಡದಲ್ಲಿ ಮಾನ್ಯ)ಹೇಳಬಹುದೆಂದಿದ್ದಾರಲ್ಲದೇ, ಇನ್ನೂ ಮುಂದುವರಿದು ಅವರು ಶಾಸನಗಳಲ್ಲಿ ಬರುವ ತಿರುವರಣಕ್ಕೆ ತಿರುಪತಿ<ಶ್ರೀಪತಿ, ತಿರುನೀಲಕಂಠ<ಶ್ರೀನೀಲಕಂಠ ಮಾದರಿಯಲ್ಲಿ ಶ್ರೀಯರ್ಪಣ ಎಂದು ಅರ್ಥೈಸಿದ್ದಾರೆ[೧೮೧]. ಆದರೆ ತಿರುವರುವಣದಂತೆ ವರುವಣವಲ್ಲಿಂದೆತ್ತು[೧೮೨] ರೂಪವೂ ಶಾಸನಗಳಲ್ಲಿ ದೊರಕುವದರಿಂದ ಸಧ್ಯ ಅದನ್ನು ತೆರುವ (ಕೊಡುವ) ಅರುವಣ ಎಂದು ಹೇಳಬಹುದು. ಮಹಾಮಂಡಳೇಶ್ವರ ಸಿಂದ ಪೆರ್ಮಾಡಿಯರಸನು ತ್ರಿಳೋಚನ ಪಂಡಿತರಿಗೆ ಆರುವಣದ ಮೂವತ್ತು ಮತ್ತರನ್ನು ದಾನವಾಗಿ ನೀಡಿದ ಉಲ್ಲೇಖ ಶಾಸನವೊಂದರಲ್ಲಿದೆ[೧೮೩]. ಮಹಾಮಂಡಳೇಶ್ವರ ಹೆಮ್ಮಾಡಿಯರಸನು ಇಂಗಳೇಶ್ವರ ಶ್ರೀ ನೀಲಕಂಠದೇವರಿಗೆ ಆರುವಣವಾಗಿ ಪಿರಿಯಕೋಲ ೧೦೦ ಮತ್ತರು ಕರಿಯ ನೆಲವನ್ನು ಬಿಟ್ಟುಕೊಟ್ಟದ್ದು ತಿಳಿಯುತ್ತದೆ[೧೮೪].

ತೋಟದ ಆದಾಯದ ಮೇಲೆ ತೋಂಟದಾಯ ದಸವಂದವನ್ನು ಆಕರಿಸುತ್ತಿದ್ದುದು ಶಾಸನಗಳಿಂದ ತಿಳಿದುಬರುತ್ತದೆ. ಈ ದಸವಂದವು ಉತ್ಪಾದನೆಯ ೧/೧೦ ನೆಯ ಭಾಗವನ್ನು ಭೂ ನೀರಾವರಿಗೆ ಬಿಡುವ ಕರವೆನ್ನಲಾಗಿದೆ[೧೮೫]. ಈ ದಸವಂದವನ್ನು ದೇವರಿಗೆ ದಾನವನ್ನು ನೀಡುವಾಗ ಬಿಟ್ಟುಕೊಟ್ಟ ಉದಾಹರಣೆಗಳು ದೊರೆಯುತ್ತವೆ[೧೮೬]. ಭೂಮಿಗೆ ನೀರುಣಿಸುತ್ತಿದ್ದರೆ, ಅಥವಾ ಕೆರೆಯ ನೀರನ್ನು ಬಳಸಿಕೊಳ್ಳುತ್ತಿದ್ದರೆ, ಅದರ ಮೇಲೆ ಸುಂಕವನ್ನು ಆಕರಿಸಲಾಗುತ್ತಿತ್ತು. ಇದಕ್ಕೆ ನೀರುಣಿಕೆಯ ಸುಂಕವೆಂದು ಕರೆಯುತ್ತಿದ್ದರು. ಚಿಂಚಲಿ ಶಾಸನವು ದೇವಣ್ಣಯ್ಯನು ಮಹಾಜನರ ಕಾಲಕರ್ಚಿ ನಿರುಣೀಸುಂಕವನ್ನು ಬಿಟ್ಟುಕೊಟ್ಟದ್ದನ್ನು ತಿಳಿಸುತ್ತದೆ[೧೮೭]. ಕ್ರಿ.ಶ.೯೬೪ ರ ಕಪ್ಪಲೂರ ಶಾಸನದಲ್ಲಿ ನೀರ್ಗಂದಾಯದ ಉಲ್ಲೇಖವಿದೆ[೧೮೮]. ಅಲ್ಲದೇ ಉದಿಯಾವರದ ಶಾಸನವೊಂದರಲ್ಲಿ ನೀರುನೆಲದ ಸುಂಕವನ್ನು ಕುರಿತು ಹೇಳಲಾಗಿದೆ[೧೮೯].

ಮನೆಗಳಲ್ಲಿ ಅಟ್ಟಗಳಿದ್ದರೆ ಅವುಗಳ ಮೇಲೆಯು ತೆರಿಗೆಯನ್ನು ವಿಧಿಸುತ್ತಿದ್ದರು[೧೯೦]. ಸಾಮಂತ ಮಣಲೇರನು ಅಟ್ಟದೆರೆಯನ್ನು ಕನಕಸೇನ ಭಟಾರರಿಗೆ ಬಿಟ್ಟುಕೊಟ್ಟ ವಿವರ ಮದ್ದೂರು ತಾಲೂಕಿನ ಶಾಸನವೊಂದರಲ್ಲಿದೆ[೧೯೧]. ಅಲ್ಲದೇ ಮನೆಗಳ ಮೇಲೆಯೂ ತೆರಿಗೆಯನ್ನು ಹಾಕುತ್ತಿದ್ದುದಾಗಿ ತಿಳಿದುಬರುತ್ತದೆ. ಅದಕ್ಕೆ ಸಂಬಂಧಿಸಿದಂತೆ ಮನೆದೆರೆ[೧೯೨],

ಹಾರಿಕಾಯ ತಿಪ್ಪೆಸುಂಕ[೯೩]ಗಳ ಉಲ್ಲೇಖ ಶಾಸನಗಳಲ್ಲಿ ದೊರೆಯುತ್ತದೆ. ಇದಲ್ಲದೇ ಹಳೆಯ ಹಾಗೂ ಹೊಸಮನೆಗಳಿಗೆ ಬೇರೆ ಬೇರೆ ಪ್ರಮಾಣದ ತೆರಿಗೆ ಇದ್ದು, ಹೊಸಮನೆಗಳನ್ನು ಕಟ್ಟುವದಕ್ಕೆ ರಿಯಾಯತಿ ನೀಡಿ ಪ್ರೋತ್ಸಾಹಿಸಲಾಗುತ್ತಿತ್ತು[೯೪]. ಶಾಸನವೊಂದು ಕಟ್ಟಿದ ಹೊಸಮನೆಗೆ ಮೊದಲವರ್ಷ ತೆರಿಗೆಯಿಲ್ಲ, ಎರಡನೆಯ ವರ್ಷದಲ್ಲಿ ಅರ್ಧತೆರಿಗೆ, ಮೂರನೆಯ ವರ್ಷಕ್ಕೆ ಹಳೆಯಮನೆಗೆ ವಿಧಿಸುವ ಸಾಮಾನ್ಯ ತೆರಿಗೆಯನ್ನು ಮೂರು ಕಂತುಗಳಲ್ಲಿ ಕೊಡಬೇಕೆಂದು ಉಲ್ಲೇಖಿಸುತ್ತದೆ[೯೫]. ನಗರದಸುಂಕದ ಉಲ್ಲೇಖವೂ ಕೂಡ ಶಾಸನಗಳಲ್ಲಿ ಬರುತ್ತದೆ[೯೬]. ಬಹುಷಃ ಇದು ನಗರವಾಸಿಗಳ ಮೇಲೆ ಹಾಕುತ್ತಿದ್ದ ಸುಂಕವಿರಬಹುದು.

ಒಕ್ಕಲುತನಕ್ಕೆ ಉಪಯೋಗಿಸುತ್ತಿದ್ದ ಎತ್ತುಗಳ ಮೇಲೆಯೂ ಬಾಲವಣ ಎಂಬ ತೆರಿಗೆಯನ್ನು ವಿಧಿಸುತ್ತಿದ್ದರು[೯೭]. ಕುದುರೆಯ ಸುಂಕ[೯೮] ಹಾಗೂ ಕುದುರೆಯಗಾಡಿ[೯೯]ಗಳು ಕುದುರೆಯ ಮೇಲಿನ ಸುಂಕವಾಗಿದ್ದರೆ, ವ್ಯಾಪಾರ ಮಾಡಲು ಬಳಸುತ್ತಿದ್ದ ಕೋಣ, ಎತ್ತು, ಕತ್ತೆಗಳ ಮೇಲೆ ಹಾರಿಕಾಯ ಸುಂಕವನ್ನು ಹಾಕಲಾಗುತ್ತಿತ್ತು[೧೦೦]. ಎತ್ತಿನ ಸುಂಕದ ಉಲ್ಲೇಖ ಶಾಸನವೊಂದರಲ್ಲಿದೆ[೧೦೧].

ತುಪ್ಪವನ್ನು ತಯಾರಿಸುವವರ ಮೇಲೆ ತುಪ್ಪದೆರೆಯನ್ನು ಹಾಕಲಾಗುತ್ತಿತ್ತು. ಹಲವಾರು ಶಾಸನಗಳು ಇದನ್ನು ಉಲ್ಲೇಖಿಸಿವೆ. ಕಚ್ಚಾವಿಯ ಮಾದಿಬ್ಬೆ ದೇವಾಲಯಕ್ಕೆಂದು ಮಳೆಯರನು ತುಪ್ಪದ ಸುಂಕವನ್ನು ಬಿಟ್ಟನು[೧೦೨]. ಶಿಶುವಿನ ಹಳ್ಳಿಯ ಮಹಾಜನರಿಗೆ ತುಪ್ಪದ ಮೇಲಿನ ತೆರಿಗೆಯನ್ನು ಬಿಟ್ಟುಕೊಡಲಾಯ್ತು[೧೦೩]. ಬಲದೇವ, ಗೋವಣಯ್ಯ, ಚೆನ್ನಯ್ಯರು ಗವರವಾಡದಲ್ಲಿ ಇದ್ದಾಗ ಅಲ್ಲಿಯ ಮಹಾಜನರಿಗೆ ತುಪ್ಪದ ಮೇಲಿನ ಸುಂಕವನ್ನು ಬಿಟ್ಟುಕೊಟ್ಟರು[೧೦೪]. ಪುಲಿಗೆರಿಯನ್ನು ಆಳುವ ಕುಪ್ಪೆಯರಸನು ಸೊರಟೂರದ ೫೦ ಮಹಾಜನರಿಗೆ ತುಪ್ಪದ ಮೇಲಿನ ಸುಂಕವನ್ನು ಬಿಟ್ಟುಕೊಟ್ಟನೆಂದು ಶಾಸನ ಹೇಳಿದೆ[೧೦೫]. ಗಾಣಗಳ ಮೇಲೆ ಹಾಗೂ ತೆಲ್ಲಿಗರ ಮೇಲೆ ಗಾಣದೆರೆ[೧೦೬] ಹಾಗೂ ತೆಲ್ಲಿಗೆದೆರೆಯನ್ನು ಹಾಕುತ್ತಿದ್ದ ವಿಷಯ ತಿಳಿಯುತ್ತದೆ. ಸಾಮಂತ ಭರಮಯ್ಯನ ಕಾಲದಲ್ಲಿ ಅವನ ಮಡದಿ ಬಮ್ಮವ್ವೆ ಕಟ್ಟಿಸಿದ ಬ್ರಹ್ಮೇಶ್ವರ ದೇಗುಲಕ್ಕೆ ದತ್ತಿಯನ್ನು ಬಿಟ್ಟಾಗ ತಲ್ಲಿಗ ಮಾರಗೌಡನ ಗಾಣದ ಸುಂಕವನ್ನು ನಂದಾದೀವಿಗೆಗೆ ಬಿಟ್ಟ ವಿಷಯ ಕ್ರಿ.ಶ. ೧೧೭೧ರ ಕಿಕ್ಕೇರಿಯ ಶಾಸನದಿಂದ ತಿಳಿಯುತ್ತದೆ[೧೦೭]. ನೇಕಾರರ ಮೇಲೆ ಮಗ್ಗದೆರೆ[೧೦೮], ಹಾಗೂ ಬಣ್ಣಗದೆರೆ[೧೦೯] ಹಾಕಿದ ಉಲ್ಲೇಖವೂ ದೊರೆಯುತ್ತದೆ. ವ್ಯಾಪಾರ ವೃತ್ತಿಯ ಸೆಟ್ಟಿಯ ಮೇಲೆ ಸೆಟ್ಟಿದೆರೆ, ಊರೊಡೆಯ ಅಥವಾ ಮನ್ನೆಯರ ಮೇಲೆ ಮನ್ನೆಯಸಾಮ್ಯದ ತೆರೆ[೧೧೦], ಸಾಮಂತದೆರೆ[೧೧೧] ಹಾಗೂ ಮನ್ನೆವಣ[೧೧೨] ಹಾಕಲಾಗುತ್ತಿತ್ತು. ಅಲ್ಲದೇ ಕುರುಬರ ಮೇಲೆ ಕುರುಂಬದೆರೆ[೧೧೩], ಕುರುದೆರೆ[೧೧೪]ಗಳನ್ನು ಹಾಕಿದ ಉಲ್ಲೇಖವೂ ದೊರೆಯುತ್ತದೆ. ಕುಂಬಾರರ ಮೇಲೆ ಮಣ್ಣದೆರೆ[೧೧೫], ಮಸಿವುಟ್ಟಿಗೆ[೧೧೬]ಗಳನ್ನು ಹಾಕುತ್ತಿದ್ದುದ್ದನ್ನು ಶಾಸನಗಳು ತಿಳಿಸುತ್ತವೆ[೧೧೭].

ವ್ಯಾಪಾರಿ ತೆರಿಗೆಗಳಲ್ಲಿ ಕಿರುದೆರೆ[೧೧೮], ವಡ್ಡರಾವುಳ, ಬಿಲ್ಕೊಡೆ[೧೧೯], ಪನ್ನಾಯ[೧೨೦], ಹೆಜ್ಜುಂಕ[೧೨೧]ಗಳು ಪ್ರಮುಖವಾಗಿದ್ದವು. ಸಂತೆ ಪೇಟೆಗಳಿಗೆ ಬರುತ್ತಿದ್ದ ವಿವಿಧ ಸರಕುಗಳ ಮೇಲೆ ಆಕರಿಸುತ್ತಿದ್ದ ಸುಂಕದ ವಿವರಗಳು

ಶಾಸನಗಳಲ್ಲಿ ದೊರೆಯುತ್ತವೆ. ಸುಂಕವನ್ನು ಸರಕುಗಳ ತೂಕ, ತುಂಬಿದ ವಸ್ತುವಿನ ಗಾತ್ರ, ಸಾಗಿಸುವ ವಾಹನ, ಸರಕಿನ ಬೆಲೆ, ರಾಶಿ ಇತ್ಯಾದಿಗಳ ಮೇಲೆ ನಿಗದಿಪಡಿಸಲಾಗುತ್ತಿದ್ದುದು ತಿಳಿಯುತ್ತದೆ[೨೨೨]. ಅದನ್ನೇ ಶಾಸನಗಳು ಹೇರುದಡಂಸುಂಕ[೨೨೩], ಕೊಣನಹೇರುಸುಂಕ[೨೨೪], ಹೇರಿನಸುಂಕ[೨೨೫]ಗಳೆಂದು ಕರೆದಿರಬಹುದು.

ಧಾನ್ಯಗಳ ಮೇಲೆ ಸುಂಕವನ್ನು ಆಕರಿಸುತ್ತಿದ್ದ ವಿಷಯವೂ ತಿಳಿದುಬರುತ್ತದೆ[೨೨೬]. ಅವುಗಳಲ್ಲಿ ಅಡಕೆಯಸುಂಕ, ಹತ್ತಿಯಸುಂಕ, ಮೆಣಸಿನಸುಂಕವನ್ನು ಶಾಸನವೊಂದು ಉಲ್ಲೇಖಿಸಿದೆ[೨೨೭].

ಪ್ರಾಚೀನ ಕಾಲದಲ್ಲಿನ ಜನರು ಸಾಮಾಜಿಕ-ಧಾರ್ಮಿಕ ಸಂಸ್ಕಾರಗಳಾದ ಚೌಲ(ಚೂಡಾಕರ್ಮ), ಉಪನಯನ, ಮದುವೆ ಮೊದಲಾದ ಸಂದರ್ಭಗಳಲ್ಲಿ ತೆರಿಗೆಗಳನ್ನು ನೀಡಬೇಕಿದ್ದಿತು. ಈ ವಿಧವಾದ ತೆರಿಗೆಗಳನ್ನು ಆಯಾ ಸ್ಥಳಪ್ರಮುಖರು ನಿರ್ಧರಿಸುತ್ತಿದ್ದು, ಅದು ರಾಜ್ಯಾದಾಯಕ್ಕೆ ಸೇರುವದಕ್ಕಿಂತ ಸಾಮಾಜಿಕ-ಧಾರ್ಮಿಕ ಕಾರ್ಯಗಳಿಗೆ ವಿನಿಯೋಗವಾಗುತ್ತಿದ್ದಂತೆ ತೋರುತ್ತದೆ. ದಂಡಾಪೂರ ಶಾಸನ ವಿಪ್ರರ ಮದುವೆಯ ಸಮಯದಲ್ಲಿ ಮೂರು ದ್ರಮ್ಮವನ್ನು, ಮಾಣಿಗಳ ಉಪನಯನದ ಸಮಯದಲ್ಲಿ ಎರಡು ದ್ರಮ್ಮಗಳನ್ನು, ಶೂದ್ರಗಣದವರು ಮದುವೆಯಾದಲ್ಲಿ ಒಂದು ದ್ರಮ್ಮವನ್ನು ತೆರಿಗೆಯಾಗಿ ನೀಡಬೇಕಾಗುತ್ತಿದ್ದುದನ್ನು ಉಲ್ಲೇಖಿಸಿದೆ[೨೨೮]. ಸಾಲೋಟಗಿಯ ಶಾಸನವು ಸಾಲೋಟಗಿಯ ಶಾಲೆಗೆ ವಿವಾಹದ ಸಮಯದಲ್ಲಿ ೫ ಪುಷ್ಪಗಳನ್ನೂ, ಉಪನಯನದ ಸಂದರ್ಭದಲ್ಲಿ ಅದರ ಅರ್ಧದಷ್ಟು ೨ ೧/೨ ಪುಷ್ಪಗಳನ್ನು, ಚೂಡಕರ್ಮದ ಸಮಯದಲ್ಲಿ ಮತ್ತದರ ಅರ್ಧದಷ್ಟು ೧ ೧/೪ ಪುಷ್ಪಗಳನ್ನು ಕೊಡಲು ಆ ಊರಿನ ಜನರು ಒಪ್ಪಿಕೊಂಡಿದ್ದರು ಎಂದು ದಾಖಲಿಸುತ್ತದೆ[೨೨೯].

ಈ ಮೇಲಿನ ತೆರಿಗೆಗಳಲ್ಲದೆ ಇನ್ನೂ ಹಲವಾರು ತೆರಿಗೆಗಳು ಪ್ರಾಚೀನ ಕಾಲದಲ್ಲಿ ಆಕರಿಸಲ್ಪಡುತ್ತಿದ್ದವು. ಈ ತೆರಿಗೆಗಳನ್ನು ಹೆಚ್ಚಾಗಿ ಎಣ್ಣೆ, ಉಪ್ಪು, ತುಪ್ಪ, ಕಬ್ಬು, ಬೆಲ್ಲ, ಸಕ್ಕರೆ, ಹಾಲು, ಅಡಕೆ, ಅರಿಷಿಣ, ಭತ್ತ ಇತ್ಯಾದಿ ವಸ್ತುಗಳ ರೂಪದಲ್ಲಿ ಸ್ವೀಕರಿಸಲಾಗುತ್ತಿತ್ತು. ಹಣದ ರೂಪದಲ್ಲಿ ತೆರಿಗೆಯನ್ನು ರಾಜ್ಯದ ಆದಾಯವಾಗಿ ಸ್ವೀಕರಿಸಲಾಗುತ್ತಿತ್ತು. ಸುಂಕವು ಊರಿಂದೂರಿಗೆ ಭಿನ್ನ ರೂಪದಲ್ಲಿದ್ದರೂ ಅದನ್ನು ಯಾವ ಆಧಾರದ ಮೇಲೆ ನಿರ್ಧರಿಸುತ್ತಿದ್ದರೆಂಬುದು ಶಾಸನಗಳಿಂದ ಸ್ಪಷ್ಟವಾಗುತ್ತದೆ.

### ಖರ್ಚು:

ಪ್ರಾಚೀನ ಕೃತಿಗಳಾದ ಅರ್ಥಶಾಸ್ತ್ರ, ನೀತಿಶಾಸ್ತ್ರ ಹಾಗೂ ಸ್ಮೃತಿಗಳು ಆದಾಯದ ವಿಧಿವಿಧಾನಗಳನ್ನು ರೂಪಿಸಿದಂತೆಯೇ, ಖರ್ಚಿನ ನಿಯಮಗಳನ್ನೂ ರೂಪಿಸಿವೆ. ಆದರೆ ತೆರಿಗೆಯನ್ನು ಕುರಿತು ಹೇಳುವ ಶಾಸನಗಳು ಅದರ ವಿನಿಯೋಗದ ವಿಷಯದಲ್ಲಿ ಮೌನವನ್ನು ತಾಳಿವೆ. ಹೆಚ್ಚಿನ ತೆರಿಗೆಯಲ್ಲವೂ ರಾಜರ ವೈಭವ, ರಾಜ್ಯರಕ್ಷಣೆ, ಅಧಿಕಾರಿಗಳ ವೇತನ, ಸೈನ್ಯ, ಆಯುಧ ಮೊದಲಾದ ಆಡಳಿತ ವ್ಯವಸ್ಥೆಗಾಗಿ ವ್ಯಯವಾಗುತ್ತಿತ್ತು. ಬಹಳಷ್ಟು ತೆರಿಗೆಗಳನ್ನು ಆಯಾ ಊರಿನ ದೇವಸ್ಥಾನ, ಸತ್ರ ಹಾಗೂ ಅಗ್ರಹಾರಗಳಿಗೆ ಬಿಟ್ಟುಕೊಡುವದರ ಮೂಲಕ ಆಯಾ ಊರಿನ ತೆರಿಗೆಯ

ಆದಾಯದಲ್ಲಿ ಸ್ವಲ್ಪ ಭಾಗವನ್ನು ಅಲ್ಲಿಯ ವ್ಯವಸ್ಥೆಗೆ ನೇರವಾಗಿ ಉಪಯೋಗಿಸಿದಂತಾಗುತ್ತಿತ್ತು. ದಾನ ಶಾಸನಗಳುದ್ದಕ್ಕೂ ಕಂಡುಬರುವ ಸರ್ವಬಾಧಾಪರಿಹಾರದಂತಹ ಉಲ್ಲೇಖಗಳು ದಾನ-ದತ್ತಿಗಳು ಕರವಿನಾಯತಿಯಿಂದ ಮುಕ್ತವಾದಂತಹ ಉಪಭೋಗವನ್ನು ಹೇಳುತ್ತವೆ.

**ಅಡಿಟಿಪ್ಪಣಿಗಳು :**

೧. ರಾಷ್ಟ್ರಕೂಟರ ತಮಿಳು ಶಾಸನಗಳು ನಂ.೯೧
೨. ಚಿದಾನಂದಮೂರ್ತಿ, ಎಂ.ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ-೩೬೯
೩. SII., Vol-XI (i), No-34.
೪. Ibid., Vol-VII, No-223.
೫. ಕೊಪ್ಪಾ, ಎಸ್.ಕೆ., ತರ್ದವಾಡಿನಾಡು ಒಂದು ಅಧ್ಯಯನ, ಪುಟ-೨೧೮.
೬. E.C., Vol-XVI, Pg, No-11.
೭. Ibid., Vol-V, Kr, No-49.
೮. SII., Vol-IX (i), No-20.
೯. E.C., Vol-VIII, Sr, No-44.
೧೦. Ibid., Vol-III, Hg, No-110.
೧೧. Ibid., Vol-V, My, No-173.
೧೨. Ibid., Vol-IX, Sa, No-67.
೧೩. Ibid., Vol-XVI, Tm, No-81.
೧೪. KI., Vol-II, No-4.
೧೫. E.C., Vol-IX, Sa, No-45.
೧೬. SII., Vol-XV, No-28.
೧೭. E.C., Vol-VI, Kr, No-62.
೧೮. KI., Vol-II, No-33.
೧೯. Ibid.
೨೦. Ibid., Vol-I, No-15.
೨೧. SII., Vol-XX, No-13.
೨೨. E.C., Vol-I, Sp, No-48.
೨೩. SII., Vol-XV, No-16.
೨೪. ಚಿದಾನಂದಮೂರ್ತಿ,ಎಂ., ಮೇಲಿನದೆ, ಪುಟ-೩೬೩.
೨೫. SII., Vol-IX (i), No-61.
೨೬. E.C., Vol-XVI, Pg, No-11
೨೭. Ibid., Vol-VI, Kr, No-62.
೨೮. Ibid., Vol-VII, No-176.
೨೯. Ibid., Vol-VIII, Sr, No-184.

೩೦. KI., Vol-I, No-33.
೩೧. E.C., Vol-V, Tn, No-320.
೩೨. Ibid., Kr, No-49.
೩೩. SII., Vol-IX (i), No-60.
೩೪. Ibid., Vol-XV, No-12.
೩೫. Ibid., No-40.
೩೬. Ibid., Vol-VII, No-223.
೩೭. Ibid., Vol-IX (i), No-253.
೩೮. E.C., Vol-III, Hg, No-110.
೩೯. Ibid., Vol-IX, Bl, No-513.
೪೦. KI., Vol-I, No-33.
೪೧. E.C., Vol-V, Tn, No-320.
೪೨. ಕೃಷ್ಣಭಟ್ಟ,ಕೆ., (ಸಂ) ಕೌಟಿಲ್ಯನ ಅರ್ಥಶಾಸ್ತ್ರ, ಪುಟ-೯೮-೯೯.
೪೩. ನರಸಿಂಹಾಚಾರ್ಯ.ಡಿ.ಎಲ್., ವಡ್ಡಾರಾಧನೆ, ಪುಟ-೧೯೬.
೪೪. ಅದೇ, ಪು-೨೧೪.
೪೫. E.C., Vol-XVI, Tm, No-78.
೪೬. Ibid., Vol-III, Nj, No-313.
೪೭. Ibid., Vol-VII, Ml, No-135.
೪೮. Ep.Ind., Vol-XXIX, p-203.
೪೯. Ibid., Vol-XXVI, p-59.
೫೦. E.C., Vol-IV, Ch, No-81.
೫೧. Ibid., Vol-III, Nj, No-313.
೫೨. Ibid., Vol-VIII, Sr, No-184.
೫೩. Ibid., Vol-III, Hg, No-110.
೫೪. SII., Vol-IX (i), No-249.
೫೫. E.C., Vol-III, Nj, No-313.
೫೬. Ibid., Vol-VIII, Sr, No-477.
೫೭. Ibid., Vol-V, Kr, No-49.
೫೮. SII., Vol-XV, No-25.
೫೯. SII., Vol-XV, No-36.
೬೦. Ibid., Vol-IX (i), No-249.
೬೧. Ibid., No-297.
೬೨. Ibid.
೬೩. Ibid., No-249.
೬೪. Ibid., No-297.
೬೫. E.C., Vol-VIII, Sr, No-184.
೬೬. SII., Vol-XV, No-25.

೬೭. KI., Vol-I, No-33.

೬೮. SII., Vol-IX (i), No-249.

೬೯. Ibid., No-322.

೭೦. Ep.Ind., Vol-XIV, No-19(i).

೭೧. ಚಿದಾನಂದಮೂರ್ತಿ,ಎಂ., ಮೇಲಿನದೆ, ಪು-೩೬೫-೬೬.

೭೨. SII., Vol-XI (i), No-12.

೭೩. Ibid., Vol-IX (i), No-249.

೭೪. M.A.R., 1923-27, No-151.

೭೫. E.C., Vol-VII, Ml, No-122.

೭೬. Ibid., Vol-XVI, Pg, No-12 & 13.

೭೭. Ibid., Si, No-123.

೭೮. Ibid., Vol-VIII, Sr, No-474.

೭೯. The Discriptive List of Stone and Copper Plate Inscriptions, 1942-43.

೮೦. A.R.S.I.E., 1941-42, No-126, p-143.

೮೧. E.C., Vol-VII, Sk, No-284.

೮೨. Ibid., Vol-VIII, Sr, No-44.

೮೩. Ibid., Sr, No-109.(Bis).

೮೪. Ibid., Vol-VI, Kr, No-62.

೮೫. KI., Vol-II, No-8.

೮೬. E.C., Vol-IX, Bl, No-473.

೮೭. Ibid., Vol-I, Cg, No-62.

೮೮. Ibid., Vol-IX, Bl, No-410 & 411.

೮೯. Ibid., Vol-VI, Sp, No-85.

೯೦. Ibid., Vol-VII, Md, No-35.

೯೧. E.C., Vol-V, Tn, No-313.

೯೨. Ibid., Vol-VIII, Sr, No-70.

೯೩. Ibid., Sr, No-471.

೯೪. M.A.R., 1927, No-44.

೯೫. KI, Vol-I, No-13.

೯೬. E.C., Vol-XI, Cd, No-22.

೯೭. SII, Vol-XV, No-26.

೯೮. Ibid., No-30.

೯೯. Ibid., No-52.

೧೦೦. ಹಿರೇಮಠ,ಬಿ.ಆರ್., ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಪು-೧.

೧೦೧. ಚಿದಾನಂದಮೂರ್ತಿ,ಎಂ., ಮೇಲಿನದೆ, ಪು-೩೮೨.

೧೦೨. SII., Vol-IX (i), No-41.

೧೦೩. Kundanagar,K.G., Inscriptions in Northern Karnataka and Kolhapur State, N0-15.

೧೦೪. ಹಿರೇಮಠ,ಬಿ.ಆರ್., ಮೇಲಿನದೆ, ಪುಟ-೩೦.
೧೦೫. E.C., Vol-XII, Pg, No-50.
೧೦೬. ಹಿರೇಮಠ,ಬಿ.ಆರ್., ಮೇಲಿನದೆ, ಪು-೧೧-೧೨.
೧೦೭. Kadabadi,B.K., Waddaradhane: A Study, p-162.
೧೦೮. E.C., Vol-VIII, Sb, No-268.
೧೦೯. ಹಿರೇಮಠ,ಬಿ.ಆರ್., ಮೇಲಿನದೆ, ಪು-೧೫.
೧೧೦. A.R.I.E., 1952-53, B.No-290.
೧೧೧. KI., Vol-II, No-21.
೧೧೨. SII., Vol-IX (i), No-322.
೧೧೩. Ibid., No-297.
೧೧೪. E.C., Vol-XII, Pg, No-50.
೧೧೫. ಕೊಪ್ಪಾ,ಎಸ್.ಕೆ., ಮೇಲಿನದೆ, ಪುಟ-೨೧೯.
೧೧೬. ಹಿರೇಮಠ,ಬಿ.ಆರ್., ಮೇಲಿನದೆ, ಪು-೮೧-೮೨.
೧೧೭. E.C., Vol-XVI, Tm, No-81.
೧೧೮. SII., Vol-XX, No-299.
೧೧೯. Ibid., Vol-IX (i), No-297.
೧೨೦. ಹಿರೇಮಠ,ಬಿ.ಆರ್., ಮೇಲಿನದೆ, ಪು-೩೪.
೧೨೧. E.C., Vol-XII, Pg, No-50.
೧೨೨. SII., Vol-IX (i), No-297.
೧೨೩. Ep.Ind., Vol-IX, p-23-24.
೧೨೪. SII., Vol-IX (i), No-393.
೧೨೫. Ibid., Vol-VII, No-314.
೧೨೬. ಹಿರೇಮಠ,ಬಿ.ಆರ್., ಮೇಲಿನದೆ, ಪು-೪೩.
೧೨೭. SII., Vol-XX, No-138.
೧೨೮. E.C., Vol-XII, Pg, No-50.
೧೨೯. SII., Vol-IX (i), No-189.
೧೩೦. ಹಿರೇಮಠ,ಬಿ.ಆರ್., ಮೇಲಿನದೆ, ಪು-೬೬.
೧೩೧. SII., Vol-VII, No-247.
೧೩೨. ಕೊಪ್ಪಾ, ಎಸ್.ಕೆ., ಮೇಲಿನದೆ, ಪುಟ-೨೬೩.
೧೩೩. ಚಿದಾನಂದಮೂರ್ತಿ,ಎಂ., ಮೇಲಿನದೆ, ಪುಟ-೩೮೭.
೧೩೪. ಅದೇ, ಪುಟ-೩೮೩.
೧೩೫. KI., Vol-II, No-30.
೧೩೬. SII., Vol-VII, No-221.
೧೩೭. E.C., Vol-IX, Sl, No-28.
೧೩೮. Ibid., Vol-VIII, Sr, No-479.
೧೩೯. Ibid., Vol-II, Sb, No-455.
೧೪೦. KI., Vol-II, No-21.

೧೪೦. KI., Vol-II, No-38.
೧೪೨. Ibid., No-34.
೧೪೩. Ibid., No-33.
೧೪೪. E.C., Vol-III, Hg, No-123.
೧೪೫. SII., Vol-IX (i), No-393.
೧೪೬. Ibid., No-396.
೧೪೭. E.C., Vol-IX, Sl, No-38.
೧೪೮. SII., Vol-VII, No-223.
೧೪೯. ವ್ಯವಹಾರಗಣಿತ, ೧-೨೪.
೧೫೦. ಲೀಲಾವತಿ ಗಣಿತ, ೧-೨, ಉಲ್ಲೇಖ, ಕನ್ನಡ ಸಾಹಿತ್ಯ ಚರಿತ್ರೆ, ಸಂ-೪, ಭಾಗ-೨, ಪುಟ-೧೦೫೦.
೧೫೧. ಚಿದಾನಂದಮೂರ್ತಿ,ಎಂ., ಮೇಲಿನದೆ, ಪುಟ-೩೯೦ ಮತ್ತು ಕಿಟೆಲ್ಸ ಇಂಗ್ಲಿಷ್ ಡಿಕ್ಷನರಿ, ಪುಟ-೧೫೮-೬೦.
೧೫೨. ನರಸಿಂಹ ಮೂರ್ತಿ,ಎ.ವ್ಹಿ., ದಿ ಕಾಯಿನ್ಸ ಆಫ್ ಕರ್ನಾಟಕ, ಪುಟ-೭೨.
೧೫೩. Ep.Ind., Vol-VI, No-4, p-25-38.
೧೫೪. KI., Vol-I, No-24.
೧೫೫. SII., Vol-XV, No-53.
೧೫೬. E.C., Vol-I, Cg, No-1.
೧೫೭. KI., Vol-II, No-14.
೧೫೮. E.C., Vol-VII, Nm, No-130.
೧೫೯. Ibid., Nm, No-80.
೧೬೦. KI., Vol-II, No-12.
೧೬೧. E.C., Vol-VIII, Sg, No-108(Bis).
೧೬೨. Ibid., Vol-IV, Ch, No-408.
೧೬೩. Ibid., Vol-VII, Nm, No-62.
೧೬೪. Ibid., Vol-V, My, No-168.
೧೬೫. SII., Vol-XV, No-45.
೧೬೬. Ibid., Vol-VII, No-222.
೧೬೭. Ep.Ind., Vol-IX, p-22.
೧೬೮. Ibid., Vol-XXXVII, p-313.
೧೬೯. SII., Vol-VII, No-284.
೧೭೦. ವ್ಯವಹಾರಗಣಿತ, ೧-೨೬.
೧೭೧. Kadabadi,B.K., Waddaradhane; A Study, p-162.
೧೭೨. E.C., Vol-I, Cg, No-97.
೧೭೩. A.R.I.E., 1960-61, No-552.
೧೭೪. SII., Vol-XI (i), No-12.
೧೭೫. KI., Vol-I, No-17.
೧೭೬. E.C., Vol-III, Hg, No-123.
೧೭೭. Ibid., Vol-I, Cg, No-87.

೧೭೮. SII., Vol-XI (i), No-35.
೧೭೯. Ibid., Vol-XVIII, No-38.
೧೮೦. ಚಿದಾನಂದಮೂರ್ತಿ,ಎಂ., ಮೇಲಿನದೆ, ಪುಟ-೩೯೬.
೧೮೧. ಎಂ.ಎಂ.ಕಲಬುರ್ಗಿ., ಶಾಸನೋಕ್ತ ಕೆಲವು ಪದಗಳು, ಅಂಕಣ, ಸಪ್ಟೆಂಬರ್-೧೯೮೧.
೧೮೨. SII., Vol-XVIII, No-38.
೧೮೩. Ibid., Vol-XV, No-42.
೧೮೪. Ibid., No-12.
೧೮೫. Ghatapanadi,S.G., Taxation in Ancient and Medieval Karnataka(Unpublished Thesis) Karnatak University, Dharwad, p-74.
೧೮೬. SII., Vol-XV, No-51-52.
೧೮೭. Ibid., Vol-XI (i), No-15.
೧೮೮. ರಾಷ್ಟ್ರಕೂಟರ ತಮಿಳು ಶಾಸನಗಳು, ನಂ-೭೩, ಪುಟ-೬೨, ಕ್ರಿ.ಶ.೯೬೪.
೧೮೯. Ep.Ind., Vol-IX, p-20-21.
೧೯೦. E.C., Vol-III, No-30.
೧೯೧. Ibid., Vol-VII, Md, No-100.
೧೯೨. E.C., Vol-II, Sb, No-455.
೧೯೩. SII., Vol-IX (i), No-235.
೧೯೪. ಕೊಪ್ಪಾ,ಎಸ್.ಕೆ., ಮೇಲಿನದೆ, ಪು-೨೨೮.
೧೯೫. Kannada Inscriptions of Andra Pradesh, Mn, 39.
೧೯೬. Ep.Ind., Vol-IX, p-23-24; SII., Vol-VII, No-222
೧೯೭. SII., Vol-XI (i), No-54.
೧೯೮. KI., Vol-II, No-11 & 24.
೧೯೯. A.R.I.E., 1977-78, B.No-99.
೨೦೦. SII., Vol-IX (i), No-296.
೨೦೧. Ibid., (ii), No-553.
೨೦೨. A.R.I.E., 1958-59, B.No-558.
೨೦೩. SII., Vol-XI (i), No-14.
೨೦೪. Ibid., No-13.
೨೦೫. Ibid., No-12.
೨೦೬. ಚಿದಾನಂದಮೂರ್ತಿ,ಎಂ., ಮೇಲಿನದೆ, ಪು-೩೯೯.
೨೦೭. E.C., Vol-VI, Kr, No-27.
೨೦೮. Ibid., Vol-VI, Kr, No-27.
೨೦೯. SII., Vol-XX, No-178.
೨೧೦. Ibid., Vol-IX (i), No-100.
೨೧೧. E.C., Vol-VII, Md, No-100.
೨೧೨. SII., Vol-XV, No-35.
೨೧೩. E.C., Vol-IV, My, No-126; M.A.R., 1933, p-236.

೨೧೪. E.C., Vol-VII, Md, No-100.

೨೧೫. Ibid., Vol-IV, My, No-126.

೨೧೬. Ibid., Yl, No-183.

೨೧೭. Ibid., My, No-126.

೨೧೮. Ibid., Vol-VII, My, No-50; KI, Vol-I, No-14.

೨೧೯. KI, Vol-II, No-8.

೨೨೦. SII., Vol-XV, No-36.

೨೨೧. E.C., Vol-VIII, Sr, No-140

೨೨೨. ಹಿರೇಮಠ, ಬಿ.ಆರ್., ಮೇಲಿನದೆ, ಪು-೧೨೩.

೨೨೩. KI., Vol-I, No-33.

೨೨೪. KI., Vol-II, No-34.

೨೨೫. E.C., Vol-VII, Nm, No-118.

೨೨೬. SII., Vol-VII, No-284.

೨೨೭. Ep.Ind., Vol-IX, p-22.

೨೨೮. Digest of Annual Report on KRI, Bombay Provinces (1940-41), No-4, Pp-11, A.D.918.

೨೨೯. Ind.Ant., Vol-IV, p-60.

# ಅಧ್ಯಾಯ-೯

## ಸಾಮಂತ ಅರಸು ಮನೆತನಗಳ ಕಾಲದಲ್ಲಿ ದೇವಾಲಯಗಳ ನಿರ್ಮಾಣ ಚಟುವಟಿಕೆ

ಪ್ರಾಚೀನ ಕರ್ನಾಟಕದಲ್ಲಿ ದೇವಸ್ಥಾನಗಳು ಸಾಮಾಜಿಕ ಹಾಗೂ ಸಾಂಸ್ಕೃತಿಕವಾಗಿ ಜೀವಂತ ಕೇಂದ್ರಗಳಾಗಿದ್ದವು. ಅಂದು ಒಂದೊಂದು ದೇವಸ್ಥಾನವೂ ಸುವ್ಯವಸ್ಥಿತವಾದ, ನಿಯಮಬದ್ಧವಾದ ಒಂದು ಸಂಸ್ಥೆಯಾಗಿದ್ದಿತು. ಪ್ರಾಚೀನ ದೇವಸ್ಥಾನಗಳ ವಾಸ್ತುಶಿಲ್ಪವನ್ನು ಕುರಿತ ಅಧ್ಯಯನವು ಸಾಕಷ್ಟು ನಡೆದಿದೆ. ಆದರೆ ದೇವಸ್ಥಾನವನ್ನು ಒಂದು ಸಾಮಾಜಿಕ-ಸಾಂಸ್ಕೃತಿಕ ಕೇಂದ್ರವಾಗಿ ಭಾವಿಸಿ ಅದರ ವ್ಯವಸ್ಥೆ, ಅದು ಜನತೆಯ ಮೇಲೆ ಬೀರಿದ ಪ್ರಭಾವ, ಜನತೆಯು ದೇವಸ್ಥಾನವನ್ನು ಕಂಡ ರೀತಿ ಮುಂತಾದವುಗಳನ್ನು ಕುರಿತ ಅಧ್ಯಯನಗಳು ಕಡಿಮೆಯೇ ಎಂದು ಹೇಳಬಹುದು. ಹೀಗಾಗಿ ದೇವಸ್ಥಾನದ ಹುಟ್ಟು ಮತ್ತು ಬೆಳವಣಿಗೆ, ದೇವಾಲಯ ನಿರ್ಮಾಣ ಚಟುವಟಿಕೆಗಳು ಹೆಚ್ಚುಗೊಂಡ ಪ್ರದೇಶ, ಅದಕ್ಕೆ ಕಾರಣ, ಅವು ಜನತೆಯ ಆರ್ಥಿಕ ಹಾಗೂ ಸಾಮಾಜಿಕ ಜೀವನದ ಮೇಲೆ ಬೀರಿದ ಪರಿಣಾಮ ಮುಂತಾದ ಅಂಶಗಳ ಹಿನ್ನೆಲೆಯಲ್ಲಿ ಒಂದು ಸ್ವತಂತ್ರ ಅಧ್ಯಯನ ನಡೆಯಬೇಕಾಗಿದೆ. ಕರ್ನಾಟಕದ ಶಾಸನಗಳಲ್ಲಿ ದೇವಸ್ಥಾನಗಳು ಕ್ರಿಸ್ತಪೂರ್ವದಿಂದ ಕಂಡುಬಂದರೂ ಈಗ ಉಳಿದು ಬಂದಿರುವ ದೇವಸ್ಥಾನಗಳಲ್ಲೆಲ್ಲ ಅತ್ಯಂತ ಪ್ರಾಚೀನವಾದುದೆಂದರೆ ತಾಳಗುಂದದ ಪ್ರಣವೇಶ್ವರ ದೇವಾಲಯವಾಗಿದೆ[೧]. ಇನ್ನು ನಮ್ಮ ಅಧ್ಯಯನದ ಅವಧಿಯಲ್ಲಿನ ಸಾಮಂತ ಅರಸುಮನೆತನಗಳಿಗೆ ಸಂಬಂಧಿಸಿದಂತೆ ಹೇಳುವದಾದರೆ ಗಂಗ ಒಂದನೆಯ ಕೊಂಗುಣಿ ವರ್ಮ ಮಂಡಲಿಯಲ್ಲಿ ಕಟ್ಟಿಸಿದ ಕ್ರಿ.ಶ.೪ನೆಯ ಶತಮಾನದ ಚೈತ್ಯಾಲಯ ಅತ್ಯಂತ ಪ್ರಾಚೀನವಾದುದಾಗಿದೆ[೨].

ನಮ್ಮ ಅಧ್ಯನ ಅವಧಿಯಲ್ಲಿನ ಶಾಸನಗಳಲ್ಲಿ ಹೇರಳವಾಗಿ ಕಂಡುಬರುವ ದೇವಾಲಯಗಳು ಅಂದಿನ ಜನಜೀವನದ ಮೇಲೆ ಮಹತ್ವವಾದ ಪ್ರಭಾವವನ್ನು ಬೀರಿವೆ. ಅಂದು ಅವು ಭಕ್ತಿಯ ಕೇಂದ್ರಗಳಾಗಿರದೇ ಅಂದಿನ ಸಾಮಾಜಿಕ, ಆರ್ಥಿಕ ಕಾರ್ಯಕಲಾಪಗಳನ್ನು ನಿಭಾಯಿಸುವ ಸಂಸ್ಥೆಗಳಾಗಿದ್ದವು. ದೇವಾಲಯ ನಿರ್ಮಾಣ ಹಾಗೂ ಅವುಗಳ ಪೋಷಣೆಯಲ್ಲಿ ಅಂದಿನ ಪ್ರಭುವರ್ಗದವರ ಪಾತ್ರ ಪ್ರಧಾನವಾಗಿತ್ತು. ಸಾಮಂತ ಅರಸರುಗಳ ಶಾಸನಗಳಲ್ಲಿ ಅವರು ನಿರ್ಮಿಸಿದ ಸುಮಾರು ೧೮೧ ದೇವಾಲಯಗಳ ಹೆಸರುಗಳಿದ್ದು, ಅವು ಬೇರೆ ಬೇರೆ ಧರ್ಮಗಳಿಗೆ ಸೇರಲ್ಪಟ್ಟವುಗಳಾಗಿವೆ. ಅವುಗಳನ್ನು ಆಯಾ ಮತ-ಧರ್ಮಗಳ ಹಿನ್ನೆಲೆಯಲ್ಲಿ ಗುರುತಿಸುವದಾದರೆ ಬೌದ್ಧ-೫, ಜೈನ-೫೮, ವೈಷ್ಣವ-೧೮, ಶೈವ-೮೫, ಮತ್ತು ಇತರೆ-೧೫, ಎಂದು ವಿಂಗಡಣೆಮಾಡಿ ಹೇಳಬಹುದು. ಸಾಮಂತ ಅರಸರುಗಳು, ರಾಣಿಯರು ಮತ್ತು ಅವರ ಅಧಿಕಾರಿವರ್ಗದವರು ನಿರ್ಮಿಸಿರುವಂತಹ ಶಾಸನೋಲ್ಲೇಖಿತ ದೇವಾಲಯಗಳನ್ನಿಲ್ಲಿ ಉಲ್ಲೇಖಿಸಲಾಗಿದೆ. ಈ ಎಲ್ಲ ದೇವಾಲಯಗಳ ಒಂದು ಪಟ್ಟಿಯನ್ನು ಹೀಗೆ ನೋಡಬಹುದು.

| ಬೌದ್ಧ | ಜೈನ | ವೈಷ್ಣವ | ಶೈವ | ಇತರೆ | ಒಟ್ಟು |
|---|---|---|---|---|---|
| ೫ | ೫೮ | ೧೮ | ೮೫ | ೧೫ | ೧೮೧ |

ಈ ಮೇಲಿನ ಪಟ್ಟಿಯನ್ನು ಗಮನಿಸಿದಾಗ ಸಾಮಂತ ಅರಸುಮನೆತನಗಳ ಆಳ್ವಿಕೆಯಲ್ಲಿ ಅವರು ಶೈವದೇವಾಲಯಗಳನ್ನು ಹೆಚ್ಚು ಪ್ರಮಾಣದಲ್ಲಿ ನಿರ್ಮಿಸಿರುವದು ಕಂಡುಬರುತ್ತದೆ. ದೇವಾಲಯಗಳ ಸಂಖ್ಯೆ ಮತ್ತು ಅದರ ಭಕ್ತಾದಿಗಳು ಹೆಚ್ಚಿದಂತೆ ದೇವಾಲಯದ ಹರವು ಬೆಳೆಯಿತು. ವಿವಿಧ ರೀತಿಯ ಜನಾಕರ್ಷಣೆಯಿಂದಾಗಿ ಸಮನ್ವಯ ಬುದ್ಧಿ ಬೆಳೆದು ಬಂದಿತು. ಇದರ ಪರಿಣಾಮವಾಗಿ ಮೂಲದೇವತೋಪಾಸನೆಯೊಂದಿಗೆ ಇತರ ದೇವತೆಗಳ ಉಪಾಸನೆಯೂ ಆರಂಭವಾಯಿತು. ಬರಬರುತ್ತಾ ದೇವಾಲಯ ನಿರ್ಮಾಣದ ಹಂತದಲ್ಲಿ ಏಕಕೂಟದಿಂದ ಆರಂಭವಾಗಿ ದ್ವಿಕೂಟ, ತ್ರಿಮೂರ್ತಿ ತ್ರೈಪುರುಷ, ತ್ರಿಕೂಟ ಹಾಗೂ ಪಂಚಕೂಟ ದೇವಾಲಯಗಳು ಕಂಡುಬಂದವು. ನಮ್ಮ ಅಧ್ಯಯನ ಅವಧಿಯಲ್ಲಿ ನಿರ್ಮಿತವಾದ ದೇವಾಲಯಗಳನ್ನು ಗಮನಿಸಿದಾಗ, ಸಾಮಂತ ಅರಸರುಗಳ ಕಾಲದಲ್ಲಿ ಹೆಚ್ಚಿನ ಸಂಖ್ಯೆಯ ಏಕಕೂಟ ದೇವಾಲಯಗಳನ್ನು ನಿರ್ಮಿಸಿರುವದು ಕಂಡುಬರುತ್ತದೆ(ಪುರವಣಿ-೧). ಆದರೆ ಈಗ ದೊರೆತಿರುವ ಶಾಸನಗಳಲ್ಲಿ ದ್ವಿಕೂಟ ದೇವಾಲಯಗಳ ಉಲ್ಲೇಖವಿಲ್ಲ. ತ್ರಿಮೂರ್ತಿ ದೇವಾಲಯಗಳನ್ನು ತ್ರೈಪುರುಷ ದೇವಾಲಗಳೆಂದು ಕರೆಯುತ್ತಿದ್ದು, ಅಂತಹ ದೇವಾಲಯಗಳ ನಿರ್ಮಾಣದ ಉಲ್ಲೇಖ ಸಾಮಂತರಸರ ಶಾಸನಗಳಲ್ಲಿಲ್ಲ. ಇಲ್ಲಿ ೪ ತ್ರಿಕೂಟ ದೇವಾಲಯಗಳ ಉಲ್ಲೇಖ ನಮಗೆ ದೊರೆಯುತ್ತಿದ್ದು(ಪುರವಣಿ-೫), ಅವುಗಳಲ್ಲಿ ತ್ರೈಪುರುಷ ದೇವಾಲಯವಿರುವದು ಗೊತ್ತಾಗುವದಿಲ್ಲ. ಕ್ರಿ.ಶ.೯೬೭ರ ಕೊಳಗಲ್ಲಿನ ಶಾಸನದಲ್ಲಿ[೩] ಬ್ರಹ್ಮ, ವಿಷ್ಣು, ಮಹೇಶ್ವರ ಮೂರ್ತಿಗಳ ಉಲ್ಲೇಖಬರುತ್ತದೆ. ಇದರಿಂದ ಈ ಮಾದರಿಯ ದೇವರು ಮತ್ತು ದೇವಾಲಯಗಳ ಪ್ರತಿಷ್ಠಾಪನೆ ಹಾಗೂ ಆರಾಧನೆ ಈ ಸಾಮಂತರಸರುಗಳ ಕಾಲದಲ್ಲಿತ್ತೆಂದು ಹೇಳಬಹುದು. ತ್ರೈಪುರುಷ ದೇವಾಲಯಗಳಲ್ಲಿ ಬಹಳಷ್ಟುಕಡೆ ಬ್ರಹ್ಮ, ವಿಷ್ಣು, ಮಹೇಶ್ವರ ಮೂರ್ತಿಯನ್ನೂ, ಕೆಲವೊಮ್ಮೆ ಬ್ರಹ್ಮನಿಗೆ ಬದಲಾಗಿ ಆದಿತ್ಯನ ಮೂರ್ತಿಯನ್ನು ಸ್ಥಾಪಿಸಿರುವದು ಕಂಡುಬರುತ್ತದೆ.

ಮೂರು ಶಿಖರ ಅಥವಾ ಮೂರು ವಿಭಿನ್ನ ಗರ್ಭಗೃಹಗಳನ್ನೊಳಗೊಂಡ ದೇವಾಲಯ ತ್ರಿಕೂಟವಾಗಿದೆ. ಈ ಮಾದರಿಯ ದೇವಾಲಯಗಳಿಗೆ ತ್ರಿಕೂಟಾಚಲವೆಂದು ಕರೆಯಲಾಗುತ್ತದೆ. ಇಂಥ ದೇವಾಲಯಗಳಲ್ಲಿ ಮಧ್ಯಕೂಟದ ದೇವರಿಗೆ ಪ್ರಮುಖ ಸ್ಥಾನವಿರುತ್ತಿತ್ತು. ತ್ರಿಕೂಟಗಳಲ್ಲಿ ಸಾಮಾನ್ಯವಾಗಿ ಇಂಥದೇ ದೇವರಿರಬೇಕೆಂದು ನಿಯಮವಿರಲಿಲ್ಲ. ಮಧ್ಯದಲ್ಲಿ ಹೆಚ್ಚಾಗಿ ಈಶ್ವರ ಅಥವಾ ಕೇಶವನ ಮೂರ್ತಿಗಳಿದ್ದರೆ, ಉಳಿದ ಎರಡರಲ್ಲಿ ವಿನಾಯಕ, ಆದಿತ್ಯ, ಮಹೇಶ್ವರ, ವಿಷ್ಣು, ಬ್ರಹ್ಮ ಮುಂತಾದ ಮೂರ್ತಿಗಳಿರುತ್ತಿದ್ದುದು ಕಂಡುಬರುತ್ತದೆ. ಕರಿಗುದರಿಯ ಕ್ರಿ.ಶ. ೧೧೦೮ರಲ್ಲಿ ಕದಂಬ ತೈಲಪನ ದಂಡನಾಯಕ ಈಶ್ವರನಿಂದ ಕಟ್ಟಿಸಲ್ಪಟ್ಟಂತಹ ತ್ರಿಕೂಟದಲ್ಲಿ ಶಂಕರ, ಕೇಶವ, ಭಾಸ್ಕರ ಮೂರ್ತಿಗಳಿರುವದು ತಿಳಿದುಬರುತ್ತದೆ[೪]. ಅಲ್ಲದೇ ಮಹಾಮಂಡಳೇಶ್ವರ ಹೆಮ್ಮಾಡಿಯರಸನ ಮಹಾಪ್ರಧಾನ ನೀಲಕಂಠ ಇಂಗಳೇಶ್ವರದಲ್ಲಿ

ಕಟ್ಟಿಸಿದ ತ್ರಿಕೂಟ ದೇವಾಲಯದಲ್ಲಿ ಪ್ರಧಾನ ದೇವರಾಗಿ ನೀಲಕಂಠೇಶ್ವರನಿದ್ದುದು ತಿಳಿದುಬರುತ್ತದೆ[೭]. ಹಾಗೆಯೇ ಕ್ರಿ.ಶ. ೧೨೦೫ರಲ್ಲಿ ಆಸಂದಿಪುರದಲ್ಲಿ ಮಂಡಳೀಕ ವೈಜರಸನ ಮಹಾಪ್ರಧಾನ ಹರಹಸಾಹಣಿ ಕಟ್ಟಿಸಿದ ತ್ರಿಕೂಟದಲ್ಲಿ ಬಲ್ಲೇಶ್ವರ(ಈಶ್ವರ) ಪ್ರಧಾನ ದೇವರಾಗಿದ್ದಾನೆ[೮].

ಪಂಚಕೂಟದ ಹೆಸರೇ ಸೂಚಿಸುವಂತೆ ಐದು ಗರ್ಭಗೃಹಗಳನ್ನು ಹೊಂದಿರುವಂತಹ ದೇವಾಲಯವಾಗಿದೆ. ಸಾಮಂತ ಅರಸುಮನೆತನಗಳ ಶಾಸನದಲ್ಲಿ ಪಂಚಕೂಟದ ಒಂದು ಉಲ್ಲೇಖ ದೊರೆಯುತ್ತದೆ. ಕ್ರಿ.ಶ. ೧೧ನೆಯ ಶತಮಾನದ ಶಾಸನವೊಂದು ತಿಳಿಸುವಂತೆ ಕದಂಬ ತೈಲಪದೇವನ ಅಧೀನ ಅಧಿಕಾರಿಯಾದ ರಾಮಸಿಂಗಿ ಎಂಬುವನು ಅರಳೇಶ್ವರದಲ್ಲಿನ ಕದಂಬೇಶ್ವರ ದೇವಾಲಯವನ್ನು ಪಂಚಕೂಟವನ್ನಾಗಿ ಪರಿವರ್ತಿಸುತ್ತಾನೆ[೮].

ಇವುಗಳಲ್ಲದೇ ಮಾರಿಬ್ಬೆ, ಬಳ್ಳದೇವ, ಸೂರ್ಯ(ಆದಿತ್ಯ), ಭೈರವ, ಗಣಪತಿ(ವಿಘ್ನರಾಜ), ಕಾಳಿ ಮುಂತಾದ ದೇವಾಲಯಗಳ ನಿರ್ಮಾಣವೂ ಸಾಮಂತ ಅರಸುಮನೆತನಗಳ ಶಾಸನದಲ್ಲಿ ದೊರೆಯುತ್ತದೆ. ಮಾರಿಬ್ಬೆಯ ದೇವಸ್ಥಾನ ಮಲೆಯಮರಸನ ಕಾಲದಲ್ಲಿ ಕಚ್ಛಾವಿಯಲ್ಲಿ[೯], ಲೋಕಟೆಯ ಕಾಲದಲ್ಲಿ ಜವಳಿಯಲ್ಲಿ ಬಳ್ಳದೇವ್, ಗೋಣರಸನ ಕಾಲದಲ್ಲಿ ಮಣಬಾಳದಲ್ಲಿ ಸೌರ್ಯಮಾರ್ತಾಂಡ[೧೦], ರಾಜೇಂದ್ರ ಚೋಳ ಕೊಂಗಾಳ್ವನ ಕಾಲದಲ್ಲಿ ದೊಡ್ಡಬೆಮ್ಮತ್ತಿಯಲ್ಲಿ ಆದಿತ್ಯ[೧೧], ಮೂರನೆಯ ರಾಜೇಂದ್ರ ಪೃಥುವಿಕೊಂಗಾಳ್ವನ ಕಾಲದಲ್ಲಿ ಭೈರವ[೧೨], ಚೆಂಗಾಳ್ವ ಒಡೆಯಾದಿತ್ಯದೇವನ ಕಾಲದಲ್ಲಿ ಚೆಂಗಾಳ್ವ ಸೆಟ್ಟಿಯಹಳ್ಳಿಯಲ್ಲಿ ಗಣಪತಿ[೧೩] ದೇವಸ್ಥಾನಗಳು ನಿರ್ಮಾಣವಾಗಿದ್ದು ತಿಳಿದುಬರುತ್ತದೆ.

ದೇವಾಲಯಗಳು ಪ್ರಾಚೀನ ಮತ್ತು ಮಧ್ಯಕಾಲೀನ ಜನರಲ್ಲಿ ಬೇರೂರಿದ ಜೀವನಶ್ರದ್ಧೆ ಮತ್ತು ನಿಷ್ಠೆಗಳ ಪ್ರತೀಕಗಳಾಗಿವೆ. ಅವು ಜನಜೀವನದ ಭಾಗವೇ ಆಗಿ ಅವರನ್ನು ತಿದ್ದುವ ಶಕ್ತಿಗಳಾಗಿರಬೇಕೆಂಬುದೇ ಅವುಗಳ ನಿರ್ಮಾಣದ ಹಿಂದಿರುವ ಮಹೋದ್ದೇಶವಾಗಿತ್ತು[೧೪]. ಇದರಿಂದಾಗಿ ಅಂದಿನ ಕರ್ನಾಟಕದ ಪ್ರತಿಯೊಂದು ಊರಿಗೂ ದೇವಸ್ಥಾನವೇ ಕೇಂದ್ರಬಿಂದುವಾಗಿರುತ್ತಿತ್ತು. ಅದರ ಸುತ್ತ ಆ ಊರಿನ ಸಾಮಾಜಿಕ ಹಾಗೂ ಸಾಂಸ್ಕೃತಿಕ ಜೀವನವು ರೂಪುಗೊಳ್ಳುತ್ತಿದ್ದ ಬಗೆಯನ್ನು ಕುರಿತು "ದೇವಸ್ಥಾನವು ಜನರ ದೈವಭಕ್ತಿಯ ಕೇಂದ್ರವಾಗಿದ್ದಂತೆ ವಿದ್ಯಾಕೇಂದ್ರವೂ ಆಗಿದ್ದಿತು. ಶಿಲ್ಪ, ಚಿತ್ರ, ಸಂಗೀತ, ನರ್ತನಾದಿ ಕುಶಲಕಲೆಗಳು ದೇವಸ್ಥಾನದ ಆಶ್ರಯದಲ್ಲಿ ವೃದ್ಧಿಸಿದವು. ದೇವಾಲಯವು ಜನರ ನ್ಯಾಯಾಲಯವೂ ಆಗಿದ್ದಿತು. ದುಃಖ ಬಂದಾಗ ಜನರು ದೇವಸ್ಥಾನಕ್ಕೆ ಹೋಗಿ ಅಲ್ಲಿ ತಮ್ಮ ಕಷ್ಟಗಳನ್ನು ಹೇಳಿಕೊಳ್ಳುತ್ತಿದ್ದರು. ಹಬ್ಬಹರಿದಿನಗಳಲ್ಲಿ ದೇವಸ್ಥಾನವನ್ನು ಅಲಂಕರಿಸಿ ಪೂಜೋತ್ಸವಗಳನ್ನು ನಡೆಯಿಸುತ್ತಿದ್ದರು. ದೇವಸ್ಥಾನ ಬಡವರಿಗೆ ಸತ್ರವಾಗಿದ್ದಿತು. ಶ್ರೀಮಂತರ ಐಶ್ವರ್ಯವು ಹರಿದು ಹೊರಗೆ ಬರಲು ಕಾರಣವಾಗಿದ್ದಿತು" ಎಂದು ಡಾ.ಚಿದಾನಂದಮೂರ್ತಿಯವರು ಹೇಳಿದ್ದಾರೆ[೧೫]. ಹೀಗೆ ಬಹುಮುಖ ಚಟುವಟಿಕೆಯ ಆಗರಗಳಾದ ದೇವಸ್ಥಾನಗಳ ನಿರ್ಮಾಣ ನಮ್ಮ ಅಧ್ಯಯನದ ಅವಧಿಯುದ್ದಕ್ಕೂ ಸಾಮಂತ ಅರಸರುಗಳಿಂದ ನಡೆದುಬಂದಿರುವದು ಕಂಡುಬರುತ್ತದೆ. ಅದರಲ್ಲಿಯೂ ಮಧ್ಯಕಾಲೀನ ಕರ್ನಾಟಕದ ಸಾಮಂತ ಅರಸು ಮನೆತನಗಳ ಕಾಲದಲ್ಲಿ ದೊಡ್ಡ ಪ್ರಮಾಣದಲ್ಲಿ ದೇವಸ್ಥಾನಗಳನ್ನು ನಿರ್ಮಿಸಿರುವದು ಮೇಲೆ ಕೊಟ್ಟಿರುವ ಪಟ್ಟಿಯಿಂದ ಕಂಡುಬರುತ್ತದೆ.

## ದೇವಸ್ಥಾನ ನಿರ್ಮಾಣ ಮತ್ತು ದಾನ:

ಜೀವನದಲ್ಲಿ ಒಂದಾದರೂ ಗುಡಿಯನ್ನು ಕಟ್ಟಿಸಬೇಕು ಇಲ್ಲವೇ ಗುಡಿಗಳಿಗೆ ದಾನವನ್ನಾದರೂ ಕೊಡಬೇಕು ಎಂಬುದು ಆಗಿನವರ ಧಾರ್ಮಿಕ ಭಾವನೆಯಾಗಿತ್ತು[೧೬]. ಸಂಪತ್ತು ಶಾಶ್ವತವಾದುದಲ್ಲ, ಧರ್ಮವೇ ನಿಜವಾದ ಸಂಪತ್ತು. ಇದಕ್ಕಾಗಿ ನಮ್ಮ ಪ್ರಾಚೀನರು ತಾವು ಸಂಪಾದಿಸಿದ ಐಶ್ವರ್ಯವನ್ನು ಸಾರ್ಥಕಗೊಳಿಸಲು ದೇವಾಲಯವನ್ನು ಕಟ್ಟಿಸಿದ್ದು ತಿಳಿಯುತ್ತದೆ[೧೭]. ಶಾಸನವೊಂದು ನ್ಯಾಯವಾದ ರೀತಿಯಲ್ಲಿ ಧನಸಂಪಾದನೆ ಮಾಡಬೇಕು, ಆ ಧನವನ್ನು ದಾನಮಾಡಬೇಕು ಅಥವಾ ಅದರ ಸಹಾಯದಿಂದ ದೇವಸ್ಥಾನವನ್ನು ನಿರ್ಮಿಸಬೇಕು ಇವುಗಳಿಗೆ ಬಳಸದಿದ್ದರೆ ಅಂಥಹ ಹಣವನ್ನು ಬೇರೆಯವರು ಅಪಹರಿಸಿಬಿಡಬಹುದು ಎಂದಿದೆ[೧೮]. ಇದು ಆ ಕಾಲದ ಆದರ್ಶವಾಗಿತ್ತು. ಆದ್ದರಿಂದ ಲಾಭಲೋಭದಿಂದ ತಾನುಣ್ಣದೆ ಪರರಿಗಿಕ್ಕದೆ ಮತ್ತೆ ಅದು ರಾಜನಿಗೆ ಸೇರುವಂತೆ ಮಾಡದೆ "ಧನಮಂ ಬಯ್ತಿಡಲೆಂದು ಪೇಳ್ವಡೆನನೇಂವನೇ ದಾನಕ್ಕೆ ಸಜ್ಜನರ್ಗ್ಗಿಷ್ಟರ್ಗ್ಗೆರೆದರ್ಗ್ಗೆ ಬಾಂದವರ್ಗೆ ಜೀರ್ಣೋದ್ಧಾರ ಸಂಸ್ಥಾಪನಕ್ಕನಿಶಂ ಮಾಡುವ ದೇವತಾರ್ಚ್ಚನೆಕೆಯೆಂದನಾರ್ಜಿವುದು" ಲೇಸೆನಿಸಿತ್ತು[೧೯]. ಶಾಂತಾರ ರಾಜನೊಬ್ಬ "ತನ್ನ ಭಕ್ತಿಮನದಿಂ ಪೊಣ್ಮುತ್ತಮಿರ್ಪ್ಪನ್ನೆಗಂ ಪರಮೋತ್ಸಾಹದೆ" ದೇಗುಲವನ್ನು ಕಟ್ಟಿಸಿದ ವಿಷಯ ತಿಳಿಯುತ್ತದೆ[೨೦]. "ಪೆರ್ಮ್ಮಂ ಬಡೆದುಂ ಮಡಗಿದೊಡೊರ್ಮ್ಮೆಯೆತಾಂ ಕಿಡುಗುಮೆಂದು ಧರ್ಮಕ್ಕೆ ತವಿಸಿ ಧನಮಂ" ಶಿವಗೃಹ ನಿರ್ಮಿಸಲು ಕೋಳೂರಿನ ಅದಿಕಾರಿಯೊಬ್ಬ ಬಳಸಿದ್ದನ್ನು ಶಾಸನ ತಿಳಿಸಿದೆ[೨೧]. ಇದಕ್ಕೆ ನಿದರ್ಶನವಾಗಿ ನಮ್ಮ ಅಧ್ಯಯನ ಅವಧಿಯಲ್ಲಿ ಸಾಮಂತರಸ, ರಾಣಿಯರು, ಅವರ ಅಧಿಕಾರಿವರ್ಗದವರಲ್ಲದೇ ಸಾಮಾನ್ಯಜನತೆ ಸಹ ದೇವತಾಪ್ರತಿಷ್ಠೆ ಮತ್ತು ದೇವಾಲಯ ನಿರ್ಮಾಣಕಾರ್ಯದಲ್ಲಿ ಭಾಗಿಯಾಗಿರುವದು ಕಂಡುಬರುತ್ತದೆ. ಈ ಕಾರ್ಯದ ಪ್ರೇರಣೆ ಹಲವರಿಗೆ ನಿಜಾನ್ವಯದ ಸಮೃದ್ಧಿಕಾರಣ[೨೨], ಇನ್ನು ಕೆಲವರಿಗೆ ಸಂಸಾರದ ಹೆದರಿಕೆ, ಮೋಕ್ಷಾಪೇಕ್ಷೆ[೨೩], ಮತ್ತೆ ಕೆಲವರಿಗೆ ಪುಣ್ಯ ಸಂಪಾದಿಸುವ ಹಂಬಲ[೨೪] ಮುಂತಾದ ವಿಷಯಗಳು ಕಾರಣವಾಗಿರುವಂತೆ ಕಂಡುಬರುತ್ತದೆ.

ದೇವರು ಮತ್ತು ದೇವಾಲಯಗಳನ್ನು ಪ್ರತಿಷ್ಠಾಪಿಸಿದ ವ್ಯಕ್ತಿಯ ಹೆಸರಿನಿಂದ ಸಾಮಾನ್ಯವಾಗಿ ಆ ದೇವಾಲಯ ಮತ್ತು ದೇವರನ್ನು ಕರೆಯಲಾಗುತ್ತಿತ್ತು. ಅದಕ್ಕೆ ಕಾರಣ ದೇವಸ್ಥಾನವನ್ನು ಕಟ್ಟಿಸಿದವನ ಹೆಸರು ದೇವರಿಗೆ ಬಂದು, ಅದನ್ನು ಕಟ್ಟಿಸಿದವನು ದೇವರೇ ಆಗಿಬಿಡುತ್ತಾನೆಂಬುದು ಆ ಕಾಲದ ನಂಬಿಕೆಯಾಗಿತ್ತೆಂದು ಶಾಸನವೊಂದು ತಿಳಿಸುತ್ತದೆ[೨೫]. ಮಹಾಮಂಡಳೇಶ್ವರ ಹೆರ್ಮಾಡಿಯರಸನ ಮಹಾಪ್ರಧಾನ ಮನೆವೆರ್ಗಡೆ ನೀಲಕಂಠ ಕಟ್ಟಿಸಿದ ದೇಗುಲ ನೀಲಕಂಠೇಶ್ವರ[೨೬], ಸತ್ಯವಾಕ್ಯ ಪೆರ್ಮಾನಡಿಯ ಸಾಮಂತ ಅರಕುಟ್ಟಿ ಕಟ್ಟಿಸಿದ ದೇವಾಲಯ ಅರಕುಟ್ಟೇಶ್ವರ[೨೭], ಮಹಾಸಾಮಂತ ಗೋಣರಸ ನಿರ್ಮಿಸಿದ ದೇಗುಲ ಗೋಣೇಶ್ವರ[೨೮], ರಾಯಶಾಂತಾರ ತೈಲಪದೇವನ ಪೆರ್ಗಡೆ ಕನ್ನಯ್ಯ ಕಟ್ಟಿಸಿದ ದೇವಾಲಯ ಕನ್ನೇಶ್ವರ[೨೯], ಸಾಮಂತ ಬ್ರಹ್ಮಯ್ಯನ ರಾಣಿ ಬಮ್ಮವ್ವೆನಾಯಕತಿಯಿಂದ ನಿರ್ಮಿತ ದೇಗುಲ ಬ್ರಹ್ಮೇಶ್ವರ[೩೦]. ಹೀಗೆ ಕಂಡುಬರುವ ಸಾಮಂತ ಅರಸರುಗಳ ಶಾಸನೋಲ್ಲೇಖಗಳು ಇದನ್ನು ಸಮರ್ಥಿಸುತ್ತವೆ.

ಕೆಲವೊಮ್ಮೆ ಐತಿಹಾಸಿಕ ವ್ಯಕ್ತಿಗಳನ್ನು ಕೂಡ ದೇವರನ್ನಾಗಿ ಪೂಜಿಸುವದು ಹಿಂದಿನಿಂದ ನಡೆದು ಬಂದ ಸಂಪ್ರದಾಯವಾಗಿತ್ತು. ಮಹಾಮಂಡಳೇಶ್ವರ ಕದಂಬ ತೈಲಪನ ಮಾಂಡಲಿಕ ಮಹಾಪ್ರಧಾನ ಮಸಣ ಅವನ ನಂತರ ತೈಲೇಶ್ವರ ದೇವಾಲಯವನ್ನು ನಿರ್ಮಿಸಿದನು[೩೧]. ಸಿಂದ ಮನೆತನದ ಅರಸು ಒಂದನೆಯ ರಾಚಮಲ್ಲ ಮತ್ತು ಆತನ ಮೊಮ್ಮಗ ಇಮ್ಮಡಿ ರಾಚಮಲ್ಲರ ದೇವಾಲಯಗಳ ಉಲ್ಲೇಖವನ್ನು ಕುರಗೋಡು[೩೨] ಹಾಗೂ ಹಂಪೆ[೩೩]ಯ ಶಾಸನಗಳಲ್ಲಿ ಬರುತ್ತದೆ. ಹಾಗೆಯೇ ಮಂಡಲೀಕ ಮಾಚಿ ತನ್ನ ತಂದೆ ಚೋಳಗಾವುಂಡನ ಹೆಸರಿನಲ್ಲಿ ಚೋಳೇಶ್ವರ ದೇಗುಲ ಕಟ್ಟಿಸಿದನು[೩೪]. ಇದರಿಂದ ನಾವು ಮೇಲೆ ಹೇಳಿದ ವಿಷಯವು ಸಾಮಂತ ಅರಸುಮನೆತನಗಳಿಗೂ ಸಂಬಂಧಿಸಿದ್ದು ಸ್ಪಷ್ಟವಾಗುತ್ತದೆ.

ದೇವಸ್ಥಾನವೊಂದು ನಿರ್ಮಾಣವಾದ ನಂತರ ಅದರ ಉಸ್ತುವಾರಿಯನ್ನು ನೋಡಿಕೊಂಡು ಬರುವ ಕೆಲಸ ಸಣ್ಣದಾಗಿರಲಿಲ್ಲ. ಕಾಲಕಾಲಕ್ಕೆ ಅದರ ಜೀರ್ಣೋದ್ಧಾರ, ಪೂಜಾದಿ ಕ್ರಿಯೆಗಳು, ಸಾಂಗವಾಗಿ ನಡೆದುಕೊಂಡು ಬರಲು ಆರ್ಥಿಕ ಸಹಾಯದ ಅಗತ್ಯ ಅತ್ಯವಶ್ಯವಾಗಿತ್ತು. ದೇವಾಲಯ ಕಟ್ಟಿಸಿದ ವ್ಯಕ್ತಿಗಳು ಇದನ್ನರಿತು ಅದಕ್ಕೆ ಸಾಕಷ್ಟು ದಾನ-ದತ್ತಿಗಳನ್ನು ನೀಡುತ್ತಿದ್ದರು. ಈ ಕ್ರಿಯೆ ಅಂದಿನ ಜನರ ಗಮನಸೆಳೆದು, ಅವರೆಲ್ಲ ದೇವಸ್ಥಾನ ನಿರ್ಮಿಸದೇ ಹೋದರೂ ಇಂಥಹ ದೇವಾಲಯಗಳಿಗೆ ತಮ್ಮ ಕೈಲಾದಷ್ಟು ಸಹಾಯ ನೀಡುವದರ ಮೂಲಕ ತಮ್ಮ ಭಕ್ತಿಯನ್ನು ಪ್ರದರ್ಶಿಸಿ ತೃಪ್ತರಾಗಿರುತ್ತಿದ್ದರು. ಹೀಗಾಗಿ ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕದ ಜನಜೀವನದಲ್ಲಿ ದಾನಗುಣ ಪ್ರಮುಖ ಪಾತ್ರವಹಿಸಿದೆ. ಒಬ್ಬ ವ್ಯಕ್ತಿ ತನ್ನ ಜೀವಿತದಲ್ಲಿ ವೈಯಕ್ತಿಕವಾಗಿ, ಕುಟುಂಬದ ಸದಸ್ಯನಾಗಿ, ಸಮುದಾಯದ ಜೀವಿಯಾಗಿ ದಾನಕ್ರಿಯೆಯಲ್ಲಿ ಪಾಲುಗೊಂಡಿರುವ ವಿಷಯವನ್ನು ಸಾಮಂತ ಅರಸುಮನೆತನಗಳ ಶಾಸನಗಳು ಉಲ್ಲೇಖಿಸಿವೆ.

ಹೀಗೆ ದೇವಾಲಯವನ್ನು ಕಟ್ಟಿಸುವದನ್ನು ಪ್ರೋತ್ಸಾಹಿಸುತ್ತಿದ್ದ ಅಂದಿನ ಸಾಮಂತರಸರು, ಅವರ ರಾಣಿಯರು, ಆಡಳಿತದ ಅಧಿಕಾರಿವರ್ಗ, ವರ್ತಕರು, ಸಾಮಾನ್ಯ ಜನರು, ಯಾವ ಭೇದ-ಭಾವವಿಲ್ಲದೇ ಸಮೂಹಿಕವಾಗಿಯೂ, ವೈಯಕ್ತಿಕವಾಗಿಯೂ ದಾನ-ದತ್ತಿಗಳನ್ನು ನೀಡಿದ್ದಾರೆ. ದೇವಸ್ಥಾನಗಳಿಗೆ ಬಿಡುವ ದಾನದ ವಸ್ತುಗಳಲ್ಲಿ ಭೂಮಿ, ನಿವೇಶನ, ಹಣ, ದವಸ-ಧಾನ್ಯ, ಎಣ್ಣೆಗಾಣ, ಸುಂಕ ಮೊದಲಾದವುಗಳು ಸೇರಿದ್ದವಲ್ಲದೇ, ಇದರಿಂದ ದೇವಾಲಯಗಳಲ್ಲಿ ವಿಪುಲವಾದ ಆಸ್ತಿಯ ಸಂಗ್ರಹವಿರುತ್ತಿತ್ತು. ಹೀಗೆ ಬಂದ ದತ್ತಿಗಳನ್ನು ರಕ್ಷಿಸಲು ಅನೇಕ ಧರ್ಮದರ್ಶಿಗಳಿರುತ್ತಿದ್ದರು. ಬಿಟ್ಟಂತಹ ದಾನಗಳ ರಕ್ಷಣೆಯ ಭಾರವನ್ನು ಹೊತ್ತವರಲ್ಲಿ ಸಾಮಂತರಸರು, ಅವರ ರಾಣಿಯರು, ಅಧಿಕಾರಿಗಳು, ಗಾವುಂಡರು, ವ್ಯಾಪಾರಿಗಳು ಹಾಗೂ ಸಾಮಾನ್ಯಜನರೂ ಸೇರಿದ್ದನ್ನು ಹಿಂದೆಯೇ ತಿಳಿದುಕೊಂಡಿದ್ದೇವೆ.

## ದೇವಾಲಯಗಳ ಆಡಳಿತ ಮತ್ತು ಪರಿಚಾರಕವರ್ಗ:

ದೇವಸ್ಥಾನಗಳ ನಿರ್ಮಾಣದ ನಂತರ ಅದನ್ನು ಕಟ್ಟಿಸಿದ ವ್ಯಕ್ತಿಗಳು ಅದರ ಚಟುವಟಿಕೆಗಳು ಸಾಂಗವಾಗಿ ನಡೆಯಲು ಹೇರಳವಾಗಿ ದತ್ತಿ-ದಾನಗಳನ್ನು ಬಿಟ್ಟಿರುವದು ನಮಗೆ ಸಾಮಂತರಸರ ಶಾಸನಗಳ ಅಧ್ಯಯನದಿಂದ ತಿಳಿಯುತ್ತದೆ. ಧಾರ್ಮಿಕ ಹಾಗೂ ಸಾಮಾಜಿಕ ಚಟುವಟಿಕೆಗಳನ್ನು ಸ್ವತಂತ್ರವಾಗಿ ನಡೆಸಿಕೊಂಡು ಹೋಗಲು ದೇವಾಲಯಗಳನ್ನು ನೈಷ್ಠಿಕಸ್ಥಾನಗಳನ್ನಾಗಿ ಮಾಡಿ ಕೊಡಲಾಗುತ್ತಿತ್ತು[೩೫]. ನೈಷ್ಠಿಕ ಸ್ಥಾನಗಳಲ್ಲಿ ನೈಷ್ಠಿಕ ಬ್ರಹ್ಮಚಾರಿಗಳಿಗೆ ಮಾತ್ರ ಅವಕಾಶವಿದ್ದಿತು. ಈ ಬ್ರಹ್ಮಚಾರಿಗಳು ತಪೋನಿಯಮ ಜಪಸಮಾಧಿ ಶೀಲ ಸಂಪನ್ನರು[೩೬] ಹಾಗೂ ಯಮ, ನಿಯಮ, ದಾನ, ಸ್ವಾಧ್ಯಾಯ, ಧ್ಯಾನ, ಧಾರಣ, ಮೌನಾನುಷ್ಠಾನ, ಜಪ, ತಪ, ಸಮಾಧಿಶೀಲಗುಣಸಂಪನ್ನರೂ[೩೭] ಆಗಿರುತ್ತಿದ್ದರು. ಸಾಮಾನ್ಯವಾಗಿ ಈ ನೈಷ್ಠಿಕ ಬ್ರಹ್ಮಚಾರಿಗಳಾದ ಸ್ಥಾನಪತಿ ಅಥವಾ ಸ್ಥಾನಾಚಾರ್ಯರುಗಳು ದೇವಾಲಯಗಳ ಆಡಳಿತವನ್ನು ನೋಡಿಕೊಳ್ಳುತ್ತಿದ್ದರು. ನೈಷ್ಠಿಕ ಬ್ರಹ್ಮಚರ್ಯ್ಯದಿಂದಾಗಿ ಅಂದಿನ ಸಮಾಜದಲ್ಲಿ ಗೌರವವನ್ನು ಪಡೆದ ಈ ಸ್ಥಾನಾಚಾರ್ಯರು ಪೂಜ್ಯಸ್ಥಾನದಲ್ಲಿದ್ದರು. ಸ್ಥಾನಾಚಾರ್ಯರ ಅನುಮತಿಯಿಲ್ಲದೇ ದೇವಾಲಯದ ಯಾವುದೇ ಚಟುವಟಿಕೆಗಳೂ ನಡೆಯುವಂತಿರಲಿಲ್ಲ. ದೇವಾಲಯಗಳಿಗೆ ದಾನಬಿಡುವದಾಗಲಿ ಅಥವಾ ಇತರ ಯಾವುದೇ ಧಾರ್ಮಿಕ ಚಟುವಟಿಕೆಗಳನ್ನಾಗಲಿ ಕೈಕೊಳ್ಳಬೇಕಾದರೆ ಅದು ಸ್ಥಾನಾಚಾರ್ಯರ ಪಾದಪೂಜೆಯಿಂದ ಆರಂಭವಾಗಬೇಕಿತ್ತು. ಆದನ್ನು ಅಂದಿನ ಶಾಸನಗಳು ಕಾಲಂಕರ್ಚ್ಚಿ ಎಂದು ಕರೆದಿದ್ದು ಇದರಿಂದ ಸ್ಪಷ್ಟವಾಗುತ್ತದೆ. ಈ ಸ್ಥಾನಾಚಾರ್ಯರ ಕುರಿತು ಸಾಮಾಜಿಕ ಪರಿಸ್ಥಿತಿಯ ಅಧ್ಯಾಯದಲ್ಲಿ ಈಗಾಗಲೇ ಪ್ರಸ್ಥಾಪಿಸಿದ್ದರಿಂದ ಇಲ್ಲಿ ಅದನ್ನು ಮತ್ತೆ ಪ್ರಸ್ತಾಪಿಸಲಾಗಿಲ್ಲ.

ದೇವಾಲಯಗಳಿಗೆ ಹೊಂದಿಕೊಂಡು ಮಠಗಳಿರುತ್ತಿದ್ದವು. ಸಾಮಂತ ಅರಸುಮನೆತನಗಳ ಶಾಸನಗಳಲ್ಲಿ ಕೊಕಟನೂರಿನ ವಿಶ್ವೇಶ್ವರದೇವರ ಮಠ[೩೮], ಸೊರಟೂರದ ದೇವಾಲಯ ಮಠ[೩೯], ಪೊಳಲು ಬಂಕಾಪುರದ ಪಂಚಮಠಸ್ಥಾನ[೪೦], ಹೊಟ್ಟೂರಿನ ಮಠ[೪೧]ಗಳಲ್ಲದೇ ಇನ್ನು ಅನೇಕ ಮಠಗಳು ದೇವಸ್ಥಾನದೊಂದಿಗೆ ಉಲ್ಲೇಖಗೊಂಡಿವೆ. ಕೆಲವು ಸಲ ಮಠಕ್ಕಂಟಿಕೊಂಡು ದೇವಾಲಯಗಳಿರುತ್ತಿದ್ದ ವಿವರಗಳೂ ಉಂಟು[೪೨]. ಬಹುಷಃ ಇಲ್ಲಿ ದೇವಾಲಯಗಳಿಗಿಂತ ಮಠವೇ ಪ್ರಸಿದ್ಧಿಯನ್ನು ಹೊಂದಿರಬೇಕು. ದೇವಸ್ಥಾನದಲ್ಲಿನ ಮಠಗಳು ಪ್ರಮುಖ ವಿದ್ಯಾಕೇಂದ್ರಗಳಾಗಿದ್ದರಿಂದ ಅವು ಸ್ಥಾನಾಚಾರ್ಯ, ತಪೋಧನ, ವಿದ್ಯಾರ್ಥಿಗಳ ವಾಸಸ್ಥಾನಗಳಾಗಿದ್ದವು. ಮೇಲಿನ ಪಂಚಮಠಸ್ಥಾನದ ಉಲ್ಲೇಖವನ್ನು ನೋಡಿದಾಗ, ಅದು ಐದು ಮಠಗಳ ಹೊಣೆಯನ್ನು ಹೊತ್ತ ಸ್ಥಾನಪತಿಯನ್ನು ಸೂಚಿಸುವದು ಸ್ಪಷ್ಟವಾಗುತ್ತದೆ. ಅಲ್ಲದೇ ಸಾಮಂತ ಅರಸುಮನೆತನಗಳ ಅನೇಕ ಶಾಸನಗಳು ದೇವಾಲಯಗಳಿಗೆ ದತ್ತಿ-ದಾನವನ್ನು ಬಿಡುವಾಗ ತಪೋಧನರ, ವಿದ್ಯಾರ್ಥಿಗಳ ಉಲ್ಲೇಖವನ್ನು ಮಾಡುವದರಿಂದ ಅನೇಕ ದೇವಸ್ಥಾನಗಳಲ್ಲಿ ಮಠಗಳಿರುತ್ತಿದ್ದುದು ತಿಳಿದುಬರುತ್ತದೆ.

